ಶ್ರೀ ಜಗದ್ಗುರು ಮೂರುಸಾವಿರಮಠ ಗ್ರಂಥಮಾಲೆ ೧೦೧

ಹುಬ್ಬಳ್ಳಿ ಮೂರುಸಾವಿರ ಮಠದ

# ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪುರಾಣ

ಕವಿಗಳು :

ಡಾ॥ ಪುಟ್ಟರಾಜಕವಿ ಗವಾಯಿಗಳು,

ವೀರೇಶ್ವರ ಪುಣ್ಯಾಶ್ರಮ, ಗದಗ.





ಪ್ರಕಾಶಕರು :

ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳ

ಮೂರುಸಾವಿರಮಠ, ಹುಬ್ಬಳ್ಳಿ-೫೮೦೦೨೦.

೧೯೭೯



೧೨ನೆಯ ಶತಮಾನದಲ್ಲಿ ಬಸವ ತತ್ವ ಪ್ರಚಾರ ಮಾಡಿದ ನಿರ್ವಿಕಲ್ಪ ಸಮಾಧಿಸ್ಥರಾದ
ಹುಬ್ಬಳ್ಳಿ ಮೂರುಸಾವಿರ ಮಠದ ಕರ್ತೃ ಶ್ರೀ ಜಗದ್ಗುರು ಗುರುಸಿದ್ಧ ಮಹಾಶಿವಯೋಗಿಗಳು

ಶ್ರೀ ಜಗದ್ಗುರು ಮೂರುಸಾವಿರಮಠ ಗ್ರಂಥಮಾಲೆ ೧೦೧

ಹುಬ್ಬಳ್ಳಿ ಮೂರುಸಾವಿರ ಮಠದ

# ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪುರಾಣ

ಕವಿಗಳು :

ಡಾ|| ಪುಟ್ಟರಾಜಕವಿ ಗವಾಯಿಗಳು,

ವೀರೇಶ್ವರ ಪುಣ್ಯಾಶ್ರಮ, ಗದಗ.



ಪ್ರಕಾಶಕರು :

ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳ

ಮೂರುಸಾವಿರಮಠ, ಹುಬ್ಬಳ್ಳಿ-೫೮೦೦೨೦.

೧೯೭೯

KARTRU SHREE JAGADGURU GURUSIDDHESHWAR PURAN by Dr. Puttaraja Kavi-Gavayigalu



1979

*Publishers :*

**Shri Jagadguru Gangadhar Dharma Pracharak Mandal**
**Moorusavirmath, HUBLI-580020.**

*Copies :* **1000**

**Price : Rs. 11-00**

*Printers :*
**M. S. Viraktamatha**
**Manohar Publications & Printery**
**c.b.t. Hubli.**



ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು
ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಮೂರುಸಾವಿರಮಠ,
ಹುಬ್ಬಳ್ಳಿ

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು
ಶ್ರೀಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು
ಮೂರುಸಾವಿರಮಠ, ಹುಬ್ಬಳ್ಳಿ ಅವರ

# ಆಶೀರ್ವಚನ

" ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ " ಎಂಬ ಗೀತೋಕ್ತಿಯಂತೆ, ಶ್ರೇಷ್ಠ ಜನರು ನಡೆದು ಹೋದ ಧಾರಿಯಲ್ಲಿ ಹಿಂಬಾಲಿಸುವದು ಮಾನವನ ಮುಖ್ಯ ಕರ್ತವ್ಯ. ಮಹಾತ್ಮರು ಮಹಾನ್ ವ್ಯಕ್ತಿತ್ವವನ್ನು ಪಡೆದು, ಅಂತಸ್ಸತ್ವವನ್ನು ಹೊಂದಿದವರಾಗಿ, ದೈವೀ ಪ್ರಕಾಶದಲ್ಲಿ ಸತ್ಯವನ್ನು ಕಂಡುಕೊಂಡು ಆ ಸತ್ಯವನ್ನು ಜನ ಜೀವನದಲ್ಲಿ ಮೂಡಿಸಲು ಹೋರಾಡುತ್ತಾರೆ. ತಮ್ಮ ತಪಸ್ಸನ್ನು ಜನಕಲ್ಯಾಣಕ್ಕಾಗಿ ಮೀಸಲಾಗಿರಿಸುತ್ತಾರೆ. ತಮ್ಮ ವ್ಯಕ್ತಿತ್ವ ಪ್ರಭೆಯಿಂದ ಸಮಾಜದಲ್ಲಿ ನವಚೇತನವನ್ನು ನೀಡುತ್ತಾರೆ. ಲೋಕದ ಮನುಜರ ಮಲಿನತೆಯನ್ನು ಕಳೆಯಲು ನಾಡಿನ ಪುಣ್ಯ ವಿಶೇಷದಿಂದ ಅವತರಿಸುತ್ತಾರೆ. ಅಂತಹ ಮಹಾನ್ ಶಿವಯೋಗಿಗಳಲ್ಲಿ ಮೂರುಸಾವಿರಮಠದ ಕರ್ತೃ ಜಗದ್ಗುರು ಗುರುಸಿದ್ಧ ಮಹಾ ಶಿವಯೋಗಿಗಳು, ಅಗ್ರಗಣ್ಯರು. ಇವರು ಶಿವನ ಅಪರಾವತಾರಿಗಳು. ಇವರ ವ್ಯಕ್ತಿತ್ವ ಅಗಾಧವಾದುದು, ಅನುಪಮವಾದುದು ಇವರ ತಪಸ್ಸು ಕಠೋರವಾದುದು ಪ್ರಗತಿಯತ್ತ ಹೊರಳಿಸಿ, ಮೂರುಸಾವಿರ ವಿರಕ್ತರಿಗೆ, ಧರ್ಮಬೋಧೆ ಮಾಡಿ, ೧೨ನೆಯ ಶತಮಾನದಲ್ಲಿಯೇ ಸಮಾಜವನ್ನು ಅದ್ಭುತ ಅಲ್ಲಲ್ಲಿ ಮಠಗಳನ್ನು ಸಂಸ್ಥಾಪಿಸಿ, ಜನ ಜಾಗೃತಿ ಮಾಡಿದ ಮಹಾಚೇತನ, ಅವರ ಆತ್ಮಶಕ್ತಿಯ ಪ್ರಭೆಯಿಂದ ಅಂದು ಹುಬ್ಬಳ್ಳಿಯು ಕಲ್ಯಾಣವೇ ಮೈವೆತ್ತು ಬಂದಂತೆ ಭಾಸವಾಗಿತ್ತು. ಅವರು ಪವಾಡ ಪುರುಷರು ಶಾಪಾನಗ್ರಹಸಮರ್ಥರು. ಸರ್ವಧರ್ಮದ ಭಕ್ತರಿಗೆ ಇಷ್ಟಾರ್ಥ ಸಿದ್ಧಿಯನ್ನು ನೀಡಿದ ಮಹಾ ಪುಣ್ಯಪುರುಷರು ನಿರ್ವಿಕಲ್ಪ ಸಮಾಧಿಸ್ಥರು. ಇಂತಹ ಯೋಗಿವರೇಣ್ಯರ ಲೀಲೆಗಳು ಜನ ಸಾಮಾನ್ಯರ ಬಾಯಲ್ಲಿಯೇ ಉಳಿದಿದ್ದರಿಂದ, ಅವುಗಳನ್ನು ಸಂಗ್ರಹಿಸಿ ಪುರಾಣ

ರೂಪದಲ್ಲಿ ಬರೆಯಿಸಬೇಕೆಂಬುವ ಆಶೆಯು ೧೫ ವರ್ಷಗಳ ಹಿಂದೆಯೇ ಮೂಡಿತ್ತು. ಪೂಜ್ಯ ಗುರುವರ್ಯರಾದ ಶ್ರೀ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳು, ಆ ಮಹಾಚೇತನದ ಬಗ್ಗೆ ಹೇಳಿದ ಮಹಿಮೆಗಳನ್ನು ಮನದಲ್ಲಿಯೇ ಮೆಲಕಾಡಿಸುತ್ತಿದ್ದೆವು. ಕರ್ತೃವಿನ ಐತಿಹಾಸಿಕ ಪರಂಪರೆಯನ್ನು ಅವರೇ ಮೇಲಿಂದ ಮೇಲೆ, ವಾಯುವಿಹಾರಕ್ಕೆ ಹೋದಾಗ ಹೇಳುತ್ತಿದ್ದರು, ಅವೆಲ್ಲವುಗಳು ಕೋಲ್ ಮಿಂಚಿನಂತೆ ಹಾಯ್ದು ಹೋಗುತ್ತಿದ್ದವು. ಆದರೆ ಕಾರ್ಯಗತವಾಗಲು ಸಮಯ ಸಿಕ್ಕಿದ್ದಿಲ್ಲ. ಶೈಕ್ಷಣಿಕ ರಂಗದಲ್ಲಿ ಹೆಚ್ಚು ಮನಸ್ಸು ಹಾಕಿದ್ದರಿಂದ ಇತ್ತ ಮನಸ್ಸು ಹರಿಬಿಟ್ಟಿದ್ದಿಲ್ಲ. ಆದರೆ ಈಗ ಆಸುಯೋಗ ಬಂದೊದಗಿದೆ, ೮-೧೦ ವರ್ಷಗಳ ಹಿಂದಿನ ಮಾತು ಕೆ. ಎಲ್. ಇ. ಸೊಸಾಯಿಟಿಗೆ ಚೇತನ ಶಕ್ತಿಯನ್ನು ನೀಡಿದ ಶ್ರೀಯುತ ಲಿಂಗೈಕ್ಯ ಎಚ್. ಎಫ್. ಕಟ್ಟಿಯನಿಯುವರು ನಮ್ಮನ್ನು ಕಂಡಾಗ, ಕರ್ತೃ ಗುರುಸಿದ್ಧೇಶ್ವರನ ಚರಿತ್ರೆಯ ಬಗ್ಗೆ ಪ್ರಸ್ತಾಪ ಬಂದು, ಮೂರುಸಾವಿರ ಮಠದ ಐತಿಹಾಸಿಕ ಹಿನ್ನೆಲೆಯನ್ನು ಸವಿಸ್ತಾರವಾಗಿ ಹೇಳಿದ ನಂತರ ಮತ್ತಷ್ಟು ಮನಸ್ಸಿಗೆ ನೆಮ್ಮದಿಯುಂಟಾಯ್ತು. ೧೯೫೭ನೆಯ ಇಸ್ವಿಯಲ್ಲಿ ಕರ್ಮವೀರ ಪತ್ರಿಕೆಯಲ್ಲಿ ಲೇಖನ ಬರೆದ ಡಾ. ವರದರಾಜ ಉಮರ್ಜಿ ಅವರ ಸಂಶೋಧನಾತ್ಮಕವಾದ ವಿಚಾರವೆಲ್ಲವನ್ನು ಹೇಳಿದೆವು. ಅದು ನಿಜವಾದ ಸಂಶೋಧನೆ ಮಾಡಿದ್ದಾರೆ. ಬೇರೆ ಮತೀಯರು ಸಹ ಮೂರುಸಾವಿರ ಮಠ ಐತಿಹಾಸಿಕದ ಹಿನ್ನೆಲೆಯ ಬಗ್ಗೆ ಬರೆದದ್ದು ವೀರಶೈವರಾದ ನಾವು ಅಭಿಮಾನಪಡಬೇಕು ಅಷ್ಟೇ ಅಲ್ಲ ಅವರನ್ನು ಸತ್ಕರಿಸಬೇಕು ಅನ್ನುತ್ತಿದ್ದರು. ಅಲ್ಲದೆ ೫೦ ವರ್ಷಗಳಿಂದ ಮೂರುಸಾವಿರಮಠದ ಪ್ರಾಮಾಣಿಕ ಸೇವೆ ಮಾಡಿದ ಲಿಂಗೈಕ್ಯ ಸೊಲಬಪ್ಪಜ್ಜನು ಸಹ ಅನೇಕ ಮಹಿಮೆಗಳನ್ನು ಒದಗಿಸಿಕೊಟ್ಟಿದ್ದರಿಂದ ನಮಗೆ ಪುರಾಣ ಬರೆಯಿಸಲು ಸುಲಭವಾಯ್ತು. ಇದಕ್ಕಾಗಿ ಹುಬ್ಬಳ್ಳಿಯ ಸುತ್ತಮುತ್ತಲಿನ ವಯೋವೃದ್ಧ ಸದ್ಭಕ್ತರು ಲೀಲೆಗಳನ್ನು ಹೇಳಿ ನಮಗೆ ಸಹಕರಿಸಿದ್ದಾರೆ. ಇಷ್ಟೆಲ್ಲವನ್ನು ಒಂದು ರೂಪಕ್ಕೆ ತರಲು ೫-೬ ವರ್ಷಗಳು ಬೇಕಾದವು. ಈ ಎಲ್ಲ ವಿಷಯವನ್ನು ಕರ್ನಾಟಕ ತಮಿಳು ಭಾಷೆಯಲ್ಲಿ ಕೀರ್ತನ ಹೇಳಿ ಕೀರ್ತಿಗಳಿಸಿರುವ ಪಂ. ಬಸವಕುಮಾರ ಶಾಸ್ತ್ರಿಗಳು ತಿಳಿದುಕೊಂಡು ಅವರು ತಮ್ಮ ಕಥಾನಕ ಶೈಲಿಯಲ್ಲಿ "ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಲೀಲಾಮೃತ"ವೆಂಬ ಹೆಸರಿನಿಂದ ಗ್ರಂಥವನ್ನೆ ಬರೆದುಕೊಟ್ಟರು. ಈ ಗ್ರಂಥವು ಈಗಾಗಲೇ ಎರಡು ಸಲ ಮುದ್ರಣವಾಗಿ ಜನಪ್ರಿಯವಾಗಿದೆ.

ಇತ್ತಿತ್ತಲಾಗಿ ಕರ್ನಾಟಕದ ಮಠ-ಮಂದಿರಗಳಲ್ಲಿ ಪುರಾಣ ಶ್ರವಣ ಮಾಡಿಸಿ ಭಾರತೀಯ ಸಂಸ್ಕೃತಿಯನ್ನುಳಿಸುತ್ತಿರುವದು ಹೆಮ್ಮೆಪಡತಕ್ಕ ವಿಷಯವಾಗಿದೆ. ಈ ಸತ್ ಸಂಪ್ರದಾಯವು ಅನೂಚೂನವಾಗಿ ಬೆಳೆದು ಬೆಳಗಲೆಂಬ ಉದ್ದೇಶವು ಮನಸ್ಸಿನಲ್ಲಿ ಮೂಡಿ, ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಪುರಾಣವನ್ನು ಬರೆಯಿಸ

ಬೇಕೆಂಬ ಹಂಬಲವುಂಟಾಗಿ, ಕರ್ನಾಟಕದ ಅನೇಕ ಪಠಮ ತಪಸ್ವಿಗಳ, ಪುರಾಣ ವನ್ನು ಬರೆದು, ಖ್ಯಾತಿವೆತ್ತ ಗದುಗಿನ ವೀರೇಶ್ವರ ಪುಣ್ಯಾಶ್ರಮದ ಪಂಡಿತ ಡಾ. ಪುಟ್ಟರಾಜ ಕವಿಗವಾಯಿಗಳವರನ್ನು ವಿಚಾರಿಸಲಾಗಿ, ಗುರುಸಿದ್ಧೇಶ್ವರ ಪುರಾಣ ಬರೆಯಲು ವಿಷಯ ಸಂಗ್ರಹ ಮಾಡಿಸಿ ಕೊಟ್ಟರೆ ಅವಶ್ಯವಾಗಿ ಈ ಸೇವೆ ಯನ್ನು ಸಲ್ಲಿಸುತ್ತೇವೆ ಎಂದು ಆನಂದದಿಂದ ಒಪ್ಪಿಕೊಂಡರು. ನಮಗೆ ಅತೀವ ಸಂತಸವಾಗಿ, ಅವರಿಗೆ ಪುರಾಣ ರಚಿಸಲು ಒಪ್ಪಿಗೆಯನ್ನು ನೀಡಿದೆವು. ಆ ಪ್ರಕಾರ ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಪುರಾಣವನ್ನು ಬರೆದು ನೀಡಿದರು. ಆ ಕೂಡಲೇ ನೀವೇ ಈ ಪುರಾಣವನ್ನು ಹುಬ್ಬಳ್ಳಿ ಮೂರುಸಾವಿರ ಮಠದಲ್ಲಿ ಹೇಳ ಬೇಕೆಂದು ಕೇಳಿದ್ದಕ್ಕೂ ಒಪ್ಪಿ ಸಮ್ಮತಿಸಿದ್ದಕ್ಕೆ ಸರ್ವ ಸದ್ಭಕ್ತರಿಗೂ ಬಹಳ ಆನಂದ ವನ್ನುಂಟು ಮಾಡಿತು.

ಈ ಪುರಾಣವನ್ನು ಪಂ. ಪುಟ್ಟರಾಜಕವಿಗಳ ಶಿಷ್ಯರಾದ ಶಿವರಾಜ ಶಾಸ್ತ್ರಿ ಗಳಿಂದ ನಾವು, ಹಾಗು ಡಾ. ಕೆಳದಿ ಪಟ್ಟಾಧ್ಯಕ್ಷರು ಓದಿಸಿ, ಕೇಳಿ ಪುಟ್ಟರಾಜಕವಿ ಗಳ ಕಾವ್ಯ ಪ್ರತಿಭೆಯನ್ನು ಮೆಚ್ಚಿಕೊಂಡೆವು. ಇವರ ಕಾವ್ಯ ಶಕ್ತಿ ಮಹೋನ್ನತ ವಾದುದು. ವಾರ್ಧಿಕ ಷಟ್ಪದಿಯಲ್ಲಿ, ಸುಂದರಶೈಲಿಯೊಡನೆ ಹೆಣೆದಿದ್ದಾರೆ. ಪ್ರತಿ ಯೊಂದು ಶಬ್ದಶಬ್ದದಲ್ಲಿಯೂ, ಭಾವಸೌಷ್ಠವ, ಅರ್ಥಗಾಂಭೀರ್ಯವನ್ನು ತುಂಬಿ ದ್ದಾರೆ. ಪವಾಡಗಳನ್ನು ಜನಸಾಮಾನ್ಯರೂ ಮೆಚ್ಚುವಂತೆ ರಚಿಸಿದ್ದಾರೆ. ಇವರು ಹುಟ್ಟುಕುರುಡರು ಅಲ್ಲದೆ ಸಂಗೀತ ಪಾಠಶಾಲೆಯ ಎಲ್ಲ ವಿದ್ಯಾರ್ಥಿಗಳಿಗೆ ಪಾಠ ಹೇಳಿ, ಅವರಿಗಾಗಿ ಅನ್ನ ವಸ್ತ್ರಾದಿಗಳನ್ನು ನೀಡಿ, ಅವರನ್ನು ಸಲಹುತ್ತ ಇಂತಹ ಕಾವ್ಯಗಳನ್ನು ನಾಡಿಗೆ ನೀಡುತ್ತಿರುವದು ಇವರ ಕರ್ತವ್ಯನಿಷ್ಠೆ, ಕರ್ತೃತ್ವಶಕ್ತಿಯೇ ಮೂಲಕಾರಣವಾಗಿದೆ. ಎಲ್ಲ ಪುರಾಣಗಳಿಗಿಂತಲೂ ಶ್ರೀ ಗುರುಸಿದ್ಧೇಶ್ವರ ಪುರಾಣವು ಬಹಳ ಹಿರಿಮೆಯಿಂದ, ಹಾಗೂ ಅನುಭವ ಪೂರ್ಣದಿಂದ ಕೂಡಿ, ಸತ್ವಯುತವಾಗಿದೆ. ಈ ಪುರಾಣವನ್ನು ಅರ್ಚನ ವೇಳೆಯಲ್ಲಿ ಬರೆದಿರುವದರಿಂದ ಆತ್ಮಶಕ್ತಿಯ ಪ್ರತಿಭೆ ಎದ್ದು ಕಾಣುತ್ತಲಿದೆ. ಋಷಿಭಾವ ಬೆಳೆಸಿಕೊಂಡು ಬರೆದಕಾವ್ಯ ಬಹುದಿನ ಉಳಿಯು ತ್ತದೆ. ಅದಕ್ಕೆ ಒಂದು ಮಹಾನ್ ಪ್ರೋಜ್ವಲ ಶಕ್ತಿ ಉಂಟಾಗಿ ಭಾವನಿಬ್ಬೆರಗಾಗು ತ್ತದೆ. "ನಾನೃಷಿಃ ಕುರುತೇ ಕಾವ್ಯಂ'' ಎನ್ನುವ ನುಡಿಯನ್ನು ಸಾರ್ಥಕ ಗೊಳಿಸಿದ್ದಾರೆ. ಡಾ. ಪುಟ್ಟರಾಜಕವಿಗವಾಯಿಗಳು ಹಾನಗಲ್ಲ ಕುಮಾರ ಶಿವ ಯೋಗಿಗಳ ಪ್ರೀತಿಯ ಶಿಷ್ಯರಾಗಿದ್ದು ಜ್ಞಾನನೇತ್ರವನ್ನು ಪಡೆದು, ಸಾಹಿತ್ಯ ಸಂಗೀತ ಕಲೆಗಳಿಂದ ಸಂಶೋಭಿತರಾಗಿದ್ದಾರೆ. ತ್ರಿಭಾಷಾ ವಿಶಾರದರಾದ, ಕವಿ ಚಕ್ರವರ್ತಿ ಬಿರುದಾಂಕಿತ ಡಾ. ಪುಟ್ಟರಾಜ ಕವಿ ಗವಾಯಿಗಳವರ ಸಾಹಿತ್ಯ ಸೇವೆ, ಹಾಗು ಸಮಾಜ ಸೇವೆಯಿಂದ ನಾಡುಜಾಗೃತಗೊಳ್ಳಲಿ, ಕರ್ತೃ ಜಗದ್ಗುರು ಗುರುಸಿದ್ಧೇಶ್ವರನು ಅವರಿಗೆ ಆಯುರಾರೋಗ್ಯವನ್ನು ನೀಡಲೆಂದು ಪ್ರಾರ್ಥನೀಯ ವಾಗಿದೆ.

ಕರ್ತೃ ಜಗದ್ಗುರು ಗುರುಸಿದ್ಧೇಶರ ಪುರಾಣದ ಅಚ್ಚಿನ ವೆಚ್ಚವನ್ನು ವಹಿಸಿದ, ವೀರಶೈವ ಸಂಘಟನಾ ಸಮಿತಿಯ ಅಧ್ಯಕ್ಷರೂ, ಸಮಾಜ ಸೇವಾ ನಿರತರೂ, ಹಾಗು ಹುಬ್ಬಳ್ಳಿಯ ಸುಪ್ರಸಿದ್ಧ ವರ್ತಕರೂ ಆದ ಶ್ರೀ. ಎಸ್. ಜಿ. ಕವಳಿ ಅವರಿಂದ ಇಂತಹ ಧರ್ಮಕಾರ್ಯಗಳು ನೆರವೇರಿ, ಅವರಿಗೆ ಕರ್ತೃ ಗುರುಸಿದ್ಧೇಶ್ವರನು ಸನ್ಮಂಗಲವನ್ನುಂಟುಮಾಡಲೆಂದು ಆಶೀರ್ವದಿಸಲಾಗಿದೆ.

ಹುಬ್ಬಳ್ಳಿ
೨೧-೨-೧೯೭೯

— ಇತಿ ಶಿವಂ —

# ಮುನ್ನುಡಿ

## ಪುರಾಣ-ಪೌರಾಣ

ಸಾರಜ್ಞನಾದ ತಾನು ಗುರು-ಲಿಂಗ-ಜರ-ಭಕ್ತರಿಗೆ ಕಿಂಕರನೆಂದುಕೊಂಡರೂ ಧೀರಾತ್ಮನೇ ತಾನಾಗಿರುವ ಪುಟ್ಟರಾಜಾಖ್ಯ ಕವಿಯು ಬರೆದ ಹಲವಾರು ದೃಶ್ಯ-ಕಾವ್ಯಗಳಲ್ಲಿ ಹಾಗು ಶ್ರವ್ಯ-ಕಾವ್ಯಗಳಲ್ಲಿ ಮೇರುಕೃತಿಯಾಗಿ ಕೀರ್ತಿಯ ಮೇರೆ 'ಮೀರಿರ್ಪ' ಈ ಶ್ರವ್ಯ-ಕಾವ್ಯದ ಹೆಸರು : ಕರ್ನಾಟಕದ ಹುಬ್ಬಳ್ಳಿ ಮೂರುಸಾವಿರ ಮಠದ "ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ-ಪುರಾಣ."

ಈ ಪುರಾಣದ ಪ್ರತಿಯೊಂದು ಸಂಧಿಯ ಕೊನೆಯಲ್ಲಿ 'ಸಂಧಿ-ಸಮಾಪ್ತಿ-ಮಂಗಳ'ದ ಸಂದರ್ಭದಲ್ಲಿ ಇಪ್ಪತ್ತೆರಡು ಸಲ, ಸ್ವತಃ ಕವಿಯೇ ಹೇಳಿರುವ 'ಪುರಾಣ ಮುದ್ರಿಕೆ'ಯ ಪದ್ಯ ಹೀಗಿದೆ :—

"ವೀರೇಶ-ಪುಣ್ಯಾಶ್ರಮಂ ಗದುಗಿನೊಳ್ ಮೆರೆವು-|
ದೋರಂತೆ ಶೋಭಿಸುವುದಲ್ಲಿ, ಪಂಚಾಕ್ಷರನು-|
ದಾರ-ಸ್ವ-ಗುರುವರನಯೋಗದ ಸಮಾಧಿಯಿದೆ; ಕುಳಿತಿಲ್ಲಿ ಗುರುಕರುಣೆಯೊಳ್ ||
ಸಾರಜ್ಞ ಗುರು-ಲಿಂಗ-ಜರ-ಭಕ್ತ-ಕಿಂಕರಂ |
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ |
ಮೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ ಪೌರಾಣ...."

'ಪೌರಾಣ'ವೆ ? ಪುರಾಣ-ಪ್ರಸಿದ್ಧವಾದ ಪುರಾಣ, ಪುರಾಣ, ಪುರಾಣವೆಂದು ಅಷ್ಟಾದಶ ಮುಖ್ಯ ಪುರಾಣಗಳೂ, ನೂರಾರು ಉಪ-ಪುರಾಣಗಳೂ ವ್ಯಾಸನಿಂದ ಹಾಗು ವ್ಯಾಸನಂಥವರಿಂದ ರಚಿತ ಆದಾಗಿನಿಂದಲೂ ಪುರಾಣ-ಕಾಲದಿಂದಲೂ 'ಪುರಾಣ' ಎಂದೇ ಬಳಸಲಾಗುತ್ತಿದೆ. ಅಂತೆಯೇ "ಅಷ್ಟಾದಶ-ಪುರಾಣೇಷು ವ್ಯಾಸಸ್ಯ ವಚನ-ದ್ವಯಮ್ | ಪರೋಪಕಾರಃ ಪುಣ್ಯಾಯ; ಪಾಪಾಯ ಪರ-ಪೀಡನಂ ||" ಎಂಬಲ್ಲಿಯೂ 'ಪುರಾಣೇಷು = ಪುರಾಣಗಳಲ್ಲಿ ಎಂಬರ್ಥದ ಪುರಾಣ ವಿರುವಾಗ, ಇದೆಲ್ಲಿಯ "ಪೌರಾಣ" ಶಬ್ದ ಎನ್ನಲಾಗದು. ಈ ಪೌರಾಣ ಪದವು

ಪುರಾಣಿಕರ ಪೌರಾಣಿಕ ವಾಣಿ. ವ್ಯಾಕರಣದ ವೈಯಾಕರಣಿಯಾದ ಪಾಣಿನಿಯ ಪಾಣಿನೀಯ 'ಅಷ್ಟಾಧ್ಯಾಯಿ'ಯ "ತಸ್ಯೇದಂ" ಮುಂತಾದ ಸೂತ್ರದ ಪ್ರಕಾರ 'ಪುರಾಣಸ್ಯೇದಂ' "ಪೌರಾಣಂ" ಎಂದಾಗಿದೆ. ಅಂತೆಯೆ, "ಪೌರಾಣದೊೞ್" ಎಂದರೆ, ಪುರಾಣ-ಗ್ರಂಥದೊೞ್ ಎಂಬುದಾಗಿ ಅರ್ಥೈಸಿದರೆ ಅರ್ಥ ಸಾರ್ಥಕ ವಾಗುತ್ತದೆ.

ಸಾರ್ಥಕವಾಗಿ ಅರ್ಥವನ್ನು ಅರ್ಥೈಸಿಕೊಳ್ಳಬೇಕಾದರೂ ಪರಮಾರ್ಥ-ಜ್ಞಾನವೊಂದೇ ಸಾಲದು; ಆ-ಆ "ಅ-ಕ್ಷರದ" ಅರ್ಥದ ಜೊತೆಗೆ ಈ ಅಕಾರಾದಿ ಕ್ಷಕಾರಾಂತದ ವರೆಗಿನ ಅಕ್ಷರಗಳ ಅರ್ಥ-ಜ್ಞಾನವನ್ನೂ ಮಾಡಿಕೊಂಡಿರಬೇಕು. ಯಾವುದಾದರೂ ಶಬ್ದವು ನಮ್ಮ ತಿಳುವಳಿಕೆಗೆ ಬರದಿದ್ದರೆ, ನಮಗೆ ಅದರ ಬಗ್ಗೆ ಪರಿಚಯ ಇರದಿದ್ದರೆ, ಅದು ತಪ್ಪೆಂದು ವಾದಿಸತೊಡಗಿದರೆ, ಆ ತಪ್ಪು ವಾದಿಯದು; ಆ ಶಬ್ದದ್ದಲ್ಲ. ತಪ್ಪಾಗಿ ಪ್ರಯೋಗಿಸಿದ ವ್ಯಕ್ತಿಯದು; ತಪ್ಪಾಗಿ ಅರ್ಥಮಾಡಿ ಕೊಳ್ಳುವ ವಾಚಕನದು.

ಈ ಪೂರ್ವ-ಪೀಠಿಕೆ ಸಜ್ಜುಗೊಳಿಸಿದ್ದು ವ್ಯಾಕರಣ ಶಾಸ್ತ್ರಾರ್ಥಕ್ಕಲ್ಲ; ಪುರಾಣದ ಪೌರಾಣದ ಬಗ್ಗೆ.

ತ್ರಿಭಾಷಾ-ಕವಿಗಳಾಗಿ 'ಕವಿಚಕ್ರವರ್ತಿ'ಗಳೂ, ಡಾಕ್ಟರೇಟ್ ಪದವಿ ಪಡೆದ ವರೂ, ಗುರು-ಕೃಪಾ-ಪಾತ್ರರೂ"ಪೂರ್ಣತ್ವಕಾರ'ರ ಆತ್ಮೀಯರೂ, ಅದೂ ಇದೂ ಎಲ್ಲ 'ಕವಿ-ಸಮಯ" ಪ್ರಜ್ಞಾನವಿದ್ದವರೂ ಆದ ಪುಟ್ಟರಾಜ ಕವಿಗಳು ತಾವು 'ಗಣಂಗಳು"; 'ಪುರಾಣ" ಶಬ್ದವು 'ಜ"ಗಣವಾಗಿದ್ದು, 'ಜಗಣ'ವಾಗಲಿ, 'ಯಗಣ' ನಾಗಲಿ ತಮ್ಮ ಈ ಪಂಚಮಾತ್ರಾ-ಗಣದ ಷಟ್ಪದಿಯಲ್ಲಿ ಬರಬಾರದೆಂದು ತಿಳಿದಿದ್ದಾರೆ. ಇದು ವಾಸ್ತವಿಕ; ಅನಿವಾರ್ಯ. ಹೀಗಾಗಲೇಬೇಕು. ಆದರೂ, ಇಲ್ಲಿಯ 'ಪುರಾಣ-ಮುದ್ರಿಕಾ-ಪದ್ಯ'ದಲ್ಲಿ "ಪೌರಾಣ" ಶಬ್ದವನ್ನು ಬಳಸಿ, 'ತ'ಗಣ ದ್ದನ್ನು ಸ್ವೀಕರಿಸಿ, 'ಜ'ಗಣದ್ದಾದ 'ಪುರಾಣ' ಶಬ್ದವನ್ನು ತಮ್ಮ ಇದೇ ಪುಸ್ತಕದಲ್ಲಿ ಪೂರಾ ಕೈಬಿಟ್ಟದ್ದಾರೆಂದು ತಿಳಿಯಬಾರದು. ಅನೇಕ ಕಡೆಗೆ ಜಗಣದ ಶಬ್ದವನ್ನೂ ಬೇರೆ ಗಣಕ್ಕೆ ಯೋಗ್ಯವಾಗುವಂತೆ ಪ್ರಯೋಗಿಸಿರುವದನ್ನು ಕಾಣುತ್ತೇವೆ. ಅಂದರೆ "ಪುರಾಣ" ಶಬ್ದವನ್ನೂ ತಮ್ಮ ಪುರಾಣ-ಪುಸ್ತಕದಲ್ಲಿ,ತಮ್ಮ ಪುರಾಣದ ಬಗ್ಗೆಯೇ ತಾವೇ ಹೇಳುವಾಗ ಪ್ರಯೋಗಿಸಿದ್ದಾರೆ:
"ವೃತ್ತೋತ್ತಮಂ ಸತ್‌ಪುರಾಣಂ ||". (ಮಂಗಲಾಚರಣ ಸಂಧಿ, ೧೭) ಬೇರೆ ಪುರಾಣದ ಬಗ್ಗೆ :- "ಸದಮಲ ಪುರಾಣದೆ ಸುಧಾಮಂಗೆ ಕೃಷ್ಣನೊಲಿ-| ದೊದವಿ-ಸಿದನುರೆ ಸಿರಿಯನು" [೭-೪೩].

ಈ ಕರ್ತೃಶ್ರೀ ಜಗದ್ಗುರು ಗುರುಸಿದ್ಧೇಶ್ವರನ ಪುರಾಣ"ವನ್ನು ಬರೆದ ಈ

ಕವಿಯು ಇನ್ನುಳಿದ ಎಲ್ಲ ಶಬ್ದಗಳನ್ನೂ ಸರಿಯಾಗಿ ಬಳಸಿರುವಂತೆ ಈ 'ಪುರಾಣ' ಹಾಗೂ "ಪೌರಾಣ" ಶಬ್ದಗಳನ್ನೂ ಸರಿಯಾದ ಸಂದರ್ಭದಲ್ಲಿ, ಸರಿಯಾದ ಅರ್ಥದಲ್ಲಿ ಸರಿಯಾದ ಪ್ರಸಂಗದಲ್ಲಿ ಸರಿಯಾಗಿಯೇ ಬಳಸಿದ್ದಾನೆ.

'ಪುರಾಣ'ದ ಉಕಾರವು "ಪೌರಾಣ"ದಲ್ಲಿ ಔಕಾರವಾಗಿದೆ. ಏಕೆ ? ಸಂಬಂಧಿಸಿದ ಅರ್ಥಕೊಡುವ ಇಂಥ ಶಬ್ದಗಳ ಮೊದಲನೇ ಅಕ್ಷರದ ಸ್ವರವು ಅ ಅಥವಾ ಆ ಆಗಿದ್ದರೆ, "ಆ" ಎಂದಾಗುತ್ತದೆ; ಇ ಅಥವಾ ಈ ಇದ್ದರೆ, "ಐ" ಎಂದು ಬದಲಾಗುತ್ತದೆ; ಉ ಅಥವಾ ಊ ಇದ್ದರೆ, "ಔ" ಎಂದುದಾಗಿ ರೂಪಾಂತರ ಹೊಂದುತ್ತದೆ. ಅಂತೆಯೇ ಪುರಾಣ ಶಬ್ದವೂ ತತ್‌ಸಂಬಂಧಾರ್ಥದಲ್ಲಿ "ಪೌರಾಣ" ಎಂದಾಗಿದ್ದುದು ಸಮಂಜಸವಾಗಿದೆ.

ಮೊದಲು ಹಾಜರ್ ಆಗಿ, 'ಕೇಸ್ ದಾಖಲ್' ಮಾಡಿದವರೇ ವಾದಿ; ಆನಂತರದವರು ಪ್ರತಿವಾದಿ ; ಇಲ್ಲಿಯ "ಪುರಾಣ–ಪೌರಾಣ" ಎಂಬಲ್ಲಿ ಪುರಾಣ : ವಾದಿ ; ಪ್ರತಿವಾದಿ : ಪೌರಾಣ ; ಈ ಪುರಾಣ-ಪೌರಾಣ-ಪದಗಳೆಂಬ ವಾದಿ–ಪ್ರತಿವಾದಿಗಳಿಗೆ ಲಿಖಿತವಾಗಿ, ಸಮಂಜಸವಾದ ನ್ಯಾಯವಾದ ನ್ಯಾಯ ದೊರೆಯ ಬೇಕಾದರೆ ಸಾಕ್ಷಿಗಳು ಬೇಕು. ಈ 'ಪುರಾಣ–ಪೌರಾಣ'ದ "ಕೇಸಿ"ನ (ವ್ಯಾಜ್ಯದ) ಬಗ್ಗೆ ಸಾಕ್ಷ್ಯ ಹೇಳುವ ಶಬ್ದಗಳ ಸಾಲೇ ಇಲ್ಲಿ ಸಾಲು-ಸಾಲಾಗಿ ನಿಂತಿದೆ :–

"ಪುರಾಣ—ಪೌರಾಣ"; ಫಲ್ಗುಣ-ಫಾಲ್ಗುಣ; ಬುದ್ಧ-ಬೌದ್ಧ ; ಭೂತ-ಭೌತ; ಮಧ್ಯಮ-ಮಾಧ್ಯಮ. ಇವುಗಳ ಮೊದಲ ವರ್ಣಗಳು ಪ-ಫ-ಬ-ಭ-ಮ ಅಂದರೆ ಪವರ್ಗದವುಗಳು. 'ಪುರಾಣ-ಪೌರಾಣ'ವು ಪವರ್ಗ; ಪವರ್ಗಕ್ಕೆ ಪವರ್ಗದ ಸಂಬಂಧ. ಇಲ್ಲಿಯ ನ್ಯಾಯಾಲಯದಲ್ಲಿ ಸಂಬಂಧಿಕರ ಸಾಕ್ಷ್ಯಕ್ಕೆ ಹೆಚ್ಚಿನ ಮಹತ್ತ್ವ ಇಲ್ಲೆನ್ನುವುದಾದರೆ, ಅಪವರ್ಗೀಯವರಿವರು : ಶಕ್ತಿ–ಶಾಕ್ತ; ಸೂರ-ಸೌರ; ಶಿವ-ಶೈವ; ಇವರು ವಿಶೇಷ ವರ್ಗೀಯರು : ಜಿನ-ಜೈನ.... ಈ ಇಬ್ಬರಿಗೂ ಒಪ್ಪಂದವಾಯಿತು. ಇಬ್ಬರೂ ಆ-ಆ ಸ್ಥಾನಕ್ಕೆ ಯೋಗ್ಯರು.

ಒಟ್ಟಿನಲ್ಲಿ, ಪುರಾಣ-ಪೌರಾಣಕ್ಕೆ ನಿಜವಾದ ನ್ಯಾಯ-ಪ್ರಾಪ್ತವಾಗಿ ಪುರಾಣ-ಪೌರಾಣ ಪ್ರಯೋಗವು ಇಲ್ಲಿ ಸಾಧುವಾದದ್ದಾಗಿದೆಯೆಂದಂತಾಯಿತು.

**ಲೇಖನ ಸ್ಥಾನ :**

ಪ್ರಭು–ಪ್ರಭೃತಿ ಪ್ರಾಚೀನ ಪ್ರಮಥರ ಪುರಾಣದ ಪೌರಾಣಿಕ ತಥ್ಯಾಚರಿತ ಕಥಾ–ಚರಿತವಾಣಿಯನ್ನೊಳಗೊಂಡಿರುವ 'ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣ'ವನ್ನು ಬರೆದಿರುವ ಕವಿಯ ಬಗ್ಗೆ ಒಂದಿಷ್ಟು ಸಾಂಕೇತಿಕವಾಗಿಯಾದರೂ ಸವಿಸ್ತಾರವಾಗಿಯೆಂಬಂತೆ ತಿಳಿಸಬಲ್ಲುದಾದ ಸಂಕ್ಷಿಪ್ತ ರೂಪದ ಸೂತ್ರದಂತಿರುವ ಈ

ಮೇಲ್ಮೆಯ ಮೇಲಿನ 'ವೀರೇಶ-ಪುಣ್ಯಾಶ್ರಮಂ.... ಗುರುಸಿದ್ಧ-ಪೌರಾಣ' ಪದ್ಯದ ಪ್ರಕಾರ : ಗದುಗಿನವನಾದ ಈ ಕವಿಯು ತನ್ನ ಗುರುವಾದ ಗದ್ದುಗಾರ್ಯನ (ಪಂಚಾಕ್ಷರಾರ್ಯನ) ಗದ್ದುಗೆಯಲ್ಲಿ ತಾನು ಶಿವಪೂಜೆಗೈಯಲು ಬಳಸುವ ಗದ್ದುಗೆಯ ಮೇಲೆ ಕುಳಿತು, ಹುಬ್ಬಳ್ಳಿ ಕರ್ತೃ ಗದ್ದುಗೆಯ ಈ ಪುರಾಣವನ್ನು ಬರೆದಿದ್ದಾನೆ

ಶಿವಪೂಜೆ ಮಾಡಿಕೊಳ್ಳಲು ಕುಳಿತುಕೊಳ್ಳುವ ಗದ್ದುಗೆಯು ಪೂರ್ವ ಅಥವಾ ಉತ್ತರ ದಿಶಾಽಭಿಮುಖವಾಗಿರಬೇಕೆಂಬುದು ಶಿವಯೋಗ ಮಂದಿರದ ಶಿವಪೂಜಾ-ವಿಧಿಯ ನಿಯಮವಿದೆ. ಈ ಶಿವಯೋಗ-ಮಂದಿರ-ಸಂಸ್ಕಾರದ ಈ ಕವಿಯು ಈ ವಿಧಿಯ ವಿಧಾನದ ನಿಯಮದ ದಿಕ್ಕಿನ ಗದ್ದುಗೆಯ ಮೇಲೆ, ಗದುಗಿನಲ್ಲಿ ಕುಳಿತು, ಹುಬ್ಬಳ್ಳಿ ಮೂರು-ಸಾವಿರ ಮಠದಲ್ಲಿ ಉತ್ತರಾಽಭಿಮುಖವಾಗಿರುವ ಕರ್ತೃಗದ್ದುಗೆಯ ನಿರ್ವಿಕಲ್ಪಸಮಾಧಿಸ್ಥನ ಬಗ್ಗೆ ಬಣ್ಣಿಸಿ ಬರೆದಿದ್ದಾನೆ. ಅಂದರೆ, ಇಂಥ ನಿರ್ವಿಕಲ್ಪ-ಸಮಾಧಿಸ್ಥ ಪೂಜ್ಯನ ಬಗ್ಗೆ, ಪೂಜ್ಯ ಭಾವನೆಯಿಂದ ತಾನು ಶಿವಪೂಜೆ ಮಾಡಿಕೊಳ್ಳುವ ಪವಿತ್ರ ವಾತಾವರಣದ ಶುಭ ಸಮಯದಲ್ಲಿ ಈ ಪೌರಾಣವನ್ನು ಬರೆದಿದ್ದಾನೆ.

**ಆ ಕವಿ, ಈ ಕವಿ :**

ಆಗಿನ ಪವಿತ್ರವಾದಂಥ ತಾಣದಲ್ಲಿ, ಸುಂದರ ವಾತಾವರಣದಲ್ಲಿ ಗದುಗಿನ ವೀರನಾರಾಯಣನ ಕಿಂಕರನಾದ ಕುಮಾರವ್ಯಾಸನೆಂಬ ಆ ಕವಿಯ ಹಾಗೆಯೇ ಪುಟ್ಟರಾಜನೆಂಬ ಹೆಸರಿನಿಂದ ಈತನೂ ಪ್ರತಿಭಾ-ಭಾಸಿ ರತನಾದ, ಭಾರತದ ಭಾ-ರತದ ಭಾರತೀಯನಾಗಿ ಪವಿತ್ರ ಕವಿತ್ವದ ಕವಿಯಾಗಿದ್ದಾನೆ; ಕವಿಗಳಿಂದ 'ಕವಿ-ಚಕ್ರವರ್ತಿ'ಯಾಗಿದ್ದಾನೆ.

ಆ ಕವಿಯ ಛಂದಸ್ಸು ಕೇವಲ ನೂರೆರಡು ಮಾತ್ರೆಯ ಭಾಮಿನೀ-ಷಟ್‌ಪದಿ-ಯಾದರೆ, ನೂರಾ ನಲವತ್‌ನಾಲ್ಕು ಮಾತ್ರೆಯ ಅಭಿವೃದ್ಧಿ ಸಂಕೇತದ ವೃದ್ಧಿಂಗತ ವಾರ್ಧಕಷಟ್‌ಪದಿಯ ಛಂದಸ್ಸನ್ನು ಈ ಕವಿಯು ಪ್ರೇಮದಿಂದ ಸ್ವೀಕರಿಸಿದ್ದಾನೆ.

ಆ ಕವಿಯು ಹಳಗನ್ನಡ ಕಾಲದಲ್ಲಿದ್ದು ಹಳಗನ್ನಡ ಬರೆದಿದ್ದಾನೆ; ಈ ಕವಿಯು ಹೊಸಗನ್ನಡ ಕಾಲದಲ್ಲಿರುತ್ತಿದ್ದು, ಹಳಗನ್ನಡದ ಶೈಲಿಯನ್ನೇ ಪ್ರಾಧಾನ್ಯವಾಗಿಟ್ಟು-ಕೊಂಡು ಬರೆಯುತ್ತಿದ್ದಾನೆ (ಪ್ರೆಜೆಂಟ ಇಂಪರ್‌ಫೆಕ್ಟ ಟೆನ್ಸ). ಆ ಕವಿಗೆ ಭೂತಕಾಲ ಮಾತ್ರ ಮೀಸಲಾದರೆ, ಈ ಕವಿಗೆ ಸದ್ಯದ ವರ್ತಮಾನ ಕಾಲವೂ ಇದೆ; ಹಾಗೂ ಈ ತಾತ್ಕಾಲಿಕ ವರ್ತಮಾನಕಾಲದ ಬಲದಿಂದ ಭವಿಷ್ಯತ್‌ಕಾಲದ ಜೀವನವೂ ಈ ಕವಿಗಿದೆ. ಆ ಕವಿ ಕೀರ್ತಿ-ಶೇಷ; ಈ ಕವಿ ಕೀರ್ತಿ-ವರ್ಧಿಷ್ಣು. ಆ ಕವಿಯು ವಿದೇಹ-ಮುಕ್ತ; ಈ ಕವಿಯು ಜೀವನ್‌ಮುಕ್ತ. ಆ ಕವಿ ಚಿಕ್ಕ ವ್ಯಾಸ (ಕುಮಾರ-ವ್ಯಾಸ); ಚಿಕ್ಕ ರಾಜಾ (ಪುಟ್ಟರಾಜ) ಎಂಬುದು ಈ ಕವಿಗೆ ಹೆಸರು.

ಆ+ಈ ಕವಿಗಳಿಬ್ಬರೂ ಗದುಗಿನಲ್ಲಿ ಗ್ರಂಥ ಬರೆದವರು. ಇಬ್ಬರದೂ ಮಾತ್ರಾ-ಗಣದ ಛಂದಸ್ಸು : ಷಟ್‌ಪದಿ. ಇಬ್ಬರೂ ಕರ್ನಾಟಕದವರು : ಕನ್ನಡಿ-ಗರು : ಕವಿತಾ-ಪತಿಗಳು : ಪುರುಷ-ಶ್ರೇಷ್ಠರು. ಇಬ್ಬರ ಅಂಕಿತ ನಾಮಗಳೂ ಸಮ-ಸಮಾನಾರ್ಥ ಬೀರುವ ಪರ್ಯಾಯ ನಾಮಗಳಂತಿದ್ದು, ಅವು ಅನ್ವರ್ಥಕ ನಾಮಗಳು ಮಾತ್ರವಲ್ಲ, ಅವರವರ ಕಾಲಕ್ಕನುಸರಿಸಿ ಈಗಲೂ ಅವು ಅವರವರಿಗೆ ರೂಢನಾಮಗಳಾಗಿವೆ. "ಕವಿಭ್ಯಾಂ ನಮೋ ನಮಃ."

**ಹಾಡಿದ ಹಾಡು :**

"ಕುಮಾರವ್ಯಾಸನು ಹಾಡಿದನೆಂದರೆ, |
ಕಲಿಯುಗ ದ್ವಾಪರವಾಗುವ"ದಾದರೆ,—
ಪುಟ್ಟರಾಜಕವಿ ಹಾಡಿದನೆಂದರೆ |
ಒಟ್ಟಿಗೆ ಮುಕ್ತಿಯು ದೊರೆಯುವುದು ||ಪಲ್ಲವಿ||

ಭಕ್ತಿ-ಜ್ಞಾನ-ವಿರಕ್ತಿಯ |
ಭಕ್ತರು ಮುಕ್ತರೆ ಆಗುವರು ||ಅನುಪಲ್ಲವಿ||

ಪುಟ್ಟರಾಜಕವಿ ಹಾಡಿದನೆಂದರೆ....
ವೈಜ್ಞಾನಿಕ ಯುಗವಾದರೂ ಜನರಿಗೆ |
ಸುಜ್ಞತೆ ಭಕ್ತಿಯು ಬೆಳೆಯುವುದು ||ಪುಟ್ಟರಾಜ....||

ಭಕ್ತಾದಿ ಸ್ಥಲಕಟ್ಟಿನ ಕಟ್ಟಳೆ |
ಯುಕ್ತಿಯ ಮರ್ಮವು ತಿಳಿಯುವುದು ||ಪುಟ್ಟ....||

ಒಂದೇ ಸ್ಥಲವಾರ್ : ನೂರೊಂದು ಸ್ಥಲ |
ಒಂದೇ ಎಂಬುದು ತಿಳಿಯುವುದು ||ಪು....||
ಅಷ್ಟಾವರಣದ ಧಾರಣೆಯಿಂದಲೆ |
ಕಷ್ಟ-ನಿವಾರಣೆಯಾಗುವುದು ||ಪು....||

ಪಂಚಾಚಾರದ ನಡತೆಯ ಬಗ್ಗೆಯು |
ಮುಂಚೆಯೆ ಮಾರ್ಗವು ಕಾಣುವುದು ||ಪು....||

ಕರ್ತೃಶ್ರೀ ಗುರುಸಿದ್ಧ-ಜಗದ್ಗುರು |
ಕರ್ತನ ಲೀಲೆಯು ತಿಳಿಯುವುದು ||ಪು....||

ಶ್ರೀಗುರುಸಿದ್ಧನ ನಿರ್ವಿಕಲ್ಪ-ಯುತ |
ಶ್ರೀಗದ್ದುಗೆ-ಕೃಪೆ ದೊರೆಯುವುದು ||ಪು....||

ಶರಣರ ಜೀವನ ಸಾಗಿಸಿ, ಎಲ್ಲರು ।
ಶರಣರೆ ಆಗಲು ಬರುತಿಹುದು ॥ಪು....॥

ಶೋಭಿಪ ಶಂಭುವೆ, ಶಿವ, "ಗುರುಮೂರ್ತಿ"ಯೆ, ।
"ಈ ಭವ ನೀಗಿಸು." ಎನಿಸುವುದು. ॥ಪುಟ್ಟ....॥

ಕವಿ-ಸಂದರ್ಶನ :

"ವೀರೇಶ-ಪುಣ್ಯಾಶ್ರಮಂ....ಗುರುಸಿದ್ಧ ಪೌರಾಣ" ಎಂಬುದಾಗಿರುವ, ಈ ಮೊದಲು ನೆನಪಿಸಿದ 'ಪುರಾಣ-ಮುದ್ರಿಕೆ'ಯ ಪದ್ಯದಲ್ಲಿದ್ದದ್ದನ್ನು ಸ್ವಲ್ಪ ಮಟ್ಟಿಗೆ ಸ್ಪಷ್ಟ ಆಗುವಂತೆ, ಪೌರಾಣದ "ಮಂಗಲಾಚರಣ-ಸಂಧಿ"ಯ ೧೫ನೇ ಮತ್ತು ೧೬ನೇ ಪದ್ಯಗಳನ್ನಾಗಿ ಸ್ವತಃ ಕವಿಯೇ ಬರೆದಿದ್ದುದನ್ನು ಪ್ರಶ್ನೋಪನಿಷತ್ತಿನಂತೆ ಪ್ರಶ್ನೋತ್ತರ-ರೂಪವಾಗಿ ಗಮನಿಸೋಣ :

ತಾರೀಖು : ಕ್ರಿ. ಶ. ೧೯೧೪ನೇ ಮಾರ್ಚ ೩ ರಂದು

ಪ್ರಶ್ನೆ-ಕರ್ತಾ : ದಿನದಂದಂ ಜನಿಸಿದ ನೀವು, ತಿಳಿಯಾದ ಹಳಗನ್ನಡದ ಬಳ-ಕೆಯ ಶೈಲಿಯಲ್ಲಿ "ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ-ಪುರಾಣ"ವನ್ನು 'ಸಲೆ ಬರೆವ' ಕವಿಗಳೆ, ನಿಮಗೆ 'ಹೆಸರೇನು ?

ಉತ್ತರ-ದಾತಾ: "ಎನಗೆ ಪುಟ್ಟರಾಜಾಽಽಹ್ವಯಂ";

ಪ್ರ: 'ಪುಟ್ಟರಾಜ' ಎಂದು ಹೆಸರಿಡಲು ಕಾರಣ ?

ಉ: 'ಪುಟ್ಟ ಕವಿ'ಯಾದುದರಿಂದ ;

ಪ್ರ: 'ಪುಟ್ಟ ಕವಿ' ಎಂದರೆ ಸಂಸ್ಕೃತದ ಪುಷ್ಟ (ಪುಷ್ಟಿಗೊಂಡ, ಪುಷ್ಟಿಪಡೆದ, ಪುರಿಪುಷ್ಟವಾದ ಎಂಬರ್ಥದ) ಶಬ್ದದ ತದ್‌ಭವ ಪದವಾದ ಶಬ್ದ : ಪುಷ್ಟ; 'ಪುಷ್ಟ ಕವಿ' ಅಂದರೆ, "ಪ್ರೌಢ ಕವಿ" ಎಂದರ್ಥವೋ ? ಅಥವಾ....

(೨) ಪುಟ್ಟಾ ಕವಿ = ಪುಟ್ಟಕವಿ = ಪುಟ್ಟದಾಗಿನಿಂದ ಕವಿಯಾಗಿರುವವರು = ಪುಟ್ಟ ಕವಿ ಅಂದರೆ 'ವರ ಕವಿ' ಎಂಬರ್ಥವೋ? ಅಥವಾ

(೩) ಕಂಚುಗಲ್ ಬಿದರೀ ಪ್ರಭುಕುಮಾರದೇವ ಶಿವಾಚಾರ್ಯರಿಂದ ದೀಕ್ಷಿತರಾದ ನೀವು ಪಂಚಾಕ್ಷರಾರ್ಯನನ್ನು ನಿಮ್ಮ ವಿದ್ಯಾ - ಗುರುವನ್ನಾಗಿಯೂ, ಹಾನುಗಲ್‌ಶ್ರೀ ಕುಮಾರೇಶನನ್ನು ನಿಮ್ಮ ತಾತ್ತ್ವಿಕ ಆರಾಧ್ಯ ಪರಮ ಗುರುವನ್ನಾಗಿಯೂ ನೆರೆ ನಂಬಿ ಶಿವಯೋಗ ಮಂದಿರದ ಶಿವಯೋಗ-ಸಾಧಕ ರಂತೆ ತಪಶ್ಚರ್ಯದ ಶಿವಪೂಜೆ ಮಾಡುತ್ತಿದ್ದು, ಸಾಹಿತ್ಯ-ಸಂಗೀತ-ಕಲಾ-

ನಿಪುಣರಾದ ನೀವು 'ಜೀವನ್‌ಮುಕ್ತ'ರಾಗಿ ರೋಣದಿಂದ ಭವ-ಬಂಧನದ ಹುಟ್ಟು-ಸಾವನ್ನು ಮೀರಿರುವ ನಿಮಿತ್ತವಾಗಿ ಪುಟ್ಟಲಾರದ ಕವಿ=ಪುಟ್ಟಕವಿ ಎಂಬರ್ಥವೊ? ಅಥವಾ

(೪) ಪುಟ್ಟ-ಪುಟ್ಟದಾದ ಅಣ್ಣು-ಅಣು-ಅಣುವನ್ನು ಅಂದರೆ, ಅಣು-ರೇಣು-ತೃಣ-ಕಾಷ್ಠದೊಳಗಣ ಸೂಕ್ಷ್ಮಾತಿಸೂಕ್ಷ್ಮ ವಿಷಯಗಳನ್ನು ಸಮಂಜಸವಾಗಿ ಕವಿತ್ವದಲ್ಲಿ ವರ್ಣಿಸಬಲ್ಲ ಪುಟ್ಟ ಶಬ್ದಕ್ಕೆ ಗಟ್ಟಿಗೊಂಡ ಪುಟ್ಟಕವಿಯೋ? ಅಥವಾ

(೫) ಉತ್ಸಾಹೀ ಚಿಕ್ಕ ಮಕ್ಕಳನ್ನು ಹಾಗು ಜೊಕ್ಕ ಕೀರ್ತಿಶಾಲಿ ಭೀಷ್ಮ, ಆಂಜನೇಯ ಮುಂತಾದವರನ್ನು ಕುರಿತು ಅನ್ನುವಂತೆ, ನಿಮ್ಮ ಕವಿತಾ-ಶಕ್ತಿ, ಪ್ರೋತ್ಸಾಹ-ಯುಕ್ತಿ, ಪ್ರತಿಭಾ-ಪ್ರೇರಣಾ-ಆಸಕ್ತಿಯಿಂದಾಗಿ ನೀವು 'ಚಿರಂಜೀವಿ" ಕವಿ ಎಂಬರ್ಥದಲ್ಲಿ ಪುಟ್ಟ ಕವಿಯೋ? ಅಥವಾ

(೬) ಪುಟ್ಟ ಅಂದರೆ ಅಣು; ರಾಜ ಎಂದರೆ ಮಹತ್ತ್ವದ ಮಹತ್. ಈ ಅಣುವಿನ ಹಾಗೂ ಮಹತ್ತಿನ ಅರ್ಥದಿಂದಾಗಿ "ಅಣೋರಣೀಯಾನ್ ಮಹತೋ ಮಹೀಯಾನ್" ಎಂಬರ್ಥದ ಪರಶಿವನ ಉಪಾಸಕರಾದ ಪುಟ್ಟರಾಜರೊ? ಅಥವಾ

(೭) ಬ್ರಹ್ಮಾಂಡದ ಸಂಕ್ಷಿಪ್ತರೂಪವೆ ಪಿಂಡಾಂಡವಾಗಿ, ಬ್ರಹ್ಮಾಂಡಾಧಿಪತಿಯ ಸಂಕ್ಷಿಪ್ತ ರೂಪವೆ ಇಷ್ಟಲಿಂಗವಾಗಿ, ಚುಳುಕಾಗಿ ಕರ-ಸ್ಥಲಕ್ಕೆ ಬಂದು ಪುಟ್ಟ ಆಕಾರದಲ್ಲಿ ಇದ್ದದ್ದನ್ನು ರಾಜನಂತೆ ಧರಿಸಿರುವ ನೀವು ವೀರಶೈವ ಪುಟ್ಟರಾಜರೋ? ಅಥವಾ

(೮) ರಾಜನೆಂದರೆ ಸ್ವಾಮಿ; ಪುಟ್ಟನೆಂದರೆ ಕುಮಾರ; ಈ ಎರಡರ ಜೋಡಣೆಯ ಬಲದಿಂದಾಗುವ 'ಶ್ರೀ ಕುಮಾರ ಸ್ವಾಮಿ' ಎಂಬ ನಾಮದ ಅರ್ಥದ ಬಲ ದಿಂದಲೂ, ಶ್ರೀ ಕುಮಾರ ಸ್ವಾಮಿಯ ಊರೂ ನಿಮ್ಮ ಹುಟ್ಟಿದೂರಿನ ತಾಲೂಕಿನ ಊರೂ ಹಾನುಗಲ್-ಇದರ ಬಲದಿಂದಲೂ ಪರಮಗುರು, ಪರಮ ಶಿಷ್ಯರಾದ ನಿಮ್ಮಿಬ್ಬರ ಅಂದರೆ, ಗುರು-ಶಿಷ್ಯರ ಅನ್ಯೋನ್ಯ ಭಕ್ತಿ-ಪ್ರೇಮದ ಕುರುಹಾಗಿ ಪುಟ್ಟರಾಜರೋ? ಅಥವಾ

(೯) ಈ ಎಂಟೂ ಅರ್ಥವನ್ನುಳ್ಳದ್ದಾಗಿ, ಎಂಟೂ ಲಿಂಗಗಳನ್ನು ಗೌಣವಾಗಿಸಿ ಒಂಭತ್ತನೆಯದಾಗಿ ಕಾಣುವ ಇಷ್ಟಲಿಂಗವನ್ನು ಧರಿಸಿದ ಶರಣತ್ವದ ಕುರುಹಾದ ಪುಟ್ಟರಾಜರೋ? ಹೇಳಿರಿ. ಪ್ರಶ್ನೆ ಸುದೀರ್ಘವಾಯಿತಲ್ಲವೆ?

ಉ: ಪರವಾ ಇಲ್ಲ. ಈ ಒಂಭತ್ತು ಅರ್ಥದ ಅರ್ಥ ಗೊತ್ತಾಯ್ತು. 'ಅವರವರ ಭಾವಕ್ಕೆ, ಅವರವರ ಮನಸಿಗಂ, ಅವರವರ ತೆರನಂತೆ ತೋರುತಿಹ'ದೇವಾಧಿ

ದೇವ ಮಹಾದೇವನನ್ನು ಕಾಣುವವರಂತೆ, ಅವರವರ ನೋಡುವ ದೃಷ್ಟಿ ಅವರವರಿಗೆ ಸೇರಿದ್ದೆನ್ನಬಹುದು; ಆದರೂ, "ಎನಗಿಂತ ಕಿರಿಯರಿಲ್ಲ; ಶಿವ ಭಕ್ತರಿಗಿಂತ ಹಿರಿಯರಿಲ್ಲ" ಎಂಬ ಜಗದಣ್ಣ ಬಸವಣ್ಣನ ಮಾತಿನಂತೆ "ಪುಟ್ಟಕವಿಯಾದೆನಗೆ ಪುಟ್ಟರಾಜಾಽಽಹ್ವಯಂ' ಎಂದಿಷ್ಟನ್ನು ಮಾತ್ರ ಗಟ್ಟಿಗೊಂಡ ಭಕ್ತಿಯಿಂದ ನಾನಿಲ್ಲಿ ದಿಟ್ಟತನದಿಂದ ಹೇಳಬಲ್ಲೆನಷ್ಟೆ.

ಪ್ರ: ಇರಲಿ. "ಮಂಗಲಾಽಽಚರಣ-ಸಂಧಿ"ಯಲ್ಲಿ ಹದಿಮೂರನೇ ಪದ್ಯವನ್ನು ನಿಮ್ಮ "ಆತ್ಮ-ಗರ್ವ-ನಿರಸನಕ್ಕಾಗಿ ಬರೆದ ನೀವು ಕಿಂಕರತೆಯಿಂದ ಶಂಕರತೆಯನ್ನು ಪಡೆಯಲು ಮುನ್ನಾಂ ಅಹಂಕಾರ -ನಿರಸನ ಮಾಡಿಕೊಂಡ ಪುಟ್ಟರಾಜ ಕವಿಗಳೆ, ನಿಮಗೆ ಜನ್ಮ ಕೊಟ್ಟ ನಿಮ್ಮ ಜನನೀ-ಜನಕರ ಹೆಸರೇನು?

ಉ: ಎನಗೆ "ಸಿದ್ಧಾಂಬೆ-ರೇವಣರ್ ಜನ್ಮಮಂ ಕೊಟ್ಟಿಹರ್."

ಪ್ರ: ನೀವು ಹುಟ್ಟುವಾಗ, ನಿಮ್ಮ ತಾಯಿ-ತಂದೆಗಳಾದ ಸಿದ್ಧಮ್ಮ-ರೇವಣಯ್ಯನವರು ವಾಸಮಾಡಿದ ಊರು-ಪ್ರಾಂತ ಯಾವುದು? ಅಂದರೆ, ನೀವು ಹುಟ್ಟಿದ ಊರಿನ ಹೆಸರೇನು? ಆ ಊರು ಯಾವ ಪ್ರಾಂತದಲ್ಲಿದೆ?

ಉ: ಹಾನಗಲ್ಲ ಪ್ರಾಂತದಾ ಹೊಸಪೇಟೆ!

ಪ್ರ: ನೀವು ಬಾಲ್ಯದಲ್ಲಿ, ಪ್ರಾಥಮಿಕ ಅಧ್ಯಯನ-ಅಭ್ಯಾಸಮಾಡುತ್ತ, ಹೆಚ್ಚಾಗಿ ಒಂದೇ ಕಡೆ ಇದ್ದು ಬೆಳೆದ ಊರು?

ಉ: ' ದೇವಗಿರಿಯು."

ಪ್ರ: ಈಗ ನೀವು ವಿದ್ಯೆಕಲಿಸುತ್ತ 'ಖಾಯಂ' ಆಗಿ ಹೆಚ್ಚಾಗಿ ವಾಸ್ತವ್ಯ ಮಾಡುವ ಊರಿನ ಹೆಸರು?

ಉ: 'ಗದಗು'

ಪ್ರ: ಈ ಗದಗು ಹಳ್ಳಿಯೊ? ನಗರವೋ?

ಉ: 'ನಗರಂ'.

ಪ್ರ: ನಿಮ್ಮ ಯೋಗ್ಯತೆಯನ್ನು ಅಭಿವೃದ್ಧಿಗೊಳಿಸಿದ ಈ ಸ್ಥಲಕ್ಕೆ ನಿಮ್ಮನ್ನು ಕರೆ ತಂದು ಮುಟ್ಟಿಸಿದ ಮಹನೀಯರಾರು ?

ಉ: 'ದಿಟ್ಟನಹ ಮಾತುಲಂ'.

ಪ್ರ: ಜಾಮಾತೃ-ವಾತ್ಸಲ್ಯವನ್ನು ಬದಿಗೊತ್ತಿ, ತನ್ನ ಅಳಿಯನು ಒಳ್ಳೆ ವಿದ್ಯಾವಂತನಾಗಲೆಂದು ದಿಟ್ಟತನದಿಂದ ನಿಮ್ಮನ್ನಗಲಿ, ನೀವು ವಿದ್ಯೆ ಕಲಿಯಲು ಅನು

ಕೂಲವೆಂದು ಪ್ರಯತ್ನಿಸಿದ, ನಿಮ್ಮ ಮಾವನ ಹೆಸರೇನು?

ಉ: ‹ಚಂದ್ರಶೇಖರ".

ಪ್ರ: ಈ ನಿಮ್ಮ ಸೋದರಮಾವನಾದ ಶ್ರೀ. ಚಂದ್ರಶೇಖರಯ್ಯನವರು ಯಾರಲ್ಲಿಗೆ ಕರೆದೊಯ್ದು ಮುಟ್ಟಿಸಿದರು?

ಉ: ‹ತನಗೆ ಸಂಗೀತಮಂ ಕಲಿಸಿದಾ ಗುರುವಿನ ಅಡಿಗೆ.'

ಪ್ರ: ಅಂದರೆ, ನಿಮ್ಮಮಾವನೂ ಸಂಗೀತ ಕಲಿತದ್ದರಿಂದ ನಿಮಗೆ ಸಂಗೀತ ವಿದ್ಯೆಯು ಆನುವಂಶಿಕವಾದಂತಾಯಿತು ಆ ನಿಮ್ಮಮಾವನಿಗೂ ನಿಮಗೂ ಸಂಗೀತ ವಿದ್ಯೆ ಕಲಿಸಿದ ವ್ಯಕ್ತಿಯ ಅಂದರೆ ನಿಮ್ಮ ಸಂಗೀತ–ವಿದ್ಯಾ–ಗುರುಗಳ ಹೆಸರೇನು ?

ಉ: ‹ಪಂಚಾಕ್ಷರಾರ್ಯನೆಂದು'ನೆಂದು.'

ಪ್ರ: ಒಳ್ಳೆ ಹೆಸರು. ಪಂಚಾಕ್ಷರ ಎಂಬುದು ಪೂಜ್ಯತೆಯ ಕುರುಹು. ಈ ಪೂಜ್ಯ ಹೆಸರಿನ ನಿಮ್ಮ ಸಂಗೀತ-ವಿದ್ಯಾಗುರುಗಳಾದ ಇವರ ಪೂಜ್ಯತೆಯ ಬಗ್ಗೆ ಒಂದು ಮಾತು ಹೇಳಬಲ್ಲಿರಾ?

ಉ: "ಯೋಗಿವರನಾದ ಪಂಚಾಕ್ಷರಾರ್ಯಂ ಭೋಗಿ-ಭೂಷಣ–ಸದವತಾರಿ."

ಪ್ರ: ಚನ್ನಾಗಿದೆ, "ಯೋಗಿವರನೂ ಭೋಗಿಭೂಷಣನ ಸದವತಾರಿ"ಯೂ ಆದ ಇವರ ಬಗ್ಗೆ, ಇವೇ ಪದಗಳನ್ನೊಳಗೊಂಡ ಒಂದು ಪದ್ಯವನ್ನೇ ಹೇಳಿರಿ. ನಿಮ್ಮ ಪರಮ ಗುರುವಿನ ಹೆಸರೂ ಈ ಪದ್ಯದಲ್ಲಿರಲಿ ಗುರುವಿನ ಬಗ್ಗೆ ಹೇಳುವ ಪದ್ಯವೆಂದ ಮೇಲೆ, ಶ್ರೀಕಾರ ಮೊದಲ ಪಾದವಾಗಿರಬೇಕೆಂಬುದು "ಕವಿ–ಸಮಯ" ಬಲ್ಲ ನಿಮಗೆ ಗೊತ್ತಿರಬಹುದಲ್ಲ? ಶ್ರೀಗುರು....ಎಂದು ಪ್ರಾರಂಭಿಸಿರಿ.

ಉ: ಶ್ರೀಗುರು ಕುಮಾರೇಶರುರು ಶಿಷ್ಯನಾಗುತ್ತೆ, ।
ಲೋಗರಿಂ ಜನ್ಮಾಂಧನೆಂದೆನಿಸಿ ಕೊಳ್ಳುತ್ತೆ, ।
ರಾಗದಿಂದುಭಯ ಸಂಗೀತಮಂ ಕಲಿಯುತ್ತೆ, ವಿದ್ಯಾರ್ಥಿಗಳಿಗೆ ಕಲಿಸಿ ॥
ಭೋಗಿಭೂಷಣ–ಸದವತಾರಿಯಾಗೆಸೆಯುತ್ತೆ, ।
ಶ್ರೀಗೆ ವೀರೇಶ–ಪುಣ್ಯಾಶ್ರಮವ ರಚಿಸುತ್ತೆ. ।
ಯೋಗಿವರನಾದ ಪಂಚಾಕ್ಷರಾರ್ಯಂ ಪೊರೆಯಲೆನ್ನ ಗುರು ಗದಗ–ವಾಸಂ॥

(ಮಂಗಲಾಚರಣ ಸಂಧಿ-೯)

ಪ್ರ: ಒಳ್ಳೆ ಒಳ್ಳೆ ಚನ್ನಾಗೆ ಹೇಳಿದಿರಿ. ಪಂಚಾಕ್ಷರಾರ್ಯರ ಬಗ್ಗೆ ಹೇಳಿದ ನಿಮ ಕವಿತಾ ಜಾಣ್ಮೆ ಮೆಚ್ಚುವಂತಹುದು. ಆರೇ ಸಾಲಿನಲ್ಲಿ ಎಲ್ಲವನ್ನೂ ಹೇಳ್ಮ

ದಂತಾಯಿತು. ಪಂಚಾಕ್ಷರನ ಬಗ್ಗೆ ಪಂಚಮಾತ್ರೆಯ ಗಣದ ಪದ್ಯ. ಶ್ರೀಗುರು ಅನ್ನುವದನ್ನು ಒಟ್ಟಾಗಿಯೂ ಬೇರೆ ಬೇರೆಯಾಗಿಯೂ ಜೋಡಿಸಿ ಹೇಳಿದಿರಿ."ಲೋಗದಿಂ ಜನ್ಮಾಂಧ-ನೆನಿಸಿಕೊಳ್ಳುತ್ತಿ"ದ್ದ ಪಂಚಾಕ್ಷರಾರ್ಯ ನನ್ನು (ಗದ್ದುಗಾರ್ಯನನ್ನು ಶಿಷ್ಯನನ್ನಾಗಿ ಸ್ವೀಕರಿಸಿ, ಅವನಿಗೆ ಕಲಿಸಿ ಕಲಿಸಿ, ಕೃಪೆಮಾಡಿ-ಮಾಡಿ, ಕೊನೆಗೆ "ಯೋಗಿವರ"ನನ್ನಾಗಿ ಮಾಡಿದ ನಿಮ್ಮ ಪರಮಗುರು: "ಶ್ರೀಗುರು ಕುಮಾರೇಶ"ನ ಘನತೆ-ಗೌರವವನ್ನೂ ನೀವು ಇದೀಗ ಅಂದಿರುವ ಈ ನಿಮ್ಮ ಪದ್ಯದಲ್ಲಿ ಮೂರ್ತಗೊಳಿಸಿರುವಿರಿ.

ಇರಲಿ, ಈ ನಿಮ್ಮ ಗುರು ಪಂಚಾಕ್ಷರಾರ್ಯರು ನಿಮಗೆ ಮುಖ್ಯವಾಗಿ ಕಲಿಸಿದ್ದೇನು?

ಉ: ದಕ್ಷಿಣಾದಿ ಹಾಗೂ ಉತ್ತರಾದಿ ಎಂಬ "ಉಭಯ ಗೀತ-ವಿದ್ಯೆಯಂ ಕಲಿಸಿದಂ

ಪ್ರ: ಈ ಉಭಯ ಗಾಯನದಲ್ಲಿ ಪರಿಣತರಾದ ನೀವು ಅಂದರೆ, ಉಭಯ ಗಾಯನಕ್ಕೂ ಬೇಕಾದ ಕಂಠ ಸಂಗೀತ ಹಾಗೂ ವಾದ್ಯ ಸಂಗೀತದಲ್ಲೂ ಪಳಗಿದ ನೀವು, ಸಂಗೀತಕ್ಕೆ ಅಭಿನ್ನವಾದ ಅಂಗದಂತಿರುವ ಸಾಹಿತ್ಯವನ್ನೇನಾದರೂ ಬೆಳೆಸಿಕೊಂಡಿರೋ?

ಉ: ನಿಜ. "ಸಂಸ್ಕೃತ ಹಿಂದಿ ಕನ್ನಡ ಸುಭಾಷೆಗಳ ಸಾಹಿತ್ಯಮಂ".

ಪ್ರ: ಈ ತ್ರಿಭಾಷಾ-ಸಾಹಿತ್ಯದ ಅಧ್ಯಯನ-ಅಭ್ಯಾಸ-ಅಧ್ಯಾಪನವನ್ನಷ್ಟೇ ಮಾಡಿರುವಿರೋ? ಅಥವಾ ಬರೆವಣಿಗೆಯಲ್ಲಿ ಶಾಶ್ವತಗೊಳಿಸಿರುವಿರೊ?

ಉ: 'ಬರೆದೆನು'.

ಪ್ರ: ಯಾವ ಯಾವ ಭಾಷೆಗಳಲ್ಲಿ ಬರೆದಿರಿ?

ಉ: "ತ್ರಿಭಾಷೆಗಳೊಳು'.

ಪ್ರ: ಮೂರೂ ಭಾಷೆಗಳಲ್ಲಿ ಬರೆದ ಪುಸ್ತಕಗಳೆಷ್ಟು?

ಉ: "ಉರೆ ಪುಸ್ತಕಗಳಂ",

ಪ್ರ: ನಿಶ್ಚಿತ-ಸಂಖ್ಯಾವಾಚಕವನ್ನು ಹೇಳಲಾರದೆ, ಸಾಮಾನ್ಯ-ಸಂಖ್ಯಾವಾಚಕವನ್ನು ಹೇಳಿದಿರೆಂದ ಮೇಲೆ, ಬಹಳಷ್ಟನ್ನು ಬರೆದಿರಬೇಕೆಂದೂ ಇನ್ನೂ ಬರೆಯುತ್ತಿದ್ದು ಅವು ಅರ್ಥಮರ್ಥ ಆಗಿರಬೇಕೆಂದೂ ನಮಗನಿಸುತ್ತಿದೆ. ಇರಲಿ ಬಹಳಷ್ಟು ಬರೆದು ಮುದ್ರಿಸಿದ ಗ್ರಂಥಗಳು ಗದ್ಯದಲ್ಲಿವೆಯೋ? ಅಥವಾ ಪದ್ಯದಲ್ಲಿವೆಯೋ ?

ಉ: ಗದ್ಯ-ಪದ್ಯಂಗಳೊಳ್.

ಪ್ರ: ಅಬ್ಬಾ! ಗದ್ಯದಲ್ಲೂ ಪದ್ಯದಲ್ಲೂ ಬರೆವ ಯೋಗ್ಯತೆಯನ್ನು ಬೆಳೆಸಿದ ನಿಮ್ಮ ಗುರುಗಳ ಹಾಗೂ ನಿಮ್ಮ ಪರಮ-ಗುರುಗಳ ಕೃಪೆ–ಕರುಣೆ ನಿಮ್ಮ ಮೇಲೆ ಅಪಾರವಾಗಿದೆ. ಎಂದಂತಾಯಿತು. ಏಕೆಂದರೆ, "ನರತ್ವಂ ದುರ್ಲಭಂ ಲೋಕೇ; ವಿದ್ಯಾ ತತ್ರ ಸುದುರ್ಲಭಾ; ಕವಿತ್ವಂ ದುರ್ಲಭಂ ತತ್ರ; ವಿದ್ಯಾ ಸುದುರ್ಲಭಾ" ಎಂದಿರುವ ಅಗ್ನಿಪುರಾಣದ ಮಾತಿನಂತೆ ನೀವು ಗಳಿಸಿದ ವಿದ್ಯೆಯನ್ನು ಗದ್ಯ–ಪದ್ಯದಲ್ಲಿ ಕವಿತ್ವ–ಮಯವಾಗಿ ಬರೆಯುವ ಸಾಮರ್ಥ್ಯವುಳ್ಳ ನಿಮ್ಮ ಶ್ರಮದ ಬಗ್ಗೆ ನಿಮಗೆ ಹೆಮ್ಮೆಯೆ?

ಉ: ಗುರುವಿನ "ಕೃಪಾ–ಬಲದಿಂ ಬರೆದೆನು''.

ಪ್ರ: ಗುರುವಿನ "ಕೃಪಾ–ಬಲದಿಂದ" ಎಂದರೆ, ಎಲ್ಲ ಗುರುಗಳ ಕೃಪಾ–ಬಲದಿಂದ ಎಂದಂತಾಯಿತು. ದೀಕ್ಷಾ-ಗುರು, ಶಿಕ್ಷಾ-ಗುರು. ಮೋಕ್ಷ-ಗುರು-ವಿದ್ಯಾ-ಗುರು, ಗುರುವಿನ ಗುರು, ಪರಮಗುರು–ಈ ಎಲ್ಲ ಗುರುಗಳಿಗೂ ನಮಿಸುವ ನೀವು ನಿಮ್ಮ ಪರಮ ಗುರುವಾದ "ಹಾನಗಲ್ಲ ಗುರುವರ್ಯರ"ನ್ನು ಒಂದು ಪದ್ಯದಲ್ಲಿ ವಾಚಾಪಿ ನಮಿಸಿರಿ. ಈ "ಹಾನಗಲ್ಲ ಗುರುವರ್ಯ''ರ ಸ್ತುತಿ-ಪದ್ಯವನ್ನು ನೀವು ಹೇಳುವಾಗ "ಹಾನಗಲ್ಲ" ಎಂಬುದನ್ನು ಮೊದಲಿಗೂ, ಹಾಗೂ ಕೊನೆಯಲ್ಲಿ "ಗುರುವರ್ಯ" ಎಂಬ ಪದವನ್ನೂ ಇರಿಸಿ, ಒಳಗೆ ಮಹಿಮೆ ತಿಳಿಸುವ ಪದಗಳನ್ನು ತುಂಬಿ, ಒಂದು ವಾರ್ಧಕ ಷಟ್ಪದಿ ಯನ್ನಾಗಿಸಿರಿ. ಈ ಗುರು–ಸ್ತುತಿಯಲ್ಲಿ ಶ್ರೀಗುರು ಪದವನ್ನು ಮೊದಲಿಗನ್ನದೆ ಪದ್ಯದ ನಡುವೆ ಸೇರಿಸಬಹುದು. ಪ್ರಯತ್ನಿಸಿರಿ

ಉ. " ಹಾನಗಲ್ಲ ವಿರಕ್ತಮಠದ ಸ್ವಾಮಿಗಳ, ಪರ–|
ಮಾನುಭಾವಿಗಳ, ಶ್ರೀಗುರು ಕುಮಾರೇಶ್ವರರ, |
ಜ್ಞಾನ-ನಿಧಿ ವೀರಶೈವ ಮಹಾಸಭಾ-ಸ್ಥಾಪಕರ, ಶಿವ ಸು-ಶೀಲಾತ್ಮರ, ||
ಮಾನಿಗಳ, ಶಿವಯೋಗಮಂದಿರ-ಸ್ಥಾಪನಾಽ–|
ನೂನ-ಕರ್ತೃಗಳ, ದೀನಾಂಧ–ಪೋಷಣ-ರತರ, |
ದಾನಿಗಳ, ಸತ್ಯಾನುರಾಗಿಗಳ ಪಾದಕ್ಕೆ ವಂದಿಪೆಂ ಗುರುವರ್ಯರ ||

(ಮಂ. ಸಂಧಿ, ಪದ್ಯ : ೮)

ಪ್ರ. ಪುಣ್ಯವಂತರಪ್ಪಾ ನೀವು, ಪುಣ್ಯವಂತರು.
"ಹಾನಗಲ್ಲ.... ಗುರುವರ್ಯರ" ಈ ಸ್ತುತಿಯಲ್ಲಿ ಸುಸ್ಪಷ್ಟವಾಗಿರುವ ಷಷ್ಠಿ ವಿಭಕ್ತಿಯನ್ನುಳ್ಳ ಹನ್ನೊಂದು ಪದಗಳನ್ನು ಬಳಸಿ, ಹನ್ನೊಂದು ಸಂಧಿಗಳಲ್ಲಿ ಬರೆಯಬಹುದಾದಂಥ, ಹನ್ನೊಂದು ಲೀಲೆಗಳ ವರ್ಣನೆ ಮಾಡುತ್ತ, ಹನ್ನೊಂದು ರುದ್ರರ ( ಏಕಾದಶ ರುದ್ರರ : 'ನಮಸ್ತೇಸ್ತು ಭಗವನ್

೧) ವಿಶ್ವೇಶ್ವರಾಯ ೨) ಮಹಾದೇವಾಯ, ೩) ತ್ರ್ಯಂಬಕಾಯ, ೪) ತ್ರಿಪುರಾಂತಕಾಯ, ೫) ತ್ರಿಕಾಗ್ನಿ ಕಾಲಾಯ, ೬) ಕಾಲಾಗ್ನಿರುದ್ರಾಯ, ೭) ನೀಲಕಂಠಾಯ, ೮) ಮೃತ್ಯುಂಜಯಾಯ, ೯) ಸರ್ವೇಶ್ವರಾಯ, ೧೦) ಸದಾಶಿವಾಯ, ೧೧) ಶ್ರೀಮನ್ ಮಹಾದೇವಾಯ ನಮೋ ನಮಃ ''ಶ್ರೀರುದ್ರ" ವರ್ಣನೆಯನ್ನು ಮಾಡಿದಂತಾಗಿದೆ. ಏಕೆಂದರೆ; ನಿಮ್ಮ ಪರಮ ಗುರುಗಳಾದ ಶ್ರೀಗುರು ಕುಮಾರಸ್ವಾಮಿಗಳ ಪಟ್ಟಾಭಿಷೇಕದ ಹೆಸರು ಈ ಏಕಾದಶ) ರುದ್ರರ ಹೆಸರುಗಳಲ್ಲಿ ಹತ್ತನೆಯ ಹೆಸರು ; ಅಂದರೆ "ಸದಾಶಿವ" ಎಂದು.

ನಿಮ್ಮ ಜೊತೆಗೆ ಬಹಳ ಹೊತ್ತು ಪ್ರಶ್ನೋತ್ತರ ಮಾಡುತ್ತಿದ್ದಾರೆಂದು ಬೇಸರ ಪಟ್ಟುಕೊಳ್ಳ ಬೇಡಿರಿ. ''ಸಜ್ಜನರ ಸಹವಾಸ ಹೆಜ್ಜೇನು ಸವಿದಂತೆ'' ಎಂದು ಸರ್ವಜ್ಞ ಹೇಳಿದ್ದು, ನಿಜ ಅನ್ನಿಸುತ್ತದೆ.

ಪ್ರಶ್ನೋತ್ತರದಲ್ಲಿ ಈವರೆಗೆ ನಿಮ್ಮಿಂದ ತಿಳಿದು ಬಂದಂತೆ, ನೀವು ಸಾಹಿತ್ಯಿಕ, ಸಾಂಸ್ಕೃತಿಕ, ಅಧ್ಯಾತ್ಮಿಕ ಸಂಸ್ಕಾರವನ್ನು ಉನ್ನತ ಮಟ್ಟದಲ್ಲಿ ಪಡೆದಂತೆ ಧಾರ್ಮಿಕ ಸಂಸ್ಕಾರವನ್ನು ಪಡೆದಿರುವಿರೋ ?

ಉ. ಅಹುದು. ''ಹರ-ದೀಕ್ಷೆಯಂ ಪಡೆದೆನು"

ಪ್ರ. ಯಾರಿಂದ ?

ಉ. ''ಬಿದರೀ ಪ್ರಭುಕುಮಾರ ದೇವರೋಳ್ ಅರಿಯುತೆ"

ಪ್ರ. ''ಅರಿಯುತೆ" ಎಂಬುದರ ಔಚಿತ್ಯವೇನು ?

ಉ. ದೀಕ್ಷಾಗುರುವಿನಲ್ಲಿರ ಬೇಕಾದ ಗುರುತ್ವದ ಯೋಗ್ಯತೆಯು ನನ್ನ ದೀಕ್ಷಾ-ಗುರುವಿನಲ್ಲಿದ್ದದ್ದನ್ನು ಹಾಗೂ ಇವರ ಶಿಷ್ಯತ್ವವನ್ನು ವಹಿಸಿ, ನಾನೂ ಯೋಗ್ಯನಾಗಲು ಆಚಾರ-ವಿಚಾರದಿಂದ ನನ್ನ ಆತ್ಮೋದ್ಧಾರವನ್ನು ನಾನು ಮಾಡಿಕೊಳ್ಳಬಲ್ಲೆನೆಂದೂ ಮತ್ತು ನನ್ನ ಪರಮಗುರುವಾದ ಹಾನಗಲ್ಲ ಶ್ರೀಗುರು ಕುಮಾರೇಶನಿಗೆ ಈ ನನ್ನ ದೀಕ್ಷಾಗುರುವು ಆತ್ಮೀಯ-ನಾಗಿ ಶಿವಯೋಗ ಮಂದಿರದಲ್ಲಿದ್ದು ಎಲ್ಲ ಶಿವಯೋಗಿಗಳಿಗೆ ಶಿವಯೋಗ-ವಿದ್ಯೆ ಯೋಗಾಸನ ಷಟ್‌ಕರ್ಮ ಕಲಿಸುತ್ತಿದ್ದು, ಈ ಎಲ್ಲವನ್ನೂ ನಾನೇ ''ಅರಿಯುತೆ" ದೀಕ್ಷಿತನಾದೆನು ; ಒತ್ತಾಯದಿಂದಲ್ಲ; ಯಾರ ಅನುಕರಣೆ-ಯಿಂದಲೂ ತಿಳಿಯಲಾರದೆ, ಆದದ್ದಲ್ಲ.

ಪ್ರ. ''ಶಿವಾಚಾರ್ಯರಿಂದ ದೀಕ್ಷೆ ಹೊಂದಿ ದೀಕ್ಷಿತರಾದ ನೀವು ನಿಮ್ಮ ದೀಕ್ಷಾ-ಸಮಯದಲ್ಲಿ ನಡೆದ ವಿಧಾನವನ್ನು ಸ್ಮರಣೆಗೆ ತಂದು ಕೊಂಡು ಒಂದು ಪದ್ಯ

ಹೇಳುವ ಉಪಕಾರ ಮಾಡುವಿರಾ ? ಮಂತ್ರವನ್ನು ಇತರರಿಗೆ ಹೇಳಬಾರದೆಂದು ನಿಯಮ ಗೊತ್ತಿದೆ. ಮಂತ್ರದ ಪ್ರಸಂಗವನ್ನು ಬಿಟ್ಟು, ಇಷ್ಟಲಿಂಗದಲ್ಲಿ ಪಶ್ಚಿಮಶಿ.–ಶಿಖಾ–ಚಕ್ರಸ್ಥ–ಚಿತ್ ಕಲೆ-ಸಂಯೋಜನವನ್ನು ಮಾಡಿದ ಪ್ರಸಂಗವನ್ನಷ್ಟಾದರೂ ಹೇಳಬಹುದಲ್ಲ ? ಹೇಳಿ :

ಉ. ಶಿವಯೋಗಿಯಾದ ಗುರುವಾತ್ಮ-ಶಿಷ್ಯನ ಶಿರದೆ ।
ಶಿವ-ಕರವನಿರಿಸುತ್ತ, ದೃಷ್ಟಿಯೊಳ್ ದೃಷ್ಟಿಯುಂ ।
ತವೆ ಬೆರಸಿ, ಮನದಲ್ಲಿ ಮನವ, ಭಾವದೆ ಭಾವಮಂ ನಿಲಿಸಿ, ನೆತ್ತಿಯೊಳಿಹ ॥
ಶಿವದೇಷ್ಟ-ಲಿಂಗ-ಕಳೆಯಂ ತೆಗೆದು ಯೋಗದಿಂ ।
ನವ ಶಿಲಾ-ಲಿಂಗದೋಳ್ ಸ್ಥಾಪಿಸುತಲೀಯುವಂ ; ।
ಪವಮಾನಮದುಮಿಷ್ಟ-ಲಿಂಗಂ....ಸರ್ವ ಲಿಂಗಗಳ ರೂಪಮಿದುವೆ; ॥"

(೧೦–೪೨)

ಶಿವದೀಕ್ಷೆ ಪಡೆದು ದೀಕ್ಷಿತನಾದ ಶಿಷ್ಯನು– "ಇದನೆ (ಇಷ್ಟಲಿಂಗವನ್ನೆ)
ನಿತ್ಯದೊಳುರದೆ ಧರಿಸಿ, ನಿಜ ವಾಮಕರ- ।
ಮೃದು-ಪೀಠದೊಳಗಿಟ್ಟು, ಪೂಜಿಸಿ ತ್ರಿಕಾಲದೋಳ್,.... ಈ ಲಿಂಗದೋಳ್
ದೃಷ್ಟಿಯಂ ನಿಲಿಸಿ, ನವಲಿಂಗಗಳ ಕಾಣುತ್ತಿರುವನು (೧೦–೪೩)

ಪ್ರ: ಏನೋ ಒಂದು ವಿಶೇಷವನ್ನು ನೀವುಹೇಳಬೇಕೆನ್ನುವಂತೆ ಕಾಣುತ್ತಿದೆ?ಹೇಳಬಹುದು.

ಉ: ನಾನು ದೈಹಿಕವಾಗಿ, "ಯೇನಾಽಂಗ-ವಿಕಾರಃ" ಎಂಬ ವ್ಯಾಕರಣದ ಸೂತ್ರವನ್ನು ಸಿದ್ಧ ಮಾಡಿ ತೋರಿಸುವ ಸಲುವಾಗಿ "ಅಕ್ಷ್ಣಾ ಕಾಣೋಽಹಂ"; ಅಂದರೆ, ಬಸವಣ್ಣನವರು ತಮ್ಮ ವಚನದಲ್ಲಿ ಬೇಡಿಕೊಂಡಂತೆ 'ಸುತ್ತಿಸುಳಿದು ನೋಡದಂತೆ" ನಾನು "ಹುಟ್ಟುಗುರುಡಂ" (ಮಂ. ಸಂ. ೧೩); ಆದರೂ, ಬೌದ್ಧಿಕವಾಗಿ ಸಾಹಿತ್ಯ-ರಂಗದಲ್ಲಿ ತ್ರಿಭಾಷಾ-"ಕವಿಯ್ಕುನಿಜಂ"; ಗುರುಕೃಪಾ-ಬಲದಿಂ ಎಲ್ಲಾ ಯೋಗ್ಯತೆ ಎನಗಿದ್ದರೂ, ಎನ್ನ ಪರಮ ಗುರುವಾದ ಹಾನುಗಲ್ ಶ್ರೀಗುರು ಕುಮಾರೇಶನಷ್ಟು ನಾನು "ಅನುಭವಿಯು ಅಲ್ಲಂ" (ಮಂ. ಸಂ. ೧೩).

ಪ್ರ: ಸರ್ವ ಸಮರ್ಥ"ಕವಿ-ಚಕ್ರವರ್ತಿ"ಯಾದ ನೀವು ಈ ಪುರಾಣವನ್ನು ಬರೆಯಲಿಕ್ಕೆ ತೊಡಗಿದ ಹಿನ್ನೆಲೆ ಏನು? ಮತ್ತು ಜ್ಞಾನ-ಚಕ್ಷುವಿನಿಂದಲೇ ಎಲ್ಲವನ್ನೂ ನೋಡುವ ನೀವು ನಿಮ್ಮ ಚರ್ಮಚಕ್ಷುವಿನ ಹುಟ್ಟುಗುರುಡುತನವನ್ನೇಕೆ ನೆನಪು ಮಾಡಿಕೊಡುವಿರಿ?

ಉ: ನಾನು ಕಾವ್ಯ ಬರೆಯಲು ಕೈಹಾಕಿದ ಹಿನ್ನೆಲೆಯೇನೆಂದರೆ, ನಾನು ನನ್ನ ಗುರುಗಳ ಮುಖಾಂತರವೂ, ಶಾಸ್ತ್ರಾದಿಗಳ ಮೂಲದಿಂದಲೂ ಮತ್ತು ನನ್ನ ಸ್ವಂತ ಅಂತಃ ಸ್ಫೂರ್ತಿಯ ಬಲದಿಂದಲೂ ಪಡೆದ ನನ್ನ ಉನ್ನತ ಮಟ್ಟದಲ್ಲಿಯ ಲ್ಲಿಯ ಅನುಭವವನ್ನು ಜಗತ್ತಿನ ಇತರರಿಗೂ ತಿಳಿಸಿ, ಅವರಿಗೂ ತಮ ತಮ್ಮ ಆತ್ಮೋದ್ಧಾರ ಮಾಡಿಕೊಳ್ಳಲು ಅವರವರಿಗೆ ಜ್ಞಾನ ಪ್ರಾಪ್ತಿಯಾಗ ಲೆಂದು ಬರೆಯತೊಡಗಿದೆ

ಒಳಗಣ್ಣಷ್ಟೇ ಇರುವ ಈ ಕವಿಯು "ಈ ಪುರಾಣವ ಬರೆವ ಕಟ್ಟಿನ ಪ್ರತಿಜ್ಞೆಯಂಗೈದು ತೊಡಗಿದನೇತಕೆಂದು ಜನರುನಗದಿಲಿ". (ಮಂ. ೧೩) "ನಗದಿರಲಿ" ಎಂದರೆ, ಸುಖಿಸದಿರಲಿ ಅಥವಾ ಹಾಸ್ಯ ಮಾಡದಿರಲಿ ಎಂದರ್ಥ ವಲ್ಲ; ಅಪಹಾಸ್ಯ ಮಾಡದಿರಲಿ, ಪರಿಹಾಸ ಮಾಡದಿರಲಿ ಎಂದರ್ಥ. ಏಕೆಂದರೆ, "ಜಗವೆಲ್ಲ ನಗುತಿರಲಿ, ಜಗದಳುವು ನನಗಿರಲಿ" ಎಂಬುವವರ ಪೈಕಿ ನಾನೂ ಒಬ್ಬ ವ್ಯಕ್ತಿ.

"ಉರಿಯು ಮುಟ್ಟಿದ ಕಪ್ಪುರಂ ಜ್ಯೋತಿಯಪ್ಪಂತೆ, |
ಉರಿಯು ಮುಟ್ಟಿದ ಕಟ್ಟಿಗೆಯು ಅಗ್ನಿಯಪ್ಪಂತೆ, |
ಉರಿಯು ಮುಟ್ಟಿರುವ+ ಆರಳೆ ದೀಪಮಪ್ಪಂತೆ,"

ಹನ್ನೆರಡನೆಯ ಶತಮಾನದ "ಗುರುಸಿದ್ಧನ + ಅಪರಾವತಾರಿ"ಯೂ, "ಪರಮ ಕವಿ"ಯೂ, "ಗುರು"ವೂ ಆದ ಹದಿನೈದನೆಯ ಶತಮಾನದ "ಸಿದ್ಧಲಿಂಗನ ಕೃಪೆಯು ಮುಟ್ಟಿ,| ಸರಸ ಕವಿಯೂನಾಗಿ, ಕರ್ತೃ-ಕಾವ್ಯಮ ನೀಗ | ಬರೆಯತೊಡಗಿದೆನು" (ಮಂ. ಸಂ, ೧೪).

ಪ್ರ: ಒಳ್ಳೇದು, ಒಳ್ಳೆಯ ಭಾವದ ಪುಟ್ಟರಾಜ ಕವಿಗಳೆ, ನೀವು ಈ "ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ-ಪುರಾಣವನ್ನು ಬರೆಯತೊಡಗಿದ ದಿನ ದಿಂದ, ಅಂದರೆ ಶಾಲಿವಾಹನ ಶಕೆ : ೧೮೯೯ ನೇ ಪಿಂಗಳನಾಮ ಸಂವತ್ಸರ ವೈಸಾಖ ಶುದ್ಧ ತೃತೀಯಾ ಗುರುವಾರ ತಾ|| ೨೧-೪-೧೯೭೭ ನೇ ಇಸ್ವಿಯ ದಿವಸ ಸಾಯಂಕಾಲ ೫;೩೦ ಘಂಟೆಯ ಅಮೃತ ವೇಳೆಯಲ್ಲಿ "ಶ್ರೀ ಗುರೂ-ತ್ತಮ......" ಎಂದು ಮುಂತಾಗಿ ಶ್ರೀಕಾರದೊಂದಿಗೆ ಪ್ರಾರಂಭಿಸಿ, ಶಾ|| ಶಕೆ : ೧೯೦೦ ನೇ ಕಾಳಯುಕ್ತಿ ನಾಮ ಸಂವತ್ಸರದ ಮಾರ್ಗಶಿರ ಶುದ್ಧ ದ್ವಾದಶಿ ಚಂದ್ರವಾರ : ತಾರೀಖು ೧೧-೧೨-೭೮ ನೇ ದಿನದ ಶುಭ ವೇಳೆಯಲ್ಲಿ "....ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣ ಸಂಧ್ಯೆಕ-ವಿಂಶಂ" ಎಂದು ಸಮಾಪ್ತಿಗೊಳಿಸಿರುವ ವರೆಗೂ ನೀವು ಮಾಡಿದ ದಿನ ನಿತ್ಯದ ಶಿವಪೂಜೆಗೆ ಎರಡು ಫಲ; ಒಂದು "ಕಾವ್ಯ-ಶಾಸ್ತ್ರ-ವಿನೋದೇನ ಕಾಲೋ ಗಚ್ಛತಿ

ಧೀಮತಾಮ್'' ಎಂಬುದಂತೂ ಸಾರ್ಥಕ ಆದದ್ದೊಂದು. ಎರಡನೆಯ ಫಲವೆಂದರೆ, ''ಜ್ಞಾನಂ ಶಿವಮಯಂ; ಭಕ್ತಿಃ ಶೈವೀ; ಧ್ಯಾನಂ ಶಿವಾಽಽತ್ಮಕಮ್ | ಶಿವ-ವ್ರತಂ; ಶಿವಾರ್ಚೇತಿ ಶಿವಯೋಗೋ ಹಿ ಪಂಚಧಾ ॥'' ಎನ್ನುವಂತೆ ಇದೂ ಸಹ ಸರಿಸಮನಾಗಿ ಸರಿಯಾಗಿಯೇ ಸಂಗೊಂಡಂತಾಯಿತು.

ಉ: ನಿಮ್ಮ ಹೃದಯವಂತಿಕೆಯ ಆತ್ಮೀಯತೆಗೆ ಧನ್ಯವಾದಗಳು; ಪರಮ ಗುರುವಿನ ಕರುಣೆ ಇರಲಿ; ಪೂರ್ಣತ್ವ'-ಪ್ರಾಪ್ತಿಯಾಗಲಿ.

ಪ್ರ: ಈ ''ಸಂದರ್ಶನಕ್ಕೆ ಅವಕಾಶಮಾಡಿಕೊಟ್ಟದ್ದಕ್ಕೆ ನಿಮಗೂ ಧನ್ಯವಾದಗಳು. ನೀವು ಇದೀಗ ಸಂಸ್ಕೃತ ಶ್ಲೋಕಗಳಲ್ಲಿ ''ಹಾನುಗಲ್ಲ ಶ್ರೀ ಗುರು ಕುಮಾರೇಶನ ಪುರಾಣ'' ಬರೆಯುತ್ತೀದ್ದೀರೆಂದು 'ಶಿವ'ನಿಂದ ತಿಳಿದು ಬಂದಿದೆ. ಅದನ್ನು ಮುಂದುವರಿಸಬಹುದು.

ಉ: ನೀವೂ ಸಂಸ್ಕೃತ ಶೋಕಗಳ 'ಅರ್ಧಶತೀ' ಪ್ರಾರಂಭ ಮಾಡಿರುವಿರಂತೆ, ಸಾಗಲಿ.

''ನಮಸ್ತೇ''.

''ನಮಸ್ತೇ''

## ಕುರುತೇ ; ನ ಕುರುತೇ

'ಕವೇಃ ಕರ್ಮ ಕಾವ್ಯಂ'; ಕಾವ್ಯವೆಂದರೆ ಕವಿ ಮಾಡಿದ್ದುದು. ಎಂದರೆ, ಬರೆದದ್ದು. ಬರೆದದ್ದು ಆಗಬೇಕಾದರೆ, ಬರೆಯುವವನು ಕವಿ ಆಗಬೇಕು, ಕವಿ ಆಗಬೇಕಾದರೆ, ಅವನು ಋಷಿ ಆಗಬೇಕು. ಆ ಋಷಿ ಆಗಬೇಕೆಂದರೆ ಆಚಾರ-ವಿಚಾರದಿಂದ ಅವನು ಸರಿಯಾಗಿರಬೇಕು. ಅಂದರೆ, ಸದಾಚಾರ ಸದ್ ವಿಚಾರದ ಅವನು ಜ್ಞಾನ-ಕರ್ಮ-ಸಮ-ಸಮುಚ್ಚಯ-ಪದ್ಧತಿ ಪ್ರಕಾರ ಅವೆರಡನ್ನು ಸರಿಯಾಗಿ ನಡೆಸಿಕೊಂಡು ಭಾರತೀಯ ಸಂಸ್ಕೃತಿಗನುಸರಿಸಿ, ಭೌತಿಕವಾದವನ್ನು ತಿರಸ್ಕರಿಸಲಾರದೆ ಇದನ್ನು ಸಹಕಾರಿಯನ್ನಾಗಿರಿಸಿಕೊಂಡು ಅಧ್ಯಾತ್ಮವಾದವನ್ನು ತ್ರಿಕಣರಪೂರ್ವವಾಗಿ ಆತ್ಮೀಕರಿಸಿಕೊಳ್ಳಬೇಕು. ಇಂಥ ವ್ಯಕ್ತಿಗೇ ಋಷಿ ಅಥವಾ ಶರಣ ಅನ್ನುತ್ತೇವೆ. ಇವನಿಗೇ ಪರ್ಯಾಯವಾಗಿ 'ಕವಿ' ಅನ್ನುತ್ತೇವೆ. ಕವಿತ್ವ ಮೂಡಿಸಲಾರದವನು ಕವಿ ಅನ್ನಿಸಿಕೊಳ್ಳಲಾರ. ಕವಿ ಹೃದಯ-ಇಲ್ಲದವನು ಋಷಿಯೇ ಆಗಲಾರ. ಆಗಲಾರದವನಿಂದ ಆಗುವದೇನು ? ಆಗಬೇಕೆನ್ನುವವನು ಋಷಿ-ಜೀವನದ ಋಷಿ ಆಗಬೇಕು. ಅಂಥವನು ತಾನಾಗಿಯೇ ಕವಿ ಆಗುತ್ತಾನೆ. ಹಾಗಾಗದವನ ಮಾತೆಲ್ಲವೂ ಜ್ಯೋತೀರ್ಲಿಂಗವಾಗುತ್ತದೆ. ಅಂತೆಯೇ "ನಾಽನೃಷಿಃ ಕುರುತೇ ಕಾವ್ಯಮ್" ಎಂಬ

ಮಾತು ಇಲ್ಲಿ ನೆನಪಾಗುತ್ತದೆ. ಈ ಮಾತಿನ ಪ್ರಕಾರ 'ಅನೃಷಿಃ'=ಋಷಿ-ಜೀವನ-ಬಾಳಲಾರದವನು, ಋಷಿತ್ವದ ಯೋಗ್ಯತೆಗೆ ಅನರ್ಹನಾದವನು "ಕಾವ್ಯಂ" ‖ ಗ್ರಂಥವನ್ನು = ಪುಸ್ತಕವನ್ನು = ಶಾಶ್ವತವಾಗಿ ಉಳಿಯುವ ಮಾತನ್ನು 'ನ ಕುರುತೇ' = ಮಾಡಲಾರನು; ರಚಿಸಲಾರನು, ನಿರ್ಮಿಸಲಾರನು. ಇಲ್ಲಿಯ 'ಕುರುತೇ' ಎಂಬಲ್ಲಿಯ "ಡುಕೃಞ್ =ಕರಣೇ" ಧಾತುವು ಕೇವಲ ಅಕ್ಷರ ಬರೆಯುವುದಕ್ಕಷ್ಟೇ ಸೀಮಿತವಾಗಿಲ್ಲ. 'ಕರ್ಮಸು ಕೌಶಲಂ' ಎಂಬಂತೆ ಎಲ್ಲ ವಿಧದ ಕೃತಿಯ ಕೌಶಲತೆಯನ್ನು ಇದು ಪ್ರತಿನಿಧಿಸುತ್ತಿದೆ, ಅಂತೆಯೆ "ಕವೇಃ ಕರ್ಮ ಕಾವ್ಯಂ" ಎಂದಿದೆ.

ಋಷಿಃ ಅನೃಷಿಃ

"ನಾಽನೃಷಿಃ ಕುರುತೇ ಕಾವ್ಯಂ" ಎಂಬ ನಿಷೇಧಾತ್ಮಕ ವಾಕ್ಯವನ್ನು ಸ್ವೀಕಾರಾತ್ಮಕ ವಾಕ್ಯವನ್ನಾಗಿ ಮಾಡಿದರೆ ಅಂದರೆ, ನಞ್-ಅರ್ಥವನ್ನು ಬಿಟ್ಟರೆ, "ಋಷಿಃ ಕಾವ್ಯಂ ಕುರುತೇ" ಎಂದಾಗುತ್ತದೆ. ನ+ಋಷಿಃ=ಅನ್+ಋಷಿಃ= ಅನೃಷಿಃ; ಋಷಿ-ಶಬ್ದವು ಸ್ವರಾದಿಯಾಗಿರುವುದರಿಂದ ಕೇವಲ 'ಅ' ಬರದೆ "ಅನ್" ಬಂದಿದೆ. ಅನೃಷಿಃ ಎಂಬಲ್ಲಿ 'ನಞ್ ತತ್ಪುರುಷ ಸಮಾಸ' ವಿದೆ. ಇಲ್ಲಿ ಇದರ ಅರ್ಥ ವಿರುದ್ಧಾರ್ಥದಲ್ಲಿದೆ. ''ಅನೃಷಿ:'': ಅಂದರೆ, ''ಋಷಿಯ ವಿರೋಧಿ" ಎಂದಾಗುತ್ತದೆ. 'ಋಷಿ-ವಿರುದ್ಧೋ=ಅನೃಷಿ:; ''ಧರ್ಮ-ವಿರುದ್ಧೋಽಧರ್ಮಃ" ಎಂದಂತೆ ಇದೂ ಸಹ. ಅಂದ ಮೇಲೆ, ಋಷಿ-ಜೀವನಕ್ಕೆ ವಿರುದ್ಧವಾದ ಜೀವನ ಸಾಗಿಸುವವನು ಅಂದರೆ ರಾಕ್ಷಸಾದಿಗಳ ಕ್ರೂರ ಜೀವನವನ್ನು ಸಾಗಿಸುವವನಿಂದ ಕಾವ್ಯ-ನಿರ್ಮಾಣ ಆಗಲಾರದು. ಅಂತೆಯೇ ಅನೃಷಿ ಮಾಡಿದ್ದು ಕಾವ್ಯವಲ್ಲ; ಋಷಿ ಮಾತ್ರ ಕಾವ್ಯವನ್ನು ಮಾಡಬಲ್ಲನು. ಇದರ ಸಾರಾಂಶವೇನೆಂದರೆ, ಅನೃಷಿಃ ಕಾವ್ಯಂ ನ ಕುರುತೇ; ಅಂದರೆ ''ಋಷಿರೇವ ಕಾವ್ಯಂ ಕುರುತೇ" |

'ಕುರುತೇ' ಎಂಬ ಆತ್ಮನೇ ಪದದ ಪ್ರಯೋಗದಿಂದ ತನ್ನ ಆತ್ಮೋದ್ಧಾರದ ಹಿನ್ನೆಲೆಯನ್ನೇ ಪ್ರಾಧಾನ್ಯವಾಗಿಟ್ಟುಕೊಂಡು, ತನ್ನ ಆತ್ಮ-ನಿರೀಕ್ಷಣೆಯೊಂದಿಗೆ ಪರರಿಗೂ ಸಹ ಉಪದೇಶ ಮಾಡಿ, ಅವರನ್ನೂ ಆತ್ಮೀಯತೆಯಿಂದ ಉದ್ಧರಿಸುವ ಗುರಿಯು ಕಾವ್ಯ-ರಚನೆಗೆ ಪ್ರೇರಣೆ ನೀಡುತ್ತಿದೆ.

ಪ್ರೇರಣೆ ಪ್ರೋತ್ಸಾಹ

ಪ್ರೇರಣೆಯಿಂದ ಪ್ರೋತ್ಸಾಹದಿಂದ ಕರ್ತವ್ಯ-ನಿರ್ವಹಣೆಗಾಗಿ ತೊಡಗಿದ ಋಷಿ-ಜೀವನದ ಕವಿಯು (೧) ಸಂಸ್ಕೃತಿಯ ಯಶಸ್ಸನ್ನು ಪ್ರಸರಿಸುವ ಸಲುವಾಗಿ (೨) ಪುರುಷಾರ್ಥ ಸಂಪಾದಿಸುವ ಮರ್ಮವನ್ನು ತಿಳಿಸುವ ಕಾರಣಕ್ಕಾಗಿ, (೩) ವ್ಯವಹಾರದಲ್ಲಿ ರೀತಿ-ನೀತಿಯಿಂದ ನಡೆಯಬೇಕೆಂಬುದನ್ನು ನುಡಿಯಬೇಕೆ-

ಂಬುದನ್ನು ಮನಗಾಣಿಸವ ನಿಮಿತ್ಯದಿಂದಾಗಿ, (೪) ಅನಿಷ್ಟವನ್ನು ನೂರೀಕರಿಸುವ ಮೂಲಕ ಇಷ್ಟ ಸಂಪ್ರಾಪ್ತಿ ಮಾಡಿಸುವ ಉದ್ದೇಶದಿಂದಾಗಿ, (೫) ಜೀವನ್ಮುಕ್ತ ರಾಗಿ ಬಾಳುತ್ತ ಆತ್ಮಶಾಂತಿಯನ್ನು ಹಾಗೂ ದೈಹಿಕಾರೋಗ್ಯವನ್ನು ಕಾಯ್ದು-ಕೊಳ್ಳುವಂತೆ ಮಾಡುವದನ್ನು ತಿಳಿಸುವ ಗುರಿಗಾಗಿ ಕಾವ್ಯಗಳನ್ನು ರಚಿಸುತ್ತಾರೆ. ಕವಿ-ಜೀವನದ ಕವಿಗಳು. ಇದನ್ನೆ ಸಂಸ್ಕೃತದಲ್ಲಿ ಶ್ಲೋಕಮಯವಾಗಿ ನೆನಪಿಸಿ-ಕೊಳ್ಳಬಹುದು. "ಕಾವ್ಯಂ" ಯಶಸೇಽರ್ಥ-ಕೃತೇ, ವ್ಯವಹಾರ-ವಿದೇ, ಶಿವೇತರ ಕ್ಷತಯೇ, ಸದ್ಯಃ ಪರ-ನಿರ್ವೃತಯೇ ಕಾಂತಾ-ಸಮ್ಮಿತತಯೋಪದೇಶ-ಯುಜೇ॥"

ಕವಿ-ಜೀವನದ ಋಷಿಯಾದ ಅಥವಾ ಋಷಿ-ಜೀವನದ ಕವಿಯಾದ ಪುಟ್ಟ-ರಾಜಂಥವರು ಕಾವ್ಯವನ್ನು ಬರೆಯ ಬಲ್ಲರೆಂಬುದು ನಿರ್ವಿವಾದ ವಾದವು. ಇಂ ಪುಟ್ಟರಾಜರು "ಶ್ರೀಗುರೊತ್ತಮು, ಸಾರ್ವಭೌಮು, ಸುಹೃದಯ-ಧಾಮು....... ಗುರುಸಿದ್ಧ-ನಾಮು, ನಮಿಪೇಂ ; ನೀಗಿಸು ಈ ಭವವ" (ಮಂ. ಸಂ ೧) ಎಂದು ಮುಂತಾಗಿ ಪ್ರಾರಂಭಿಸಿರುವ "ಹುಬ್ಬಳ್ಳಿ ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ -ಪುರಾಣ" ದಂತಹ ಶ್ರವ್ಯ ಕಾವ್ಯಗಳನ್ನು ಪದ್ಯಾತ್ಮಕವಾಗಿ (ಗದ್ಯಾತ್ಮಕ ಭಾವ-ಪರಿಮಳದೊಂದಿಗೆ) ಬರೆದ, ಬರೆಯುತ್ತಿರುವ, ಬರೆಯಲಿರುವ ಬಗ್ಗೆ ಪ್ರೇರಣೆ-ಪ್ರೋತ್ಸಾಹ ಏನು ಎಂಥದು ?

ಓ; ಓಂ; ೫ :

ಈಗಿನ ಕೆಲ ಜನರು "ಮನೋರಂಜನೆ" ಎಂಬಲ್ಲಿಯ ಓಕಾರದ ವರೆಗೂ ಮುಂದು ವರಿಯಲಾರದೆ 'ಮನರಂಜನೆ"ಯ ಆಕಾರದ ವರೆಗಷ್ಟೇ ನಿಂತು, ಕಥೆಯು ಕತೆಗಳನ್ನೋದುವ ಈ ಕಿರುಗತೆಯ ಕಾಲದಲ್ಲಿ "ಪುರಾಣ" ಹೆಸರಿನಿಂದಲೆ ತಮ್ಮ ಅಜ್ಞತೆಯ ದೆಶೆಯಿಂದಾಗಿ ತಮ್ಮಷ್ಟಕ್ಕೆ ತಾವೇ ಮೂಗು ಮುರಿಯು"ತ್ತಿರುತ್ತಾರೆ. ಇಂತಹ ವಾತಾವರಣದಲ್ಲಿಯೂ 'ಪುರಾಣ"ದ ಹೆಸರಿನಿಂದಲೆ ಪುರಾಣದ ಶೈಲಿಯಲ್ಲಿ ತಾತ್ತ್ವಿಕ ಬೋಧವನ್ನು ಭಕ್ತಿ-ಜ್ಞಾನ-ವೈರಾಗ್ಯ ಕಾಂಡತ್ರಯಗಳನ್ನೊಳಗೊಂಡ ಶ್ರೀ ಗುರುಸಿದ್ಧೇಶ್ವರ-ಪುರಾಣವನ್ನು ಬರೆದ ಬಗ್ಗೆ ಪ್ರಶ್ನೆಮಾಡುವವರೂ ಇರಬಹು ದಲ್ಲವೆ? ಇಂಥ ಪುರಾಣಗಳನ್ನು ಬರೆಯಬಹುದಾದರೂ ಏತಕ್ಕೆ? ಬರೆಯುತ್ತಿರಲೇ ಬಹುದೇನು? ಇಂಥವನ್ನು ಆಗಾಗ್ಗೆ ಓದುತ್ತಿರಬೇಕೆನು? ಓದಿಸುತ್ತಿರಲೇ ಬೇಕೇನು? ಓದಿದ್ದನ್ನು ತಿಳಿದೇಬಿಡಬೇಕೆನು? ತಿಳಿದದ್ದನ್ನು ಒಳ್ಳೆಯದನ್ನಾಗಿಸಿ ನಡೆಸಲೇಬೇಕೇನು? ನಡೆದದ್ದನ್ನು ನಡೆಸಿದ್ದನ್ನು ನುಡಿಯಲೇಬೇಕೆನು? ಇವೆಲ್ಲ ದಕ್ಕೂ ಒಂದೇ ಉತ್ತರ: ಅಹುದು; ಅಹುದು. ಏಕೆಂದರೆ, ಅಕ್ಕರವು ಲೆಕ್ಕಕ್ಕೆ; ತರ್ಕ ತಾ ವಾದಕ್ಕೆ; ಮಿಕ್ಕ ಓದುಗಳೆಲ್ಲ ತಿರುಪೆಗೆ; ಮುಕ್ತಿಗೆರಡಕ್ಕರವೆ ಸಾಕು ಸರ್ವಜ್ಞ" ಎಂದ ಹಾಗೆ ಎರಡಕ್ಕರವಾಗಲಿ ಅಥವಾ "ಓಂ" ಎಂಬಂತಹ ಒಂದೇ ಅಕ್ಕರವಾಗಲಿ, ಅದನ್ನು ಸರಿಯಾಗಿ ಬಳಸಲಿಕ್ಕೂ ತಿಳಿಸಲಿಕ್ಕೂ ತಿಳಿದಿರಬೇಕಲ್ಲವೆ?

ಇಂಥಾದ್ದನ್ನು ತಿಳಿಯಬೇಕಾದರೆ ಇಂಥಾ ಪುರಾಣಗಳನ್ನು ಓದಬೇಕಲ್ಲವೆ?

. "ಓಂ"ಕಾರವನ್ನೂ ಸಹ ಸರಿಯಾಗಿ ಬರೆಯಲಾರದವರನ್ನು ಸ್ಮರಿಸಿಕೊಂಡು "ಪೂರ್ಣತ್ವದಲ್ಲಿ "ಕನ್ನಡದ" ಓಂ" ಪೂಜಿ ಆರಮನೆ ವಸತಿ ಮತ್ತು ಆಶ್ರಯ ಪಡೆದು, ಪದದ ಮೊದಲ ನೆಲೆ ಕಳೆದತ್ತು, || "ಙ"ದ ರೂಪ ತಳೆದು ನಿಜ ನಿಜತೆ ಅಳಿವುದು: ಗೊತ್ತು; | ಗಳಿಸು ಪೂರ್ಣ ಗಳಿಸದೆ ಬಿಡಬೇಡ ಬೇಸತ್ತು;" ಎಂಬ ಸೂತ್ರದ ‹‹ಪೂರ್ಣತ್ವ-ಭಾವಾಭಿವ್ಯಕ್ತಿ" ಭಾಷ್ಯದಲ್ಲಿ ‹‹ಓಂ"ಕಾರವನ್ನು ಕ-ಖ-ಗ-ಘ-ಙ ಎಂಬಲ್ಲಿಯ ಅಂದರೆ ಕ ವರ್ಗದ ಐದನೆಯ ವರ್ಣವನ್ನಾಗಿ ಬರೆಯಬಾದೆಂದೂ ಆ ರೀತಿ ತಿಳುವಳಿಕೆ ಎಲ್ಲರಿಗೂ ಉಂಟಾಗಲೆಂದೂ ಆ ಪೂರ್ಣತ್ವದಲ್ಲಿ ನಮೂದಿಸಿರುವ ಪ್ರಕಾರ, ಈ ಗುರುಸಿದ್ಧೇಶ್ವರ-ಪುರಾಣದಲ್ಲಿಯೂ ಕಥೋಪಕಥನದೊಂದಿಗೆ ಏಕೋತ್ತರಶತಸ್ಥಲ ಮುಂತಾಗಿ ಕನ್ನಡದಲ್ಲಿ ಕನ್ನಡ ಛಂದದಲ್ಲಿ ಬರೆದದ್ದು ಸಮಂಜಸವಾಗಿದೆ. ಪುರಾಣ ಎಂಬ ಶಬ್ದವೇ ತಿಳಿಸುವಂತೆ ‹‹ಪುರಾಣಂ ಪಂಚ-ಲಕ್ಷಣಂ" ಎಂದ ಹಾಗೆ ಎಲ್ಲ ಲಕ್ಷಣದಿಂದ ಕೂಡಿದ ಈ ಪುರಾಣವು ಪಾರಾಯಣಕ್ಕೆ ಯೋಗ್ಯವಾಗಿದೆ.

**ಶುಭ ಲಾಭ**

ಸುಸಂಸ್ಕೃತ ಲೇಖನಿಯಿಂದ, ಧಾರ್ಮಿಕ ಭಾವನೆಯಿಂದ, ಸುಧಾರಿಸುವ ಭಾವದಿಂದ ಬರೆದ ಇಂಥ ಗ್ರಂಥಗಳಲ್ಲಿದ್ದ ನೀತಿ ರೀತಿ ಬೋಧಕ ವಾಕ್ಯಗಳನ್ನು ಬಳಸಬಲ್ಲಂಥವರಿಗೆ ಈ ಲೋಕದಲ್ಲಿ ಮಾತ್ರವಲ್ಲ, ಸ್ವರ್ಗದಂಥಹ ಇತರ ಲೋಕದಲ್ಲಿ (ಹೊರನಾಡಿನಲ್ಲೂ) ಸಹ ಆ ಒಳ್ಳೆ ಪದಗಳ ಪ್ರಯೋಗದಿಂದ ಒಳ್ಳೆಯದೇ ಆಗು-ತ್ತದೆ. ಈ ಬಗ್ಗೆ ‹‹ಏಕಃ ಶಬ್ದಃ ಸುಪ್ರಯುಕ್ತಃ ಸಮ್ಯಗ್ ಜ್ಞಾತಃ ಸ್ವರ್ಗೇ ಲೋಕೇ ಕಾಮ-ಧುಗ್ ಭವತಿ, ಎಂದರೆ ಬೇಡಿದ್ದನ್ನು ಬಯಸಿದ್ದನ್ನು ನೀಡುತ್ತದೆ. ಶುಭಪ್ರದ-ವೇದ-ಉಪನಿಷತ್ತು - ಆಗಮಗಳಲ್ಲಿ ತತ್ವ ಜ್ಞಾನವನ್ನು ಸಾಕಷ್ಟು ವಿಸ್ತಾರವಾಗಿ ತಿಳಿಸಿರುವಾಗ ಈ "ಕರ್ತೃ ಶ್ರೀ ಜಗದ್ಗುರು-ಗುರುಸಿದ್ಧೇಶ್ವರರ ಪುರಾಣ" ದಂತಹ ಶ್ರವ್ಯ ಕಾವ್ಯಗಳಿಂದ ಹೆಚ್ಚಿನ ಲಾಭವೇನೆಂದು ತಿರಸ್ಕರಿಸಲಾರದೆ ಪುರಸ್ಕರಿಸಬೇಕು. ಮಾತೃ ಭಾಷೆಯಲ್ಲಿದ್ದ ಗ್ರಂಥಗಳಿಂದ ಸರಳವಾಗಿ ತಿಳಿದಷ್ಟು ಪರ-ಭಾಷೆಯಲ್ಲಿ ಅಷ್ಟೊಂದು ಸಹಜವಾಗಿ ತಿಳಿಯದಿರಬಹುದು. ಒಟ್ಟನಲ್ಲಿ, ಈ ಪುರಾಣ ಶೈಲಿಯಲ್ಲಿ ಬರೆದ ಇಂಥ ಪುರಾಣಗಳಿಂದ ಸಾಮೂಹಿಕವಾಗಿ ಕುಳಿತು ಸಂಗೀತದೊಂದಿಗೆ ಹಾಸ್ಯಕಥೆ ಉಪಕತೆಗಳ ಮೂಲಕ ಚರಿತ್ರವನ್ನು ತತ್ವವನ್ನು ತಂತಾನೇ ತಿಳಿಯಲು ಸರ್ವೇ ಸಾಮಾನ್ಯರಿಗೂ ಸಹ ಇಂತ ಪುರಾಣಗ್ರಂಥಗಳಿಂದ ಅನುಕೂಲ ಆಗುತ್ತದೆ. ಅಂದರೆ ಧರ್ಮ; ಅರ್ಥ; ಕಾಮ; ಮೋಕ್ಷ;ಭಕ್ತಿ; ಮುಂತಾದವುಗಳನ್ನು ಇಂಥ ಪುರಾಣಾದಿಕಾವ್ಯಗಳಿಂದಲೇ ಸಂಪೂರ್ಣ ಜೀವನವನ್ನು ಸುಖಮಯವನ್ನಾ-

ಗಿಸಿಕೊಳ್ಳಬಹುದು ಇದಕ್ಕೆ ಪ್ರಮಾಣವೂ ಇದೆ :

" ಚತುರ್ವರ್ಗ-ಫಲ-ಪ್ರಾಪ್ತಿಃ ಸುಖಾದ್ ಅಲ್ಪ-ಧಿಯಾಮಪಿ, ಕಾವ್ಯಾದ ಏವ ಎಂದಿದೆ ಚಾರಿತ್ರ್ಯಾತ್ಮಕವಾದ ಭಕ್ತಿ-ಭರಿತ-ಸಾಹಿತ್ಯಕೃತಿ ಆಗಿರುವ ಈ ಪುರಾಣವು :

" ಸಾರ-ಸಾಹಿತ್ಯಮಿದಕೇನು ಜೊತೆಯಾಗಿಲ್ಲ; |
ಭೂರಿ ಚಾರಿತ್ರ್ಯಂಮಿದ ಕಾವುದುಂ ಸಮಮಲ್ಲ |

(ಮಂ. ೧೮)

ಆದುದರಿಂದ ಶುಭಸ್ಯ ಶೀಘ್ರಂ ಎನ್ನುವಂತೆ ಶುಭಪ್ರದ ಚರಿತೆಉಳ್ಳ ಇಂಥ ಪುರಾಣ ಗ್ರಂಥಗಳ್ಳಿಂದ ತಿಳಿಯಲ್ಪಡುವ ಭಕ್ತಿಯ ವಿಷಯಗಳ ಶ್ರವಣ ಮನನ ದಿದಿಧ್ಯಾವತ್ರಯದಿಂದ ಪುರುಷಾರ್ಥ ಪ್ರಾಪ್ತಿ ಆಗುವುದಲ್ಲದೆ, ಇಹಲೋಕದ ಶಾಂತಿ ಸಾಂತ ಜೀವನ ಸಾಗಿಸುವ ಲಾಭವೂ ಪ್ರಾಪ್ತವಾಗತ್ತದೆ.

**ಭಾಷಣ ಸಂಭಾಷಣ**

ಕೈಲಾಸನಾಮ ಪುರಮುಂಟಲ್ಲಿ'....೧-೧೦) ಕೊತ್ತಲಂಗದೊಳೆಸೆದ ಕಲ್ಲು ಪರುಷದ ಮಣಿಯು.... (೧-೧೧) 'ಅಲ್ಲಿ ಹಂಗಣಿ ಮಾಡಿ-ಸಿದ್ಧಿಗಳ್ ವಶವಿಹವು.... (೧-೧೨) ಶಿವನ ಸಂಕಲ್ಪದಂತರಮನೆಯು ಶೋಭಿಪುದು.... (೧-೧೩) 'ಧರ್ಮ-ವೆಂಬುವ್ರದೊಂದು ಹೆಬ್ಬಾಗಿಲೀ ಗೃಹಕೆ.... (೧-೧೪) 'ಸತ್ ಕಾರ್ಯತೆಯು ಸಿಂಹಾಸನಂ ಶಿವನದರ ಮೇಲೆ ನಾರ್ಯತೆಯು ಕಳೆಯಲ್ಕೆ ಪಂಚಮುಖ ದಶ-ಭುಜ ಸದಿಂದುಗಳ ಧರಿಸಿ ಮೆರೆವಂ|| (೧-೧೫) "ಎಡದ ತಾಣದೆ ಪಾರ್ವತೀ ದೇ-ವಿ.... ಸಡಗರದೆ ಮೆರೆದಿಹಳ್.... (೧-೧೭) ಸರಸತಿಯು ಭಕ್ತಿಯಿಂ ನುಡಿಸುವಳ್ ವೀಣೆಯಂ .... " (೧-೧೭) 'ಪರುಷ ಹಸ್ತದ ಗಣರ್ ಮೌನಿಪರ್ ಸಭೀಕರಂ (೧-೧೩) "ಇಂತು ಸಾಗರದಂತೆ ಶೋಭಿಸುವ ಸಭೆಯಲ್ಲಿ ಶಾಂತನಹ ನಾರದಂ.... ದೃಶ್ಯನಾದಂ ಶಿವಂಗೆ " (೧-೧೮) -ಎಂದು ಮುಂತಾಗಿ ಯಥಾವತ್ತಾಗಿ ಹೊರ-ಗಿನ ಕಣ್ತುಂಬ ಪ್ರತ್ಯಕ್ಷ ನೋಡಿದಂತೆಯೇ ವರ್ಣಿಸಿದ ಪುಟ್ಟರಾಜ ಕವಿಯು ಪುರಾಣ ಬರೆಯುವುದಕ್ಕೆ ಮುಂಚೆನೇ ಕೈಲಾಸಕ್ಕೆ ಹೋಗಿದ್ದನೆ ? ಒಬ್ಬನೆ ಹೋ-ಗಿದ್ದನೆ ? ಶಿವ-ಪಾರ್ವತಿ-ಸರಸ್ವತಿ ನಾರದ ಮುಂತಾದವರ ದರ್ಶನವಾಯಿತೇ ಕೈಲಾಸಪುರದ 'ಕೊತ್ತಲಂಗಳೊಳೆಸೆದ ಕಲ್ಲು ಪರುಷದ ಮಣಿಯಾದದ್ದನ್ನು ಕವಿ-ಯು ನೋಡಿದನೆ ? ಅರ್ಕಸ್ಪ್ರಾಂಗನು ಚಂದಗ್ರಹದಿಂದ ಕಲ್ಲನ್ನು ತಂದಂತೆ ಈ ಕವಿಯು ಪರುಷದ-ಮಣಿಯನ್ನಾಗಲೀ ಅಥವಾ ಹಾಗೇ ಇದ್ದ ಕಲ್ಲನ್ನು ಕೈಲಾಸದಿಂದ ತಂದಿರುವನೆ ? ನಾರದನ ಸಂಭಾಷಣೆಯು ಶಿವನೊಡನೆ ಆದದ್ದು ಯಾವ ಭಾಷೆ-ಯಲ್ಲಿ ? ಆ ಭಾಷೆ ಈ ತ್ರಿಭಾಷಾ-ಕವಿಗೂ ಬರುತ್ತಿತ್ತೇ? ಎಂದು ಮುಂತಾಗಿರುವ

ಪ್ರಶ್ನೆ-ಮಾಲಿಕೆಗೆ, ಕೊರಳಲ್ಲಿ ನಾವೆಲ್ಲರೂ ಹೂಗಳನ್ನೊ, ಮಣಿಗಳನ್ನೊ, ಕೈಯಿಂದ ಎತ್ತಿ ಹಿಡಿದು ನೋಡಿ, ಪೋಣಿಸುದಂತೆ, ಪ್ರಶ್ನೆಗಳನ್ನು ಕೈಯಲ್ಲಿ ಮುಟ್ಟಿ ಹಿಡಿದು ಮಾಲೆಯನ್ನಾಗಿಸಲು ಬಾರದ ವಿಷಯ. ಆದರೂ, ವ್ಯವಹಾರಕ್ಕೆ ಹಾಗನ್ನುತ್ತೇವೆ. ಪ್ರಶ್ನೆ ಮಾಲಿಕೆಗೆ ತಕ್ಕುದಾದ ಉತ್ತರ-ಗುಚ್ಛವನ್ನು ಜೋಡಿಸುತ್ತೇವೆ. ಅಷ್ಟೇ;

ಅರ್ಥ ಅನರ್ಥ

'ಅವನು ಸತ್ತು ಹೋದನು' ಎಂಬರ್ಥದ ವಾಕ್ಯದಲ್ಲಿಯ ಮಾತಿನ ಮಾತನು ಚರ್ಚಿಸುವದಾದರೆ, ಸತ್ತವನು ಹೋಗುವದೆಲ್ಲಿಗೆ ? ಸತ್ತವನ ದೇಹವು ಇಲ್ಲಿಯೇ, ಸೆಟೆದು, ಕೊಳೆತು, ನೇರವಾಗಿ ಮಣ್ಣಾಗಿಯೋ ಅಥವಾ ಬೂದಿಯ ನಂತರ ಮಣ್ಣಾಗಿಯೋ ಹೊಗುತ್ತದೆ. ಜೀವವಿಲ್ಲದ ಅವಸ್ಥೆಯಲ್ಲಿ ಕೆಲ ತಾಸುಗಳ ನಂತರ ಮಣಿಸಲೂ ಭಾರದ ಕಾಲುಗಳಿಂದ ಆ ದೇಹವು ತಾನೆ ಚಲಿಸು-
ವದಾದರು ಹೇಗೆ ?

ಕಾಲಿಗೆ ಹೊಸ್ತಿಲು ಬಡಿಯಿತು; 'ಕೆರೆಯಲ್ಲಿ ಬಸ್ಸು ಬಿತ್ತು'; ''ಮೈಗೆ ಕೆಸರು ಸಿಡಿಯಿತು"; 'ಕೊಡ ಉರುಳಿತು,' –ಇಂತಹ ವರ್ಣನೆಯಲ್ಲಿ ಬಿದ್ದಲ್ಲೇ ಬಿದ್ದಿರುವ ಚಲನೆಯಿಲ್ಲದ ಹೊಸ್ತಿಲವು ಕಾಲಗೆ ಬಡೆಯುವುದಾದರೂ ಹೇಗೆ? ಕಾಲೇ ಅದಕ್ಕೆ ಬಡಿದರೂ, ಅದೇ ಕಾಲಿಗೆ ಬಡೆಯಿತೆನ್ನುತ್ತೇವೆ. ಇದರಂತೆಯೇ ಎಲ್ಲ ವ್ಯವಹಾರ ಅನಿಚ್ಛೆಯಿಂದ ಆದ ಕೆಲಸ ಇದು ಎಂದಿಷ್ಟೇ ಗ್ರಹಿಸುವುದೇ ಮುಖ್ಯ ಮಾತು. ಹೀಗೆ ಗ್ರಹಿಸದಿದ್ದರೆ ಎಲ್ಲ ವಾಕ್ಯಕ್ಕೂ ಖಗ್ರಾಸ ಗ್ರಹಣ.

ರವಿ ಕಾಣದ್ದನ್ನು ಕವಿ ಕಾಣುತ್ತಾನೆ'' ಎಂಬ ನಾಣ್ಣುಡಿಯಂತೆ, ಕಲ್ಪನಾ ಲೋಕದ ಕವಿಗೆ ಕಾಣಲಾರದ್ದಾವುದೂ ಇರುವದಿಲ್ಲ; ಇದ್ದದ್ದನ್ನೂ ಇಲ್ಲದ್ದನ್ನೂ ಕಾಣಿಸುವಂತೆ ಮಾಡುವವನೇ ಕವಿಯು. ಇತರರಿಗೆ ತೊಂದರೆಯಾಗದಂತೆ, ತನ್ನ ಪ್ರತಿಭೆಯನ್ನು ಮೂರ್ತಗೊಳಿಸುವುದೇ ಕವಿಯ ಮುಖ್ಯ ಗುರಿ. ಅಂತೆಯೇ ಖಡ್ಗದಿಂದಾಗಲಾರದ್ದನ್ನು ಕವಿಯ ಲೇಖನಿ ಮಾಡುತ್ತದೆನ್ನುತ್ತಾರೆ.

ಒಟ್ಟಿನಲ್ಲಿ, ಕಥೆ ಕಿರುಗತೆ, ನೀಳ್ಗತೆ, ಕಾದಂಬರಿ, ನಾಟಕ, ಚಂಪೂ, ಪುರಾಣ ಮುಂತಾದ ಸಾಹಿತ್ಯದ ಪುಸ್ತಕಗಳನ್ನ್ನು ಬರೆಯುವ ಲಕ್ಷಣದಂತೆ ಬರೆಯ ಬೇಕು. ಹಾಗೆಯೇ ಈ ಪುರಾಣವನ್ನು ಪುರಾಣದ ಲಕ್ಷಣದಂತೆ ಬರೆಯಲಾಗಿದೆ. ಮಾರೂತಿಯ ಬಾಲವನ್ನು ಗಣಪತಿಗೆ; ಗಣಪತಿಯ ಸೊಂಡಿಲನ್ನು ಆ ಮಾರುತಿಗೂ ಹಚ್ಚದಂತೆ ನೋಡಿಕೊಳ್ಳಬೇಕು. ಅಷ್ಟೆ.

ಪರವಸ್ತು-ಕಥಾವಸ್ತು :

ಕೈಲಾಸದ ಶಿವನು ಭೂಲೋಕದಲ್ಲಿ ಕಲ್ಯಾಣ-ಕ್ರಾಂತಿಯ ಕಾಲದಲ್ಲಿ ಕರ್ನಾಟಕದಲ್ಲಿರಬೇಕೆಂದು ಶಿವಯೋಗಿಯಾಗಿ ಅವತಾರ ತಾಳಿ ಬಂದನು. ಹೂಬಳ್ಳಿ ಪುರವನ್ನು ಕೇಂದ್ರ ಸ್ಥಾನವನ್ನಾಗಿ ಕಲ್ಪಿಸಿಕೊಂಡನ್ನು; ಮೂರು ಸಾವಿರ ಸ್ವಾಮಿ ಗಳಿರಲೆಂದು ಅವರಿಗೆ ಮೂರು ಸಾವಿರ ಗ್ರಾಮಗಳಲ್ಲಿ ಅಷ್ಟೇ ಸಂಖ್ಯೆಯ ಮಠ ಗಳನ್ನು ಅಸ್ತಿತ್ವದಲ್ಲಿ ತಂದು ಧರ್ಮ ಜಾಗ್ರುತಿ ಮಾಡಿದನು. ಅನಂತ ಲೀಲೆಗಳಿಂದ ಭಕ್ತರನ್ನು ಉದ್ಧರಿಸಿದನು. ಅವನೇ ಹುಬ್ಬಳ್ಳಿಯಲ್ಲಿ ನಿರ್ವಿಕಲ್ಪ-ಸಮಾಧಿಸ್ಥ ನಾಗಿರುವನು. ಈ ಕಥಾ-ವಸ್ತುವನ್ನೇ ಆಧಾರವಾಗಿಟ್ಟುಕೊಂಡು ಕಥೆ-ಉಪ ಕಥೆಗಳ ಮೂಲಕ ರೀತಿ-ನೀತಿಗಳನ್ನು ತಿಳಿಸುತ್ತ ಷಟ್‌ಸ್ಥಲ ಪಂಚಾಚಾರ ಅಷ್ಟಾ- ವರಣಗಳ ಬಗೆಗೆ ಮಾತ್ರವಲ್ಲ ಏಕೋತ್ತರ ಶತಸ್ಥಲಗಳಂತಹ ಗಡುಚಾದ ವಿಷಯ ಗಳನ್ನು ಸಹ ಸ್ವಲ್ಪದರಲ್ಲಿಯೇ ತಿಳಿಗನ್ನಡದಲ್ಲಿ ತಿಳಿಪಡಿಸಲಾಗಿದೆ.

ಸಮಗ್ರ ಪುರಾಣದ ಕಥಾ-ವಸ್ತುವಿನ ಪರಿಪಿಡಿಯನ್ನು ಒಂದನೇ ಸಂಧಿಯ ಒಂದನೇ ಪದ್ಯದ ಮೊದಲಿನ ಸೂಚನಾ-ಪದ್ಯಾರ್ಥದಲ್ಲಿ ಸಂಕ್ಷಿಪ್ತವಾಗಿ ಸೂಚಿಸ ಲಾಗಿದೆ.

ಇದೇ ಪದ್ಧತಿಯಲ್ಲಿ ಪ್ರತಿಯೊಂದು ಸಂಧಿಯಲ್ಲಿಯ ವಿಷಯ-ಸೂಚಿಯನ್ನು ಆ ಎಲ್ಲ ಸಂಧಿಯ ಪ್ರಾರಂಭದಲ್ಲಿ ಅದೇ ವಾರ್ಧಕ ಷಟ್‌ಪದಿಯಶ್ಲೋಕಾರ್ಥದಲ್ಲಿ ನೋಡಬಹುದಾಗಿದೆ.

ಪರವಸ್ತು-ಪರಬ್ರಹ್ಮನಾದ ಶಿವನು ಈ ಪುರಾಣದ ಕಥಾ-ನಾಯಕನಾದಂಥ ಶಿವಯೋಗಿಯಾಗಿ ಪಂಚ ವಿಧವಾದ ಶಿವಯೋಗ ಸಾಧಿಸುವದನ್ನು ತನ್ನ ಶಿಷ್ಯರಿಗೂ ಸಾರಿ ಹೇಳಿ, ಸಮಾಧಿಸ್ಥನಾಗಿ ಇರುವ ಕಥಾ-ವಸ್ತುವಿನ ಸಮಗ್ರ ವರ್ಣನೆ ಇದರಲ್ಲಿದೆ.

(ಕೈಲಾಸದಿಂದೆ ಶಿವನವತರಿಸಿ ಬಂದಭವ- | ನೋಲಾಡಿ, ಹಬ್ಬಳ್ಳಿ ಪುರದ ದರದ ನವ | ಲೀಲಾತ್ಮನಾಗಿ ಮಾಡಿಸಿದ '' (೧, ಸವ.) '' ಪೂವಳ್ಳಿ ಮೂರುಸಾವಿರ ಮಠದ ಗುರಸಿದ್ಧ- | ನಾ ಪೊಳ್ಳಿಯೀ ಚರಿತಕ್ಕೆ ನಾಯಕನವನೆ | ಭಾವಕ್ಕೆ ನಲ- ವೀವ ಗುರವು ; ಶಿವನಾಗಿಹಂ ; ಲಿಂಗಂ ಮಹಾ ದೈವತಂ '' (ಮ ೧೯) ; ಇದೇ ಪದ್ಯದಲ್ಲಿ ಉತ್ತರಾರ್ಧದಲ್ಲಿ, ಈ ಪುರಾಣ-ಕಾವ್ಯವನ್ನು ಓದುವ ಕೇಳುವ ಹಾಗೂ ಹೇಳುವ ಸದ್‌ಭಕ್ತರು ಶರಣಾಗುವ ಯೋಗ್ಯತೆಯನ್ನು ಜೀವನವನ್ಮುಕ್ತರಾಗುವ- ರೆಂದೂ ಫಲಶ್ರುತಿಯನ್ನು ತಿಳಿಸುತ್ತ, ಈ ಕಾಧ್ಯದ ಅಧ್ಯಯನಕ್ಕೆ ಅಭ್ಯಾಸಕ್ಕೆ ಭಕ್ತಿ ಮುಖ್ಯವಾಗಿ ಬೇಕೆಂದು ನಿರೂಪಣೆ ಇದೆ.)

ಶಿವ= ಗುರುಸಿದ್ಧ :

ಕೈಲಾಸದ ಸಭೆಯಲ್ಲಿದ್ದಾಗ ನಾರದನನ್ನು "ಕೈಸನ್ನೆಯಿಂ ಕರೆದು ಕೇಳಿದಂ

ಸರ್ವಲೋಕದ ಕುಶಲವ''(೧-೧೮] ''ನಾರದಂ ವಂದಿಸುತೆ ಶಿವಗೆ ಕೈಮುಗಿಯುತ್ತೆ ಸಾರ-ವಾಣಿಯೊಳಿಂತು ನುಡಿದನು'':-(೧-೧೯) ಭೂಲೋಕದಲ್ಲಿ ''ನಾಸ್ತಿಕರ್ ಪೆರ್ಚಿಹರ್....ಕೆಲರ್ ಅಮಳರ್ ಉಳಿದಿಹರ್'' (೧-೨೦) ''ಸದಯ ದೇವನೆ, ತಾವ್ (ಶಿವನು) (ಭೂಲೋಕದಲ್ಲಿ) ಉದಿಸದಿರ್ದೊಡೆ ಧರೆಯು ಕೈಲಾಸವೆಂತ ಹುದು? ಎಂದೊರೆದು, ನಮಿಸುತಲ್ಲಿಂದೆ ತೆರಳ್ದಂ, ಮುನಿಯು; ಸಂದೆಗವ ಕಳೆದು ಕೊಳ್ಳಲ್ಕೆ ಶುಭುವು ತಾನೆ ಸುಂದರದ ಸುಜ್ಞಾನ ನಿಜ ದೃಷ್ಟಿಯಿಂ ತಿಳಿದು ಪೊರಟ ನಾಗಳೆ (ಈ) ಭುವನಕೆ '' (೧-೨೨) '' ಭೂಮಿಯಂ ನಿರುಕಿಸುತೆ ಶಿವನಿಳಿದನತಿ ಮುದದೊಳೆ'' (೧-೨೪) ''ಚರ-ರೂಪಿಯಹ ಶಿವಂ ಕರ್ನಾಟಕಕ್ಕೈದಿದಂ'' (೧-೨೭) '' ಹುಬ್ಬಳ್ಳಿ.... ಕಣ್ಗೆಸೆವುದು'' (೧-೨೯)''ಶಿವಂ ದಿಟ್ಟಿಸುತೆ ಸುತ್ತಲುಂ,.... ಕಂಡನೊಂದು ಗವಿಯಂ'' (೧-೩೫) 'ಶಿವಂ....ಚರಮೂರ್ತಿಗಳಿಗೆ ನಿಜ/ಸಾಕಾರ ನಾಗಿ ಮಂತ್ರದ ಮಹಿಮೆಯಂ ತೋರಲಂದು ಗವಿಯೋಳ್ ಪೊಕ್ಕನು'' (೧-೩೫); ಅಲ್ಲಿ ಕುಳಿತಿರ್ದನು+ಆಗ+ಒಲಿದು [ಶಿವನು ತನ್ನ] ತನುವಿನೋಳ್ ಶೋಭಿಸುವ ತನ್ನಿಷ್ಟ-ಲಿಂಗಮಂ ಸ್ವಕರ-ಪೀಠದೊಳಿರಿಸುತೆ|| (೧-೩೭) 'ನಿಟ್ಟಿಸುತೆ ತಲ್ಲಿಂಗಮಂ, ಸ್ವಾತ್ಮ-ಚಿತ್‌ಕಲೆಯ ದಿಟ್ಟಿಯಿಡುತಲ್ಲಿ ಕಂಡಂ ಜಗದ ಭಿನ್ನತೆಯ;/ ದಿಟ್ಟತನ ದೊಳ್+ಅವಿದ್ಯೆಯ; ಈ ಪ್ರಪಂಚದ ಬಲೆಯ; ಕಿತ್ತೊಗೆವರೀತಿಯ;'' (೧-೩೭).

೧) ಪ್ರಪಂಚದ ಬಲೆಯನ್ನೂ ೨) ಅದನ್ನು ಕಿತ್ತೊಗೆಯುವ ರೀತಿಯನ್ನು ೩) ಅವಿದ್ಯೆಯನ್ನು ಹಾಗೂ (೪) ಜಗದ ಭಿನ್ನತೆಯನ್ನೂ ಕಾಣಬೇಕಾದರೆ, ಶಿವನು ಕೈಲಾಸದಿಂದ ಭೂಮಿಗೆ ಅವತರಿಸಿ, ಈ ಭೂಲೋಕದಲ್ಲಿಯ ಭಾರತ ರಾಷ್ಟ್ರದ ಕರ್ನಾಟಕದಲ್ಲಿಯ ಹುಬ್ಬಳ್ಳಿ ಗ್ರಾಮದ ಗವಿಯಲ್ಲಿ ಏಕಾಂತವಾಗಿ ಕುಳಿತು, ತನ್ನ ತನುವಿನೋಳ್ ಶೋಭಿಸುವ ತನ್ನ ಇಷ್ಟಲಿಂಗಮಂ ಸ್ವಕರ-ಪೀಠದೋಳ್+ ಇರಿಸಿ '' ಆ ಲಿಂಗವನ್ನು ನಿರೀಕ್ಷಿಸುತ್ತ ಸ್ವಾತ್ಮ ಚಿತಕಲೆಯನ್ನು ಜಾಗ್ರತಗೊಳಿಸಿ-ಕೊಳ್ಳಬೇಕಾಯಿತು.

ಈ ಶಿವನೇ ಮುಂದೆ ನಿರ್ವಿಕಲ್ಪ ಸಮಾಧಿಸ್ಥ ''ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ನೆನ್ನಿಸಿಕೊಳ್ಳುತಾನೆ. ನಿಜ

ಕೇಳು+ಹೇಳು

- ಸರ್ವಾಂತರ್ಯಾಮಿಯಾದಂಥ ಶಿವ-ಗುರುಸಿದ್ಧನಿಗೆ ಅದೂ ಚತುರ್ದಶ ಲೋಕಾಧಿಪತಿಯಾದವನಿಗೆ ಭೂಲೋಕದ ಸುದ್ದಿ ಗೊತ್ತಿರಲಿಲ್ಲವೆ ? ಅವನಿಗೆ 'ತಂತೀ'—ತಂಬೂರೀ ನಾರದನೇ ಸುದ್ದಿಯನ್ನು ತಿಳಿಸಬೇಕಾಯಿತೇ ? ಅಂದರೆ, ನಾರದನೇ ಶಿವನನ್ನು ಭೂಲೋಕದ ಉದ್ಧಾರಕ್ಕಾಗಿ ಕಾರ್ಯ-ಪ್ರವೃತ್ತನನ್ನಾಗಿಸ ಬೇಕಾಯಿತೆ ? ಅಹದು ಯಾಕೆ ?. ಆ-ಆ ಬ್ಯಾಂಡುಗಳಲ್ಲಿಯೂ ಸಮರ್ಥ ರೀತಿ

ಯಿಂದ ಕೆಲಸ ಮಾಡಬಲ್ಲುದಾದ 'ರೇಡಿಯೋ'ವು ತನ್ನವರೊಬ್ಬರು ಅಪೇಕ್ಷಿಸಪಟ್ಟಾಗ ನಿಶ್ಚಿತ ವೇಳೆಯಲ್ಲಿ ಅಪೇಕ್ಷಿತವಾದ ಸ್ಟೇಶನ್ನಿನಲ್ಲಷ್ಟೇ ಕಾರ್ಯ-ಪ್ರವೃತ್ತವಾದರೆ ಮಾತ್ರ ಅದು ಒಳ್ಳೇ ರೇಡಿಯೋ ಹಾಗೆ ನಾರದನೆಂಬ ಶ್ರೋತೃವೊಬ್ಬನು (ಇತರರಿಗೆ ಮುಖಂಡನಾಗಿ ತಾನೊಬ್ಬನೇ) ಶಿವಗುರುಸಿದ್ಧನೆಂಬ ರೇಡಿಯೋವನ್ನು ಕಾರ್ಯ-ಪ್ರವೃತ್ತವನ್ನಾಗಿಸಿದ್ದುದು ಕ್ರಮಬದ್ಧವಾಗಿದೆ. 'ಕೇಳು ಹೇಳು' ಸೂತ್ರಕ್ಕೆ ಬೆಲೆ ಇದೆ. 'ನಾಽಪೃಷ್ಟಃ ಕಶ್ಚಿದ್ ಬ್ರೂಯಾತ್' ಅಂದರೆ. ಕೇಳದೇ ಹೇಳಬಾರದು.= ಯಾರೂ ಕೇಳಲಾರದೇ ತಾನು ಹೇಳಬಾರದು. ಈ ಬಗ್ಗೆ ಹೇಳಿಂದು ಕೇಳಿದಾಗ ಮಾತ್ರ ಹೇಳಬೇಕು. ಅರ್ಜಿ ಹಾಕಲಾರದೇ ಅದನ್ನು ಮಂಜೂರು ಮಾಡುವುದಾದರೂ ಹೇಗೆ ? 'ಕರೆಯದಲೆ ಬರುವವನ........ಹೊಡೆಯೆಂದ ಸರ್ವಜ್ಞ' ಎಂಬ ಮಾತನ್ನು ಸದಾ ನೆನಪಿಟ್ಟು ಪಾಲಿಸಬೇಕಲ್ಲವೆ ? ಒಳ್ಳೆಯವರು ಮಾಡುವ ಎಲ್ಲದಕ್ಕೂ ಒಂದು ಕ್ರಮ ಇರುತ್ತದೆ; ಪದ್ಧತಿ ಇರುತ್ತದೆ. ಅದರಲ್ಲೂ ಒಂದು ಸಿಸ್ತು ಇರುತ್ತದೆ. ಈ ಕವಿಯ ಈ ಪುರಾಣವೂ ಸಹ ಚಂದ್ರಾಲೋಕ, ಧ್ವನ್ಯಾಲೋಕ, ಸಾಹಿತ್ಯ-ದರ್ಪಣದಂತಹ ಲಾಕ್ಷಣಿಕ ಶಾಸ್ತ್ರಗ್ರಂಥಗಳ ಶೈಕ್ಷಣಿಕ ನಿಯಮಗಳ ಕ್ರಮವನ್ನು ಇಲ್ಲಿ ಪುರಸ್ಕರಿಸುತ್ತಿದೆ.

## ಪ್ರಾರ್ಥನೆಯ ಕೀರ್ತನೆ

''ನೀಗಿಸಿ ಭವವ'' (ಮಂ. ಸಂ. ೧) ಎಂದರೆ, ಈ ಭವವ ನೀಗಿಸು, = ಈ ಭವವನ್ನು ನೀಗಿಸು, ಎಂದು ಎಂಬುದಾಗಿ ಗುರುಸಿದ್ಧನಾಮಕ ಶಿವನನ್ನು ಸಂಭೋದಿಸಿ, ಕೇಳಿಕೊಳ್ಳುವದೇ ಈ ಪುರಾಣದ ಜೀವ-ಜಿವಾಳವಾದ ಪ್ರಾರ್ಥನೆಯ ಕೀರ್ತನೆಯಾಗಿದೆ. ಅಂದರೆ, ಈ ಭವವ ನೀಗೀಸು, ಎಂಬ ವಾಕ್ಯದ ವಾಕ್ಯವಾಗಿದೆ.

ಭವವನ್ನು ನೀಗಿಸೇವದೆಂದರೆ, ಮುಕ್ತನನ್ನಾಗಿ ಮಾಡುವದು. ಮುಕ್ತನನ್ನಾಗಿ ಮಾಡಬೇಕಾದರೆ, ಮುಕ್ತಿಯನ್ನು ನೀಡಬೆಕು. ಮುಕ್ತಿಯನ್ನು ನೀಡಬೇಕಾದರೂ ಆ ಮುಮುಕ್ಷುವಿನಲ್ಲಿ ಯೋಗ್ಯತೆ ಇರಬೇಕು. ಬೆಳೆಯಬೇಕಾದರೆ, ಸಾಧನೆ ಬೇಕು. ಸಾಧನೆ ಸಿದ್ದಿಸಬೇಕಾದರೆ, ಬಕ್ತಿ ಬೇಕು. ಈ ಮೇಲಿನ ಹೇತು-ಹೆತುಮದ್‌ಭಾವದ ವಾಕ್ಯಗಳಿಗೆಲ್ಲಕ್ಕೂ ಭಕ್ತಿಯೇ ಮೂಲ ಕಾರಣ-ಕರ್ತೃ. ಭಕ್ತಿಯಿಂದ ಎಲ್ಲವೂ ಪ್ರಾಪ್ತವಾಗುತ್ತದೆ. ಭಕ್ತೇರಸಾಧ್ಯಂ ''ಶ್ರವಣಂ ಕೀರ್ತನಂ ಶಂಭೋ ಅರ್ಚನಂ ಪಾದಸೇವನಂ |'' ಎಂದು ಮುಂತಾಗಿ ಒಂಭತ್ತು ವಿಧವಾಗಿದೆಯೆಂದು ಅಷ್ಟಾದಶ ಪುರಾಣಗಳಲ್ಲಿ ಕೀರ್ತನವು ಒಂದು ರೀತಿಯ ಭಕ್ತಿ. ಈ ಕೀರ್ತನ-ಭಕ್ತಿಯನ್ನು ಮಾಡಬೇಕಾದರೂ ದೇವರ ದಿವ್ಯತ್ವವನ್ನು ವರ್ಣಿಸಬೇಕಾಗುತ್ತದೆ. ಈ ವರ್ಣನೆಯ-ಸಮಂಜಸವಾದ ಹೋಲಿಕೆ, ವಿಶೇಷಣ, ಭಾವನೆ ಇರಬೇಕು.

ಇದೆಲ್ಲವನ್ನು ತಿಳಿದ ಕವಿ ತನ್ನ ಈ ಕಾವ್ಯದಲ್ಲಿ ಭಕ್ತಿ-ಭಾವನೆಯ ಮಹತ್ವವು

ಪುರಾಣದ ವಾಚಕರಿಗೂ ಶ್ರೋತೃಗಳಿಗೂ ಗೊತ್ತಾಗಿ ಅವರಿಗೂ ಪ್ರಾರ್ಥನೆ ಮಾಡಿ ಫಲ-ಲಾಭ ದೊರೆಯಲೆಂದು ಪ್ರತಿಯೊಂದು ಸಂಧಿಯ ಮೊದಲನೆಯ ಪದ್ಯವನು ಭಕ್ತಿಯ ಪ್ರಾರ್ಥನೆಯ ಕೀರ್ತನೆಗಾಗಿಯೇ ಮೀಸಲಿರಿಸಿದ್ದಾನೆ. ; "ಗುರುಸಿದ ಪೊರೆ, ವಿಶ್ವವ'' ವಿಶ್ವಗುರುವರ್ಯ, ಸಲಹಯ್ಯ, ನೀನೆನ್ನನಭವ; " (೨–೧) ; "ಸಾವಧಾನತೆಯಿಲ್ಲವೆನಗಿದಂ ಕೊಡು, ಶಿವನೆ;'' (೩–೧); '' ಗುರುಸಿದ್ಧ, ಪೂವಳ್ಳಿ-ವನಸಿದ್ಧ, ಗಹ್ವರ-ನಿವಾಸ , ಸಲಹೈ; '' (೪-೧); '' ಸತತಮುಳಿಯೆನ್ನ ಮನ-ಮನೆಯಲ್ಲಿ ಗುರುಸಿದ್ಧನೆ'' (೫–೧); '' ನಿನ್ನಂತೆ ಮಾಡಿಕೊಳ್ಳೆನ್ನನಭವ'' (೬-೧); '' ಶಿವನೆ.... ಎನ್ನನೇತಕೆ ಸಲಹಲೊಲ್ಲೆ, ಪೇಳ್ ? '' (೭–೧) ;' ಪೊರೆಯ್ಯೆ, ಹರನೆ;'' (೮·೧) ; ''ಭಕ್ತಿಯೊಳಗೆನ್ನ ಮನಸಾವಂ ನೆಲಸಲಿ. ಪ್ರಭೋ; '' (೧೧·೧) ; ''ಶಿದನೆ,.... ಭಕ್ತಿಯುಂ ಕೊಟ್ಟೆತ್ತಿ-ಕೊಳಾವಗಂ" (೧೨–೧); "ಶಿವ.... ನೀನೆ.... ತವಪಾದ-ಯುಪದೊಳ್.... ಬಂಧಿಸಿಕೊಳ್ಳೈ (೧೫–೧); "ಶಿವನೆ,.... ಹೊರಹಾಕದಂತೆ-ಸಲಹೈ; " (೧೬–೧); "ಗುರುವಾಗಿ ಬಾ ಶಂಕರ; " (೧೭-೧); –ಈ ಮೇಲಿನ ಕೆಲವು ಪ್ರಾರ್ಥನಾ-ಪದ್ಯಗಳು "ಮಂಗಲ-ಮಧ್ಯಾನಿ ಕಾವ್ಯಾನಿ" ಎಂಬುದಕೆ ಮಿಂಗವಿಸಿದರೆ, "ಮಂಗಲಾ ದೀನಿ ಕಾವ್ಯಾನಿ" ಎನ್ನುವದಕ್ಕೆ ಈ ಕವಿಯ ಕೊಡುಗೆಯೇನೂ ಕಡಿಮೆ ಇಟ್ಟಿಲ್ಲ. ಈ ಪುರಾಣದಲ್ಲಿ, ಒಂದನೆಯಸಂಧಿಗಿಂತಲೂ ಮುಂಚಿನ ಸಂಧಿಯನ್ನು "ಮಂಗಲಾಽಽಚರಣ-ಸಂಧಿ', ಎಂಬ ನಾಮದಿಂದ ಕರೆದು ಅದರಲ್ಲಿ ಈ ಕವಿಯು "ಶ್ರೀಗುರೋತ್ತಮ.... ನೀಗೀಸೀ ಭವವಸಮ, ವೇದ್ಯ, ವಿದ್ಯಾ-ಗರಿಮ, ಗುರುಸಿದ್ಧ-ದಾಮ, ಸಮೆಪೇಂ;''(ಮ.ಸಂ.೧) ಎಂದು ಪ್ರಾರಂಭಿಸಿ, ಶಿವ–ಶಕ್ತಿ–ಲಿಂಗ–ಜಂಗಮ–ಶರಣ- ಜಗದ್ಗುರು–ಪರಮ-ಗುರು –ಬಸವೇಶ್ವರ–ಚನ್ನಬಸನೇಶ್ವರ-ಪ್ರಭುಗಳ ಸ್ತೋತ್ರವನ್ನೂ ಪ್ರತ್ಯೇಕ-ಪ್ರತ್ಯೇಕ ಪದ್ಯದಲ್ಲಿ ಮಾಡಿದ್ದಾನೆ.

"ಮಂಗಲಾಂತ್ಯಾನಿ ಕಾವ್ಯಾನಿ'' ಎಂಬುದಕ್ಕೂ ಭಕ್ತಿ ಸ್ತೋತ್ರ–ಭಾಂಡಾರ ತುಂಭಾ ತುಂಬಿದೆ.

ಇನ್ನೊಂದು ವಿಶೇಷ ಮಾತು : ಲೌಕಿಕ–ವ್ಯವಹಾರದಲ್ಲಿ ಧಾರ್ಮಿಕ ಭಾವನೆ-ಯ ಕೆಲವರು ಕಾಳನ್ನು ಸೇರಿನಿಂದ ಅಳೆಯುವಾಗ ಲಾಭ, ಎರಡು, ಮೂರು, ನಾಲ್ಕು ಐದು, ಆರು–ಎಂದು ಎಣಿಸುತ್ತಾರೆ. ಅಂದರೆ 'ಒಂದು' ಎಂದು ಬಳಸಲಾರದೆ, "ಲಾಭ" ಎಂದು ಬಳಸುತ್ತಾರೆ. ಇದನ್ನೇ, ಇದೇ ಪದ್ಧತಿಯನ್ನೇ ಗಮನದಲ್ಲಿಟ್ಟು ಕೊಂಡ ಕೆಲವು ಪುರಾಣಕರ್ತೃಗಳು (ಪುರಾಣ ಬರೆದವರು) ಒಂದನೇ ಸಂಧಿಗೇ 'ಪೀಠಿಕಾ–ಸಂಧಿ' ಅಂದು, ಪ್ರತ್ಯೇಕವಾಗಿ ಒಂದನೇ ಸಂಧಿಯನ್ನು ಬರೆಯದೆ, ಮುಂದುವರೆದು ಎರಡನೇ ಸಂಧಿ, ಮೂರನೇ ಸಂಧಿಯೆಂದು ಸಾಗುತ್ತಾರೆ. ಆದರೆ,

ಈ ಪುರಾಣದ ಕವಿಯ ಮನಸ್ಸು ಧಾರಾಳವಾಗಿದ್ದುದರಿಂದಲೂ, ಬೇಕಾದಷ್ಟು ಹೆಚ್ಚಿಗೆ ಸಂಧಿಯನ್ನೂ-ಅದರಲ್ಲಿಯ ಪದ್ಯಗಳನ್ನು ಎಷ್ಟು ಬೇಕಾದರೂ ಬರೆಯಬಲ್ಲ ಹೆಚ್ಚಿನ ಸಾಮರ್ಥ್ಯವು ಇರುವುದರಿಂದಲೋ ಏನೋ ಈ ಕವಿಯ ಇದರಲ್ಲಿಯ ಇಪ್ಪತ್ತೊಂದು ಸಂಧಿಗಳ ಪೂರ್ವದ ಸಂಧಿಯನ್ನು ಅಂದರೆ ಮೊಟ್ಟಮೊದಲಿನ ಸಂಧಿ-ಯನ್ನು ಅಂದರೆ ಒಂದನೇ ಸಂಧಿಗಿಂತಲೂ ಪೂರ್ವದಲ್ಲಿ "ಮಂಗಲಾಚರಣ-ಸಂಧಿ" ಮಂಗಲಕ್ಕಾಗಿ ಮೀಸಲಿರಿಸಿ, ಅದರಲ್ಲಿಯೇ ಕೊನೆಗೆ ಅನಿವಾರ್ಯದ ಹಾಗೂ ಅತ್ಯ-ವಶ್ಯಕವಾಗಿ ಹೇಳಲೇಬೇಕಾದ ವಿಷಯಗಳನ್ನೂ ಸಹ ಹೇಳಿದ್ದಾನೆ.

ಇನ್ನು, ಇತರ ಕವಿಗಳು 'ಒಂದನೆಯ ಸಂಧಿ' ಎಂದು ಅನ್ನಬಾರದೆಂಬುವ ಸಲುವಾಗಿ 'ಪೀಠಿಕಾ-ಸಂಧಿ' ಎಂದು ಅನ್ನುತ್ತಿದ್ದರು. ಈ ಕವಿಯು ಒಂದನೆಯೆಂ ದದ್ದು ಸೂಕ್ತವೆ ? ಅಹುದು. ಏಕೆಂದರೆ ಮೊಟ್ಟ-ಮೊದಲನೆಯದಕ್ಕೆ ಅನ್ನಬಾರದು. ನಿಜ. ಆದರೆ ಈ 'ಮಂಗಲಾಚರಣ ಸಂಧಿ' ಮೊಟ್ಟ-ಮೊದಲನೆಯದಲ್ಲ; ಮೊದಲ-ನೆಯದ್ದು- ಅಂದರೆ, ಇದು ಪ್ರ-ಪ್ರಥಮ ಮಾತ್ರ.

ಕಾರಣ ಎರಡನೆಯ ಸಂಧಿಗಿಂತ ಮುಂಚೆ "ಒಂದನೆಯ ಸಂಧಿ" ಅಂದದ್ದು, "ಮಂಗಲ್ಯಾಚರಣ-ಸಂಧಿ"ಯ ನಂತರ,ಒಂದನೆಯ ಸಂಧಿ ಎಂದುದರ ನಿಮಿತ್ತ-ವಾಗಿ "ಒಂದನೆಯ ಸಂಧಿ"ಯೆಂದು ಬರೆದದ್ದೂ ಸೂಕ್ತವಾಗಿದೆ; ಸಮಂಜಸವಾಗಿದೆ.

## ಕವಿ ಸೃಷ್ಟಿ

ಏಳೇಳು ಸಂಧಿಗೊಂದರಂತೆ ಮೂರು ಕಾಂಡಗಳಿಂದಲೂ ಇಪ್ಪತ್ತೆರಡು ಸಂಧಿಗಳಿ-ಂದಲೂ ಬೃಹತ್ತಾಕಾರದ ಮಹತ್ತತೆಯಿಂದ ಮಾತು ಮಹಾಕಾವ್ಯವಾಗಿದೆಯೆಂದೆ-ನ್ನಲಾಸದು; ಮಹಾಕಾವ್ಯದ ಶಾಸ್ತ್ರೋಕ್ತ ಲಕ್ಷಣಗಳೆಲ್ಲವನ್ನು ಇದು ಒಳಗೊಂಡಿರು-ವದರಿಂದಲೂ ಮಹಾಕಾವ್ಯವಾಗಿದೆ. "ಮಹಾಕಾವ್ಯಂ; ತತ್ರೈಕೋ ನಾಯಕಃ" ಕರ್ತೃ ಶ್ರೀ ಜಗದ್ಗುರು ಗುರು ಸಿದ್ದೇಶ್ವರಃ ; ಸ ಧೀರೋದಾತ್ತಗುಣಾನ್ವಿತಃ ; 'ಶೃಂಗಾರ-ವೀರ-ಶಾನ್ತಾನಾಮೇಕೋಽಙ್ಗೀ ರಸಃ': ಶಾನ್ತಃ; ಕಲ್ಯಾಣ ಕ್ರಾಂತಿ ಕಾಲೀನ ಶರಣಾ ಇತಿಹಾಸೋದ್‌ಭವಂ ವೃತ್ತಮ್; "ಈಭವವ ನೀಗಿಸು" ಇತಿ ಮುಖ್ಯಂ ಏಕಂ ಚ ಫಲಂ ಭವೇತ್; "ಗುರುಸಿದ್ಧನೇಮಿಸೆಂ" ಇತಿ, ಆಟಾ ನಮ-ಸ್ಕ್ರಿಯಾ; ಕ್ವಚಿನ್ನಿನಾ ಕಲಾದೀನಾಂ ಸತಾಂ ಚ ಗುಣ-ಕೀರ್ತನಮ್" ; ಪಂಚ-ಮಾತ್ರಾಗಳು ವಾರ್ಧಕ-ಷಟ್‌ಪದಿ ನಾಮಕೈಃ ಏಕಾದಶಾದಿಕೈ ಕಾದಶತ ಸಂಖ್ಯಾಕೈಃ ಏಕವೃತ್ತ ಮಯಂಃ ಪದ್ಯೈಃ ಸಮಿತಂ; ನಾಟಸ್ವಲ್ಪಾ ನಾತಿದೀರ್ಘಾಃ ಸರ್ಗಾ ಅಷ್ಟಾದಿಕಾ ಇಹ' ಸಂಧಿಪದವಾಚ್ಯಾ ದ್ವಾಪಇತಿ ಸಂಖ್ಯಾಕಾಃ ಸಂತಿ; "ಸನ್ಧ್ಯಾ-ಸೂರ್ಯೆನ್ದು-ರಜದೀ.... ಶೈಡರ್ತು-ವನ-ಸಾಗರಾದಯೋ ವರ್ಣನೀಯಾ ಯತಾ-ಯೋಗಂ ಸಾಙೋಪಾಙಾ ಅಮೀ ಇಹ' ಯತ್ರಾ ಹಿ ಸಾಗರ-ವರ್ಣನ;

"ಸಾಗರಂ ಜಲಜಂನ್ತು-ಭೀಕರಂ; ಸಕಲಜಲ- | ದಾಗರಂ; ಶುಕ್ತಿ-ಶಂಖಾSSಕರಂ; ವಿಷದಮೃತ- । ದೋಗರಂ; ಶ್ರೀನ್ದು-ಜನಿ-ಮನ್ದಿರಂ;

ವಿಧಿ-ಸೃಷ್ಟಿ-ಸುನ್ದರಂ; ಗಿರಿ-ಕನ್ದರಂ; || ಇತ್ಯಾದಿ ಇತ್ಯಾದಿ.

ಪ್ರತಿಯೊಂದು ಪದ್ಯದಲ್ಲಿ ಪ್ರತಿಯೊಂದು ಚರಣಕ್ಕೆ ಆದಿಪ್ರಾಸ ಇದ್ದದ್ದು, ಷಟ್ಪದಿಯ ಅನಿವಾರ್ಯ ಲಕ್ಷಣದ ಪ್ರಕಾರ ಇದ್ದೇ ಇದೆ. ಅಲ್ಲಲ್ಲಿ ಸಮಯೋಜಿತವಾಗಿ (ಚಿತ್ರ ಕಾವ್ಯದಂತಾಗಿಸದೆ) ಹಿತಮಿತವಾಗಿ ಶಬ್ದಾಲಂಕಾರಗಳನ್ನೂ ಅರ್ಥಾಲಂಕಾರಗಳನ್ನೂ ಬಳಸಲಾಗಿದೆ."ಪರಶಿವನೆ, ಬಾ, ರುದ್ರ, ಬಾ; ಭದ್ರ, ಬಾ; ನಳೆದ ಗಿರಿವರನೆ, ಬಾ; ಹರನೆ ಬಾ; ಭಾವ ಶಂಕರ".

ಈ 'ಕವಿ-ಸೃಷ್ಟಿ'ಯಲ್ಲಿ ಪ್ರಯೋಗ ಮಾಡಿದ ಸಂಸ್ಕೃತ ವಾಕ್ಯಗಳೆಲ್ಲದರ ಒಟ್ಟಿನ ಸಾರಾಂಶ :—

"ಕರ್ತೃಶ್ರೀ ಜಗದ್ಗುರು ಗುರುಸಿದ್ಧೇಶ್ವರ-ಪುರಾಣ"ದಲ್ಲಿ ಸಂಧಿಗಳ ಸಂಖ್ಯೆ ಇಪ್ಪತ್ತೆರಡು. ಇದರ ಕಥಾ-ನಾಯಕನ ಸಂಪೂರ್ಣ ಹೆಸರು : "ಹುಬ್ಬಳ್ಳಿ ಮೂರುಸಾವಿರಮಠದ ಕರ್ತೃಶ್ರೀ ಜಗದ್ಗುರು ಗುರುಸಿದ್ಧೇಶ್ವರ". ಇದರಲ್ಲಿ ಭಕ್ತಿಯೇ ಪ್ರಾಧಾನ್ಯವಾಗಿರೋಣದರಿಂದ ಶಾಂತರಸವೇ ಪ್ರಧಾನ ರಸ. ಇನ್ನುಳಿದ ಶೃಂಗಾರಾದಿರಸಗಳು ಇಲ್ಲಿ ಗೌಣವಾಗಿವೆ. ಕಲ್ಯಾಣ ಕ್ರಾಂತಿಯ ನಂತರದ ಇತಿಹಾಸವು ಶಿವಯೋಗಿಯೊಬ್ಬರ ಬಗ್ಗೆ ಇದರಲ್ಲಿದೆ. 'ನೀಗಿಸೀ ಭವವ' ಎಂಬ ವಾಕ್ಯದಿಂದಾರಂಭಿಸಿರೋಣದರಿಂದ ಇದರಲ್ಲಿ ಮುಕ್ತಿಯುನ್ನು ಪಡೆಯುವುದೇ ಮುಖ್ಯ ಫಲವಾಗಿದೆ. ನಮಸ್ಕಾರಾತ್ಮಕವಾದ "ಗುರುಸಿದ್ಧ-ನಾಮ ನಮಿಪೇಂ" ಎಂಬ ಮಂಗಲಾಚರಣದಿಂದ ಈ ಮಹಾಕಾವ್ಯ ಪ್ರಾರಂಭವಾಗುತ್ತದೆ. ಒಂದುಸಾವಿರದ ಒಂದುನೂರಾ ಹನ್ನೊಂದೂ ಪದ್ಯಗಳೂ ಇಲ್ಲಿ ಕನ್ನಡದ ಛಂದಸ್ಸಾದ ವಾರ್ಧಕ ಷಟ್ಪದಿಯಲ್ಲಿವೆ. ಪ್ರತಿಯೊಂದು ಸಂಧಿಯ ಆರಂಭದಲ್ಲಿ ಆ-ಆ ಸಂಧಿಯ ಕಥೆಯ ಸೂಚನಾ-ಪದ್ಯಗಳನ್ನು (ಪದ್ಯಾರ್ಥವಾಗಿ) ಸೂಚಿಸಲಾಗಿದೆ. ಕೈಲಾಸ, ಭೂಲೋಕ, ಕರ್ನಾಟಕ, ಹುಬ್ಬಳ್ಳಿ, ಸಮುದ್ರ; ಪ್ರಮಥಗಣರ ವರ್ಣನೆ, ಋತುಗಳ ವರ್ಣನೆ ಮುಂತಾದವುಗಳ ಜೊತೆಗೆ ಉಪಕಥೆಗಳನ್ನೂ ಬಹಳಷ್ಟು ಇದರಲ್ಲಿ ಸಾರವತ್ತಾಗಿ ವರ್ಣಿಸಲಾಗಿದೆ. ತಾತ್ತ್ವಿಕ ಜ್ಞಾನವನ್ನು ಮಾಡಿಸುವ ಸಲುವಾಗಿ ಧಾರ್ಮಿಕದ ಸಾಂಗೋಪಾಂಗ ವಿಷಯಗಳನ್ನೂ ವರ್ಣಿಸಿ ಮುಖ್ಯ ಗುರಿಯಾದ ಮುಕ್ತಿಯನ್ನು ಪಡೆಯಲು ಯೋಗ್ಯರನ್ನಾಗಿ ಮಾಡುವ ಸಾಹಸವೇ ಈ ಕವಿಯ ಈ ಕಾವ್ಯವು ಮಹಾಕಾವ್ಯದ ಎಲ್ಲ ಲಕ್ಷಣಗಳನ್ನೂ ಒಳಗೊಂಡಿದೆ.

**ಕವಿ-ದೃಷ್ಟಿ:**

ಹನ್ನೊಂದನೆಯ ಸಂಧಿಯ ಹನ್ನೆರಡನೆಯ ಪದ್ಯವನ್ನು ಉದಾಹರಣೆಗೆ ಗಮನಿಸೋಣ: ಶಂಕರನನ್ನು ಆಹ್ವಾನಿಸುವ ಪದ್ಯವಿದು. ಶಂ ಕರೋತೀತಿ = ಶಂಕರಃ ನಿತ್ಯ ಸಮಾಸ ಹಾಗೂ ಅಲುಕ್ ಸಮಾಸದ ಪರಿಧಿಯಲ್ಲಿ ತಿಳಿಯಲ್ಪಡುವ ಈ ಶಂಕರ ಶಬ್ದವು ಗುರುಸಿದ್ಧ ಶಂಕರನ ಅಧ್ಯಾತ್ಮಕತೆಯ ನಿತ್ಯತ್ವವನ್ನೂ ಭೌತಿಕತೆಯ ಲೋಪವಾಗದಿರುವಿಕೆಯನ್ನು ಸೂಚಿಸುತ್ತದೆ. 'ಶಂ' ನಾಮಪದವಾಗಿ ಜ್ಞಾನವನ್ನೂ, "ಕರೋತಿ' ಇತಿ 'ಕರಃ ಎಂಬುದು ಕ್ರಿಯಾಪದವಾಗಿ ಕ್ರಿಯೆಯನ್ನೂ ಪ್ರತಿನಿಧಿಸುತ್ತಿವೆ. ಇದರಿಂದ ಜ್ಞಾನ-ಕರ್ಮಗಳೆರಡೂ ಸಮ-ಸಮಾನವಾಗಿವೆಯೆಂಬುದು, ಧ್ವನಿ. ಅಂದರೆ ಆಚಾರ-ವಿಚಾರಗಳು ಸರಿ-ಸಮನಾಗಿ ನಡೆಯಬೇಕು. ಅಂತೆಯೇ ಈ ಪದ್ಯದಲ್ಲಿ ಶಂಕರನನ್ನು ಹದಿನಾರು ಸಂಬೋಧನೆ ಪದಗಳಿಂದ ಅವನನ್ನೆ ಹದಿನಾರು ಕ್ರಿಯಾಪದಗಳಿಂದ ಆಹ್ವಾನಸಲಾಗಿದೆ. ಶಂಕರನ ಹದಿನಾರು ಗುಣದ ಹದಿನಾರು ಹೆಸರನ್ನು ಹೇಳಿ ಅವನನ್ನೇ ಹದಿನಾರು ಸಲವೂ ಅದೊಂದೇ ಆಹ್ವಾನ–ಸೂಚಕವಾದ 'ಬಾ' ಧಾತುವಿನ ಮಾಧ್ಯಮದಿಂದ ಕರೆಯಲಾಗಿದೆ. ಈ ಪದ್ಯದಲ್ಲಿ "ಬಾ" ಧಾತು ಪದವನ್ನು ಪೂರ್ವಾರ್ಧದಲ್ಲಿ ಒಂಭತ್ತು ಸಲವೂ ಹಾಗೂ ಉತ್ತರಾರ್ಧದಲ್ಲಿ ಇದೇ 'ಬಾ' ಧಾತುವನ್ನು ಏಳು ಸಲವೂ ಒಂದೇ ಪದ್ಯದಲ್ಲಿ ಒಟ್ಟಿಗೆ ಹದಿನಾರು ಸಲ ಬಳಸಿರುವುದರ ಔಚಿತ್ಯವೆಂದರೆ ಸರಳ ಸಹಜ ನಿರುಪಾಧಿಕದಂತಿರುವ ಶಂಕರನು ಹದಿನಾರು ಕಲೆಯ ಚಂದ್ರನ ಅಮಾ ಕಲೆಯನ್ನು ಧರಿಸಿ ಚಂದ್ರಚೂಡ್ನ ಚಂದ್ರಶೇಖರನಾಗಿರೋಣದರಿಂದ ಆ ಜ್ಯೋತಿ ಸ್ವರೂಪ ಚಂದ್ರಶೇಖರ ಶಂಕರನನ್ನು ಕರೆದು, ಬಾಳಿಗೆ ಬೆಳಕಾಗಿಸಲೆಂಬುದಾಗಿದೆ.

"ಅರ್ಥೋಽಭಿಧೇಯೋ ರೈ ವಸ್ತು" ಎಂಬ ಅಮರಕೋಶದ ಪ್ರಕಾರ "ರೈ" ಎಂಬದು ವಸ್ತು-ಸ್ವರೂಪದ ಭೂಮಿ-ವಾಚಕವಾಗಿದೆ, ಈ ಹನ್ನೆರಡನೇ ಪದ್ಯದ ಉತ್ತರಾರ್ಧದ ಏಳು ಸಲದ 'ಬಾ' ಧಾತುವಿಗೆ 'ರೈ' ಸೇರಿ "ಬಾರೈ" "ಬಾರೈ" ಎಂದು ಏಳು ಸಲ ಅಂದಿರುವುದು ಸಪ್ತ.ಭೂಮಿಕೆಯ ಸಂಕೇತವಾಗಿದೆ- ಇನ್ನು ಪೂರ್ವಾರ್ಧದಲ್ಲಿ :ರೈ'- ರಹಿತ 'ಬಾ" ಧಾತುವಿನ 'ಬಾ' ಎಂದಿಷ್ಟೇ ಇರುವ ಒಂಬತ್ತು ಸಲದ ಪ್ರಯೋಗವು ಆಚಾರಲಿಂಗಾದಿ ಭಾವಲಿಂಗಾಂತದ ನವಲಿಂಗದ ಸಂಕೇತಸ್ವರೂಪವಾಗಿದೆ. ಪೂರ್ವಾರ್ಧದ ಉಪಾಂತ್ಯದಲ್ಲಿರುವ "ಬಂದು" ಎಂಬುದು "ಬಾ" ಧಾತುವಿನದೇ ಆದರೂ ಹದಿನಾರರ ಹೊರತಾಗಿದ್ದು, ಸ್ಥಿತಿ ಸ್ಥಾಪಕತ್ವವನ್ನು ಪ್ರತಿಬಿಂಬಿಸುತ್ತಿದೆ. ಈ ಗುರುಸಿದ್ಧ-ಶಂಕರನ ಸಚ್ಚಿದಾನಂದ ನಿತ್ಯ ಪರಿಪೂರ್ಣತೆಯನ್ನು ಕ್ರಮ ವ್ಯತ್ಯಾಸದಿಂದ ಇದೇ ಪದ್ಯದಲ್ಲಿಯ ‹‹ತಿಳಿದು ಬಂದಂಬಲಿಯ ಸವಿಸು ನೀಂ" ಎಂಬಲ್ಲಿ ಗ್ರಹಿಸಬಹುದಾಗಿದೆ; ತಿಳಿದು–ಚಿತ್; ಬಂದು-ಸತ್; ಅಂಬಲಿಯ (ದ್ವಿತಿಯಾ ವಿಭಕ್ತಿ) ಪರಿಪೂರ್ಣತೆ. ಸವಿಸು-ಆನಂದ: ನೀಂ-ಸತ್.

'ಬಾ' ಮತ್ತು :,ಬಾರೈ" ಎಂಬುವ ಹದಿನಾರು ಸಲದ ಅಕರ್ಮಕ ಕ್ರಿಯಾ ಪದಗಳ ಹೊರತಾಗಿ 'ಅಂಬಲಿಯ ಸವಿಸು" ಎಂಬ ಪ್ರಾರ್ಥನೆಯನ್ನು 'ಸವಿಸು" ಎಂಬ ಸಕರ್ಮಕ ಕ್ರಿಯಾಪದವನ್ನು ಬಳಸಲಾಗಿದೆ. ಗುರುಸಿದ್ಧ-ಶಂಕರನೆ ನೀಂ ತಿಳಿದು ಬಂದು ಭಕ್ತಿಯಿಂದ ಸಮರ್ಪಿಸುವ ನನ್ನ 'ಅಂಬಲಿಯ ಸವಿಸು" ಎಂಬ ಮುಖ್ಯ ವಾಕ್ಯಾಂಶಕ್ಕೇನೇ (ಪ್ರಿನ್ಸಿಪಲ್ ಕ್ಲಾಜಿಗೇನೇ) ಸಮಾನ ಅಸ್ತಿತ್ವದ ಸಹಕಾರಿ ವಾಕ್ಯಗಳ ಹದಿನಾರು ಸಲ ಬಾ ಬಾರೈ ಎಂದು ಆಮಂತ್ರಿಸಲಾಗಿದೆ. "ಅಂಬಲಿಯ ಸವಿಸು" ಅಂದರೆ, ಭಕ್ತಿಯನ್ನು ಸ್ವೀಕರಿಸೆಂದು ಕೇಳಿಕೊಳ್ಳುವುದೇ ಈ ಪದ್ಯದ ಪದಾರ್ಥವಾಗಿದೆ.

ಈ ಕಾವ್ಯದ ಪುಟ್ಟರಾಜ ಕವಿಯು ಸುಸ್ಪಷ್ಟವಾದ ಈ ಪದ್ಯವನ್ನು ಪ್ರಸಂಗಾನುಸಾರವಾಗಿ ಪ್ರಸಿದ್ಧ ಪ್ರಮಥ ಚನ್ನಯ್ಯನ ಮುಖದಿಂದ ಪರಶಿವನನ್ನು 'ಬಾ' "ಬಾರೈ" ತಿಳಿದು ಬಂದಂಬಲಿಯ ಸವಿಸು ನೀಂ " ಎಂದು ಕರೆಯುವಂತೆ ವ್ಯವಸ್ಥೆಗೊಳಿಸಿದರೂ ಈ ಮಾತು ಕವಿ-ನಿಬದ್ಧವಾದಂತಾಗಿ ಸರ್ವ ಭಕ್ತಾದಿಗಳಿಗೂ ಅನ್ವಯಿಸುತ್ತಿದೆ,

ಹದಿನಾಲ್ಕು ಲೋಕಕ್ಕೂ ಪರ (ಶ್ರೇಷ್ಠನಾದವನೆ) 'ಬಾ' "ಬಾರೈ" ಎಂದು ಶಂಕರನನ್ನು ಕರೆಯುವುದೇ ಕವಿಯ ಕವಿ-ಹೃದಯವಾಗಿದೆ. ಈ ಪದ್ಯದಲ್ಲಿಯ ಹದಿನಾರು ಸಂಬೋಧನಾ ನಾಮಪದಗಳಲ್ಲಿ 'ಪರತರ' ಹಾಗೂ "ಪರಮ" ಬ್ದಗಳ ಬಳಕೆಯಾಗಿದ್ದರೂ, "ಏಕಮೇವಾದ್ವಿತೀಯಂ", "ನೇಹ ನಾನಾಽಸ್ತಿ" ಕಿಂಚನ" ಎಂಬುದನ್ನು ಸೂಚಿಸುವ "ಪರ" ಎಂಬ ಪದವೇ ಕವಿ-ಹೃದಯಕ್ಕೆ ಒಪ್ಪಿತವಾದ ಪದವಾಗಿದೆ. ಅಂತೆಯೇ ಈ ಪವದ ಮೊದಲ ಪದದ ಮೊದಲಿನ ಎರಡಕ್ಷರವೂ "ಪರ" ಎಂಬುದಾಗಿವೆ ಮಾತ್ರವಲ್ಲ; ಇದೇ ಪದ್ಯದ ಸರ್ವ ಪ್ರಥಮದ 'ಪ' ಅಕ್ಷರ ಹಾಗೂ ಸರ್ವಕ್ಕೂ ಕೊನೆಯ ಶಂಕರ ಶಬ್ದದ ಕೊಟ್ಟ ಕೊನೆಯ "ರ" ಅಕ್ಷರ ಎರಡೂ ಸೇರಿ "ಪರ" ಎಂದಾಗುತ್ತದೆ. ಹೀಗೆ "ಆದಿರಂತೇನ ಸಹೇತಾ" ಎಂಬ ಪಾಣಿನೀ ವ್ಯಾಕರಣದ ಪ್ರತ್ಯಾಹಾರ ಸಂಜ್ಞಾಸೂತ್ರದಿಂದ "ಪರ" ಎಂಬ ಪ್ರತ್ಯಾಹಾರದಿಂದ ಹಾಗೂ ಪ್ರಥಮ-ದ್ವಿತೀಯ ಎಂಬ ಕ್ರಮದಿಂದಲೂ "ಪರ" ಎಂಬುದನ್ನೇ ಬಳಸಿದ ಕವಿಯು ರಹಸ್ಯಾರ್ಥವನ್ನು ರಹಸ್ಯವಾಗಿಯೇ ಕಾಯ್ದಿರಿಸಿಡ್ದಾನೆ. ಆಹ್ವಾನದ ಈ ಷಟ್‌ಪದಿಯ ಷಟ್‌ಪಾದಗಳಲ್ಲಿ ಪದ್ಧತಿ ಪ್ರಕಾರ ಷಟ್‌ಸ್ಥಲಗಳನ್ನು ಪ್ರತಿಪಾದಿಸಿದ್ದುದನ್ನು ಪ್ರಸಿದ್ಧಪಡಿಸಬಹುದಾಗಿದೆ. ಈ ಪದ್ಯದ ಪ್ರತಿಯೊಂದು ಪಾದದ ಕೊನೆಯ ಪೂರ್ಣ ಪದಗಳು ಒಂದೊಂದು ಸ್ಥಲವನ್ನು ಪ್ರತಿಪಾದಿಸುತ್ತಿವೆ: 'ಭದ್ರ, ಬಾ;"= ಭಕ್ತಸ್ಥಲ; ಮಹೇಶಸ್ಥಲ = 'ವರನೆ, ಬಾ', 'ಅಂಬಲಿಯ ಸಲಿಸು ನೀಂ' =ಪ್ರಸಾದಿ ಸ್ಥಲ; ಪ್ರಾಣಲಿಂಗಿಸ್ಥಲ =ಗಿರಿಜೆಯಾಣ್ಮ, ಬಾರೈ; 'ಶರ್ಮಕರನೆ, ಬಾರೈ;" ಶರಣ ಸ್ಥಲ; ಕೊನೆಯದಾಗಿ ಐಕ್ಯಸ್ಥಲ:

ಸ್ವಯಾಽಽಸ್ಪದನೆ, ಬಾರೈ" ಇವು ಆರೂ ಸ್ಥಲಗಳಿಗೆ ಆರು ಪೂರ್ಣ ವಾಕ್ಯಗಳು.

ಶಿವಸ್ವರೂಪದ ಲಿಂಗಧಾರಣೆಯಿಂದ ಭಕ್ತಸ್ಥಲವೂ, ಶಿವದೀಕ್ಷೆ=ಆಯ್ಕಾಚಾರ ದಿಂದ ಮಹೇಶಸ್ಥಲವೂ ಹಾಗೂ ಚಿನ್ಮಯಾಽನುಗ್ರಹ ದೀಕ್ಷೆಯಿಂದ ಪ್ರಸಾದಿ ಸ್ಥಲವೂ-ಈ ಮೂರು ಸ್ಥಲಗಳು ಮ್ಯಾಟ್ರಿಕ್, ಬಿ. ಎ., ಎಂ. ಎ. ವರ್ಗಗಳಂತ ಗುರು-ಕರುಣೆಯಿಂದ ಪಡೆಯತಕ್ಕವುಗಳಾದುದರಿಂದ ಈ ಮೂರನ್ನು ಈ ಪದ್ಯದ ಪೂರ್ವಾರ್ಧದಲ್ಲಿಯೇ ಸೀಮಿತಗೊಳಿಸಲಾಗಿದೆ. ತದನಂತರದ ಪ್ರಾಣಲಿಂಗಿಸ್ಥಲ ಶರಣಸ್ಥಲ ಹಾಗೂ ಐಕ್ಯಸ್ಥಲಗಳು ಪಿ. ಎಚ್. ಡಿ., ಡಿ. ಲಿಟ್., ಕವಿ-ಋಷಿತ್ವ ಗಳಂತೆ ಸ್ವಯಂ ಸ್ವಯಾಽಽಸ್ಪದನಾಗಿ ಪಡೆಯಬಲ್ಲವುಗಳಾಗಿರುವುದರಿಂದ ಈ ಮೂರನ್ನೂ ಇದೇ ಪದ್ಯದ ಉತ್ತರಾರ್ಧದಲ್ಲಿ ಇಳಿಸಲಾಗಿದೆ.

ದಿನ ನಿತ್ಯದ ಅರ್ಚನ-ಅರ್ಪಣ- ಅನುಭವದಲ್ಲಿ ಏರಿ ಏರಿ, ಇಳಿದು ಇಳಿದು ನಿಲ್ಲುವ 'ಭದ್ರ' ಭಕ್ತಸ್ಥಲ ಮೊದಲ್ಗೊಂಡು, ಐಕ್ಯ ಸ್ಥಲದ ಸ್ವಯಾದಿಗೆ (ಸ್ವಯ ಪರ ಜಂಗಮಕ್ಕೆ) ಆಸ್ಪದವಾದ ಸ್ಥಿತಿ ಪ್ರಾಪ್ತವಾದಾಗ ಪದ್ಯದ ಕೊನೆಯಲ್ಲಿಯ ಸ್ವಯಾಸ್ಪದನೆ ಪದ್ಯದ ಪ್ರಾರಂಭದ ಪರಶಿವನಾಗುತ್ತಾನೆ. ಈ ಪರಶಿವನೆ ಸ್ವಯಾ ಸ್ಪದನಾಗುತ್ತಾನೆ. ಈ ಪರಶಿವನೆ ಸ್ವಯಾಸ್ಪದನಾಗುತ್ತಾನೆ. ಈ ಆದ್ಯಂತದ 'ಶಂ ಕರೋತಿ' ಇತಿ ಶಂಕರಃ.

ಶಂಕರನನ್ನು ಬಿಟ್ಟು ಬಿಡದೆ, ಒಂದೇ ರೀತಿಯಿಂದ, 'ಬಾ'; "ಬಾರೈ" ಎಂದು 'ನಂಬಿ ಕರೆದೊಡೆ, ಓ ಎನ್ನನೆ, ಶಿವನು?' ನಂಬಿಗೆಯ 'ನಂಬಿ' ಎಂದರೆ ನಂಬಿಕ್ಕನು ಕರೆದಾಗೆ "ಓ" ಎಂದು ಬಂದಿದ್ದ ಶಿವನು ಈ ಪದ್ಯದ ಪ್ರಕಾರ 'ಬಾ' "ಬಾರೈ" ಎಂದು ಅನನ್ಯ ಚಿಂತನೆಯಿಂದ ಭಕ್ತಾದಿಗಳು ಕರೆದಾಗ ಅವನು ಬಂದು "ಓ" ಎಂದು ಪೂರ್ಣತ್ವ-ಪ್ರಾಪ್ತಿಯಾಗುವಂತೆ ಕರುಣ-ಕಿರಣ ಬೀರಿದ್ದಾನೆ.

ಈ ಪದ್ಯದ ನೂರಾ ನಲ್ವತ್ನಾಲ್ಕು ಮಾತ್ರೆಗಳಲ್ಲಿ ನವಲಿಂಗದಂತಿರುವ 'ಬಾ' 'ಬಾ' ಗಳ ಹದಿನೆಂಟು ಮಾತ್ರೆಗಳು ಅಷ್ಟಾದಶ ಪುರಾಣಗಳು ಸಪ್ತ ಭೂಮಿಕೆ ಯಂತಿರುವ "ಬಾರೈ" "ಬಾರೈ"ಗಳ ಇಪ್ಪತ್ತೆಂಟು ಮಾತ್ರೆಗಳು ಕಾಮಿಕಾದಿವಾತು-ಲಾಂತ್ಯದ ಅಷ್ಟಾವಿಂಶತ್ಯಾಗಮಗಳನ್ನೂ ನೆನಪಿಗೆ ತಂದು, ಈ ಪದ್ಯದ ಶಂಕರನ ವರ್ಣನೆಯು ಹದಿನೆಂಟೂ ಪುರಾಣಗಳಲ್ಲಿಯೂ ಇಪ್ಪತ್ತೆಂಟೂ ಆಗಮಗಳಲ್ಲಿಯೂ ಇದೆಯೆಂಬುದಾಗಿರಬಹುದೆ? ಒಟ್ಟನಲ್ಲಿ, ಶಂಕರನನ್ನು ಆಹ್ವಾನಿಸುವ ನಿಮಂತ್ರಿಸುವ ನಿಯಂತ್ರಿಸುವ 'ಬಾ' "ಬಾರೈ" ಎಂಬುದಕ್ಕೇ (ಬಂದು ಎಂಬುದರ ಹೊರತಾಗಿ) ಒಟ್ಟು ನಲವತ್ತಾರು ಮಾತ್ರೆ ಬರುವಿಕೆಗೆ ಮೀಸಲಿರಿಸಿ ಶಂಕರನನ್ನು ಕರೆಯಲಾಗಿದೆ.

ಬಂದು+ಅಂಬಲಿಯ ಸವಿಸು ಎನ್ನುವುದೇ ಮೂರು ಅರ್ಥ (ವಾಚ್ಯಾರ್ಥ-ಲಕ್ಷ್ಯಾರ್ಥ-ವ್ಯಂಗ್ಯಾರ್ಥ)ದಲ್ಲಿ ಸುಸ್ಪಷ್ಟವಿದ್ದರೂ ಈ ಸರ್ವ-ಸಮರ್ಥವಾದ ಸಕ

ರ್ಮಕ 'ಸವಿಸು' ಕ್ರಿಯಾಪದವನ್ನು ಪದ್ಯದ ಮಧ್ಯದಲ್ಲಿರಿಸಿ ಕರೆದಾಗ "ಬಾರೈ'' ಎಂಬುವ ಅಕರ್ಮಕ ಕ್ರಿಯಾಪದವನ್ನೇ ಪದ್ಯದ ಕೊನೆಯಲ್ಲೇಕೆ ಬರುವಂತೆ ಬರಿಸಲಾಯಿತು? ಅಂದರೆ ‹ರಾಜಾ'ನಂತೆ ಇದ್ದ ‹ಸವಿಸು" ವನ್ನು ಸಂಪೂರ್ಣ ತಿರಸ್ಕರಿಸದೆ, ‹ಪ್ರಜಾ'ಗಳಂತೆ ಇರುವ ಹದಿನಾರು ‹ಬಾ" ಬಾರೈ" ಗಳನ್ನೇ ಆದಿಯಲ್ಲಿಯೂ ಕೊನೆಯಲ್ಲಿಯೂ ಸಾಲಾಗಿ ನಿಲ್ಲಿಸಿದ ಕಾರಣವೇನು? ಒಬ್ಬನ ರಾಜಾ-ರಾಜ್ಯದ ಬದಲು ಬಹು ಜನರ ಪ್ರಜಾ-ರಾಜ್ಯದ ರಾಜಕಾರಣ ಎನ್ನಬಹುದೇ? ಹದಿನಾರರ ಮುಂದೆ ಒಂದರದ್ದೇನು ಮಹಾ? ಎನ್ನಲಾಗದು! ರಾಜಾ ರಾಜಾನೇ, ಪ್ರಜಾ ಪ್ರಜೆಯೇ. ಅದರದರ ಯೋಗ್ಯತೆ ಅದದಕ್ಕೇ ಸರಿ. ಪ್ರಜಾಪದ ಸ್ತ್ರೀಲಿಂಗ ವಾಚಕ; ಪುಲ್ಲಿಂಗ ವಾಚಕವಾದದ್ದು ರಾಜಾ ಪದ ಎರಡರಲ್ಲೂ ಜಾ-ಜಾ ಸಮಾನ ಒಟ್ಟನಲ್ಲಿ ‹ಸವಿಸು' ಮಧ್ಯದಲ್ಲಿದ್ದು, ‹ಬಾ "ಬಾರೈ" ಆದ್ಯಂತದಲ್ಲಿ ಮೆರೆಯುವ ತಾತ್ಪರ್ಯಾರ್ಥವೆಂದರೆ ಶಂಕರನ ಬರುವಿಕೆಯೇ ಮುಖ್ಯಾತಿಮುಖ್ಯವಾಗಿದೆ. "ನಾಽಹಂ ವಸಾಮಿ ಕೈಲಾಸೇ; ನ ಮೇರೌ; ನ ಚ ಮನ್ದಿರೇ, | ಮದ್‌ಭಕ್ತಾ ಯತ್ರ ತಿಷ್ಠನ್ತಿ ತತ್ರ ತಿಷ್ಠಾಮಿ,, ಪಾರ್ವತಿ; ||'' ಎನ್ನುವ ಶಂಕರನು ಭಕ್ತಿಯಿಂದ ರ್ಪಿಸಿದ ಭಕ್ತರ ಅಂಬಲಿಯನ್ನು ಸವಿಯದಿರುವನೆ? ಊರಿಗೆ ಬಂದ ನಾರಿ, ನೀರಿಗೆ ಬರದಿರುವಳೆ? ಬರಲಿ; ಬರಲಿ. ಬಂದು ಅಂಬಲಿಯ ಸವಿಯಲಿ.

‹ಬಾ' "ಬಾರೈ" ಎಂದು ಷೋಡಶವಾದ ಬಾರಿಬಾರಿಗೂ ಕರೆಯುವ ಈ ಪದ್ಯವು "ಶ್ರೀ ಜಗದ್ಗುರು ನಿರಾಭಾರಿ ವರ ಗುರುಸಿದ್ಧ-| ನೋಜದಿಂ ಶರಣಸಾಹಿತ್ಯ ಪ್ರಚಾರಕ್ಕೆ | ನೃಜರಹ ತ್ರಿಸಹಸ್ರ ಗಣವರ್ಯರಂ ಕಳುಪಿ, ಮಠವೆಸಗುತಾಶೆ ಕಳೆದಂ ||" ಎಂಬ ಸೂಚನಾ-ಪದ್ಯದಿಂದಲೂ "ಮೋಕ್ಷವಂ | ಮೇಳಯಿಸುತೆನ್ನ ನನಿಶಂ ಮಹಾಕೃಪೆಯಿಂದ ನಿನ್ನವನನೆಸಗಿ ಕೊಳ್ಳೈ" ಎಂಬ ಸಂಧಿ-ಪ್ರಾರ್ಥನಾ-ಪದದಿಂದಲೂ ಪ್ರಾರಂಭವಾಗಿರುವ ಹನ್ನೊಂದನೆಯ ಸಂಧಿಯಲ್ಲಿ ಹನ್ನೆರಡನೇ ಪದ್ಯವಾಗಿದೆ. ಈ ಪದ್ಯದ ಪೂರ್ಣಪಾಠ ಹೀಗಿದೆ :

"ಪರಶಿವನೆ, ಬಾ; ರುದ್ರ ಬಾ ಭದ್ರ ಬಾ; ನಲಿದು |
ಗಿರಿವರನೆ ಬಾ; ಹರನೆ ಬಾ; ವರನೆ ಬಾ; ವೊಲಿದು |
ಪರತರನೆ ಬಾ; ಭವನೆ ಬಾ; ಧವನೆ ಬಾ; ತಿಳಿದು ಬಂದಂಬಲಿಯ ಸವಿಸು ನೀಂ;
ಪರಮ ಬಾರೈ; ಗಿಸಿಜೆಯಾಣ್ಮ ಬಾರೈ; ದಯಾ- |
ಪರನೆ ಬಾರೈ; ಶರ್ಮಕರನೆ ಬಾರೈ; ನಯಾಽಽ- |
ಬಾರೈ; ಧರ್ಮಧರನೆ ಬಾರೈ; ಸ್ವಯಾಸ್ಪದನೆ ಬಾರೈ, ಶಂಕರ; ||

ಭಗವದ್‌ಗೀತೆಯಲ್ಲಿ ಆಶ್ವಾಸನೆ ಕೊಟ್ಟ ಹಾಗೆ "ಅನನ್ಯಾಶ್ಚಿನ್ತಯನ್ತೋ ಮಾಂ ಯೇ ಜನಾಃ ಪರ್ಯುಪಾಸತೇ | ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ||' ಎಂದು ಮುಂತಾಗಿರುವ ಅಭಯ ವಚನವವು

ಭಯ-ರಹಿತರನ್ನಾಗಿಸಲು ಇದೇ ಪುರಾಣದ ಈ ಮುಂದಿನ ಕಳಕಳಿಯಿಂದ ಕೇಳಿ ಕೊಂಡ ಕೇಳಿಕೆಗೆ ಉತ್ತರವಾಗಿರದಹುದೇನೋ !

" ಗುಡಿಸಲದೆ ಭೋಜನಕೆ ನೀನೆಂತು ಬರ್ಪೆ ಶಿವನೆ? " (೧೧-೧೩).

"ಕೀಳು ಜಾತಿಯೊಳೆನ್ನ ಬರಿಸಿದವರಾರಯ್ಯ? |
ಕೀಳೆನಿಪುಜ್ಜುಗಕೆ ನೇಮಿಸಿಹರಾರಯ್ಯ ?
ಕೀಳು-ಮೇಲೆಂಬುದಂ ನೇಮಿಸಿಹರಾರಯ್ಯ ನಿನ್ನ ಲೀಲೆಯಿದಲ್ಲವೆ||
ಕೀಳೆನಿಪ ಜನ್ಮಮಂ ತೊರೆವೆ ನಾಂ ನಿನಗಾಗಿ:
ಕೀಳೆನಿಸಿಕೊಂಡು ನಿನ್ನಾರಾಧನೆಯ ತೊರೆವ ।
ಕೀಳು ಬಾಳೆನಗೆ ಬೇಡೈ, ಯೆನುತೆ ಪ್ರಾಣದುರೆ ತ್ಯಾಗಕ್ಕೆ ಸಿದ್ಧನಾದಂ ||
(೧೧-೧೪)

"ಜಾತಿ-ವಿಜಾತಿ ಎನಬ್ಯೇಡ; ದೇವನೊಲಿದಾತನೆ ಜಾತ ಸರ್ವಜ್ಞ" ಏಕೆಂದರೆ ಜಾತಿ-ಹೀನರ ಮನೆಯು ಜ್ಯೋತಿ ತಾ ಹೀನವೆ?!" ಜ್ಯೋತಿಯಿಂದ ಜೋತಿಯಾಗಿ ಬೆಳಗುತ್ತಿದ್ದು, ಇತರರನ್ನೂ ಜ್ಯೋತಿಯನ್ನಾಗಿ ಬೆಳಗಿಸುತ್ತಿರಬೇಕೆಂದೂ ತಾನು ಕಿಚ್ಚಾಗಬಾರದೆಂದೂ ಹಾಗೂ ತಾನೆಂದೂ ಹೊಟ್ಟೆ-ಕಿಚ್ಚುಪಡಬಾರದೆಂದೂ ಗೊತ್ತಿದೆ. ಗೊತ್ತಿದೆಯಯ್ಯ! ನನಗೆಲ್ಲಾ ಗೊತ್ತಿದೆ! ಹೊಟ್ಟೆ-ಕಿಚ್ಚಿನಿಂದ ಹೇಳುತ್ತಿಲ್ಲ ಹೊಟ್ಟನ ಕಿಚ್ಚಿನಂತಿರುವ ಹೊಟ್ಟೇ ಕೆಚ್ಚಿನಿಂದ!! ಹೇಳುತ್ತಿದ್ದೇನೆ; ಹೊಟ್ಟೇಕೆಚ್ಚಿನಿಂದ! ‹‹ ಜನ್ಮನಾ ಜಾಯತೇ ಶೂದ್ರಃ; ಕರ್ಮಣಾ ದ್ವಿಜ ಉಚ್ಯತೇ" ಎಂದನಲ್ಲ ಆ ಚಕ್ರಪಾಣಿ ! ಹಾಗಾದರೆ, ಸಂಸ್ಕಾರ ಕರ್ಮದ ಬಲದಿಂದ ಶೂದ್ರನೂ ರುದ್ರನ ಆರಾಧನೆಯಿಂದ 'ದ್ವಿಜ'ನಾಗಲು ಅಂದರೆ, ಎರಡು ಸಲ ಹುಟ್ಟಿದವನು ಅಂದರೆ, ದೀಕ್ಷಿತನಾದವನಾಗಲು ಬರುತ್ತದೆಂದ ಮೇಲೆ, ಹೇಗಾದರೂ ಆಗಲಿ "ರುದ್ರೋ ಭೂತ್ವಾ, ರುದ್ರಮ್ ಅರ್ಚಯೇತ್ ಎಂದಿದೆಯಾದ್ದರಿಂದ "ನಿನ್ನಾರಾಧನೆಯ ತೊರೆವ ಕೀಳು ಬಾಳೆನಗೆ ಬೇಡೈ" (೧೧-೧೪)" ಜನ್ಮಮಂ ತೊರೆವೆ ನಾಂ ನಿನಗಾಗಿ!!'" (೧೧-೧೪) ಸುಮ್ಮನೇ ಸತ್ತ ಮೇಲೇನು ಬಂತು, ಮಣ್ಣು? ! ಎನ್ನಲಾಗದು. ಈ ನನ್ನ ಜೀವ ಅಮರ; ಅವಿನಾಶಿ. ಇದು "ನ ಹನ್ಯತೇ ಹನ್ಯಮಾನೇ ಶರೀರೇ" (ಗೀತಾ); ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಯುದ್ಧಕ್ಕಾಗಿ ಯುದ್ಧವೆಂದು ನಡೆಸಿದ ಯುದ್ಧದಲ್ಲಿ ಗೆದ್ದರೆ ಭೂಪತಿ; ಸತ್ತರೆ ಸ್ವರ್ಗಾಧಿಪತಿಯಾಗಬಹುದೆಂದು ಗೀತೆಯಲ್ಲಿ ಹೇಳಿರುವಾಗ, ನನಗೆ ಕೇವಲ ಸೇವಾಧಿಪತಿಯಾಗಲೂ ಬಾರದೆ? 'ನಿನ್ನಾರಾಧನೆಯ" ೧೧-೧೪ ಮಾಡಲೇಬೇಕೇಬ ಈ ನನ್ನ ದೃಡನಿರ್ಧಾರ ಹಕ್ಕಿನ "ಚಲಾವಣೆಗೆ ಜನ್ಮಮಂ ತೊರೆವೆ ನಾಂ ನಿನಗಾಗಿ" (೧೧-೧೪) ಇರಲಿ. ಕೀಳು ಕೀಳೆಂದು ಬೀಳುಗವರೆಲ್ಲ ! ಕೀಳಿಂಗಲ್ಲದೆ ಹಯನ ಕರೆವುದೆ? ಅಲ್ಲದೆ, ಈ ಕೀಳು-ಮೇಂಲೆಂಬುದನೇಮಿಸಿಹರಾರಯ್ಯಾ ?.... ಕಿಳೆನಿಪುಜ್ಜುಗಕೆನೇಮಿಸಿಹರಾರಯ್ಯಾ....

ಕೀಳುಜಾತಿಯೊಳೆನ್ನ ಬರಿಸಿದವರಾರಯ್ಯಾ?....ನಿನ್ನ ಲೀಲೆಯಿದಲ್ಲವೆ? (೧೧-೧೪) ಎಲ್ಲದಕ್ಕು ದೇವನ ಮೇಲೆ ಭಾರ ಕೊನೆಯಲ್ಲಿ ಜನ್ಮಮಂ ತೊರೆದ ಆತ್ಮ-ನಿವೇದನ ಭಕ್ತಿ ಈ ಕವಿಯು ಮಾಡಿದ ಚನ್ನಯ ಪ್ರಾರ್ಥನೆ ಕೀಳನ್ನೇ ಕಿತ್ತೊತ್ತಿಗೆಯು ಕೇಳಿಕೆಯು ಸಫಲ ಪ್ರಾರ್ಥನೆ. "ಹರನಾಗಳೊಡೀ ಬೆಂದು + ಅವನ ಕೈ ಹಿಡಿದವನು" (೧೧-೧೫)

ಪರಶಿವನೆ, ಗಿರಿವರನೆ, ಪರಶರನೆ, ಪರಮು, ಪರನೆ, ಕರನೆ—ಈ ಆರೂ ಪದಗಳ ಎರಡನೆಯ ರೇಫವು (ರಕಾರವು) ದ್ವಿರೇಫದಂತೆ ಆರೂ ಚರಣಗಳಲ್ಲಿ ಆದಿಯ ಅನು ಪ್ರಾಸವಾಗಿ ಪ್ರಾಸಬದ್ಧವಾಗಿ ಸುಳಿದಾಡಿದೆ. ಅದೇ ಭ್ರಮಣಶೀಲ ದ್ವಿರೇಫ ರಕಾರವು (ಶಂಕರ ಶಬ್ದದ ಹೊರತುಪಡಿಸಿ) ಪಂಚವಿಂಶತಿ ತತ್ತ್ವದ್ದಾಗಿ ಇಪ್ಪತ್ತೈದು ಸಲ ಹಾರಾಡಿದೆ.

ಈ ಪದ್ಯವು ಪಂಚ ಮಾತ್ರೆಯುಳ್ಳ ಗಣದ್ದಾಗಿರುವದರಿಂದ ಪ್ರತಿಯೊಂದು ಗಣವೂ ಪಂಚಭೂತಾತ್ಮಕ ಪಂಚ ಮಾತ್ರೆಗಳಿಂದ ಸ್ವಯಂ ಅಸ್ತಿತ್ವ ಹೊಂದಿದ್ದರೂ ಇಲ್ಲಿಯ ಇಪ್ಪತ್ತೆಂಟೂ (ಪದ್ಯಾರ್ಥಗಳ ಅಂತಿಮ ದೀರ್ಘ ಸಹಿತ) ಗಣಗಳಿಗೆ "ಜಯ" ವಿಲ್ಲ. ಜಯವಿಲ್ಲವೆಂದರೆ ಇದಕ್ಕೆ ಅಪಜಯವುಂಟೆಂದರ್ಥವಲ್ಲ, ಇದಕ್ಕೆ ಜಯವೂ ಇಲ್ಲ; ಅಪಜಯವೂ ಇಲ್ಲ. ಭಕ್ತಿವಂತರ ದೆಶೆಯಿಂದಾಗಿ 'ಜಯಾಽಪಜಯ ಉಂಟಾಗುವುದು "ಸದಾಶಿವ''ನಿಗೆ ಮಾತ್ರ ಅಂದರೆ, "ಸದಾಶಿವ'' ಎಂಬ ಶಬ್ದದಲ್ಲಿ 'ಜ'ಗಣವಿದ್ದಂತೆ ಈ ಪದ್ಯದ ಯಾವ ಗಣದಲ್ಲಿಯೂ ಜಗಣವಿಲ್ಲ; "ವಿರುಪಾಕ್ಷ" ಶಬ್ದದಲ್ಲಿದ್ದಂತೆ ಈ ಪದ್ಯದ ಯಾವೂಂದು ಗಣದಲ್ಲಿಯೂ 'ಯ'ಗಣವಿಲ್ಲ; ಅಂತೆಯೇ ಪ್ರಜ್ಞಾಚಕ್ಷುವಾದರು ಪ್ರಜ್ಞಾವಂತ ಗೀತೆ, ಸಂಗೀತಜ್ಞ ಛಂದಃ ಶಾಸ್ತ್ರಜ್ಞ, ಲಾಕ್ಷಿಕಜ್ಞ ಪರಮಾರ್ಥತತ್ತ್ವಜ್ಞ ಸುಜ್ಞ ಬಹುಜ್ಞ, "ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ ಧೀರಾತ್ಮ ಪುಟ್ಟರಾಜಾಖ್ಯ" ಕವಿಯ ದೃಷ್ಟಿಯು ದೃಷ್ಟಾಂತ-ದಾರ್ಷ್ಟಾಂತ್ಯಾತೀತವಾದರೂ ಭಾರತೀಯ ಸಂವಿಧಾನದ ನೂರಾನಾಲ್ವತ್ನಾಲ್ಕನೇ ಕಾನೂನನ್ನು ಮೀರುವಂತಹುದಲ್ಲ. ಅಂದರೆ, ನೂರಾನಾಲ್ವತ್ನಾಲ್ಕು ಮಾತ್ರೆಗಿಂತ ಹೆಚ್ಚಿನ ಮಾತ್ರೆಗೆ ಇಲ್ಲಿಯ ಪದ್ಯ-ಪದ್ಯದಲ್ಲಿ ಅವಕಾಶವಿಲ್ಲ.

ಈ ಪದ್ಯದ ಪೂರ್ವಾರ್ಧದಲ್ಲಿ 'ನೀಂ' ದೀರ್ಘವಿದ್ದಂತೆ, ಉತ್ತರಾರ್ಧದ "ರ'' ಕಾರವು ಪದ್ಯಾರ್ಧದ ಕೊನೆಗೆ ಇರುವ ನಿಮಿತ್ತದ ನಿಯಮದಿಂದಾಗಿ 'ಶಂಕರ'ನ ರಕಾರವು ಸಂಬೋಧನೆಯಲ್ಲಿ ದೀರ್ಘವಾಗಿ 'ಗುರು' ಆಗೇ ಆಗುತ್ತದೆ. ಇದೇ ಶಂಕರನನ್ನೇ ಕರೆಯುವಾಗ ಮೊಗ್ಗೆಯ ಮಾಯಿದೇವರು 'ಶಿವಾಧವಾ' "ಶಿವಾ-ವಲ್ಲಭಾ" 'ಮಹದೈಪುರೀಶ್ವರಾ' ಎಂದದ್ದನ್ನು ನೆನಪಿಸಬೇಕು. ಶಿವಾ-ವಲ್ಲಭ= ಉಮಾಪತಿ; ಶಿವಾ-ವಲ್ಲಭಾ = ಉಮಾಪತ್ನಿ. ಉಮೆಗೆ ಹೆಂಡತಿಯಾರು? ಸಂಬೋಧನೆಯಲ್ಲಿ ಅಕಾರಾಂತವು ಆಕಾರಾಂತ ಆಗುತ್ತದಷ್ಟೆ; ಈ ಮೊದಲು ತಿಳಿಸಿದ ಪ್ರತ್ಯಾಹಾರ ಸಂಜ್ಞಾಸೂತ್ರದಿಂದಾದ "ಪರ" ಪದವು ಸಂಬೋಧನೆಯಲ್ಲಿ ದೀರ್ಘವಾದಾಗ "ಪರಾ" ಆಗಿ ಶಿವೆಯನ್ನು ನೆನಪಿಸುತ್ತದೆ.

ಈ ಪದ್ಯದ ಒಂದನೇ, ಎರಡನೇ, ಮೂರನೆ ಚರಣದ ಇಪ್ಪತ್ತನೆ ಮಾತ್ರೆಗೆ ನಲಿದು,ಒಲಿದು, ತಿಳಿದು ಎಂಬಲ್ಲಿ "ದು" ಎಂಬುದೇ ಅಂತ್ಯಪ್ರಾಸವಾಗಿದೆ. ಇಲ್ಲಿಯೇ ಅದೇ ಇಪ್ಪತ್ತನೇ ಮಾತ್ರೆಯಾಗಿ ದಯಾ; ನಯಾ, ಸ್ವಯಾ ಎಂಬಲ್ಲಿಯ "ಯಾ" ಎಂಬಕ್ಷರವೂ ಅಂತ್ಯ ಪ್ರಸಾದಸ್ಥಾನದಲ್ಲಿದೆ. ಇದೇ ಒಂದನೇ, ಎರಡನೇ, ಮೂರನೇ ಚರಣಗಳಲ್ಲಿ ಪ್ರಾಯಃ ಏಳನೇ, ಹನ್ನೆರಡನೇ, ಹದಿನೇಳನೇ ಮಾತ್ರೆಯಾಗಿ 'ಬಾ-ಬಾ' ಪ್ರಾಸವಾಗಿ ಬಂದಿದೆ. ಇಲ್ಲಿಯೇ ಉತ್ತರಾರ್ಧದಲ್ಲಿ 'ರೈ-ರೈ' ಎಂಬುದು ಆರನೇ ಚರಣದ ೨೭ ನೇ ಮಾತ್ರೆಯಲ್ಲಿಯ ಪ್ರತಿಯೊಂದು ಚರಣದ ಏಳನೇ ಹದಿ ನೇಳನೆ ಮಾತ್ರೆಯ ಸ್ಥಾನದಲ್ಲಿಯೂ ಪ್ರಾಸಬದ್ಧವಾಗಿ ತಳವೂರಿ ರಾರಾಜಿಸುತ್ತಿದೆ.

ಈ 'ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ-ಪುರಾಣ'ದಲ್ಲಿಯ ಹನ್ನೊಂದನೇ ಸಂಧಿಯ ಹನ್ನೆರಡನೆಯ ಪದ್ಯ: "ಪರಶಿವನೆ, ಬಾ;....ಬಾರೈ, ಶಂಕರ;" ಎಂಬ ಪದ್ಯದಲ್ಲಿರುವ ಶಂಕರನ ಹದಿನಾರೂ ನಾಮಗಳನ್ನು ಪ್ರಥಮಾ ವಿಭಕ್ತಿಯಲ್ಲಿಟ್ಟು, ಸಂಸ್ಕೃತದ ಅನುಷ್ಟುಪ್ ಛಂದಸ್ಸಿನಲ್ಲಿ ನೆನಪಿಗಾಗಿ ಹೀಗೆ ಜೋಡಿಸಿಕೊಂಡು ಅಂದುಕೊಳ್ಳಬಹುದು: —

ಶ್ರೀಮತ್‌ಕುಮಾರ-ಶಿಷ್ಯೇಣ ಪುಟ್ಟರಾಜೇನ ನಿರ್ಮಿತೇ|
ಕರ್ತೃ ಶ್ರೀ ಗುರುಸಿದ್ಧೇಶ-ಪುರಾಣೇ ಲಭ್ಯತೇ ಸ್ತುತಿಃ||
ಪರಶಿವಶ್ಚ ರುದ್ರಶ್ಚ ಭದ್ರೋ ಗಿರಿವರಸ್ತಥಾ|
ಹರೋ ವರೋ ಪುನಶ್ಚಾಽಪಿ ಪರತರೋ ಭವೋಽಪಿಚ||
ಥವಶ್ಚ ಪರಮಶ್ಚಾಽಪಿ 'ಗಿರಿಜೇಯಾಣ್ಮ'-ವಾಚಕಃ|
ದಯಾಪರಶ್ಚ ಭೂತಾನಾಂ ಶರ್ಮಕರೋ ನಯಾಽಽಕರಃ||
ನಿತ್ಯಂ ಧರ್ಮಧರಶ್ಚಾಽಸೌ ಸ್ವಯಾಽಽಸ್ಪದಃ ಸ ಶಂಕರಃ|
ಶಂಕರಸ್ಯೈವ ಪರ್ಯಾಯ-ನಾಮಾನ್ಯುಕ್ತಾನಿ ಷೋಡಶ||

ಎಂದು ಮುಂತಾಗಿ ಭಾವಕ್ಕೆ ಬಾಧೆ ಬಾರದ ಹಾಗೆಯೇ। ಬೇಕಾದ ಭಾಷೆಗೂ ಕೂಡ ಹೊಂದಬಲ್ಲಂಥ ಪದ್ಯವು||

ಹೀಗೆ ಆತ್ಮೀಯತೆಯಿಂದ ಮೃಣ್ಮಯವನ್ನೂ ಹಿರಣ್ಮಯವನ್ನಾಗಿ ಕಾಣುವ ಸಂಸ್ಕೃತಮಯವಾಗಿ ತನ್ಮಯವಾಗಬಹದು. ಅಷ್ಟೊಂದು ಸರಳದ ಗಾಂಭೀರ್ಯದ ಪದ್ಧತಿ ಈ ಕವಿಯದ್ದಾಗಿದೆ.

ಈ ತನ್ಮಯದ ಪುಟ್ಟರಾಜ ಸಂಸ್ಕೃತಮಯವಾಗಿ-ಪ್ರತ್ಯೇಕವಾದ "ಲಿಂಗ-ಸೂಕ್ತ" "ಶ್ರೀಮತ್‌ಕುಮಾರ ಗೀತಾ" "ಶ್ರೀಮದ್‌ಹಾನಗಲ್ ಶ್ರೀ ಕುಮಾ-ರೇಶ್ವರ ಲೀಲಾ ಕಾವ್ಯಂ" ಮುಂತಾದ ಸಂಸ್ಕೃತಗ್ರಂಥಗಳನ್ನು ಬರೆದಂತೆ, ಈ ಪುರಾಣವು ಕನ್ನಡದ್ದೆಂದು ಅನ್ನಿಸಿಕೊಂಡರೂ ಇದರಲ್ಲಿ ಅಲ್ಲಲ್ಲಿಗೆ ಸಂಸ್ಕಾರವಾದ ಪ್ರಸ್ತುತ ಸಂಸ್ಕೃತ ಭಾಷೆಯಲ್ಲಿಯೇ ಇದ್ದಂತೆ ಸಂಸ್ಕೃತ

ಕ್ರಿಯಾಪದ–ಸಹಿತವಾಗಿ ಸಂಸ್ಕೃತದ ಸಂಸ್ಕಾರವನ್ನು ಶಾಶ್ವತ ಗೊಳಿಸಿದ್ದಾನೆ: ಏಳನೇ ಸಂಧಿಯ, ಹದಿನಾಲ್ಕನೆ, ಸಂಧಿಯ ಹಾಗೂ ಇಪ್ಪತ್ತೊಂದನೇ ಸಂಧಿಯ ಕೊನೆಯಲ್ಲಿ ಬರುವ, ಭಕ್ತಿಕಾಂಡದ ಜ್ಞಾನಕಾಂಡದ ಮತ್ತು ವೈರಾಗ್ಯ ಕಾಂಡದ ಸಮಾಪ್ತಿ—ಮಂಗಲ ಪದ್ಯದ ಪೂರ್ವಾರ್ಧವು ಸಂಪೂರ್ಣ ಸಂಸ್ಕೃತ ಮಯವಾಗಿದೆ: 'ನಿರ್ವಿಕಲ್ಪ-ಸಮಾಧಿಸ್ಥ-ಗುರುಸಿದ್ಧ, ಭೋ,| ಸರ್ವ-ಹೃದಯಾ-ಸ್ಥಿತ-ತಮಃ-ಸೂರ್ಯ, ಸತ್‌ಪ್ರಭೋ ನಿರ್ವಿಕಾರೋತ್ತಮ-ಜಗದ್ಗುರು-ಮಹಾ— ವಿಭೋ, ತ್ರಾಹಿ ವಿಶ್ವಂ ತ್ವಂ ಸದಾ; ||' ಇಲ್ಲಿ 'ತ್ರಾಹಿ' ಎಂಬ ಕ್ರಿಯಾಪದವೂ ಸಹ ಸಂಸ್ಕೃತದ ಲಕಾರದ್ದು.

ಇನ್ನು ಕ್ರಿಯಾಪದ ಮಾತ್ರ ಕನ್ನಡದ್ದಿದ್ದು ಸಂಪೂರ್ಣ ಪದ್ಯವೂ ಸಂಸ್ಕೃತ ಮಯವಾದುದಕ್ಕೆ ಉದಾಹರಣೆ :

'ಯತಿ-ತತಿ-ಗಣಾಧಿಪತಿ, ರತಿ-ಪತಿ-ಮದಾಪಕೃತಿ, ಕೃತಿ, ಕರಜಿತ-ಪ್ರಕೃತಿ, ಸುಕೃತಹಿತ, ದಿವಿಜ-ತತಿ| ನತಿ-ವಿತೃತ, ವರ–ವಿತತಿ-ಭೃತ, ಸುಧಾಕರ-ಶೇಖರ,

ಪ್ರತಿತ, ಗಂಗಾಧರ! |
ನುತಿ-ವಿಲೇಖನ-ರತ-ಸರಸ್ವತೀ–ನಿಹಿತ-ಮತಿ |
ಪತಿತ-ಪಾವನ-ಚರಿತ, ಕಂಬಲಾಶ್ವತ-ಗೀತ, |
ಗತಿ-ಮುಗ್ಧ, ಗುರುಸಿದ್ಧ, ಪೂವಳ್ಳಿ–ವನ-ಸಿದ್ಧ,
ಗಹ್ವರ-ನಿವಾಸ ಸಲಹೈ || (೪–೧);

ಇಲ್ಲಿಯ 'ಸಲಹೈ' ಎಂಬ ಕ್ರಿಯಾಪದವನ್ನು ಬದಲು 'ಭೋ !' ಎಂಬುದಾಗಿ ಅಥವಾ ಇನ್ನಾವುದೇ 'ಸಗಣ'ದ ಕ್ರಿಯಾಪದವನ್ನಾಗಲಿ ಸೇರಿಸಿಕೊಂಡರೆ, ಪದ್ಯವು ಸಂಪೂರ್ಣ ಸಂಸ್ಕೃತಮಯವೇ.

ಸಂಸ್ಕೃತವಾದ ಸಂಸ್ಕೃತಭಾಷೆ ಮೊದಲ್ಗೊಂಡು ಸಂಸ್ಕಾರ ಪಡೆದ ಈ ಕವಿಯು ಅಲ್ಲಲ್ಲಿ ಕೃತಿ, ವಿಕೃತಿ, ಪ್ರಕೃತಿ ಸಂಸ್ಕೃತಿ ಮುಂತಾದ ಪದಗಳನ್ನು ಬಳಸಿದ್ದರೂ 'ಧಿಃಕೃತಿ' ಪದದ ಸಂಬಂಧವು ಈ ಪುರಾಣದಲ್ಲಿಲ್ಲವೆಂದ ಮೇಲೆ ಈ 'ಧಿಃಕೃತಿ' ಪದಕ್ಕೇ 'ಧಿಃಕೃತಿ' ಇರಲಿ. 'ಸತ್‌ಕೃತಿ' ಮಾತ್ರ ಸರ್ವರಿಗೂ ಶ್ರೋತೃಗಳಿಗೂ, ಶ್ರಾವಕರಿಗೂ–ಇರಲಿ

|| ಶ್ರೀಗುರು-ಬಸವಲಿಂಗಾಯ ನಮಃ ||

ಎಂಬ ಪದ-ದ್ವಯದ ಅರುಣೋದಯದಿಂದ ಪ್ರಾರಂಭವಾಗುವ ಸೂಚನಾ-ಪದ್ಯವೆಂಬ ಅರ್ಣವವನ್ನು ಪ್ರಕಾಶ ಪಡಿಸುತ್ತಿರುದ ಪ್ರತಿಯೊಂದು ಪದ್ಯವೆಂಬ ಸಪ್ತಾಶ್ವ ಸೂರ್ಯನ ಉದಯವು ಭಕ್ತಿವಂತರ ಹೃದಯ–ಕಮಲಕ್ಕೆ ಜೀವಾಳವಾಗಿದೆ..

ಸಂಖ್ಯಾನುಗುಣವಾಗಿ ಸಾಂಖ್ಯರುಒಪ್ಪುವ ಇಪ್ಪತ್ತೈದು ಸಂಖ್ಯೆಯ ತತ್ವಗಳ ಸ್ವರೂಪನಾದ ಸಂಖ್ಯಾತೀತ ಗುರುಸಿದ್ಧನಿಗೆ ಅಸಂಖ್ಯ ನಾಮಗಳಿದ್ದರೂ ಸಂಖ್ಯೆಗಾಗಿ ಸಂಖ್ಯೆ ಎನ್ನುವಂತೆ ಈ ಪುಟ್ಟರಾಜ ಕವಿಯು ಗುರುಸಿದ್ದನ ಇಪ್ಪತೈದು ನಾಮಗಳನ್ನು ಒಂದೆಡೆ ಸೇರಿದ ಸೊಬಗೂ-ಸೌಂದರ್ಯ ಹೀಗಿದೆ:-

"ಹಚ್ಚಯ್ಯ.... ಮರೆದು ತಪ್ಪಂ ‖ (೪-೧೦).

" ಎನ್ನಯ್ಯ ತಪ್ಪಂ ಮರೆದು ಪೊರೆಯಯ್ಯ ; " ಎಂದು ಕೇಳಿಕೊಳ್ಳುವಲ್ಲಿ, ಇಂಥವರ "ತಪ್ಪು ಎಂದಿಲ್ಲ; ಕಾರಣ ಎತರದೂ "ತಪ್ಪಂ ಮರೆದು" ಎಲ್ಲರನ್ನು ಪೊರೆಯಯ್ಯ, ಎಂದಿರೋಣದರಿಂದ " ಸರ್ವೆ ಜನಾಃ ಸುಖಿನೋಭವನ್ತು " ಸರ್ವೇ ಸನ್ತು ನಿರಾಮಯಾಃ; " ಎಂಬ ಶಾಂತಿ-ಮಂತ್ರವನ್ನು ಕಾರ್ಯಗತಗೊಳಿಸಬೇಕೆಂಬುವ ಸಲುವಾಗಿಯೇ ಪ್ರಾಯಃ ಇಂಥವರ ಲೇಖನಿಯು ಮುಡುಪಾಗಿರುತ್ತದೇನೋ 'ಕ್ಷಂತವ್ಯೋಮೇsಪರಾಧಃ ಶಿವ, ಶಿವ ಭೋ' ಎಂದು ಶಂಕರಾಚಾರ್ಯರೆಂದರೆ, ಬಸವಾದಿ ಶರಣರು 'ಎನ್ನ ತಪ್ಪು ಅನಂತ ಕೋಟಿ; ನಿಮ್ಮ ಸೈರಣೆಗೆ ಲೆಕ್ಕವಿಲ್ಲ' ಎಂದಿದ್ದಾರೆ. ಕಾರಣ ನಾವೂ ಕೂಡ "ಕ್ಷಣೇ ಕ್ಷಣೇ ಮದಪರಾಧ-ಸಹಸ್ರಾಣಿ ಭವನ್ತೀಶ್ವರ! ತಾನಿ ಸರ್ವಾಣಿ ಕ್ಷಮಸ್ವ" ಎಂದು ಕೋರುವ ಅಭಿಪ್ರಾಯದ ಈ ಪದ್ಯವನ್ನು ಮತ್ತೊಮ್ಮೆ ಇನ್ನೊಮ್ಮೆ ಮಗುದೊಮ್ಮೆ ಇನ್ನೊಂದು ಸಲ ಮತ್ತೊಂದು ಸಲ ಮತ್ತೆ ಮತ್ತೆ, ಪುನಃ ಪುನಃ ಅನ್ನೋಣ. "ಹುಚ್ಚಯ್ಯ.....ಹುಚ್ಚೇಶ..... ಹುಚ್ಚೇಂದ್ರ....ಹುಚ್ಚಪ್ಪ....ಹುಚ್ಚಾರ್ಯ....ಹುಚ್ಚಣ್ಣ, ನಾಥ ವಿದಿತಾsಸ ನಾಥ- ಎನ್ನಯ್ಯ, ತಪ್ಪಂ ‖ (೪-೧೦) ತಪ್ಪಂ ಮರೆದು ಪೊರೆಯಯ್ಯ;" ಎಂದು ಮುಂತಾಗಿ ಕೇಳಿಕೊಳ್ಳುತ್ತ, ಈ ಇಡೀ ಪುರಾಣದ ಮುಖ್ಯಾತಿ ಮುಖ್ಯವೂ ಜೀವ-ಜೀವಾಳವೂ ಹೃದಯದ ಹೃದಯವೂ ಆದಂತಿರುವ ಮೊದಲನೇ ಪದ್ಯದ ಮೊದಲನೇ ಕ್ರಿಯಾಪದದಿಂದ ಕೂಡಿದ ಮೊದಲನೇ ವಾಕ್ಯದ ಮೊದಲನೇ ಮಾತಾದ "ಈ ಭವವ ನೀಗಿಸು'' ಎಂಬುದನ್ನು ಸಾರ್ಥಕಗೊಳಿಸಲು ಈ ಪುರಾಣದ ಪಠನ ಪಾಠನ ಪಾರಾಯಣವನ್ನು ಮುಂದುವರಿಸೋಣ.

ಶ್ರೀ ಮ. ಘ. ಚ. ಗುರುಸಿದ್ಧದೇವ ಶಿವಾಚಾರ್ಯರು
ರಾಜಗುರು ಹಿರೇಮಠ,
ಕೆಳದಿ.

ಹುಬ್ಬಳ್ಳಿ.
೨-೩-೧೯೭೪



॥ ಶ್ರೀಗುರು ಬಸವಲಿಂಗಾಯನಮಃ ॥

# -ಃ ಕವಿ-ವಾಣಿ ಃ-

## "ನಾಽನೃಷಿಃ ಕುರುತೇ ಕಾವ್ಯಂ"

(ಋಷಿಯಲ್ಲದವನು, ಕಾವ್ಯವನ್ನು ರಚಿಸಲಾರನು)

ಎಂಬ ಉಕ್ತಿಯನ್ನು ಸ್ಮರಿಸಿಕೊಂಡರೆ ಒಂದು ರೀತಿಯಿಂದ ನಾನೂ ಸಹ ಕವಿಯೇ ಅಲ್ಲವೆಂದು ನಿರ್ವಂಚನೆಯಿಂದ ಒಪ್ಪಿಕೊಳ್ಳಬೇಕಾಗುವುದು ಏಕೆಂದರೆ ಮಹಾಕವಿ ಕಾಳಿದಾಸನೇ, ತನ್ನ ರಘುವಂಶ ಮಹಾಕಾವ್ಯದಲ್ಲಿ

"ಮಂದಃ ಕವಿಯಶಃ ಪ್ರಾರ್ಥೀಗಮಿಷ್ಯಾಮ್ಯುಪಹಾಸ್ಯತಾಂ"

ಅಂದರೆ, ಎತ್ತರವಾಗಿ ಬೆಳೆದ ಮನುಷ್ಯನು ಸಹಜವಾಗಿ ಪಡೆಯಬಹುದಾದ ಹಣ್ಣನ್ನು ತಾನೂ ಪಡೆಯಬೇಕೆಂದ, ಗಿಡ್ಡನು ತನಗೆ ನಿಲುಕಲಾರದ್ದಕ್ಕಾಗಿ ಕೈಯೆತ್ತಿ ಜಿಗಿದಾಡಿ ಪ್ರಯತ್ನ ಪಡುವಾಗ ಅವನನ್ನು ನೋಡಿ ಜನರು ನಗುವಂತೆ, ಕವಿಯಾಗುವ ಕೀರ್ತಿಯನ್ನು ಪಡೆಯಬೇಕೆಂಬ ತಾನೂ (ಕಾಳಿದಾಸನೂ) ಆ ಗಿಡ್ಡನಂತೆ ಅಪಹಾಸ್ಯಕ್ಕೆ ಗುರಿಯಾಗುತ್ತಿರಬಹುದೇನೊ ? ಎಂದು ಆ ಮಹಾನ್‌ಕವಿ ಕಾಳಿದಾಸನೆ ಅಂದಿದ್ದಾನೆಂದ ಮೇಲೆ. ನಮ್ಮಂಥವರ ಗತಿಯೇನು ? ಈ ವಿಷಾದೋಕ್ತಿಗೆ ಗುರುಕೃಪೆಯನ್ನು ಪಡೆಯಬೇಕೆಂಬುದೆ ಶಾಂತಿ' ಋಷಿಗಳಾದವರೂ ಕೂಡಾ ಗುರುಕೃಪೆಯನ್ನು ಪಡೆದವನು ಋಷಿಯಾಗುತ್ತಾನೆ; ಋಷಿಯಾದವನು ಕವಿಯಾಗುತ್ತಾನೆ; ಕಾವ್ಯವನ್ನು ರಚಿಸುತ್ತಾನೆ. ರಾಮಾಯಣದ ಕರ್ತೃವಾದ ವಾಲ್ಮೀಕಿ ಋಷಿಯು ಮೊದಲು ಬೇಡನಾಗಿದ್ದವನು ಸಪ್ತರ್ಷಿಗಳ ಕೃಪೆಯನ್ನು ಪಡೆದು ಮಹರ್ಷಿಯಾಗಿ ನಂತರ ಕವಿಯಾದನು ಹಾಗೆಯೆ

ಗುರುವರ್ಯರಾದ ಲಿಂ॥ ಪಂ॥ ಪಂಚಾಕ್ಷರ ಗವಾಯಿಗಳ ಆಶೀರ್ವಾದದಿಂದ ಅಲ್ಪ ಸ್ವಲ್ಪ ಸಂಸ್ಕೃತ, ಕನ್ನಡ, ಹಿಂದಿ ಭಾಷೆಗಳ ಸಾಹಿತ್ಯವನ್ನು ಯಕ್ಷಗಾನ



ಕವಿಚಕ್ರವರ್ತಿ ಡಾ|| ಪಂ|| ಪುಟ್ಟರಾಜ ಕವಿ-ಗವಾಯಿಗಳವರು
ವೀರೇಶ್ವರ-ಪುಣ್ಯಾಶ್ರಮ
ಗದಗ.

ಅಭ್ಯಾಸ ಮಾಡಿಕೊಂಡು, ಪರಮಗುರು ಲಿಂ|| ಶ್ರೀಮನ್ನಿರಂಜನ, ಪ್ರಣವಸ್ವರೂಪಿ, ಹಾನಗಲ್ ಕುಮಾರಸ್ವಾಮಿಗಳವರ ಕೃಪೆಯಿಂದ ಮೂರು ಭಾಷೆಗಳಲ್ಲಿಯೂ ನಾನು ಕಾವ್ಯಗಳನ್ನು ರಚಿಸಿದ್ದೆನೆಂದರೆ, ಯಾರೂ ಏನೂ ಆಶ್ಚರ್ಯಪಡಬೇಕಾದ ಮಾತಿಲ್ಲ.

"ಮೂಕಂ ಕರೋತಿ ವಾಚಾಲಂ, ಪಂಗುಂ ಲಂಘಯತೇ ಗಿರಿಂ ॥

ಯತ್-ಕೃಪಾ ತಮಹಂ ವಂದೇ ವಿಶ್ವಾರಾಧ್ಯಂ ಜಗದ್ಗುರುಂ || "

ಎಂಬ ಆರ್ಯೋಕ್ತಿಯಂತೆ ಕಣ್ಣಿಲ್ಲದವನಾದ ನಾನು ಗುರುಕೃಪೆಯನ್ನು ಪಡೆದು, ಕಾವ್ಯಗಳನ್ನು ರಚಿಸುವದರಲ್ಲಿ ವಿಶೇಷವೇನಿದೆ ? ಆದರೂ ಈ ಮಹಾ ಪುರಾಣ–ರಚನೆಯ ಕಾಲಕ್ಕೆ ನನಗೆ ಮೊದಲು ಸ್ವಲ್ಪ ಭಯವಾದಂತಾಯ್ತು, ಏಕೆಂದರೆ ಪ್ರಸ್ತುತ ಹುಬ್ಬಳ್ಳಿ ಮೂರುಸಾವಿರಮಠದ "ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ" ಪುರಾಣವನ್ನು ರಚಿಸುವ ಮಹಾ ಭಾರವನ್ನು ನನಗೆ ಹೊರಿಸಿದ್ದೆ ಕಾರಣವಾಯಿತು. ಆದರೂ ಇವರ ಸಿದ್ಧ ಹಸ್ತದಿಂದ ದೊರೆತ ''ಗುರುಸಿದ್ಧೇಶ್ವರ ಲೀಲಾಮೃತ'' ಹಾಗೂ ಇತರ ಸಾಹಿತ್ಯ ದೊರೆತು ಅಲ್ಲದೆ, ಕರ್ತೃವಿನ ಯೋಗ ಸಮಾಧಿಯ ದರ್ಶನವು ಮಹಾಕಾವ್ಯವನ್ನು ರಚಿಸಲು ಸ್ಫೂರ್ತಿ ನೀಡಿದವು. ಈ ಸ್ಫೂರ್ತಿಯಿಂದಲೇ ಕಾವ್ಯವನ್ನು ಗುರುಸ್ಮರಣೆಯಿಂದ ಆರಂಭಿಸಿ ಸಂಪೂರ್ಣಗೊಳಿಸಿದೆನು; ಜಗದ್ಗುರು ಸನ್ನಿಧಾನಕ್ಕೆ ಅರ್ಪಿಸಿದಾಗ ಅದನ್ನು ಅದನ್ನು ಅವಲೋಕಿಸಿ ಸಂತೋಷ ವ್ಯಕ್ತಪಡಿಸಿದರು, ನನಗೂ ಆನಂದವಾಯಿತು.

|| ಆಪರಿತೊಷಾದ್ವಿದುಷಾಂ ನ ಸಾಧು ಮನ್ಯೇ ಪ್ರಯೋಗವಿಜ್ಞಾನಂ ॥

ಅಂದರೆ ಜ್ಞಾನಿಗಳ ಸಂತೋಷವಾಗುವವರೆಗೂ ಆ ಪ್ರಯೋಗ ವಿಜ್ಞಾನವು ಆ ಕವಿಗೆ ಸಂತಸವನ್ನುಂಟು ಮಾಡುವದಿಲ್ಲವಂತೆ, ಇದು ಸರ್ವರಿಗೂ ವಿದಿತವಾದ ವಿಷಯವೇ ಆಗಿದೆ ಶ್ರೀ ಜಗದ್ಗುರು ಸನ್ನಿಧಿಯವರ ಅಪ್ಪಣೆಯ ಪ್ರಕಾರ ಸತತ ಒಂದು ತಿಂಗಳವರೆಗೆ, ಹುಬ್ಬಳ್ಳಿಯ ಶ್ರೀ ಮಠದಲ್ಲಿಯೇ "ಕರ್ತೃವಿನ ಪುರಾಣ ಪ್ರವಚನ ಕಾರ್ಯಕ್ರಮ''ವು ನಡೆದು ಹುಬ್ಬಳ್ಳಿಯ ಸದ್ಭಕ್ತರೂ ಹಾಗೂ ಸುತ್ತ–ಮುತ್ತಲಿನ ಹಳ್ಳಿಯ ನಾಗರಿಕರೂ ಕೇಳಿ ಸಂತೋಷವನ್ನು ಸೂಚಿಸಿದರೆಂದು ಹೇಳಲು, ಅತ್ಯಂತ ಆನಂದವೆನಿಸುತ್ತದೆ.

ಈ ಕಾವ್ಯ-ರಚನೆಯನ್ನು ಪಂಡಿತ ಶ್ರೇಷ್ಠರಾದ ''ಪೂರ್ಣತ್ವಕೃತಿಕಾರ'' ಡಾ|| ಗುರುಸಿದ್ಧದೇವ ಶಿವಾಚಾರ್ಯಸ್ವಾಮಿಗಳು ಎಂ.ಎ.ಪಿ.ಎಚ್.ಡಿ. ಕೇಳದಿ

ರಾಜಗುರು ಹಿರೇಮಠ, ಇವರು ಕೂಡಾ ಇದನ್ನು ಓದಿ ವಿಮರ್ಶಿಸಿ ಮುನ್ನುಡಿ-ಯನ್ನು ನೀಡಿರುವದು ನನಗೆ ಹೆಚ್ಚಿನ ಆನಂದವನ್ನುಂಟುಮಾಡಿದೆ.

॥ಬಲವದಪಿ ಶಿಕ್ಷಿತಾನಾಮಾತ್ಮನ್ಯೇವ ಪ್ರತ್ಯಯಂ ಚೇತಃ ॥

ಎಂದು ಕಾಳಿದಾಸನೆ ನುಡಿದಿರುವಾಗ ಅಸಹಾಯಕನಾದ ನಾನು ಇದಕ್ಕೆ ಒಪ್ಪಲಾರೆ, ಆದರೂ ಶ್ರೀ ಜಗದ್ಗುರು ಸನ್ನಿಧಿಯವರ ಅಂತಃಕರುಣ ನನ್ನ ಸಂತೋಷಕ್ಕೆ ಆಧಾರವಾಗಿದೆ.

ಕಣ್ಣಿಲ್ಲದವನಾದ ನಾನು ಹೇಳಿದಂತೆ ಬರೆಯುವವರ ಅವಶ್ಯಕತೆ ನನಗೆ ಇದ್ದೆ ಇರುತ್ತದೆ ಆ ಅವಶ್ಯಕತೆಯನ್ನು ಪೂರ್ತಿ ಮಾಡಲು. ಈ ಪುರಾಣವು ಸಂಪೂರ್ಣ ಆಗುವವರೆಗೂ ಹೇಳಿದಂತೆ ಬರೆದು ಸೇವೆ ಸಲ್ಲಿಸಿದ ನನ್ನ ಶಿಷ್ಯ : ಶಿವರಾಜ ಶಾಸ್ತ್ರಿ ರಾಮಪೂರ, ಇವನಿಗೂ ಕರ್ತೃ ಶ್ರೀ ಗುರುಸಿದ್ಧೇಶ್ವರನು ಆಯುರಾರೋಗ್ಯ ಭಾಗ್ಯ ವನ್ನು ನೀಡಲೆಂದು ಆಶಿಸಿ, ನಾವು ತಿಳಿಸಿದಾಕ್ಷಣವೇ ಈ ಪುರಾಣಕ್ಕೆ ಭಾವಪರಿಮಳ ವನ್ನು ರಚಿಸಿಕೊಟ್ಟ ನಮ್ಮ ಪುಣ್ಯಾಶ್ರಮದ ಶಿಷ್ಯನಾದ "ಸಿದ್ಧವೀರ ಕವಿ"ಯು ಕೂಡಾ ನನ್ನ ಸಂತೋಷಕ್ಕೆ ಪಾತ್ರನಾಗಿದ್ದಾನೆ. ಈ ಪುರಾಣವನ್ನು ರಚಿಸಿ ಪ್ರಕಟಿಸಲು ಸಹಾಯಕರಾದ ಎಲ್ಲರಿಗೂ ಆಯುರಾರೋಗ್ಯ ಭಾಗ್ಯವನ್ನು "ಕರ್ತೃಶ್ರೀ ಗುರು-ಸಿದ್ಧೇಶ್ವರ"ನು ಕರುಣಿಸಲೆಂದು ಹಾರೈಸಲಾಗಿದೆ.

ಹುಬ್ಬಳ್ಳಿ
೨೧-೨-೧೯೭೯.

ಡಾ. ಪುಟ್ಟರಾಜಕವಿ





ವೀರಶೈವ ಸಂಘಟನಾ ಸಮಿತಿಯ ಅಧ್ಯಕ್ಷರೂ ಸುಪ್ರಸಿದ್ಧ
ವರ್ತಕರೂ ಆದ ಶ್ರೀ ಎಸ್. ಜಿ. ಕವಳಿ ಹುಬ್ಬಳ್ಳಿ ಇವರು
ಕತೃ ಜಗದ್ಗುರು ಗುರುಸಿದ್ಧೇಶ್ವರ ಪುರಾಣ ಪ್ರಕಟನೆಗೆ
ಸೇವೆ ಸಲ್ಲಿಸಿದ್ದಾರೆ.

# ಪ್ರಕಾಶಕರ ನುಡಿ

ನೂರಾರು ವರ್ಷಗಳ ಹಿಂದೆಯೇ ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಪುರಾಣವು ಕನ್ನಡಿಗರ ಕೈಗೆ ಸಿಗಬೇಕಾಗಿತ್ತು. ಅದು ಈಗ ಗದುಗಿನ ವೀರೇಶ್ವರ ಪುಣ್ಯಾಶ್ರಮದ ಡಾ. ಪುಟ್ಟರಾಜ ಕವಿಗಳಿಂದ ವಿರಚಿತವಾಗಿ ಮೂರುಸಾವಿರ ಮಠದ ಎಲ್ಲ ಸದ್ಭಕ್ತರಿಗೆ ದೊರೆತಿದ್ದು ಪರಮ ಸಂತೋಷವಾಗಿದೆ. ಪುರಾಣವು ಜ್ಞಾನ ಪ್ರಸಾರ ಮಾಡಲು ದೊಡ್ಡ ಸಾಧನವಾಗಿದೆ. ಜನಸಾಮಾನ್ಯರನ್ನು ಧರ್ಮ ಸಂಸ್ಕೃತಿಯತ್ತ ಕರೆದೊಯ್ಯಲು ಸುಲಭೋಪಾಯವಾಗಿದೆ. ಅಂತೆಯೇ ಮಠ ಪೀಠಗಳಲ್ಲಿ ಪುರಾಣ ಹಚ್ಚಿಸಿ ಧರ್ಮ ಬೋಧೆ ಮಾಡುತ್ತಿರುವದು ಸುತ್ತೆಲ್ಲ ಕಾಣುತ್ತೇವೆ. ಸರ್ವಾಂಗ ಸುಂದರವಾಗಿ ಬರೆದುಕೊಟ್ಟ ಡಾ. ಪುಟ್ಟರಾಜ ಗವಾಯಿಗಳನ್ನು ಎಷ್ಟು ಹೊಗಳಿದರೂ ಕಡಿಮೆಯೆ !

ಪೂಜ್ಯ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಪುರಾಣ ಬಹಳ ಪರಿಶ್ರಮವಹಿಸಿ, ಡಾ. ಪುಟ್ಟ ರಾಜ ಕವಿಗಳಿಂದ ಬರೆಯಿಸಿ, ನಾಡಿಗೆ ಮಹದುಪಕಾರ ಮಾಡಿದ್ದಾರೆ. ಇದರ ಸದುಪಯೋಗವನ್ನು ನಾಡಿಗರು ತೆಗೆದುಕೊಂಡರೆ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳದವರು ಪ್ರಕಟನೆಗಾಗಿ ಪರಿಶ್ರಮಿಸಿದ್ದು ಹಾಗೂ ಡಾ. ಪುಟ್ಟ ರಾಜ ಕವಿಗಳ ಶ್ರಮವು ಸಾರ್ಥಕವಾಗುತ್ತದೆ. ಈ ಗ್ರಂಥಕ್ಕೆ ಸುಂದರ, ಹಾಗು ಪಾಂಡಿತ್ಯಪೂರ್ಣ ಮುನ್ನುಡಿ ಬರೆದುಕೊಟ್ಟವರು ಡಾ. ಗುರುಸಿದ್ಧ ಶಿವಾಚಾರ್ಯ ಸ್ವಾಮಿಗಳು ಕೆಳದಿ ರಾಜುಗುರು ಹಿರೇಮಠ ಅವರು. ಅವರು ಸಂಸ್ಕೃತಿಯನ್ನು ಸಂಗಳಿಸಿ, ದರ್ಶನ ಚಕ್ರವರ್ತಿ ಪದವಿ ಪಡೆದವರು ಸುಸ್ವಭಾವದವರು. ಇತ್ತಿತ್ತ ಸಹಸ್ರ ಸಹಸ್ರ ಜನರಿಗೆ ಲಿಂಗಧಾರಣೆ ಮಾಡಿ ಜನರಲ್ಲಿ ಸಂಸ್ಕೃತಿಯನ್ನೂ ತಿಳಿದ ವರು ಅವರು ನಮ್ಮ ಬೇಡಿಕೆಯಂತೆ ಮುನ್ನುಡಿ ಬರೆದುಕೊಟ್ಟದ್ದಕ್ಕೆ ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳು. ಈ ಗ್ರಂಥವು ಮುದ್ರಣಕ್ಕೆ ಅನುಕೂಲವಾಗುವಂತೆ ಸುಂದರವಾಗಿ ಬರೆದುಕೊಟ್ಟ, ಡಾ. ಪುಟ್ಟ ರಾಜಕವಿಗಳ ಶಿಷ್ಯರಾದ ಶಿವರಾಜ ಶಾಸ್ತ್ರಿಗಳನ್ನು ಮರೆತರೆ ತಪ್ಪಾದೀತು. ಅವರು ತುಂಬ ಪ್ರಯತ್ನಶೀಲರು ಅಷ್ಟೇ ಅಲ್ಲದೆ ಕರ್ತವ್ಯನಿಷ್ಠೆಯುಳ್ಳವರು. ಪುರಾಣ ಪ್ರವಚನದಲ್ಲಿ ಬಲ್ಲಿದವರು, ಸೇವಾ

ಮನೋವೃತ್ತಿಯುಳ್ಳವರು. ಇಂಥವರಿಂದ ಧರ್ಮ ಜಾಗೃತಿಯಾಗಬಹುದೆಂಬ ಆಶೆಯಿಂದಲೇ ಡಾ. ಪುಟ್ಟರಾಜ ಕವಿಗಳು ಒಳ್ಳೇ ರೀತಿ ಅಧ್ಯಯನ ನಡೆಸಿದ್ದಾರೆ. ಈ ಗ್ರಂಥವು ಪೂರ್ಣ ಅಚ್ಚಾಗುವವರೆಗೂ ಪ್ರೂಫು ನೋಡಿ, ಡಾ. ಗುರುಸಿದ್ಧ ಶಿವಾಚಾರ್ಯರಿಂದ ಸಲಹೆ ತೆಗೆದುಕೊಂಡು ತೀವ್ರಗತಿಯಿಂದ ಮಾಡಿದ್ದಕ್ಕಾಗಿಯೇ ಈ ಪುರಾಣವು ಹೊರ ಬರಲು ಅನುಕೂಲವಾಯ್ತು. ಸತತ ಪರಿಶ್ರಮಿಗಳಾದ ಶಿವರಾಜ ಶಾಸ್ತ್ರಿಗಳಿಗೆ ಒಳ್ಳೇ ಭವಿಷ್ಯವಿದೆ. ಅವರಿಗೂ ಹಾರ್ದಿಕ ಕೃತಜ್ಞತೆಗಳು.

ಈ ಪುರಾಣವು ಇಷ್ಟು ಬೇಗ ಹೊರಗೆ ಬರಬೇಕಾದರೆ ಆರ್ಥಿಕ ನೆರವಿಲ್ಲದೇ ಸಾಧ್ಯವಾಗಲಾರದು. ಈ ಕಾರ್ಯವನ್ನು ಶ್ರೀ ವ್ಹಿ. ವ್ಹಿ. ಶಿರಹಟ್ಟಿಮಠ ವಕೀಲರು, ಹುಬ್ಬಳ್ಳಿ ಸುಪ್ರಸಿದ್ಧ ವ್ಯಾಪಾರಸ್ಥರಾದ ಶ್ರೀ ಎಸ್. ಜಿ. ಕವಳಿಯವರಿಗೆ ಹೇಳಿ ಅವರಿಂದ ಆರ್ಥಿಕ ಸಹಾಯವನ್ನು ಒದಗಿಸಿ ಕೊಟ್ಟದ್ದಕ್ಕಾಗಿ, ಸುಂದರ ಪುರಾಣ ವನ್ನು ನೋಡಲು ಪ್ರಾಪ್ತವಾಯ್ತು ಶಿರಹಟ್ಟಿಮಠ ವಕೀಲರು, ವಕೀಲ ವೃತ್ತಿ ಯಲ್ಲಿದ್ದರೂ, ಒಳ್ಳೇ ಸ್ವಭಾವದವರು, ಧರ್ಮ ಕಾರ್ಯ ಮಾಡಲು ಹುರುಪು ಹುಮ್ಮಸ್ಸು ಉಳ್ಳವರು. ನಿಷ್ಠೆಯಿಂದ ಕಾರ್ಯ ಮಾಡತಕ್ಕವರು. ಸಮಾಜ ಸೇವೆಯನ್ನು ಮಾಡಿ ಜನಪ್ರಿಯರಾಗಿದ್ದಾರೆ. ಅವರಿಗೆ ನಮ್ಮ ಹಾರ್ದಿಕ ಅಭಿನಂದನೆಗಳು.

ವೀರಶೈವ ಸಂಘಟನಾ ಸಮಿತಿಯ ಅಧ್ಯಕ್ಷರಾದ ಶ್ರೀಯುತ ಎಸ್. ಜಿ. ಕವಳಿ ಯವರು ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಪುರಾಣ ಪ್ರಕಟನೆಗೆ ಮುಂದಾಗಿ, ಸಹಾಯ ನೀಡದಿದ್ದರೆ ಈ ಪುರಾಣವು ಹೊರಬರಲು ಇನ್ನೂ ಸಮಯ ಬೇಕಾಗು ತ್ತಿತ್ತು. ಇವರ ಸಹಾಯ ಒಳ್ಳೇ ಸಮಯಕ್ಕೆ ಆಗಿ, ಜೆ. ಜಿ. ಧರ್ಮಪ್ರಚಾರ ಮಂಡಳಕ್ಕೆ ಶಕ್ತಿ ಬಂದಂತಾಗಿದೆ. ಶ್ರೀಮಾನ್ ಕವಳಿಯವರು ಧಾರ್ಮಿಕ ಪ್ರವೃತ್ತಿಯವರು, ಸಮಾಜ ಸೇವೆ ಎಂದರೆ ಒಳ್ಳೇ ಪ್ರೇಮ. ಇವರಲ್ಲಿರುವ ಸಮಾಜಾಭಿಮಾನವನ್ನು ಮೆಚ್ಚತಕ್ಕದ್ದಾಗಿದೆ. ಹುಬ್ಬಳ್ಳಿಯ ಸುಪ್ರಸಿದ್ಧ ವರ್ತಕ ರಾಗಿದ್ದು, ದಾನ ಧರ್ಮಗಳನ್ನು ಹಲವು ರೀತಿಯಲ್ಲಿ ಮಾಡಿ ಜನಪ್ರೀಯರಾಗಿ ದ್ದಾರೆ. ಇತ್ತಿತ್ತಲಾಗಿ ಕ್ಯಾನ್ಸರ್ ಹಾಸ್ಪಿಟಲ್, ಮೂರುಸಾವಿರಮಠದ ಮಹಿಳಾ ಕಾಲೇಜು ಶ್ರೀಶೈಲದಲ್ಲಿ ವಸತಿ ಗೃಹ, ಮುರುಘಾಮಠದಲ್ಲಿ ವಸತಿ ಗೃಹ, ಎಡೆ ಯೂರು ಸಿದ್ಧಲಿಂಗೇಶ್ವರ ಕ್ಷೇತ್ರದ ಮಹಾದ್ವಾರ ಹಾಗೂ ಅನೇಕ ವಿದ್ಯಾರ್ಥಿ ಗಳಿಗೆ ವಿದ್ಯಾರ್ಥಿ ವೇತನ ಮುಂತಾದ ರೀತಿಯಲ್ಲಿ ದಾನ ನೀಡಿ, ಖ್ಯಾತಿ ಗಳಿಸಿ ದ್ದಾರೆ. ಇನ್ನೂ ಅವರದು ಸಮಾಜಕ್ಕಾಗಿ, ಕಲ್ಯಾಣಮಂಟಪ, ಬ್ಯಾಂಕು ಮಾಡ ಬೇಕೆಂದು ಬಹಳ ಹಂಬಲವುಳ್ಳವರಿದ್ದಾರೆ. ಅದಕ್ಕಾಗಿ ಪ್ರಯತ್ನವನ್ನೂ ಮಾಡು ತ್ತಲಿದ್ದಾರೆ. ಅವರ ಸಾಹಸ ಸ್ತುತ್ಯವಾದುದು. ಸಮಾಜಾಭಿಮಾನಿಗಳಾದ

ಶ್ರೀ ಎಸ್. ಜಿ. ಕವಳಿಯವರಿಗೆ ಕರ್ತೃ ಜಗದ್ಗುರು ಗುರುಸಿದ್ಧೇಶ್ವರನು ಆಯುರಾರೋಗ್ಯ ಭಾಗ್ಯ ಸಂಪತ್ತನ್ನು ನೀಡಿ ಅವರನ್ನು ಆಶೀರ್ವದಿಸಲೆಂದು ಪ್ರಾರ್ಥಿಸುತ್ತೇವೆ. ಈ ಗ್ರಂಥ ಬರೆಯಲು ಸಹಕಾರ ನೀಡಿದ ವೀರೇಶ್ವರ ಪುಣ್ಯಾಶ್ರಮದ ಮ್ಯಾನೇಜರರಾದ ಚನ್ನವೀರ ಶಾಸ್ತ್ರಿಗಳು ಹಿಡ್ಕಿಮಠ ಅವರಿಗೂ ಅಭಿವಂದನೆಗಳು. ಈ ಗ್ರಂಥವನ್ನು ವೇಳೆಗೆ ಸರಿಯಾಗಿ ಬರಲು ಶ್ರೀ ಮೂರುಸಾವಿರ ಮಠದ ಸದ್ಭಕ್ತರೂ, ಒಳ್ಳೇ ಕಾರ್ಯಕರ್ತರೂ ಆದ ಶ್ರೀಮಾನ್ ಎಂ. ಎಸ್. ವಿರಕ್ತಮಠ ಅವರೂ ಒಬ್ಬರು. ಅವರು ಭಕ್ತಿಪೂರಸ್ಸರವಾಗಿ ತಮ್ಮ ಮನೋಹರ ಪಬ್ಲಿಕೇಶನ್ಸ ಆ್ಯಂಡ ಪ್ರಿಂಟರಿಯಲ್ಲಿ ಸಕಾಲಕ್ಕೆ ಮುದ್ರಿಸಿ ಕೊಟ್ಟು ಅನುಕೂಲ ಮಾಡಿ ಕೊಟ್ಟಿದ್ದಾರೆ. ಅವರಿಗೆ ಕರ್ತೃ ಜಗದ್ಗುರು ಗುರುಸಿದ್ಧೇಶ್ವರನು ಆಯುರಾರೋಗ್ಯ ಭಾಗ್ಯವನ್ನು ನೀಡಲಿ. ಅವರಿಗೆ ನಮ್ಮ ಹಾರ್ದಿಕ ಶುಭಾಶಯಗಳು.

೨೨-೨-೧೯೭೫ ಪ್ರಕಾಶಕರು
ಹುಬ್ಬಳ್ಳಿ ಜಿ. ಜಿ. ಧರ್ಮಪ್ರಚಾರಕ ಮಂಡಳ



|| ಶ್ರೀ ಗುರು ಬಸವಲಿಂಗಾಯ ನಮಃ ||

## -: ವಿಷಯಾನುಕ್ರಮಣಿಕೆ :-

— ಸಂಪೂರ್ಣಂ —

॥ ಶ್ರೀ ಗುರು ಬಸವಲಿಂಗಾಯ ನಮಃ ॥









ಕವಿ ಚಕ್ರವರ್ತಿ ಡಾ. ಪುಟ್ಟರಾಜ ಕವಿ–ಕೃತ

ಹುಬ್ಬಳ್ಳಿ ಮೂರುಸಾವಿರಮಠದ

# ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪುರಾಣದ

# ಭಾವ-ಪರಿಮಳ

ಗದ್ಯಕ್ಕೆ ಅಳವಡಿಸಿದವರು

ಶ್ರೀ ಸಿದ್ಧವೀರ ಶರ್ಮಾ ಸೊಕ್ಕೆ

ವೀರೇಶ್ವರ–ಪುಣ್ಯಾಶ್ರಮ, ಗದಗ

# ಮಂಗಲಾಚರಣ-ಸಂಧಿ

**ಗುರು-ಸ್ತುತಿ :**

ಅಲೌಕಿಕ ಸಂಪತ್ತಿನಿಂದ ಕೂಡಿದ ಗುರುಗಳಲ್ಲಿ ಶ್ರೇಷ್ಠನಾದವನು, ರಾಜ ಸ್ವರೂಪವಾದವನು, ಶ್ರೇಷ್ಠರ ಹೃದಯದಲ್ಲಿ ವಾಸವಾಗಿರುವವನು, ವಿರತಿಯನ್ನು ಪಡೆದವರಲ್ಲಿ ತಿಲಕಸ್ವರೂಪನು, ಧಾರಾಕಾಶದಲ್ಲಿ ರಮಿಸುವವನು, ಶಿವಪ್ರೇಮಿಯು ಶಿವಪಾದ ಕಮಲದಲ್ಲಿ ರಮಿಸುವವನು, ಯೋಗ ಕರ್ಮದಲ್ಲಿ ವಿನೋದಿಸುವವನು ಧರ್ಮದಿಂದ ಬಾಳುವವನು, ಭೋಗದಾಸೆಗಳನ್ನು ತೊರೆದಿರುವವನು; ಮೋಕ್ಷಕ್ಕೆ ಆಧಾರಸ್ವರೂಪನು; ಆದಂತಹ ಗುರುಸಿದ್ಧನೆ ಈ ಭವವನ್ನು ನೀಗಿಸು ನಿನಗೆ ವಂದಿಸುವೆನು

**ಶಿವ-ಸ್ತುತಿ :**

ಕೈಲಾಸ ವಾಸವನ್ನು; ಗೌರಿಯ ವಿಲಾಸವನ್ನು ಲೀಲೆಯನ್ನೂ ಗೈಯ್ಯುವ ಶ್ರಮವನ್ನು ಪಂಚಮುಖಗಳನ್ನು ತೊರೆದು ಶಿವನೆ ಗುರುಸಿದ್ಧನಾಗಿ ಬಂದು ಭೂಮಿಯಲ್ಲಿ ಆ ಲಿಂಗವನ್ನು ಹಿಡಿದು ಪೂಜಾನುಷ್ಠಾನಗಳಿಂದ ಹುಬ್ಬಳ್ಳಿಯನ್ನು ಕೈಲಾಸವೆನಿಸಿದ, ನರರೂಪವನ್ನು ತಾಳಿ ಜನರನ್ನು ಪೊರೆದ ಗುರುಸಿದ್ಧನೆ ಕಾಪಾಡು.

**ಶಕ್ತಿ-ಸ್ತುತಿ :**

ಗಿರಿಜೆ; ಗೌರಿ; ಉಮೆ; ಎಂಬ ಹೆಸರುಗಳನ್ನು ಬಿಟ್ಟು ಆದಿ ಶಕ್ತಿಯೆನಿಸಿ ಲಿಂಗವನ್ನು ಸೇರಿ ಶ್ರೇಷ್ಠವಾದ ಚೇತನಕ್ಕೆ "ಗುರುಸಿದ್ಧ"ನೆಂಬ ಹೆಸರನ್ನು; ಚರನ ರೂಪವನ್ನು ಕೊಟ್ಟು ಅವನಲ್ಲಿ ನೀನಿದ್ದು ಭಕ್ತರಿಂದ ಪೂಜೆಗೊಳ್ಳುತ್ತಿರುವ ನೀನು ಈ ಮೂರುಸಾವಿರಮಠದ ಪುರಾಣವನ್ನು ಬರೆಯಿಸಿ ನನ್ನನ್ನು ಕಾಪಾಡು ಎಂದು ದೇವಿ ಸ್ತೋತ್ರ ಮಾಡಿದ್ದಾರೆ.

**ಲಿಂಗ-ಸ್ತುತಿ :**

ಜಗತ್ತು ಯಾವುದರಿಂದ ಹುಟ್ಟಿ ಪ್ರಸಿದ್ಧವಾಗಿರುವದೊ ಯಾವುದರಿಂದ ರಕ್ಷಣೆಯನ್ನು ಹೊಂದಿರುವದೊ;

ಯಾವುದರಲ್ಲಿ ಅಡಗುವದೊ, ಅದಕ್ಕೆ ಬ್ರಹ್ಮವೆಂದು ಲಿಂಗವೆಂದು ಹೆಸರು ಇದೆ ಲಿಂಗವೆ ಪೂರ್ವದಲ್ಲಿ ಜೋತಿರ್ ಲಿಂಗಗಳಾಗಿ ಮುಂದೆ ಸ್ತ್ರೀಲಿಂಗ, ಪುಲ್ಲಿಂಗ, ನಪುಂಸಕಲಿಂಗಗಳೆನಿಸಿಕೊಂಡು ವೀರಶೈವ ಮತಕ್ಕೆ ಇಷ್ಟ; ಪ್ರಾಣ. ಭಾವ, ಲಿಂಗಗಳೆನಿಸಿಕೊಂಡಿರುವದು ಈ ಲಿಂಗವು ನನ್ನನ್ನು ಕಾಪಾಡಲಿ:

**ಜಂಗಮ-ಸ್ತುತಿ :**

ಏಳು ಲೋಕದ ಜನರಿಗೂ ಆಧಾರವಾದ ಗುಪ್ತವಾಗಿರುವ; ಅನಂತ ಬ್ರಹ್ಮಾಂಡಗಳಿಗೆ ಆಶ್ರಯವಾದ; ಒದಗಿರುವ ಸರ್ವ ಚಿಚ್ಛ ಜಂಗಮದ ರೀತಿ

ಯನ್ನು ಪ್ರಸಿದ್ಧಿ ಹೊಂದಿರುವ ವೇದಗಳು ಹೀಗೆ ವರ್ಣಿಸುವವು ಆನಂದಮಯ ನಾದ; ಅಲ್ಲಮನಂತೆ ರೂಪವನ್ನು ಹೊಂದಿದ ಗುರುಸಿದ್ಧ ಜಂಗಮಗೆ ಶರಣೆನ್ನುವೆ.

**ಪ್ರಮಥ ಪುರಾತನರ ಶರಣರ ಸ್ತೋತ್ರ:**

ಪೂಜ್ಯರನ್ನು; ಪ್ರಮಥರನ್ನು, ಆಚಾರ್ಯರನ್ನು; ಶರಣ–ಮಾರ್ಗದ ಶ್ರೇಷ್ಠರನ್ನು ಶಿವ ಧರ್ಮ ಕಾರ್ಯದಲ್ಲಿ ಸಿರತರಾದವರನ್ನು.

ಶ್ರೇಷ್ಠವರ್ತನದಲ್ಲಿರುವವರನ್ನು, ಸದ್ಗುಣಿಗಳನ್ನು ಶೂರರನ್ನು ಭವಸಾಗರ ದಾಟಿದವರನ್ನು, ಹೃದಯ ಕಮಲವನ್ನು ಅರಳಿಸುವವರನ್ನು' ಸಾಮರಸ್ಯ ಹೊಂದಿ-ದವರನ್ನು; ಷಡ್ವೈರಿಗಳ ನಾಶಕರನ್ನು; ಇವರೆಲ್ಲರಿಗೆ ನಮಸ್ಕರಿಸಿ, ಕಾಪಾಡಿ-ರೆಂದು ಬೇಡುವೆ.

**ಪ್ರಸ್ತುತ ಜಗದ್ಗುರುಗಳ ಸ್ತೋತ್ರ :**

"ಕರ್ತೃ ಶ್ರೀ ಜಗದ್ಗುರು-ಗುರುಸಿದ್ಧೇಶ್ವರ" ರ ಪುರಾಣವನ್ನು ರಚಿಸುವ ಸೇವೆಯನ್ನು ನೇಮಿಸಿದವರು; ಜ್ಞಾನನಿಧಿಗಳು; ಪ್ರಭುಗಳು; ಮೂರೂಸಾವಿರ-ಮಠದ "ಶ್ರೀ ಮನ್ಮಹಾರಾಜ, ನಿರಂಜನ ಜಗದ್ಗುರು ಗಂಗಾಧರ ರಾಜ ಯೋಗೀಂದ್ರ" ಮಹಾಸ್ವಾಮಿಗಳವರ ಸನ್ನಿದಾನಕ್ಕೆ ವಂದನೆಯನ್ನು ಸಲ್ಲಿಸುವೆ.

**ಪರಮ ಗುರುಗಳ ಸ್ತೋತ್ರ :**

ಹಾನಗಲ್ಲ ವಿರಕ್ತಮಠದ ಸುಶೀಲಾತ್ಮರು, ವೀರಶೈವ ಮಹಾಸಭೆಯ ಸಂಸ್ಥಾಪಕರು; ಶಿವಯೋಗ ಮಂದಿರ ಸ್ಥಾಪಕರು, ದಿನಾಂದರ ರಕ್ಷಣೆಯಲ್ಲಿ ತೊಡಗಿದವರು; ಮಹಾದಾನಿಗಳು; ಸತ್ಯಾಭಿಮಾನಿಗಳಾದ, ಶ್ರೀಗುರು ಕುಮಾ-ರೇಶ್ವರರ ಪಾದಕ್ಕೆ ವಂದಿಸುವೆನು.

**ಗುರುಗಳ ಸ್ತೋತ್ರ:**

ಶ್ರೀಗುರು ಕುಮಾರೇಶ್ವರರ ಶಿಷ್ಯರಾಗಿ, ಜನರಿಂದ ಜನ್ಮಾಂಧರೆನಿಸಿಕೊಂಡು ಪ್ರೇಮದಿಂದುಭಯ ಸಂಗೀತವನ್ನು ಕಲಿತು; ಶಿಷ್ಯರಿಗೆ ಕಲಿಸಿ; ಶಿವನವತಾರಿಗಳೆನಿಸಿ ವೀರೇಶ್ವರ ಪುಣ್ಯಾಶ್ರಮವನ್ನು ರಚಿಸಿ; ಯೋಗಿಗಳಲ್ಲಿ ಶ್ರೇಷ್ಠರೆನಿಸಿ ಗದಗ ನಗರ-ದಲ್ಲಿ ನೆಲೆಸಿದ "ಗುರು ಪಂಚಾಕ್ಷರೇಶ್ವರ" ರಿಗೆ ವಂದಿಸುವೆನು.

**ಬಸವೇಶ್ವರ ಸ್ತೋತ್ರ :**

ವೀರಶೈವ ಮತವೆಂಬ ಸಾಗರಕ್ಕೆ ಚಂದ್ರಸ್ವರೂಪನೂ, ಪ್ರಮಥರಿಗೆ ಶಿವ ಶರಣರಿಗೆ ಇಂದ್ರನಾದಂಥವನೂ, ಭಕ್ತಿಯೆಂಬ ಸ್ತ್ರೀಯಳಿಗೆ ಮಾಂಗಲ್ಯ ಸ್ವರೂ-ಪನೂ, ಶಿವಮಂತ್ರ ಸ್ವರೂಪನೂ, ಸತ್ಪುರುಷರಿಗೆ ಭಾಂಢಾರ ಸ್ವರೂಪನೂ, ಬಿಜ್ಜಳನ ದಂಡಾಧೀಶನು ಆದ ಬಸವೇಶ್ವರನು ಸ್ತುತಿಸಿದವರ ಪಾಪವನ್ನು ಕಳೆದು ಪೊರೆಯಲಿ

**ಚನ್ನಬಸವೇಶ್ವರರ ಸ್ತೋತ್ರ :**

ಅಕ್ಕ ನಾಗಮ್ಮನ ಸುತನಾಗಿ ಮೀರಿದ ಷಟ್‌ಸ್ಥಲ ಪದದಲ್ಲಿದ್ದು; ಶರಣ-ರನ್ನು ಹರಿಸಿ ಅರಿಷಡ್ ವರ್ಗಗಳನ್ನು ಜಯಿಸಿ ಯಜ್ಞ ಕೃತಿಗಳನ್ನು ಬಿಡಿಸಿ; ಸೊಲ್ಲಾಪುರದ ಸಿದ್ಧರಾಮೇಶ್ವರನಿಗೆ ಬೇಡಿದುದನ್ನು ಕರುಣಿಸಿ, ಚಿಕ್ಕದಣ್ಣಾ-ಯಕನೆಂಬ ಹೆಸರನ್ನು ಪಡೆದು, ರಾಜಿಸಿ, ಧರಗುದಿಸಿ ಬಂದ ಚನ್ನಬಸವೇಶ್ವ-ರನು ನನ್ನನ್ನು ರಕ್ಷಿಸಲಿ.

**ಆತ್ಮಗರ್ವ-ನಿರಸನ :**

ಹುಟ್ಟು ಕುರುಡನಾದ ಕವಿಯು; ನಿಜವನರಿದವನಲ್ಲ ದಿಟ್ಟತನದಿಂದ ಪುರಾಣವನ್ನು ಬರೆಯುವ ಗೊಡವೆ ಇವನಿಗೇಕೆಂದು; ನಗದಿರಲಿ ಜನತೆ, ನಗುವ ಜನತೆಗೆ ತಟ್ಟನೆ ಈ ರೀತಿ ಉತ್ತರವನ್ನು ಕೊಡುತ್ತೇನೆ. ಪಟ್ಟಾಧಿಕಾರಿಗಳಾದ ಇಂದಿನ ಜಗದ್ಗುರುಗಳ ಕೃಪೆಯಿರಲು; ನಾನೇಕೆ ಹಿಂಜರಿಯಲಿ

ಉರಿಯು ತಾಗಿದ ಕರ್ಪುರವು ಜ್ಯೋತಿಯಾಗುವಂತೆ
ಉರಿಯು ಮುಟ್ಟಿದ ಕಟ್ಟಿಗೆಯು ಕೆಂಡವಾಗುವಂತೆ,
ಉರಿಯು ತಾಗಿದ ಬತ್ತಿಯು, ದೀಪವಾಗುವಂತೆ,

ಕಾಳಿಯ ಕೃಪೆಯಿಂದ ಕುರುಬನು "ಕಾಳಿದಾಸ" ನಾದಂತೆ ಕರ್ತೃ ಗುರುಸಿದ್ಧ ನಪರಾವತಾರಿಯಾದ ಗುರುಸಿದ್ಧಲಿಂಗನ ಕೃಪೆಯಿಂದ ಈ ಕೃತಿಯನ್ನು ಬರೆ-ಯಲು ತೊಡಗಿರುವೆನು, ಇದರಲ್ಲಿ ಆಶ್ಚರ್ಯವೇನಿದೆ ?

**ಅಲ್ಲಮಪ್ರಭು-ಸ್ತೋತ್ರ :**

ರಂಜನ ರಹಿತನೂ; ಕಲಾಸ್ವರೂಪನಾದವನು, ಹೊಗಳಿಸಿಕೊಂಡವನು, ಭಕ್ತರಿಗೆ ಶಂಭುವಾದವನೂ, ಮನ್ಮಥನಾಶಕನೂ, ಸಕಲಕ್ಕೆ ಒಡೆಯನೂ; ಶ್ರೇಷ್ಠವಾದ ಸುಖವನ್ನು ಹೊಂದಿದವನೂ, ಸುಕೃತಶಾಲಿಯಾದವನೂ, ಅಧಿಕ ಸುಖವುಳ್ಳ ವನೂ, ಶರಣಾಗತರನ್ನು ದಕ್ಷಿಸುವ, ಅಲ್ಲಮ ಪ್ರಭುವು ಈ ಕೃತಿಗೆ ಕೃಪೆಯ ನೀಡಲಿ.

**ಕವಿ-ಚರಿತ್ರೆ :**

ಚಿಕ್ಕ ಕವಿಯಾದ ನನಗೆ "ಪುಟ್ಟರಾಜ" ನೆಂಬ ಹೆಸರಿರುವದು, ಸಿದ್ಧಮ್ಮ-ರೇವಣಯ್ಯ, ಎಂಬ ದಂಪತಿಗಳು ನನಗೆ ಜನ್ಮವನ್ನು ಕೊಟ್ಟವರು ಹುಟ್ಟಿದ ಊರು ಹಾನಗಲ್ಲ ಪ್ರಾಂತದ "ಹೊಸಪೇಟೆ" ಬೆಳೆದ ಊರು ಹಾವೇರಿ ಪ್ರಾ-ಂತದ "ದೇವಗಿರಿ" ಈಗ ಇರುವದು "ಗದಗ" ನಗರದಲ್ಲಿ, ಸೋದರಮಾವ-ನಾದ "ಚಂದ್ರಶೇಖರಯ್ಯ" ನು ತನ್ನ ಗುರುಗಳಾದ ಪಂ|| ಪಂಚಾಕ್ಷರಗವಾ-ಯಿಗಳವರ ನಿಕೇತನವಾದ ಈ ಸ್ಥಳಕ್ಕೆ ನನ್ನನ್ನು ಪ್ರವೇಶಿಸಿದನು.

ನನ್ನ ಗುರುಗಳಾದ ಪಂ|| ಪಂಚಾಕ್ಷರಗವಾಯಿಗಳವರ ಕೃಪೆಯಿಂದ ಉಭಯ ಗಾಯನವನ್ನು ಕಲಿತೆನು, ಗುರುವಿನ ಕೃಪೆಯಿಂದ ಸಂಗೀತ ಸಾಹಿತ್ಯ ಬಲ್ಲವನಾಗಿ, ತ್ರಿಭಾಷೆಯಿಲ್ಲಿ ಅಂದರೆ ಹಿಂದಿ, ಸಂಸ್ಕೃತ, ಕನ್ನಡ, ಇವುಗಳಲ್ಲಿ ಪದ್ಯ ಗದ್ಯಗಳನ್ನೂ ಗ್ರಂಥಗಳನ್ನು ಬರೆದಿರುವೇನು.

ನನ್ನ ಶಿವದೀಕ್ಷಾ ಗುರುಗಳು "ಕಂಚಕಲ್-ಬಿದರಿ ಪ್ರಭುಕುಮಾರ ಶಿವಾಚಾರ್ಯರು"

**ಕಾವ್ಯ-ಅರ್ಪಣೆ:** ಮೂರು ಸಾವಿರ ಮಠದ ಕರ್ತೃ ಗುರುಸಿದ್ಧೇಶನ ಪುರಾಣಾ ಮೃತವನ್ನು "ಎಡೆಯೂರ ಗುರು ಸಿದ್ಧಲಿಂಗಗೆ" ಅರ್ಪಿಸಿರುವೆನು, ಶ್ರೇಷ್ಠವಾದ ಸಾಹಿತ್ಯ ಇದಕ್ಕೆ ಜೊತೆಯಿಲ್ಲ ಅಧಿಕವಾಗಿರುಪಂತಹ ಚರಿತ್ರಗಳಾವು ಇದಕ್ಕೆ ಸಮ ವಿಲ್ಲ ಶ್ರೇಷ್ಠತೆಯುಳ್ಳ ನೀನು ಇದನ್ನು ತಿಳಿದುಕೊಂಡು ಗ್ರಹಿಸಿಕೊಂಡಾಗಲೇ ಇದರ ಶಕ್ತಿ ತಿಳಿಯುವದು.

**ಕಾವ್ಯದ ಅಧಿಕಾರಿಗಳು:**

ಈ ಚರಿತ್ರಕ್ಕೆ ಹುಬ್ಬಳ್ಳಿ ಮೂರು ಸಾವಿರ ಮಠದ ಕರ್ತೃ ಗುರುಸಿದ್ಧೇಶ್ವರನೆ ಒಡೆಯನು. ಮನಸ್ಸಿಗೆ ಆನಂದ ಕೊಡತಕ್ಕಂಥವನೇ ಶಿವನು (ಗುರುವು) ಲಿಂಗವೇ ಮಹಾದೈವವಾಗಿರುವದು, ಆನಂದದಿಂದ ಕೇಳ್ವವವರು ಸದ್ಭಕ್ತರು, ಹೇಳುವವರು ಶಿವಶರಣರು, ಜೀವ ಭಾವವನ್ನು ಕಳೆದುಕೊಂಡವರೇ ಇದಕ್ಕೆ ಅಧಿಕಾರಿಗಳು, ಹೇಳಿಸುವವರು ಆನಂದ ಪಡೆಯುವರು.

**ಪುರಾಣದ ಮುದ್ರಿಕೆ:**

ಶ್ರೇಷ್ಠತೆಯಿಂದ ವೀರೇಶ್ವರ-ಪುಣ್ಯಾಶ್ರಮವು ಗದಗ ನಗರದಲ್ಲಿರುವದು, ಇಲ್ಲಿ ಪಂ|| ಪಂಚಾಕ್ಷರ ಗುರುಗಳವರ ಯೋಗ ಸಮಾಧಿಯು ಶೋಭಿಸುವದು; ಈ ಪುರಾಣವನ್ನು ಸಮಾಧಿಯ ಹತ್ತಿರ ಕುಳಿತು ಬರೆಯುತ್ತ ಜ್ಞಾನದಿಂದ ಕೂಡಿದ, ಗುರು, ಲಿಂಗ, ಚರರ ಕಿಂಕರನಾದ, ಪುಟ್ಟರಾಜನೆಂಬ ಹೆಸರುಳ್ಳ ನಾನು, ಹುಬ್ಬಳ್ಳಿ ಮೂರುಸಾವಿರ ಮಠದ ಕರ್ತೃ ಜಗದ್ಗುರು ಗುರುಸಿದ್ಧ ಶಿವಯೋಗಿಯ ಪುರಾಣದಲ್ಲಿ ಮಂಗಲಾಚರಣ ಸಂಧಿಯನ್ನು ಮುಗಿಸಿರುವೆನು.



—: ಒಂದನೆಯ ಸಂಧಿ :—

"ಕೈಲಾಸದಿಂದ ಶಿವನು ಬಂದು ಹುಬ್ಬಳ್ಳಿ ಎಂಬ ಸ್ಥಾನದ ಬಿಲ್ವವನ-ದಲ್ಲಿ ತನ್ನ ಲಿಂಗವನ್ನು ನೋಡುತ್ತಾ, ಲೀಲೆಗಳನ್ನೆಸಗುತ್ತಿದ್ದನು.

ಸ್ತೋತ್ರಂ :

ಒಡೆಯನಾದಂಥವನು, ಗಂಗೆಯನ್ನು ಮಸ್ತಕದಲ್ಲಿ ಧರಿಸಿದವನೂ; ವೇದಾ-ಗಮನಗಳನ್ನು ಅರಿತ ಪಂಡಿತರಿಗೆ ಒಡೆಯನಾದವನೂ, ಶ್ರೇಷ್ಠವಾದ ಲೀಲೆ-ಗಳೇ ಸಂಪತ್ತಾಗಿ ಉಳ್ಳವನೂ; ಭಯಂಕರವಾದ ಪ್ರಪಂಚದಲ್ಲಿ ಬೆರೆದಿರುವವನೂ ಮಂಗಲಕರವಾದ ಶರೀರ ಉಳ್ಳವನೂ; ಅವಸ್ಥೆ ಇಲ್ಲದವನು, ಶ್ರೇಷ್ಠ ನಡೆತೆಯುಳ್ಳವನು ಶ್ರೇಷ್ಠ ಚರಿತ್ರೆಯಿಂದ ಕೂಡಿದವನು; ಹೊಸದಾದ-ಅದ್ಭುತವಾದ ಪ್ರೇಮವೆರಿಸಿದವನೂ, ಶ್ರೇಷ್ಠ ಪಂಡಿತರ ಗುಣ ಉಳ್ಳವನು; ಮಹಾ ಪ್ರತಿಭಾ ಶಾಲಿಯಾದವನೂ, ಆದ "ಗುರುಸಿದ್ಧನೇ ಜಗತ್ತನ್ನು ಕಾಪಾಡು,

ಆನಂದದಲ್ಲಿಯೂ ಶಬ್ದದಲ್ಲಿಯು, ಅರುವಿನಲ್ಲಿಯು ಶ್ರೇಷ್ಠಗುಣದಲ್ಲಿಯೂ ಹುಟ್ಟು-ಸಾವುಗಳಲ್ಲಿಯೂ; ಹಾಲಿನಲ್ಲಿಯೂ ವ್ಯತಾಸವಿಲ್ಲದೆ ಕೂಡಿಕೊಂಡು ಸಮುದ್ರವು ವಾದಕ್ಕೆ ಮೀರಿದ್ದಾಗಿ ಮೆರೆಯುತ್ತೆ, ಜಗತ್ತಿನಲ್ಲಿ ಕಣ್ಣಿಗೆ ನೀರಿ-ನಂತೆ ಕಾಣಿಸಿಕೊಂಡು ಲವಣ-ಮುತ್ತು, ರತ್ನ, ಹವಳವನೂ ಕೊಡುವದಲ್ಲದೆ ವೇದಗಳಿಂದ ವರ್ಣಿಸಿಕೊಂಡು ಮೆರೆಯುತ್ತಿರುವದು.

ಸೂರ್ಯನು ತನ್ನ ಕಿರಣಗಳಿಂದ ಜಲವನ್ನು ಸಹಿಮಾಡಿ, ಮೋಡಕ್ಕೆ ಆ ಮೋಡವು ಜಲವಾಗಿ ಭೂಮಿಗೆ ಬಿದ್ದು, ಭಯಂಕರವಾದ ಹಳ್ಳ ಹೊಳೆಗಳಾಗಿ ಹರಿದು ಮತ್ತೆ ತನ್ನನ್ನು ಸೇರುವಂತೆ ಶಕ್ತಿಯನ್ನು ಕೊಟ್ಟು ತನ್ನ ಅಸ್ತಿತ್ವವನ್ನು ಕಾಯ್ದುಕೊಂಡಿರುವದು ಸಮುದ್ರವು.

ಸಮುದ್ರವು ಜಲಜಂತುಗಳಿಂದ ಭೀಕರವಾದುದು, ಸಮಸ್ತ ನೀರಿನ ಸ್ಥಾ-ನವು, ಶಂಖಗಳನ್ನು ಕೊಡತಕ್ಕಂಥದ್ದು, ನಂಜನ್ನು, ಅಮೃತವನ್ನು ಹೊಂದಿ-ರವಂಥಾದ್ದು ಲಕ್ಷ್ಮೀ ಚಂದ್ರ ಇವರ ಜನ್ಮ ಸ್ಥಾನವಾದದ್ದು, ಬ್ರಹ್ಮ ಸೃಷ್ಟಿ-ಯಲ್ಲಿ ಸೊಗವನ್ನು ಹೊಂದಿದ್ದು,

ಗಿರಿಗಳನ್ನು ಮಡುವುಗಳನ್ನು ಹೊಂದಿದ್ದು ಜನರನ್ನು ಕಾಪಾಡುವಂಥಾದ್ದು ಭೂದೇವಿಗೆ ಉಡಿಗೆಯಾದದ್ದು, ಸರಸ್ವತಿಗಿಂತ ಅಧಿಕ ಹಿರಿಮೆ ನನಗಿಹುದೆಂದು ನುಡಿಯುವುದೋ ಎಂಬಂತೆ ಗಾಳಿಯಿಂದುಂಟಾದ ತೆರೆಗಳ ಸಪ್ಪಳದಿಂದ ಕೂಡಿರುವದು.

ಈ ರೀತಿಯಾಗಿ ಶೋಭಿಸುವ ಸಮುದ್ರವು ಮೂರು ದಿಕ್ಕುಗಳನಾವರಿಸಿ ಕೊಂಡು ಮೂರು ಹೆಸರುಗಳನ್ನು ಹೊಂದಿರುವದು. ಇದರ ಉತ್ತರ ದಿಕ್ಕಿನಲ್ಲಿ

ಪೂರ್ವ-ಪಶ್ಚಿಮ ದಿಕ್ಕುಗಳನ್ನು ಕೂಡಿಕೊಂಡು, ಶಾಂತಿಯ ಬೀಡಾಗಿ ಧರೆಯನು ಆಳಿವ ಕೋಲಾಗಿ ಗಂಗಾ, ಯಮುನಾ, ಬ್ರಹ್ಮಪುತ್ರ ನದಿಗಳ ಉಗಮದ ಸ್ಥಾನವಾಗಿ ಹಿಮಾಲಯ ಪರ್ವತವು ಕಣ್ಣಿಗೆ ಸೊಗಸನ್ನುಂಟು ಮಾಡುವದು.

ಪರ್ವತಗಳಲ್ಲಿ ಶ್ರೇಷ್ಠವಾಗಿರುವದರಿಂದ, ಪಂಚಲೋಹದ ಖನಿಗಳಿರುವದರಿಂದ ದಷ್ಟ-ಪುಷ್ಟವಾಗಿ ಬೆಳೆದು ತಿರುಗಾಡುವ ಮೃಗ ಪಕ್ಷಿಗಳಿಂದ; ಶ್ರೇಷ್ಠವಾದ ವನಸ್ಪತಿಗಳ ವನಕ್ಕೆ ಸ್ಥಾನವಾಗಿರುವದರಿಂದ, ಪರ್ವತರಾಜನೆಂಬ ಹೆಸರು ಇದಕ್ಕೆ ಸಲ್ಲಿರುವದರಿಂದ ನನಗೆ ಸಮಾನರಿಲ್ಲೆಂದು ಬೆಳೆದು ಮೆರೆಯುತ್ತಿರುವದು.

ಶಿವನು ಈ ನಾಡಿನ ದೊರೆಯಾದ ಪರ್ವತರಾಜನ ಮಗಳನ್ನು ಒಪ್ಪಿ ಲಗ್ನವಾಗಿರುವದರಿಂದ, ಈ ಗೌರವವನ್ನು ಹೊಂದಿಕೊಂಡಿರುವ ಈ ಪರ್ವತವು ನಮ್ಮ ಭಾರತವನ್ನು ರಕ್ಷಿಸುವದು; ಪಾರ್ವತಿಗೆ "ಹೈಮವತಿ" ಎಂಬ ಹೆಸರಿರುವದೆ ಇದಕ್ಕೆ ಸಾಕ್ಷಿಯಾಗಿದೆ. ಸಕಲ ದೇವತೆಗಳ ವಾಸಕ್ಕೆ ಈ ಪರ್ವತವು ಮನೆಯಾಗಿದೆ.

ಈ ಪರ್ವತದ ಶಿಖರಕ್ಕೆ ಗೌರಿಶಂಕರ ಎಂಬ ಹೆಸರಿರುವದು. ಇಲ್ಲಿ ಕೈಲಾಸವು ಶೋಭಿಸುವದು. ಮತ್ತು ಎಲ್ಲಾ ಪದವಿಗಳಿಗೂ ಆಶ್ರಯವಾಗಿರುವದು ಇಲ್ಲಿಯ ಮಣ್ಣು ಬಂಗಾರ, ಕಲು ಪರುಷಮಣಿ, ಇಲ್ಲಿಯ ಮೃಗ-ಪಕ್ಷಿಗಳಿಗೆ ತಾಪತ್ರಯವಿಲ್ಲ, ಗಿಡಬಳ್ಳಿಗಳಿಗೆ ನಾಶವಾಗುವ ಭಯವಿಲ್ಲ. ಹಸಿವೆಯಾಗದೆ ಇರುವಂತಹ ಈ ಸ್ಥಾನದ ಮಹಿಮೆಯನ್ನು ಬಣ್ಣಿಸುವರಾರು

ಈ ಪರ್ವತವನ್ನು ಎತ್ತಲು ಹೋದ ರಾವಣನು ದೈವಹೀನನಾದನು; ವಿಜ್ಞಾನಿಯಾಗಿ ಮೇಲೆ ಏರಿದ ತಾನಸೇನನು ನಾಸ್ತಿಕನಾದನು; ಪ್ರದಕ್ಷಿಣೆಯನ್ನು ಮಾಡಿದ ಅಜ್ಞಾನಿ ವರಗಳನ್ನು ಪಡೆದು ಸುಖಿಯಾದನು; ಇದು ಈ ಪರ್ವತದ ಮಹಿಮೆ, ಇಲ್ಲಿಯೆ ಶಿವನು ವಾಸಿಯಾಗಿರುವನು. ಪರ್ವತವನ್ನು ಎತ್ತಲಿಕ್ಕೆ ಬಂದಾಗ ಒತ್ತಿದನು ಹತ್ತಿ ನೋಡಲು ಬಂದಾಗ ಇಲ್ಲದಂತಾದನು; ಭಕ್ತಿಯುಳ್ಳವರಿಗೆ ಅನೇಕ ಪದವಿಗಳನ್ನು ಕೊಟ್ಟಿರುವನು. ಕುಬೇರನು ಶಿವನ ಸೇವಕನಾಗಿರುವದೆ ಇದಕ್ಕೆ ಸಾಕ್ಷಿಯಾಗಿದೆ. ಹೀಗೆ ಪರಶಿವನನ್ನು ಹೊಂದಿ ಮಹತ್ವವನ್ನು ಹೊಂದಿದ ಶಿಖರವನ್ನೊಳಗೊಂಡಿರುವದು, ಹಿಮಾಲಯವು.

ಕೈಲಾಸವೆಂಬ ಹೆಸರಿನ ಪುರುವು ಇಲ್ಲಿರುವದು; ಇದರ ಸುತ್ತಲು ಶ್ರೇಷ್ಠವಾದ ಕಂದಕವಿರುವದು. ಈ ಕಂದಕವಿರುವ ನೀರು ಅಮೃತಮಯವಾಗಿರುವದು; ಇದನ್ನು ಕುಡಿದವರು ದೇವತೆಗಳಾದರು ಕೋಟೆಯ ಕಲ್ಲುಗಳು ಚಿಂತಾಮಣಿಗಳಾಗಿರುವವು ಇವನ್ನು ಹೊಂದಿದವರು ಮೇಲಿನ ಲೋಕಗಳಲ್ಲಿ ಚರಿಸುತ್ತಿರುವರು; ಕೊತ್ತಲೊಳಗೆ ಇರುವ ಕಲ್ಲುಗಳು ಪರುಷಮಣಿಗಳು; ಬಾಗಿಲಲ್ಲಿರುವ ಕಲ್ಲುಗಳು ಕೌಸ್ತುಭ ಮಣಿಗಳು; ಕದಕ್ಕೆ ಹಚ್ಚಿದ ಕಲ್ಲು ಶಮಂತಕಮಣಿಯು; ಮುಖ್ಯರಾದವರು ಒಪ್ಪಿ ಇವುಗಳ ಕಣಗಳನ್ನು ತೆಗೆದುಕೊಂಡು ಹೋಗಿ ಘನ ಶ್ರೀಮಂತರಾಗಿರುವರು.

ಇದರೊಳಗೆ ಇರುವ ಗಿಡದ ಟೊಂಗೆಯನ್ನು ತೆಗೆದುಕೊಂಡು ಹೋಗಿ ನಾಟ ಮಾಡಿ ಅವುಗಳಿಂದ ಕಲ್ಪಿತಾರ್ಥವನ್ನು ಪಡೆದುಕೊಂಡಿರವರು. ಇವೆ ಕಲ್ಪವೃಕ್ಷ ಗಳಾಗಿರುವವು.

ಅಲ್ಲಿರುವವರಿಗೆ ಅಣಿಮಾದಿ ಸಿದ್ಧಿಗಳು ಕರಗತವಾಗಿರುವವು ಅಲ್ಲಿ ಶೋಭೀ ಸುವ ಆಕಳುಗಳು ಕಾಮಧೇನುಗಳಾಗಿರುವವು, ಬಿದ್ದಿರುವ ಕುಸುಮಗಳು ನಕ್ಷತ್ರ ಗಳಾಗಿರುವವು, ದೇವತೆಗಳು ಕಿಂಕರರಾಗಿರುವರು ಬರುತ್ತಿರುವ ಋತುಗಳೆಲ್ಲವು ಶಾಂತವಾಗಿರುವವು, ಅಲ್ಲಿ ಗಾಳಿಗಳು ಸಾವಕಾಶವಾಗಿ ಬೀಸುವವು, ಸೂರ್ಯ-ಚಂದ್ರರೂ ಶಾಂತವಾಗಿ ಪ್ರಕಾಶಿಸುವರು. ಅಲ್ಲಿ ಶಿವನಿಗೆ ಅವಿಧೇಯರಾದವರು ಯಾರು ಇಲ್ಲ.

ಅಲ್ಲಿ ಶಿವನ ಸಂಕಲ್ಪದಿಂದ ಒಂದು ಮನೆಯಾಗಿರುವದು ಭುವನದಲ್ಲಿರುವ ರಾಜರ ಮನೆಯನ್ನು ಕವಿಗಳು ಅರಮನೆಯೆಂದು ವರ್ಣಿಸುವರು ಶಿವನ ಸಂಕಲ್ಪ ದಿಂದಾದ ಆ ಅರಮನೆಯು-ಪೂರ್ಣಮನೆಯಾಗಿರುವದು. ಶಿವನ ಅರಮನೆಗೆ ಧರ್ಮವೇ_ಮಹಾದ್ವಾರ ಕ್ಷಮೆ; ಶ್ರದ್ಧೆ; ದಾನ; ಶಾಂತಿ, ಇವುಗಳು ಎರಡು ಕಟ್ಟೆ ಗಳು; ಶಮೆ ದಮೆಗಳು ಕಲಶಗಳು, ಧೈರ್ಯಪ್ರತಾಪ; ನಿಗ್ರಹ ಸತ್ಯಗಳೆಂಬ ತೋರಣಗಳನ್ನು ಈ ಬಾಗಿಲಕ್ಕೆ ಕಟ್ಟಿರುವರು

ದರ್ಯ, ವೈರಾಗ್ಯ, ಭಕ್ತಿ, ಜ್ಞಾನ, ಸುಕೃತಿ; ಸೌಮ್ಯ ದಾಕ್ಷಿಣ್ಯಗಳು; ಮೇಲ್ಭಾ-ಗದ ಅಡ್ಡ ಗೊಡೆಗಳು; ದಕ್ಷತೆಯೆ ಮಾಳಿಗೆಯು; ಪುಜ್ಯತೆಯು ನೆಲೆಗಟ್ಟು ನಿರ್ಮಲತ್ವವೇ ಗೋಡೆಯು, ಸತ್ಕಾರ್ಯವೇ ಶಿವನ ಆಸನ ಶಿವನು ಅದರ ಮೇಲೆ ಪುಜ್ಯತೆಯಿಂದ ಪಂಚಮುಖ ದಶಭುಜಗಳನ್ನು ಚಂದ್ರನನ್ನು ಧರಿಸಿ ಮೆರೆವನು.

ಶಿವನು ಎಡದ ತೊಡೆಯಲ್ಲಿ; ಜಗನ್ಮಾತೆಯಾದ ದಾಕ್ಷಾಯಿಣಿಯು ಮಂತ್ರ-ರೂಪಳಾಗಿ ಕುಳಿತಿರುವಳು; ಬಲದ ತೊಡೆಯ ಮೇಲೆ ಗಣಪತಿ-ಷಣ್ಮುಖ; ಇವರು ಸೊಗಸಿನಿಂದ ಕುಳಿತು ತಂದೆಗೆ ಆನಂದವನ್ನು ಹೆಚ್ಚಿಸುವರು; ಸರಸ್ವತಿಯು ವೀಣೆಯನ್ನು ಭಕ್ತಿಯಿಂದ ನುಡಿಸುತ್ತಿರುವಳು; ನಂದಿಯು ಮೃದಂಗವನ್ನು ಆನಂದದಿಂದ ನುಡಿಸುತ್ತಿರುವನು; ಬೃಂಗಿಯು ಸಭೆಯಲ್ಲಿ ಸೊಗಸಾಗಿ ನೃತ್ಯವನ್ನು ಮಾಡುತ್ತಿರುವನು ಗಂಧರ್ವರು ಗಾಯನವನ್ನು ಮಾಡುತ್ತಿರುವರು ಪರುಷ ಹಸ್ತದ ಗಣರು ಸಭೀಕರನ್ನು ಶಾಂತಗೊಳಿಸುತ್ತಿರುವರು, ಮೋದಗೊಳ್ಳುತ್ತ ರುದ್ರ ಕನ್ನಿ ಕೆಯರು ಚಾಮರವನ್ನು ಬೀಸುತ್ತಿರುವರು.

ಈ ರೀತಿ ಸಾಗರದಂತೆ ಶಾಂತವಾಗಿ ಒಪ್ಪುತ್ತಿರುವ ಸಭೆಯಲ್ಲಿ ಖಿನ್ನ-ವದನನಾದ ನಾರದನು ಶಿವನಿಗೆ ಕಾಣಿಸಿಕೊಂಡನು; ಆಗ ಒಡೆಯನಾದ ಶಿವನು

ತನ್ನ ಸೇವೆಯನ್ನೆಲ್ಲ ನಿಲ್ಲಿಸಿ; ಕೈ ಸನ್ನೆಯಿಂದ ನಾರದನನ್ನು ಸಮೀಪಕ್ಕೆ ಕರೆದು ಕೂಡ್ರಿಸಿಕೊಂಡು; ಸಮಸ್ತ ಲೋಕಗಳ ಕುಶಲವನ್ನು ಕೇಳಿದನು.

ನಾರದನು ಶಿವನಿಗೆ ವಂದಿಸಿ; ಕೈ ಮುಗಿದು ಗಂಭೀರ ವಾಣಿಯಿಂದ ನೀವು ಕರುಣೆಯಿಂದ; ಈ ಲೋಕವನ್ನು ರಕ್ಷಿಸುತ್ತಿರಲು ಈ ಲೋಕಕ್ಕೆಲ್ಲಿ ದುಃಖ ಉಂಟಾಗುವದು; ನಿಮ್ಮ ಕರುಣೆಯು ಭೂಲೋಕದತ್ತ ಇಲ್ಲದ ಕಾರಣ ಅದು ದುಃಖಕ್ಕೊಳಗಾಗಿರುವದು, ಪಭೋ ಆ ಲೋಕವು ಈ ಲೋಕಕ್ಕೆ ಆಧಾರವಾಗಿರವ ದರಿಂದ ಅದನ್ನೂ ಕೂಡ ರಕ್ಷಿಸಬೇಕೆಂದುಬೇಡಿಕೊಳ್ಳುತ್ತೇನೆ. ಇಷ್ಟೆ ಅಲ್ಲ

ಅಲ್ಲಿ ನಾಸ್ತಿಕರು ಹೆಚ್ಚಾಗಿರುವರು ಕೆಟ್ಟ ಕೆಲಸಗಳನ್ನು ಮಾಡುವವರು ಸುಖವಾಗಿರುವರು; ಭಕ್ತಿಯುಳ್ಳವರು ವಿಷಯ ಲಂಪಟರಾಗಿರುವರು; ಅಲ್ಲಿರುವ ವೈದಿಕರು ಸುಳ್ಳು ನುಡಿಗಳನ್ನು ನುಡಿಯುತ್ತಿರುವರು; ದುರ್ವ್ಯಸನಿಗಳು ಮೆರೆವರು; ಧರೆಯುಲ್ಲಿ ಉತ್ತಮರು ಕಾಣದಾಗಿರುವರು; ಇನ್ನು ಕೆಲವರು ಮತಿಹೀನರನ್ನೆ ಹೊಗಳುತ್ತ ಉಳಿದುಕೊಂಡಿರುವರು, ವಿಷಯ ಸುಖಗಳೆ ಅವರಿಗೆ ಮೋಕ್ಷವಾಗಿ ಕಾಣಿಸಿರುವದು ಎಂದು ನಾರದನು ಹೇಳಿದನು.

ನಾರದನ ಈ ಮಾತನ್ನು ಕೇಳಿ ಪರಮೇಶ್ವರನು ಹೇಳಿದ್ದೇನೆಂದರೆ; ಇದನ್ನು ನಾವು ಅರಿತುಕೊಂಡಿರುವೆವು ಅದಕ್ಕಾಗಿಯೆ ನಂದಿಶ್ವರನೆ ಮೊದಲಾದ ಪ್ರಮಥರಿಗೆ ಅಪ್ಪಣೆ ಮಾಡಿರುವೆವು ನೀನೇನು ಚಿಂತಿಸದಿರು ಎಂದು ಹೇಳಲು ನಾರದನು ಇದನ್ನು ನಾನು ಮೊದಲೆ ತಿಳಿದುಕೊಂಡಿರುವೆನು. ನೀನು ಭೂಲೋ-ಕದಲ್ಲಿ ಅವತಾರ ಮಾಡದಿದ್ದರೆ ಅದು ಕೈಲಾಸವು ಹೇಗಾಗುವದು, ಮುಂದಿನ ವಿಚಾರವನ್ನು ತಿಳಿದು ಕೊಳ್ಳಿರಿ.

ಹೀಗೆ ನಾರದನು ಹೇಳಿ ಶಿವನಿಗೆ ನಮಸ್ಕರಿಸಿ ಹೋದನು ಆ ನಂತರ ಶಿವನು ತಾನೇ ತನ್ನೊಳಗೆ ವಿಚಾರ ಮಾಡಿ ಸಂಶಯುವನ್ನು ಕಳೆದುಕೊಳ್ಳುವ-ದಾಗಿ ಚಂದ್ರನನ್ನು ಗಂಗೆಯನ್ನು ಪಂಚಮುಖಗಳನ್ನು; ಕಪ್ಪುಕೊರಳನ್ನು ಮರೆ-ಮರೆಮಾಡಿಕೊಂಡು ಜಂಗಮನ ವೇಷದಿಂದ ಭೂಲೋಕಕ್ಕೆ ಬಂದನು

ಶುಭ ಫಲವನ್ನು ಕೊಡುವ ಭೂಮಿಯನ್ನು, ದೇವತಾ ಸ್ಥಾನವನ್ನಾಗಿಯೆ ಜೀವರಾಶಿಗಳಿಗೆ ಆಧಾರವಾದದನ್ನಾಗಿಯು ಪರಲೋಕಕ್ಕೆ ಆಧಾರವನ್ನಾಗಿಯು ಒಳ್ಳೆಯ ಚರಿತ್ರವನ್ನು ಹೊಂದಿರತಕ್ಕಂತದನ್ನಾಗಿಯು ನೋಡುತ್ತ ಶಿವನು ಈ ಭೂಮಿಗೆ ಇಳಿದನು ಉಮೆಯಿಂದ ಕೂಡಿದ, ಸ್ಥಿರ ಚರಗಳಲ್ಲಿ ಶ್ರೇಷ್ಠನಾದವನು ವೇದಗಳಿಂದ ಹೊಗಳಿಸಿಕೊಂಡಿರುವಂತಹ ಮುಕ್ತತೆಯನ್ನು ಕೊಡುವವನಾದ ಶಿವ-ನಿಂದ ಈ ಭೂಮಿಯು ಪಾವನವಾಯಿತು.

ಈ ಭೂಮಿಯು ಶ್ರೇಷ್ಠವೆನಿಸಿಕೊಂಡಿರುವದು. ಎಲ್ಲಾ ಸಂಪತ್ತು ಈ ಭೂಮಿಯಲ್ಲಿ ಶೋಭಿಸುವದು ಬಂಗಾರ ಹಾಗು ಬೆಳ್ಳಿ, ರತ್ನಗಳು ಹುಟ್ಟುವ ಸ್ಥಾನ ವಾಗಿರುವದು; ಈ ಭೂಮಿಯ ಜನರು ಭಾರತೀಯರೆನಿಸಿಕೊಂಡಿರುವರು. ಇಲ್ಲಿಯ ಸಾರ್ವಭೌಮರು ಲಕ್ಷ್ಮಿ, ಸರಸ್ವತಿ, ಪಾರ್ವತಿಯರನ್ನು ಹೃದಯದಲ್ಲಿ ಅಡಗಿಸಿ ಕೊಂಡಿರುವರು; ಆ ಸಾರ್ವಭೌಮರಲ್ಲಿ ಹದಿನಾರು ಜನ ಗಣನೆಯುರುವರು ಅವರಲ್ಲಿ ಶ್ರೇಷ್ಠನಾದವನೆ ಭರತನು.

ಈ ಭರತನ ಹೆಸರೆ ಈ ಭೂಮಿಗೆ ಬಂದಿರುವದು ಯಾವಾಗಲೂ ಇದು ಭಾರತ ದೇಶವೆನಿಸಿಕೊಂಡು ಸಂತೋಷವನ್ನು ಕೊಡುವದು; ಜಗತ್ತಿನಲ್ಲಿ ಒಂಭತ್ತು ದ್ವೀಪಗಳುಂಟು ಅದರಲ್ಲಿ ಒಂಭತ್ತನೆಯದೆ ಜಂಬೂದ್ವೀಪ ಈ ಜಂಬೂ ದ್ವೀಪದಲ್ಲಿ ಭಾರತವಿರುವದು. ಇದು ವಿಷ್ಣುವಿಗೆ ಜನ್ಮಸ್ಥಾನವಾಗಿ ಶಿವನಿಗೆ ಲೀಲಾಸ್ಥಾನ ವಾಗಿರುವದು.

ಭಾರತದಲ್ಲಿ ಐವತ್ತಾರು ದೇಶಗಳಿದ್ದವು ಅವುಗಳನ್ನೆಲ್ಲ ನೋಡುತ್ತ; ಸಂಪತ್ತಿ ನಿಂದ ಕೂಡಿದ ದೇಶಗಳನ್ನೆಲ್ಲ ನಿರುಕಿಸಿ; ಕರ್ನಾಟಕಕ್ಕೆ ದಯಮಾಡಿಸಿ ಈ ರಾಜ್ಯ ದಲ್ಲಿರುವ ಬೆಳವಲನಾಡು, ಕರಿನಾಡು, ಮಲೆನಾಡು ಇವುಗಳಲ್ಲಿ ಸಂಚರಿಸಿ, ವೈಭವ ವನ್ನು ನೋಡಿ ಆನಂದಪಟ್ಟನು. ಭಾರತವು ಭೂದೇವಿಗೆ ಮುಖ ಸಮಾನವಾ ದದ್ದು, ಸ್ವರ್ಗ ಸಮಾನವಾದ ಸುಖವನ್ನು ಕೊಡುವದು. ಹರಿಯುವ ಅನೇಕ ನದಿಗಳಿಂದ ಕೂಡಿದ್ದು, ಪುಣ್ಯಶಾಲಿಗಳಿಗೆ ಹಿತವನ್ನುಂಟು ಮಾಡುವಂಥಾದ್ದು, ಹಳ್ಳಕೊಳ್ಳಗಳಿಂದ ಮನಸ್ಸಿಗೆ ಶಾಂತಿಯನ್ನು ಉಂಟುಮಾಡತಕ್ಕದ್ದು, ದೇವಾಲಯ ಗಳಿಂದ ಅನೇಕ ಖಗ ಮೃಗಗಳಿಂದ ಮನಸ್ಸಿಗೆ ಶಾಂತಿಯನ್ನು ಉಂಟುಮಾಡತ್ಕದ್ದು ಅನೇಕ ವನಗಳಿಂದಲೂ ದೊಡ್ಡ ದೊಡ್ಡ ಮನೆಗಳಿಂದಲೂ ಅನೇಕ ಭಾಷೆಗಳಿಂದಲೂ ಕೂಡಿದ ಈ ಕರ್ನಾಟಕ ಬಂಧುರವಾದದ್ದು; ಈ ಕರ್ನಾಟಕದಲ್ಲಿ ಪೂವಳ್ಳಿ, ಹೂಬಳ್ಳಿ, ಹುಬ್ಬಳ್ಳಿ, ಎಂಬ ಮೂರು ಹೆಸರುಗಳನ್ನು ಯಾವ ಯಾವ ಕಾಲಕ್ಕೆ ಪಡೆದುಕೊಂಡು ಅನೇಕ ಜನರನ್ನು ಕೂಡಿಕೊಂಡು ಶೋಭಿಸುತ್ತಿರುವ ಒಂದು ಗ್ರಾಮವು ಕಾಣಿಸಿತು. ಈ ಗ್ರಾಮವು ಸಜ್ಜನರ ವಾಸಕ್ಕೆ ಯೋಗ್ಯವಾಗಿ ಕೈಬೀಸಿ ಕರೆಯುವಂತಿತ್ತು; ಈ ಗ್ರಾಮಕ್ಕೆ ಜಂಗಮರೂಪಿ ಶಿವನು ಸಂಚರಿಸುತ್ತ ಅಲ್ಲಿಗೆ ಬಂದನು ಆಗ ಪೂವಳ್ಳಿಯೆಂಬ ಹೆಸರು ಸ್ಥಿರವಾಯ್ತು.

ಗುಡಿಗಳ ಸಮೂಹವೆ ಶಿರವು, ದಟ್ಟವಾದ ಅರಣ್ಯವೇ ಜಡೆಯು; ಸಾಲಾದ ಮನೆಗಳೇ ಹಣೆಯು; ಗಿಡ-ಬಳ್ಳಿಗಳೆ ಮುಖವು, ಕೆರೆಯ ಬಾಯಿಯು ನೀರಿನ ನೊರೆಯೆ ತುಟಿಯು, ತೆರೆಗಳೆ ಹಲ್ಲುಗಳು, ನೀರು ಜೊಲ್ಲು, ಕಣ್ಣುಗಳು ಕಪ್ಪು ಕಮಲಗಳು, ಶೋಭಿಸುವ ಬಿಳಿ ಕಮಲಗಳೆ ಕಿವಿಗಳು; ಹಂಸಗಳೆ ಕೊರಳು, ಪ್ರಾಣಿಗಳ ಶಬ್ದವೆ ಧ್ವನಿಯು; ಕೊಳ್ಳಗಳೆ ಕುಚಗಳು, ಉಳ್ಳವಳಾಗಿ ಹುಬ್ಬಳ್ಳಿ

ಯೆಂಬ ಕನ್ಯೆಯು ಕಾಣುತ್ತಿರಲಿಕ್ಕಾಗಿ, ಶಿವಯೋಗಿಯು ಇಲ್ಲಿಗೆ ಬಂದು ಕನ್ಯೆಯ ಸ್ನೇಹವು, ತನಗೆ ಒಳ್ಳೆಯದಲ್ಲವೆಂದು ತೊರೆದು ಮುಂದೆ ಹೋಗುತ್ತಾ ಇರಲು ಭೃಮರದ ಧ್ವನಿಯು; ಕೋಗಿಲೆಗಳ ಇಂಪಾದ ಪಂಚಮದ ಸ್ವರವು; ನವಿಲುಗಳ ಕುಣಿತವು, ಇವೆಲ್ಲವುಗಳು, ಶಿವಯೋಗಿಯ ಮನ ಸೆಳೆಯಲು ಅಲ್ಲಿಯೆ ನಿಂತನು.

ಕೊಳ್ಳದಲ್ಲಿ ಹರಿಯುವ ನೀರು ದೇವತೆಗಳನ್ನು ಬಿಟ್ಟು ಇಲ್ಲಿ ಬಂದಿರುವ ಅಮೃತವೊ ಎಂಬಂತೆ ತೋರಿ ಕುಡಿಯಲು ಮಾರ್ಗಸ್ಥರನ್ನು ಕರೆಯುವದೊ ಯೆಂಬಂತೆ ಧ್ವನಿಗೈಯುತಿತ್ತು. ಗಾಳಿಗಲೆಯುವ ಬಿದರಿನ ಪೆಳೆಗಳು ಅದಕ್ಕೆ ಪ್ರತಿಯಾಗಿ ಶಿವನು ಬಂದನು ಎಂದು ತೋರುವಂತೆ ಧ್ವನಿ ಮಾಡುತ್ತಿದ್ದವು; ಶಿವರೂಪಿಯಾದ ಜಂಗಮನು ಈ ಕೊಳ್ಳವನ್ನು ನೋಡಿ ಸಂತುಷ್ಟನಾಗಿರಲಿಕ್ಕೆ ಸಮೀಪದಲ್ಲಿ ಒಂದು ಗವಿಯನ್ನು ಆಕಳಗಳ ಸಹಾಯದಿಂದ ಕಂಡು, ಮಂತ್ರದ ಮಹಿಮೆಯನ್ನು ತೋರಿಸುವದಕ್ಕಾಗಿ ಏಕಾಂತವನ್ನು ಬಯಿಸಿ ಆ ಗವಿಯನ್ನು ಪೊಕ್ಕನು.

ಜನರಿಗೆ ಬರಲು ಅಸಾಧ್ಯವಾದ ಈ ಗವಿಯಲ್ಲಿ ಮೊದಲೆ ಪ್ರಮಥರು ಬಂದು; ಅದನ್ನೆಲ್ಲ ಸ್ವಚ್ಛಗೊಳಿಸಿದರೇನೊ ಎಂಬಂತೆ ಗವಿಯು ಶುಚಿಯಾಗಿತ್ತು ಜಂಗಮ ರೂಪಿ ಶಿವನು ತನ್ನ ಇಷ್ಟಲಿಂಗವನ್ನು ಕರದಲ್ಲಿ ಇಟ್ಟುಕೊಂಡು ಅಲ್ಲಿ ಕುಳಿತು ಕೊಂಡನು, ಕರದಲ್ಲಿ ಇರುವ ಲಿಂಗದಲ್ಲಿ ದೃಷ್ಟಿಯನ್ನು ಇಡಲು ಅವಿದ್ಯೆಯಿಂದಾದ ಈ ಜಗತ್ತಿನ ಭೇದವನ್ನು ಕಿತ್ತು ಹಾಕುವನೋ ಏನೋ ಎಂಬಂತೆ ಮುನಿಗಳಿಗೆ ಕಾಣುತ್ತೆ, ಅಟ್ಟಹಾಸದಿಂದ ಬರುವ ಕಾಲ, ಕರ್ಮ, ಮಾಯೆ, ಇವುಗಳನ್ನು ಸಮೀಪಕ್ಕೆ ಬಾರದಂತೆ ಇದ್ದನು.

ಗದಗ ನಗರದಲ್ಲಿ ವೀರೇಶ್ವರ-ಪುಣ್ಯಾಶ್ರಮ ಮೆರೆಯುವದು ಅಲ್ಲಿ ನನ್ನ ಗುರುಗಳಾದ ಪಂ|| ಪಂಚಾಕ್ಷರ ಗವಾಯಿಗಳವರ ಶ್ರೇಷ್ಠ ಗದ್ದುಗೆ. ಆ ಗದ್ದುಗೆಯ ಹತ್ತಿರ ಕುಳಿತು, ಗುರು, ಲಿಂಗ; ಜಂಗಮ ಕಿಂಕರನಾದ "ಪುಟ್ಟರಾಜ"ನೆಂಬ ಹೆಸರುಳ್ಳವನಾದ ನಾನು ಗುರು ಕೃಪೆಯಿಂದ ರಚಿಸಿದ ಹುಬ್ಬಳ್ಳಿ ಮೂರು ಸಾವಿರ ಮಠದ ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪುರಾಣದಲ್ಲಿ ಒಂದನೆಯ ಸಂಧಿ.



## ಎರಡನೆಯ ಸಂಧಿ

ಚರರೂಪಿಯಾದ ಶಿವನು ಅಲ್ಲಮ ಪ್ರಭುವಿನ ಸಮಾಗಮವಾದ ನಂತರ ಹುಬ್ಬಳ್ಳಿಯ ಬಿಲ್ವ ವನದಲ್ಲಿ ತಪಗೈದು "ಗುರುಸಿದ್ಧೇಶ"ನೆಂಬ ಅಭಿದಾನವನ್ನು ಪಡೆದು ಕೊಂಡನು ||

—ಃ ಸ್ತೋತ್ರಂ ಃ—

ಕಲ್ಯಾಣವನ್ನು ಕೊಡುವವನು; ರಂಜನಾ ರಹಿತನೂ; ನಿರಾಧಾರನೂ, ವಿದ್ಯಾ ಶ್ರೇಷ್ಠನೂ, ಸತ್ಯವನ್ನೆ ಎತ್ತಿ ಹಿಡಿಯುವವನು, ಚಿತ್‌ಸ್ವರೂಪನು; ಭಾರರಹಿತನು ಸಂಪತ್ತುಳ್ಳವನು, ಭಕ್ತರಿಗಾಗಿ ಅನಂತ ರೂಪ ಧರಿಸಿದವನು; ಬ್ರಹ್ಮಾಂಡ ವನ್ನೆ ಅಡಗಿಸಿ ಕೊಂಡವನೂ, ಸಮಸ್ತರಿಗೆ ಗುರುವಾದವನೂ, ಅಭಯವನ್ನು ಕೊಡುವವನು, ವರಗಳನ್ನು ದಯಪಾಲಿರುವವನೂ, ಪೂವಳ್ಳಿಯ ಒಡೆಯನೂ, ಆದ ಗುರುಸಿದ್ದನೆ || ಜಗತ್ತಿಗೆ ಗುರುವಾದ ನೀನು ನನ್ನನ್ನು ಕಾಪಾಡು ||

ಪೂವಳ್ಳಿಯ ಬನದ ಗವಿಯಲ್ಲಿ ಶಿವನು ತನ್ನಿಷ್ಟ ಲಿಂಗವನ್ನು ಹಿಡಿದು ತಪ ಗೈಯ್ಯುತ್ತಿರಲು; ಅಲ್ಲಿ ಶಾಂತಿಯು ನೆಲೆಸಿತು; ಅದರ ಕುರುಹಾಗಿ ವೈರತ್ವವನ್ನು ತೊರೆದು, ಕಾಡು ಮೃಗಗಳು ಸಂಚರಿಸುತ್ತಿದ್ದವು, ಗಾಳಿಯು ಮೆಲ್ಲಗೆ ಅಲೆಯು ತಿತ್ತು: ಇದನ್ನರಿದು ದೇವತೆಗಳು ಇಲ್ಲಿಗೆ ಬಂದರು; ಪರಶಿವನ ಇಚ್ಛೆಯಂತೆ ಗವಿಯ ಮುಂಭಾಗದಲ್ಲಿ ಒಂದು ಪರ್ಣಶಾಲೆ ಶೋಭಿಸುತಿತ್ತು, ಅದು ಶಿವರೂಪಿ ಜಂಗಮಗೆ ಯೋಗ-ಮಂದಿರವಾಯಿತು ನೋಡುವವರ ಕಣ್ಣಿಗೆ ಮಂಗಲವನ್ನೀಯ್ಯುತಿತ್ತು ಭಕ್ತರ ಪಾಪ ಬುದ್ಧಿಯನ್ನು ಕಳೆಯುತ್ತಿತ್ತು; ಶ್ರೇಷ್ಠರಾದ ಸುಕೃತಿಗಳಿಗೆ ಸಿದ್ಧಿಯನ್ನು ಕೊಡುತ್ತಿತ್ತು ಆಶ್ಚರ್ಯಕ್ಕೆ ಎಡೆಯಾಗಿತ್ತು ಈ ಪರ್ಣಸಾಲೆ ||

ಸೊಗಸಾಗಿ ಬಳ್ಳಿಗಳಿಂದ ಹೆಣೆದಿರತಕ್ಕಂತಹ ಮಂಟಪಗಳು ಕುಟೀರದ ಸುತ್ತಲೂ ತೋರುತ್ತಿದ್ದವು, ಭ್ರಮೆಯನ್ನು ತೊರೆದು ತಪ್ಪಸ್ಸನ್ನು ಮಾಡುವ ಬುದ್ಧಿಯನ್ನು ಕೊಡುತ್ತಿದ್ದವು, ಅಲ್ಲಿಯ ಬಿಲ್ವ ವೃಕ್ಷಗಳು; ಶಾಂತಿಯನ್ನು ಕಲಿಸು ತ್ತಿದ್ದವು ಅಲ್ಲಿಯ ಶಮಿ ವೃಕ್ಷಗಳು; ಅಲ್ಲಿಯ ಹಣ್ಣಿನ ಗಿಡಗಳು ಫಲವನ್ನು ಕೊಟ್ಟು ಶ್ರಮವನ್ನು ಕಳೆಯುತ್ತಿದ್ದವು.

ಜಂಗಮನಾದ ಶಿವನು ಗುಹೆಯಿಂದ ಹೊರೆಗೆ ಬಂದು ಲತಾ ಮಂಟಪದಲ್ಲಿ ಕುಳಿತು ಕೊಳ್ಳುತ್ತಾನೆ, ನರರನ್ನು ನೋಡಿನಗುತ್ತಾನೆ ಅವರೊಡನೆ ಸಂಭಾಷಣೆ ಬೇಡವಾಗಿ ಗವಿಯೊಳಗಿಹೋಗುತ್ತಾನೆ; ಭಕ್ತರುಬಂದರೆ ಅವರೊಡನೆ ಮಾತನಾಡು ತ್ತಾನೆ ಹೀಗೆ ಇವನ ವೃತ್ತಿಯುನಡೆದಿರುವಾಗ ಅಲ್ಲಿಯ ದನಕಾಯುವ ಹುಡುಗರು, ಅವಿವೇಕಗಳಾದ, ಜನರು ಇವನು ಹುಚ್ಚನೆಂದು ಊರೊಳಗೆ ಪ್ರಚಾರ ಮಾಡಿದರು ಈ ಸಮಯದಲ್ಲಿ ಅಲ್ಲಮ ಪ್ರಭುಗಳು ಅಲ್ಲಿಗೆ ಬಂದು ಒಂದು ಗುಡಿಯಲ್ಲಿ ಕುಳಿತು ಕೊಳ್ಳುತ್ತಾರೆ ಆಗ ಊರಿನ ಜನರೆಲ್ಲರು ಅವರ ತೇಜಸ್ಸಿಗೆ ಬೆರಗಾಗಿ ವಂದಿಸುತ್ತಾರೆ. ಮತ್ತು ತಮ್ಮ ಸ್ಥಳವಾದುದು ತಮ್ಮ ನಾಮಾಂಕಿತವೇನು ಎಂದು ಪ್ರಶ್ನಿಸಲು ಪ್ರಭುಗಳು ಉತ್ತರವಾಗಿ ನನಗೆ "ಪ್ರಭು"ವೆಂದು ಕರೆಯುತ್ತಾರೆ ಈ ಲೋಕವೆ ನನ್ನ ಊರು.

ಹೇಳಲು ಭಕ್ತರಿಗೆ ಆಶ್ಚರ್ಯವಾಗಿದೆ; ಪ್ರಭುಗಳು ಆ ಜನರನುದ್ದೇಶಿಸಿ

ನಿಮ್ಮಿಂದ ಒಂದು ಕಾರ್ಯವಾಗ ಬೇಕಾಗಿದೆ ಅದೇನಂದರೆ ಇಲ್ಲಿ ಒರ್ವ ಶಿವಯೋಗಿಯು ವಾಶಿಸಿರುವನೆಂದು ವಿದಿತವಾಗಿದೆ ಕಾರಣ ಆ ಶಿವಯೋಗಿಯನ್ನು ತೋರಿಸುವಿರಾ? ಅದಕ್ಕೆ ಪೂವಳ್ಳಿಯ ಭಕ್ತರು ಪ್ರಭುದೇವನಿಗೆ ಹೇಳಿದ್ದೆನಂದರೆ ಸ್ವಾಮಿ ಇಲ್ಲಿ ಯಾರು ಶಿವಯೋಗಿಗಳಿಲ್ಲ, ಆದರೆ ಒಬ್ಬ ಜಂಗಮನು ಇದ್ದಾನೆ ಅವನಿಗೆ ಹುಚ್ಚಯ್ಯ ನೆಂದು ಕರೆಯುತ್ತೆವೆ. ಅವನನ್ನು ತೋರಿಸು ಎಂದರೆ ತೋರಿಸುವೆವು ಆಗ ಪ್ರಭುವು ಹಾಗೆ ಅವರನ್ನು ತೋರಿಸಿರೆಂದು ನುಡಿಯಲು, ಎಲ್ಲರೂ ಸೇರಿ ಸಾಗಿದ್ದಾರೆ ದೂರ ದಿಂದಲೆ ಗವಿಯನ್ನು ನೋಡಿ, ಅಲ್ಲಮ ಪ್ರಭುಗಳು ಆನಂದ ಭರಿತರಾಗಿ ಮುಂದೆ ಸಾಗಿದ್ದಾರೆ, ಆ ಗವಿಯನ್ನು ಕಾಯುತ್ತಿರುವ ಹುಲಿಯು ವಂದಿಸಿ ಓಡಿಹೋಯಿತು, ಆಕಳು ಹುಲಿಯ ಕೂಡಿ ಇರುವದನ್ನು ಇವೆಲ್ಲ ದೃಶ್ಯಗಳನ್ನು ಕಂಡಂತಹ ಪ್ರಭು ದೇವರಿಗೆ ಶಿವಯೋಗಿಯು ಇರುವದೆ ನಿಶ್ಚಯವೆಂದು ಭಾವಿಸಿ ಗವಿಯ ಸಮೀಪಕ್ಕೆ ನಡೆದಿರಲು; ಗವಿಯಿಂದ ಜಂಗಮ ರೂಪಿಯಾದ ಶಿವನು ಬಂದು ಪ್ರಭುದೇವನಿಗೆ ವಂದಿಸುತ್ತಾನೆ; ಪುನಃ ಪ್ರಭುವು ಕೂಡ ಆ ಶಿವಯೋಗಿಗೆ ವಂದಿಸುತ್ತಾನೆ, ಇರ್ವರು ಲತಾ ಮಂಟಪದಲ್ಲಿ ಮಂಡಿಸಿದರು. ಅವರೀರ್ವರು ಹೇಗೆ ತೋರಿದರೆಂದರೆ; ರವಿ ತೇಜ ಉಳ್ಳವರಾಗಿಯೂ, ಶಿವ, ಕಲೆ ನಿರಂಜನ ಕಲೆಗಳೆರಡು ಒಂದಡೆ ಸೇರಿ ದಂತೆಯೂ ಅವರೀರ್ವನ್ನು ಒಡೆಯರನ್ನಾಗಿ ಭೂದೇವಿಯು ಪಡೆದಳೊ ಏನೊ ಎಂಬುವಂತಹ ಭಾವನೆ ಬರುವಂತೆ ಲತಾ ಮಂಟಪದಲ್ಲಿ ಶೋಭಿಸುತ್ತಿದ್ದರು, ಆಗ ಪ್ರಭುವು; ಶಿವಯೋಗಿಗಳ ತಮ್ಮ ಕೃಪೆಯಿಂದ ಮಾಯೆಯನ್ನುಗೆದ್ದು ಅನಿಮಿಷ ಗುರು ಗಳಿಂದ ಲಿಂಗವನ್ನು ಪಡೆದು ಇಲ್ಲಿಗೆ ಬಂದಿರುವೆ, ಎಂದು ನುಡಿಯಲು ನಾನು ಶಿವ ನಾದರೇನಾಯಿತು ನೀವು ಸಾಮವೇದಾದಿಗಳಿಂದ ನುತಿಸಲ್ಪಡುವಿರಿ ನಮ್ಮ ನಿರಂಜನ ಕಲೆಯ ಸ್ವಸ್ವರೂಪರಾದ ತಮಗೆ ಆಗೌರವವು ಸಲ್ಲುತ್ತದೆ. ನಾವು ಶಿವಮತದಲ್ಲಿ ಉಳಿಯಬೇಕಾದರೆ ನೀವು ಶಿವಾನುಭವ ಸಿದ್ಧಾಂತವನ್ನು ಹೇಳಬೇಕು ಎಂದು ಪ್ರಶ್ನಿ ಸಲು ಪ್ರಭುವು ನೀವು ಕೊಟ್ಟ ಸ್ವಾನುಭವವನ್ನು ನಿಮಗೆ ಒಪ್ಪಿಸುತ್ತೆನೆಂದು ಹೇಳ ತೊಡಗಿದನು; ನಿಮ್ಮ ಆತ್ಮ ಚೇತನವೆ ಭಾವಲಿಂಗ; ಪ್ರಾಣಲಿಂಗ, ಇಷ್ಟಲಿಂಗಗ ಳಾಗಿ, ಪಶ್ಚಿಮ ಚಕ್ರ, ಶಿಖಾ ಚಕ್ರ ಬ್ರಹ್ಮ ಚಕ್ರಗಳನ್ನು ಸುತ್ತಿಕೊಂಡಿರುವವು,

ಈ ಲಿಂಗವನ್ನು ನಂಬಿ ಭಜಿಸುವ ಶಿಷ್ಯನಿಗೆ ಆದರಿಂದಲೆ ಉದ್ಭವಿಸಿ ಗುರು ವಾಗಿ ಶಿಲಾ ಮೂರ್ತಿಯಾದ ಲಿಂಗದಲ್ಲಿ ಅವನ ಪಶ್ಚಿಮ ಚಕ್ರದಲ್ಲಿರುವ ಚಿತ್ ಕಲೆ ಯನ್ನು ಸ್ಥಾಪಿಸಿ, ಇಷ್ಟಲಿಂಗವೆಂದು ಹೆಸರಿಟ್ಟು, ವಾಮ ಹಸ್ತದಲ್ಲಿ ಇಟ್ಟು ಶಿವ ಯೋಗದ ಸ್ಥಿತಿಯನ್ನು ಕೊಡುವವನು ನೀನೆ, ಶಿವನೇ ನೀನೆ ಇದನ್ನು ಪೂಜಿಸುವ, ಧರಿಸುವ ಕ್ರಮವನ್ನು ತೋರಿಸಿದೆ ನಿನ್ನ ಕೈಲಾಸದಲ್ಲಿ ಪ್ರಮಥರೊಳಗೆ ನಡೆದ ಈ ಪದ್ಧತಿಯ ಪ್ರಚಾರವನ್ನು ಅವರಿಂದಲೆ ಈ ಭೂಮಿಗೆ ಬರುವಂತೆ ಮಾಡಿದೆ, ಆ ಗಣರನ್ನು ರಕ್ಷಿಸುವದಕ್ಕಾಗಿ ನಿನ್ನ ನಿರಂಜನ ಕಲೆಯು ಜಂಗಮವಾಗಿ ಬಂದಿರ ವದು.

ಈ ಜಂಗಮವೆ ಪಶ್ಚಿಮ ಶಿಖಾಚಕ್ರದ ಚಿತ್ ಕಲೆಯು ಇದೇ ತನ್ನ ಇಚ್ಛೆ ಯಿಂದ ಸಂಪ್ರದಾಯವನ್ನು ಬೆಳಸಿ, ಉಳಿಸಿಕೊಂಡಿರುವದು.

ಗುರು ಜಂಗಮರ ಪಾದಕ್ಕೆ ಮುಟ್ಟಿದ ಜಲವು ತೀರ್ಥವಾಗುವದು ಅನ್ನವು ಪ್ರಸಾದವಾಗುವದು, ಗುರು, ಜಂಗಮರಿಲ್ಲದಿದ್ದರೆ, ಲಿಂಗಕ್ಕೆ ಮುಟ್ಟಿಸಿ ತೆಗೆದು ಕೊಳ್ಳುವದು ಸಾಮಾನ್ಯವು; ಗುರು, ಲಿಂಗ, ಜಂಗಮ ಈ ಮೂರು ಪೂಜ್ಯ ವಸ್ತು ಗಳು, ಭಸ್ಮ, ಮಂತ್ರ, ರುದ್ರಾಕ್ಷಿ, ಪೂಜೆಗೆ ಸಾಧನೆಗಳು ಪಾದೋದಕ, ಪ್ರಸಾದ ಗಳೆರಡು ಫಲಗಳು.

ಗುರು, ಲಿಂಗ, ಜಂಗಮರ ರೂಪವೆ ನೀನು ಇವರಿಂದುಂಟಾದದ್ದೆ ತೀರ್ಥ ಪ್ರಸಾದ, ನಿನ್ನ ಮುಖದಿಂದ ಹುಟ್ಟಿದ ಗೋವಿನಿಂದಾದದ್ದೆ ಭಸ್ಮ- ನಿನ್ನ ಕಣ್ಣೀರಿನಿಂದ ಹುಟ್ಟಿದ್ದೆ ರುದ್ರಾಕ್ಷಿ, ನಿನ್ನ ನಾಮವೆ ಮಂತ್ರವು ಹೀಗೆ ಅಷ್ಟಾವರಣವು ನಿನ್ನಿಂದಲೇ ಆಗಿರುವದು ನೀನೆ ನನ್ನ ಗುರುವಾದ ಗುಹೇಶ್ವರನು ಇದನ್ನು ನಿನಗೆ ಒಪ್ಪಿಸಿರು ವೆನು.

ನೀನೆ ಲಿಂಗವಾಗಿದ್ದರು, ಕಲಿಗಣನಾಥನಿಂದ ಲಿಂಗವನ್ನು ಪಡೆದುಕೊಂಡೆ, ಗುರುವಾಗಿದ್ದರು ಶಿಷ್ಯನಾದೆ, ಚರನಾಗಿದ್ದರೂ ಮಿರುಮಿಂಡ ದೇವನಿಗೆ ಭಕ್ತನಾದೆ, ವಿಭೂತಿ ಶ್ರೇಷ್ಠನಾಗಿದ್ದರು ಭಸ್ಮವನ್ನು ಧರಿಸಿಕೊಂಡಿರುವೆ, ನಿನ್ನ ಮಹಿಮೆಯು ಅಗಾಧವಾದದ್ದು.

ನಿನ್ನ ಕಣ್ಣೇ ರುದ್ರಾಕ್ಷಿ, ನಿನ್ನ ಪಾದವೆ ತೀರ್ಥ, ನಿನ್ನ ಅಂಗವೆ ಲಿಂಗ, ನಿನ್ನ ನಾಮವೆ ಮಂತ್ರವು, ನಿನ್ನ ಕರುಣೆಯೆ ಪ್ರಸಾದ; ನಿನ್ನಿಂದ ನೀನೆ ಅಷ್ಟಾವರಣವಾಗಿ ಭಕ್ತನ ಶರೀರವಾಗಿಸುವೆ; ನಿನ್ನ ಆಚಾರಗಳೆ ಪ್ರಾಣವಾಗಿರುವವು, ನಿನ್ನನ್ನು ಅವನು ಬಿಟ್ಟಿರುವದಿಲ್ಲ ನೀನೆ ಆಚಾರ.

ನೀನೆ ಪಂಚಾಚಾರಗಳು ಭೃತ್ಯನಾಗಿ ಅಮುಗಿದೇವಯ್ಯನನ್ನೂ ಮೆಚ್ಚಿಸಿದೆ; ಸದಾಚಾರಿಯಾಗಿ ಗಿರಿಜೆಯನ್ನು ಪಡೆದೆ, ಶಿವಾಚಾರಿಯಾಗಿ ದಕ್ಷಿಣಾಮೂರ್ತಿಯಾದೆ, ಗಣಾಚಾರಿಯಾಗಿ ಸೌಂದರನಂಬಿಯ ಪಾಪವನ್ನು ಕಳೆದೆ, ಲಿಂಗಾಚಾರಿಯಾಗಿ ಬಿಜ್ಜದೇವಿಯನ್ನು ಪೊರೆದೆ, ಹೀಗೆ ಗಣರು ಆಚರಿಸುವ ಆಚಾರವು ನೀನೆ ನಿನ್ನ ಆತ್ಮವು ಭಕ್ತ, ಮಹೇಶ, ಪ್ರಸಾದಿ ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಟ್‌ಸ್ಥಲ ಗಳಾಗಿರುವವು ಇವೆಲ್ಲವು ನೀನಾಗಿರುವೆ.

ಅಂಗದಿಂದಲೆ, ಲಿಂಗ ಸ್ಥಲಗಳು ತ್ಯಾಗಾಂಗ, ಭೋಗಾಂಗ, ಯೋಗಾಂಗ ಎಂದು ಮೂರು ಪ್ರಕಾರವಾಗಿ ಆಗಿರುವವು ಮುಂದೆ ಆಚಾರಲಿಂಗ, ಗುರುಲಿಂಗ,

ಶಿವಲಿಂಗ; ಜಂಗಮ ಲಿಂಗ, ಪ್ರಸಾದಲಿಂಗ, ಮಹಾಲಿಂಗ, ಹೀಗೆ ಆರಾಗಿ ಬ್ರಹ್ಮಾಂಡ ಪಿಂಡಾಂಡಗಳಲ್ಲಿ ಶೋಭಿಸುವದಲ್ಲದೆ, ಕರ್ಮೇಂದ್ರಿಯ ಜ್ಞಾನೇಂದ್ರಿಯಗಳನ್ನು ಕೂಡ ಇರುವವು ಎಂದು ಅರಿತುಕೊಳ್ಳಬೇಕು, ಇದು ಆಚಾರವಂತನಿಗೆ ತಿಳಿಯುವದಲ್ಲದೆ ಅನಾಚಾರಿಗೆ ತಿಳಿಯುವದಿಲ್ಲ ಭಕ್ತಿ ಶಕ್ತಿಗಳು, ಆರು ಆರು ಪ್ರಕಾರವಾಗಿ ಇವೆ.

ಈ ಪ್ರಕಾರವಾಗಿ ಶ್ರದ್ಧಾ, ನಿಷ್ಠಾ, ಸಾವಧಾನ, ಅನುಭವ, ಪರಿಣಾಮ, ಸಮರಸ, ಹೀಗೆ ಆರು ಭಕ್ತಿಗಳು, ಅಂಗ ಲಿಂಗಗಳನ್ನು ವ್ಯಾಪಿಸಿ ಕೊಂಡಿವೆ. ಇವು ಗಳಲ್ಲಿ ಕೊನೆಯ ಮೂರು ಭಕ್ತಿಗಳು, ಶ್ರೇಷ್ಠವಾಗಿವೆ. ಅಂಗವನ್ನು ಲಿಂಗದಲ್ಲಿ ಬೆರೆಸುತ್ತವೆ. ಅವು ಯಾವವೆಂದರೆ, ಅನುಪಮ, ಅವಿರಳ, ಆರು ಶಕ್ತಿಗಳು ಈ ಪ್ರಕಾರವಾಗಿವೆ ಕ್ರಿಯಾಶಕ್ತಿ, ಇಚ್ಛಾಶಕ್ತಿ, ಚಿಚ್ಛಕ್ತಿ, ಜ್ಞಾನಶಕ್ತಿ, ಪರಾಶಕ್ತಿ, ಅಪರ ಶಕ್ತಿ, ಹೀಗಿವೆ ಇವುಗಳಲ್ಲಿ ಮೂರು ಶ್ರೇಷ್ಠವಾಗಿ ಲಿಂಗದಲ್ಲಿ ತೋರುತ್ತವೆ, ಅವು ಯಾವವೆಂದರೆ, ಆದಿಶಕ್ತಿ, ಅನಾದಿ ಶಕ್ತಿ, ಅಪಾರ ಶಕ್ತಿ, ಲಿಂಗದಲ್ಲಿ ತೋರುತ್ತವೆ.

ಇದಲ್ಲದೆ ಶರೀರದಲ್ಲಿರುವ ನವಚಕ್ರಗಳನ್ನು ತಿಳಿದುಕೊಂಡು ಅವುಗಳಲ್ಲಿರುವ ಲಿಂಗ, ಹಸ್ತ, ಇದೆ ಮೊದಲಾದ ವಸ್ತುಗಳನ್ನರಿತು ಕೊಂಡು ಲಿಂಗಕ್ಕೆ ಅರ್ಪಿಸುತ್ತ, ತಾನೆ ಲಿಂಗವಾಗುವನು, ಈ ಮೇದಿನಿಯಲ್ಲಿ ಈ ಲೀಲೆಯು ಕೂಡಾ ನಿನ್ನದೇ ಮೃಡನೆ.

ಇದು ಶಿವಾನುಭವವೆಂದು ಹೇಳಿ ನೀನು ಕಲಿಸಿದ ಪಾಠವನ್ನು ನಿನಗೆ ಒಪ್ಪಿಸಿ ರುವೆನು, ಇದನ್ನು ಸ್ಥಿರಗೊಳಿಸುವದಕ್ಕಾಗಿ ನೀನೆ ಭೂಮಿಗಿಳಿದು ಬಂದಿರುವೆ ನಿನಗೆ ಗುರುಸಿದ್ಧನೆಂದು ಹೆಸರಿಟ್ಟು ಪ್ರಸಿದ್ಧ ಪಡಿಸುವೆದೆಂದು ಹೇಳಿ ನಮ್ಮಸ್ಕರಿಸಿ ಮುಂದೆ ಪ್ರಯಾಣಕ್ಕೆ ಅಣಿಯಾದನು,

ಆಗ ಪ್ರಭುವನ್ನು ಕುರಿತು "ಗುರುಸಿದ್ಧ''ನೆಂಬ ಹೆಸರು ನನಗೇಕೆ ಬೇಕು, ಕೊಡುವದಾದರೆ, ನಿರಾಭಾರಿ ಸಂಸ್ಕಾರವನ್ನು ಕೊಡು ಎಂದು ಕೇಳಲು ಶಿವನು ಈ ನುಡಿಗೆ ಒಪ್ಪಿ ನಿರ್ವಾಹವಿಲ್ಲದೆ ವನದಲ್ಲಿ ಉಳಿದು ಸಂಸ್ಕಾರವನ್ನು ಕೊಡಲು ಚರನು ಅದರಿಂದ ಜಗತ್ತನ್ನು ಕಾಪಾಡುತ್ತ, ಬೆಳಗಿದನು.

ಗದಗ ನಗರದಲ್ಲಿ ವೀರೇಶ್ವರ-ಪುಣ್ಯಾಶ್ರಮ ಮೆರೆಯುವುದು ಅಲ್ಲಿ ನನ್ನ ಗುರು ಗಳಾದ ಪಂ||ಪಂಚಾಕ್ಷರ ಗವಾಯಿಗಳವರ ಶ್ರೇಷ್ಠ ಗರ್ದುಗೆ ಆ ಗರ್ದುಗೆಯ ಹತ್ತಿರ ಕುಳಿತು ಗುರು: ಲಿಂಗ; ಜಂಗಮ ಕಿಂಕರನಾದ "ಪುಟ್ಟರಾಜ"ನೆಂಬ ಹೆಸರುಳ್ಳವನಾದ ನಾನು ಗುರು ಕೃಪೆಯಿಂದ ರಚಿಸಿದ, ಹುಬ್ಬಳ್ಳಿ ಮೂರು ಸಾವಿರ ಮಠದ ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪುರಾಣದಲ್ಲಿ ಎರಡನೆಯ ಸಂಧಿ :-



## ಮೂರನೆಯ ಸಂಧಿ

ಸೂಚನೆ: ಗುರುಸಿದ್ಧೇಶ್ವರನು ಒಡೆಯನಾಗಿ ಮಹಾ ರೋಗವನ್ನು ಕಳೆದು, ಕಲ್ಲನ್ನು ಮಲ್ಲಿಗೆಯನ್ನಾಗಿ ಮಾಡಿ ಮೆರೆದಿರುವನು.

ಮಾವಿನ ಮರವು ತಳಿರುಗಳಿಂದ ಕೂಡಿಕೊಂಡು, ಕೋಗಿಲೆಯನ್ನು ಕರೆಯುವಂತೆ ಭಾಸವಾಗಿ ಅವುಗಳನ್ನು ತಣಿಸುತ್ತಿದ್ದರೂ, ಹೂವಿನಿಂದ ಭ್ರಮರಗಳನ್ನು ತಣಿಸುತ್ತಿದ್ದರೂ, ಹಣ್ಣಾಗಿ ಜನರನ್ನು ತೃಪ್ತಿಪಡಿಸುತ್ತಿದ್ದರೂ, ಆ ಮರವು ಹಳೆಯದಾಗಿರುವದೆಂದು ಕಡಿದು ನಾಶಗೊಳಿಸುವರು. ಅದರಂತೆ ನನ್ನ ಮನದ ಚಾಂಚಲ್ಯವನ್ನೂ ಕಡಿದು ಹಾಕು, ಮರಕಿಂತಲೂ ಕಡೆಯಾದ ನನ್ನನ್ನು ಕಾಪಾಡು.

ಅಲ್ಲಮ ಪ್ರಭುವು ಅಲ್ಲಿಂದ ಹೋದ ಮೇಲೆ ಆ ವಿಯೋಗವನ್ನು ತಾಳಲಾರದೆ, ಜಂಗಮರೂಪಿಯಾದ ಶಿವನು ತನ್ನ ಇಷ್ಟಲಿಂಗದಲ್ಲಿಯೆ ಅವನನ್ನು ಕಾಣುತ್ತ ಸಮಾಧಾನವನ್ನು ಹೊಂದುತ್ತಿದ್ದನು.

ಹುಬ್ಬಳ್ಳಿಯ ಬಿಲ್ವವನದ ಗವಿಯಲ್ಲಿ ಲಿಂಗವನ್ನು ನಿರುಕಿಸುತ್ತ ಕುಳಿತಿರುವ ಆ ಜಂಗಮನು ತನ್ನ ಲಿಂಗದಲ್ಲಿಯ ಜಗತ್ತನ್ನು ಕಾಣುತ್ತಿದ್ದನು ಅವನ ಚಿಚ್ಛಕ್ತಿಯು ಹೊರಗೂ, ಒಳಗೂ, ಕೂಡ ಬೆಳಗುತ್ತಿತ್ತು.

ಆ ಗವಿಯ ಹತ್ತರ ಇದ್ದ ಹೊಂಡದ ನೀರು ಅಮೃತಮಯವಾಗಿ ದಾರಿಕಾರರನ್ನೂ ತಣಿಸುತ್ತ, ಬೇಸಿಗೆಯಲ್ಲಿ ಕೂಡ ಬತ್ತದೆ ಹಾಗೆ ಯಾವಾಗಲೂ ತುಂಬಿರುವನೆಂಬುದನ್ನು ತೋರಿಸುವದೊ ಏನೋ ಎಂಬಂತೆ ನೀರಿನಿಂದ ತುಂಬಿ ತೋರುತ್ತಿತ್ತು.

ಗವಿಯಲ್ಲಿದ್ದ ಹುಲಿಯು ಚಿಗರೆಯೇ ಮೊದಲಾದ ಪ್ರಾಣಿಗಳನ್ನು ಕೂಡಿಕೊಂಡು ತನ್ನ ವೈರತ್ವವನ್ನು ಮರೆತು ಸ್ನೇಹ ಭಾವದಿಂದ ವರ್ತಿಸುತ್ತಿತ್ತು, ಭೂದೇವಿಯು ಜಪವನ್ನುಮಾಡುತ್ತ ಶಾಂತಳಾಗಿ ಕುಳಿತಿರುವಳೊ ಎಂಬಂತೆ ಅಲ್ಲಿಯ ಬನದ ವಾತಾವರಣ ತೋರುತ್ತಿತ್ತು, ಹೀಗಿರುವಲ್ಲಿ ಓರ್ವ ಮನುಷ್ಯನು ಗವಿಯ ಸಮೀಪದಲ್ಲಿರುವ ವೃಕ್ಷಕ್ಕೆ ನೇಣು ಹಾಕಿಕೊಳ್ಳಲು ಯತ್ನಿಸುತ್ತಿದ್ದನು, ಆಗ ಗವಿಯಿಂದ ಹೊರಗೆ ಶಿವಯೋಗಿಯು ಬಂದು ಅದನ್ನು ತಡೆದು ಹೀಗೇಕೆ ಮಾಡಿದೆ ಎಂದು ಕೇಳಲು, ಜಂಗಮನಿಗೆ ಆ ಮನುಷ್ಯನು ವಂದಿಸಿ, ನನ್ನ ಮಗನು ಮಹಾ ರೋಗದ ತಾಪವನ್ನು ತಾಳಲಾರದೆ, ಮಡಿಯುವ ಸ್ಥಿತಿಯಲ್ಲಿದ್ದನು, ಅದನ್ನು ನೋಡಲಾರದೆ ನಾನೆ ಮೊದಲು ಮಡಿಯಬೇಕೆಂದು, ಈ ಕಾರ್ಯಕ್ಕೆ ಮನಸ್ಸು ಮಾಡಿದೆನೆಂದು ಹೇಳಿದೆನು, ಆಗ ಜಂಗಮನು ಭಸ್ಮವನ್ನು ಅವನಿಗೆ ಕೊಟ್ಟು "ನಿನ್ನ ಮಗನಿಗೆ ಮರಣವಿಲ್ಲ" ಎಂದು ಅಪ್ಪಣೆ ಮಾಡಿದನು, ಅದನ್ನು ಭಕ್ತಿಯಿಂದ ತೆಗೆದುಕೊಂಡು ಹೋಗಿ ಜಲ ಮಿಶ್ರಮಾಡಿ ಮಗನಿಗೆ ಕೂಡಿಸಲು. ಭಯಂಕರವಾದ ಮಹಾ

ರೋಗದ ನಿವಾರಣೆಯಾಯಿತು, ಎಲ್ಲ ವೈದ್ಯರಿಗೂ ಮೀರಿದ ಈ ರೋಗವು ಗುಣವಾದದ್ದನ್ನು ಕಂಡು ಹುಬ್ಬಳ್ಳಿಯ ಜನರು ಆಶ್ಚರ್ಯಪಟ್ಟು, ಆವರೊಡನೆ, ಕಾಯಿ, ಕರ್ಪುರಗಳನ್ನು ಕೆಗೆದುಕೊಂಡು ಜಂಗಮನನ್ನು ಕಾಣಲು ಗವಿಗೆ ಬಂದರು. ರೋಗದಿಂದ ಮುಕ್ತನಾದ ಹುಡುಗನು ಜಂಗಮನಿಗೆ ನಮಿಸಿ ನಿನ್ನಿಂದ ನಾನು ಉದ್ಧಾರನಾದನೆಂದು ಹೊಗಳಿದನು, ಆವನ ತಂದೆಯು ನಾವು ಕುರುಬರು ಇವನ ಹೆಸರು ಉಳಿವೆಪ್ಪ ನನ್ನ ಹೆಸರು ಮುನಿಯಪ್ಪ ಈ ಬಡವನ ಈ ಅಲ್ಪ ಕಾಣಿಕೆಯನ್ನು ಸ್ವೀಕರಿಸಿರಿ ಎಂದು ಬೇಡಿಕೊಂಡ, ಆಗ ಜಂಗಮನು ಇದು ನಮಗೆ ಬೇಡ ಎಂದು ನಗುನಗುತ ಬೇರೊಬ್ಬ ಬಡವನಿಗೆ ಎಸೆಯಲು, ಅವನು ತೆಗೆದುಕೊಳ್ಳಲು ಮತ್ತೆ ಹುಚ್ಚನಂತೆ ಮೇಲೆ ಕುಳಿತುಕೊಂಡನು.

ಇವನು ನಗುವದನ್ನು ನೋಡಿ ಓರ್ವ ಮೂರ್ಖ ಮನುಷ್ಯನು ಒಂದು ಕಲ್ಲನ್ನು ಆ ಜಂಗಮ ಮೂರ್ತಿಗೆ ಎಸೆದನು, ಅದು ಶಿವಯೋಗಿಯ ಪಾದಕ್ಕೆ ಮಲ್ಲಿಗೆಯ ಹೂವಿನ ಗುಚ್ಛವಾಗಿ ಶೃಂಗಾರವಾಯಿತು, ಆಗ ಆ ಸನ್ನಿವೇಶವನ್ನು ನೋಡಿದ ಜನರು ಕಲ್ಲು ಎಸೆದವನನ್ನು ಹೊಡೆಯಲೋಡಿದರು ತಕ್ಷಣ ಆ ಭಕ್ತ ಸಮೂಹಕ್ಕೆ ಬುದ್ಧಿಯನ್ನು ಹೇಳಿ ಬಿಡಿಸಿದನು. ಆವಾಗ್ಗೆ ಇವನು ಮಹಾತ್ಮನೆಂದು, ಇನ್ನು ಕೆಲವರು ಹುಚ್ಚನೆಂದು, ನುಡಿಯುತ್ತಿದ್ದರು ಇನ್ನು ಕೆಲವರು ಶಿವನೇ ಮರುಳಶಂಕರನಾಗಿ ಬಂದು ಬಸವಣ್ಣನವರ ಗೃಹದ ಪ್ರಸಾದ ಕುಂಡದಲ್ಲಿ ಕುಳಿತ್ತಿದ್ದನ್ನು ಅಲ್ಲಮ ಪ್ರಭುಗಳು ಗುರಿತಿಸಿದರು, ಅಲ್ಲಮ-ಪ್ರಭುವು ಮಹಾರೋಗಿಯಾಗಿ ಅಲೆದಾಡುತ್ತಿರುವಾಗ ಬಸವಣ್ಣನವರು ಗುರುತಿಸಿ, ಅವರನ್ನು ಕರೆತಂದು ಪೂಜಿಸಿದರು. ಶ್ರೀ ಶೈಲಮಲ್ಲಿಕಾರ್ಜುನ ಹೊಟ್ಟೆ ನೋವಿನ ರೋಗದಿಂದ ಸಿದ್ಧರಾಮನನ್ನು ಪರೀಕ್ಷಿಸಿ ಉದ್ಧರಿಸಿದನು ಹೀಗೆ ಮಹಾತ್ಮರ ಇರವು ನಮಗೆ ತಿಳಿಯುವದಿಲ್ಲವೆಂದು ಆ ಜನರು ಮಾತದಾಡುತ್ತಿದ್ದರು. "ಗುರುಸಿದ್ಧೇಶ್ವರ"ನೆಂದು, ಅಲ್ಲಮ ಪ್ರಭುವು ಹೆಸರಿಟ್ಟು ಹೋಗಿದ್ದರು, ಅಲ್ಲಿಯ ಜನರು ಇವನ ಇರುವನ್ನೂ ತಿಳಿಯದೆ ಹುಚ್ಚನೆಂದು ಕರೆಯುತ್ತಿದ್ದರು ||

ಗದಗನಗರದ ವೀರೇಶ್ವರ-ಪುಣ್ಯಾಶ್ರಮದಲ್ಲಿ ಪಂ|| ಪಂಚಾಕ್ಷರ ಗವಾಯಿಗಳವರ ಗದ್ದುಗೆಯ ಹತ್ತಿರ ಕುಳಿತು ರಚಿಸಿದ ಹುಬ್ಬಳ್ಳಿಮೂರುಸಾವಿರ ಮಠದ ಕರ್ತೃ ಶ್ರೀ ಜಗದ್ಗುರು-ಗುರುಸಿದ್ಧೇಶ್ವರ ಪುರಾಣದಲ್ಲಿ ಮೂರನೆ ಸಂಧಿ ಮಂಗಲವಾಯಿತು.



## ನಾಲ್ಕನೆಯ ಸಂಧಿ

ಸೂಚನೆ:– ವ್ಯಾಪಾರದಲ್ಲಿ ಲಾಭವನ್ನು ತೋರಿಸಿ, ತೋಳದ ಭಕ್ತಿಯನು ಕೈಕೊಂಡು ಮೊಮ್ಮಗನನ್ನು ಕರುಣಿಸುತ, ನ್ಯಾಯ ನಿರ್ಣಯ್ನ ವನ್ನು ಮಾಡಿರುವನು.

ಯತಿಗಳಲ್ಲಿ ಶ್ರೇಷ್ಠನಾದವನು, ಮನ್ಮಥನ ದರ್ಪವನ್ನು ಕಳೆದವನು ಇಂದ್ರಿಯಗಳನ್ನು ಗೆದ್ದವನು, ಕಂಬಲಾಶ್ವತರ ಗಾನಕ್ಕೆ ಮುಗ್ಧನಾದವನು, ಭಕ್ತ ವತ್ಸಲನು ಆದ ಗುರುಸಿದ್ಧನೆ ಸರಸ್ವತಿಯ ಲೇಖನದಂತೆ ಇದನ್ನು ಶ್ರೇಷ್ಠಗೊಳಿಸು.

ಹುಬ್ಬಳ್ಳಿಯಲ್ಲಿ ಶಿವಪ್ಪ ಶೆಟ್ಟಿ ಎಂಬ ಭಕ್ತನು ಆ ಬಾಲವೃದ್ಧರಿಗು ಕೂಡ ಬೇಕಾದವನಾಗಿದ್ದನು, ಇವನು ಹುಚ್ಚೇಶನ ಮೇಲೆ ಭಕ್ತಿಯಿಟ್ಟುಕೊಂಡ ಅವನನ್ನು ಕಂಡೆ ವ್ಯಾಪಾರಕ್ಕೆ ಹೋಗಬೇಕೆಂದು, ಆ ಬನವನೆಲ್ಲ ಹುಡುಕಿದರು; ಹುಚ್ಚೇಶನು, ಕಾಣದಾದನು, ಜಾಣನಾದ ಶಿವಪ್ಪನು ಆ ಹುಚ್ಚೇಶನನ್ನು ಮನದಲ್ಲಿಯೇ ನೆನೆಯುತ್ತ ವ್ಯಾಪಾರದಲ್ಲಿ ಲಾಭ ಬಂದರೆ ಕಾಣಿಕೆ ಮುಟ್ಟಿಸುವೆನೆಂದು ಸಂಕಲ್ಪಿಸಿ ವ್ಯಾಪಾರಕ್ಕೆ ಹೋದನು, ವ್ಯಾಪಾರವು ಚೆನ್ನಾಗಿ ನಡೆದು ಲಾಭವು ತೋರಿತು, ದಾರಿಯಲ್ಲಿ ಬರುವಾಗ್ಗೆ ಕಳ್ಳರು ಸುಲಿಗೆಗಾಗಿ ಬರಲು, ತನ್ನಲ್ಲಿದ್ದ ಹಮ್ಮಿಣಿಗೆಯನ್ನು ಹುಚ್ಚೇಶನನ್ನು ನೆನೆಯುತ್ತ ಅವರ ಕೈಯಲ್ಲಿ ಕೊಟ್ಟನು, ಕಳ್ಳರು ಖಾಲಿ ಚೀಲವೆಂದು ಎಸೆದು ಹೊಡೆದು ಓಡಿ ಹೋದರು, ದುಃಖದಿಂದ ಶಿವಪ್ಪನು ಆ ಬರಿದಾದ ಚೀಲವನ್ನು ತೆಗೆದುಕೊಂಡು, ಝಾಡಿಸಲು ರೂಪಾಯಿಗಳು ಸುರಿದವು, ಅವುಗಳನ್ನು ತೆಗೆದುಕೊಂಡು ಎಣಿಸಲು ಸರಿಯಾಗಿದ್ದವು ಆನಂದದಿಂದ ಮನೆಗೆ ಬಂದು ವ್ಯಾಪಾರವನ್ನು ಮತ್ತೆ ಮಾಡತೊಡಗಿದನು ಹುಚ್ಚೇಶನನ್ನು ಮರೆತನು; ಒಂದುದಿವಸ ಕನಸಿನಲ್ಲಿ ಹುಚ್ಚೇಶನು ಬಂದು ನನ್ನ ಕಾಣಿಕೆಯನ್ನು ಮುಟ್ಟಿಸೆನಲು ಆಗ ಎಚ್ಚತ್ತು ತನ್ನ ತಪ್ಪಿಗಾಗಿ ಮರುಗಿ ಹುಚ್ಚೇಶನಲ್ಲಿಗೆ ಹೋಗಿ, ಹುಚ್ಚೇಶ ನೀನು ಲೋಕದ ಒಡೆಯನೂ ಶ್ರೇಷ್ಠನು, ಕರ್ತೃವು, ಆದ ನೀನು ನನ್ನ ತಪ್ಪನ್ನು ಕ್ಷಮಿಸಿ ಕಾಣಿಕೆಯನ್ನು ಮುಂದಿಟ್ಟು ನಮಸ್ಕರಿಸಿದನು, ಆಗ ಹುಚ್ಚೇಶನು ಶಿವಪ್ಪನ ಉಡಿಯಲ್ಲಿ ಧನವನ್ನು ತಂದಿದ್ದ, ಕಾಯಿ, ಕರ್ಪೂರವನ್ನಿಟ್ಟು ಇದರಿಂದ ಜಂಗಮ ದಾಸೋಹ ನಡಿಸೆಂದು ಹೇಳಿ ಕಳಿಸಿದನು ಇದರಿಂದ ಜಂಗಮ ಭಕ್ತಿಯು ಆ ನಾಡೊಳಗೆ ಹೆಚ್ಚಾಯಿತು :– ೨ ರಿಂದ ೧೩ರ ವರೆಗೆ

ದನ ಕಾಯುವ ಹುಡುಗರು ಅದೇ ಅಡವಿಯಲ್ಲಿ ಪಶುಗಳನ್ನು ಮೇಯಿಸುತ್ತಿರುವಾಗ, ಒಂದು ಆಕಳವು ಕರವನ್ನೀಯಲು ಒಂದು ತೋಳವು ಬಂದು ಕರುವನ್ನು ತೆಗೆದುಕೊಂಡು ಹೋಯಿತು, ದನಕಾಯುವ ಹುಡುಗರು ಬೆದರಿ ಚೀರಾಡಲು, ಹುಚ್ಚೇಶನು ಗವಿಯಿಂದ ಹೊರಗೆ ಬಂದು ಈ ಘಟನೆಯನ್ನು ನೋಡಿ "ಎಲೈ

ತೋಳಿವೆ ಬಾಯೆಂದು ಕರೆಯಲು, ತೋಳವು ಹುಚ್ಚೀಶನ ಸಮೀಪಕ್ಕೆ ಬಂದು ಆ ಕರುವನ್ನು ಬಿಟ್ಟು ಅವರು ಕೊಟ್ಟ ಕರ್ಜೂರವನ್ನು ತೆಗೆದುಕೊಂಡು ಹೋಯಿತು. ಕರುವಿಗೆ, ಆದ ಗಾಯಕ್ಕೆ ಭಸ್ಮವನ್ನು ಹಚ್ಚಿ ಗುಣಪಡಿಸುತ್ತಿರಲು ತಾಯಿಯಾದ ಆಕಳು ಬಂದು ಕರುವನ್ನು ಪ್ರೇಮದಿಂದ ನೆಕ್ಕ ಹತ್ತಿತು.

ದನಕಾಯುವ ಹುಡುಗರಿಂದ ಅವುಗಳನ್ನು ಒಡೆಯನಿಗೆ ಮುಟ್ಟಿಸಲು ತಿಳಿಸಿ, ಶಿವಪೂಜೆಗೆ ಗವಿಯೊಳಗೆ ಹೋದರು, ಇದೆಲ್ಲ ವಿಷಯವು ದನಗಾಯುವ ಹುಡುಗರಿಂದ, ದನದ ಮಾಲಕನಿಗೆ ತಿಳಿಯಲು ಗುರುಹುಚ್ಚೀಶನ ಕೃಪೆಯಿಂದ ಉಳಿದಿರುವಂತಹ ಈ ಆಕಳು ಹಾಗು ಕರವನ್ನು ಅವನಿಗೆ ಕೊಡಬೇಕೆಂದು ತಿಳಿದು, ತಂದು ಒಪ್ಪಿಸಿ ನನ್ನ ವಂಶವು ಇದರಿಂದ ಉದ್ಧಾರವಾಗಲೆಂದು ಬೇಡಿಕೊಳ್ಳಲು, ಆಗ ಸರ್ವವನ್ನು ತಿಳಿದ ಹುಚ್ಚೀಶ್ವರನು ಆಶೀರ್ವಾದ ಮಾಡಿ ಕಳುಹಿಸಿದನು, ಈ ವಿಷಯು ಊರಲ್ಲಿ ಪಸರಿಸಲು ಕೆಲವರು ಈ ರೀತಿಯಾಗಿ ಮಾತಾಡುತ್ತಾರೆ. ಪೂರ್ವದಲ್ಲಿ ಶೀಲವಂತನಾದ; ಆಂಧ್ರ ಬೊಮ್ಮಯ್ಯನೆಂಬ ಶರಣನು ಶಿವಪೂಜೆಗಾಗಿ ಹೂ ಪತ್ರಗಳನ್ನು ತರಲು ಹೋದಾಗ, ಕಾಡುಮೃಗಗಳು, ಸುತ್ತುಗಟ್ಟಲು "ಬಸವ"ನನ್ನು ನೆನೆಯುತ್ತ ಅವುಗಳನ್ನು ಮಾತಾಡಿಸಿದನೆಂದು ಕೇಳಿ ಇದು ಪುಸಿ ಎಂದು ತಿಳಿದಿದ್ದೆವು ಅದು ಹುಚ್ಚೀಶನಿಂದ ದಿಟವಾಯಿತೆಂದು ಅವರು ನುಡಿದರು. ಅವರಲ್ಲಿ ಇನ್ನೊಬ್ಬನು, ಕಲ್ಯಾಣದಲ್ಲಿ ಕಿನ್ನರಿ ಬೊಮ್ಮಯ್ಯನು ಲಿಂಗದಿಂದ ಸಾಕ್ಷಿಯನ್ನು ಹೇಳಿಸಿದನೆಂದು ನಾನು ಕೇಳಿದೆನು, ಇದು ಸಹ ನಮ್ಮ ಹುಚ್ಚೀಶನಿಂದ ದಿಟವಾಯಿತು.

ಹುಬ್ಬಳ್ಳಿಯಲ್ಲಿ ದೊಡ್ಡ ಮನೆಯವರ ಬಸಮ್ಮನು ಪತಿಯನ್ನು ಕಳೆದುಕೊಂಡು, ಮಗನನ್ನು ಸಲುಹುತ್ತ ಅವನಿಗೆ ಲಗ್ನ ಮಾಡಿ ಸೊಸೆಯನ್ನು ಕೂಡಿಕೊಂಡಿರಲು ನೊಮ್ಮಕ್ಕಳಾಗದೆ ಇರವುದನ್ನು ಕಂಡು ಮಗನಿಗೆ ಮತ್ತೊಂದು ಮದುವೆ ಮಾಡಲು ಯತ್ನಿಸಿದಳು; ಸೊಸೆಯಾದ ಶೀಲಾಂಬೆಯು ಲಗ್ನ ಮಾಡುವದಾದರೆ ತನ್ನ ತಂಗಿಯನ್ನೇ ಮಾಡಬೇಕೆಂದು ಪರಿಪರಿಯಾಗಿ ಅತ್ತೆಯನ್ನು ಬೇಡಿಕೊಂಡಳು. ಅದಕ್ಕೆ ಅವಳು ನಿನ್ನ ವಂಶವೇ ಬೇಡವೆಂದು ತಿರಸ್ಕರಿಸಿ ನುಡಿಯಲು, ಈ ವಿಷಯುನ್ನು ತನ್ನ ತಂದೆಗೆ ಹೇಳಿಕೊಂಡಳು; ಅವನು ತನ್ನ ಗೆಳೆಯನಾದ ಶಿವಪ್ಪಶೆಟ್ಟಿಗೆ ತಿಳಿಸಿದನು; ಈರ್ವರೂ ಕೂಡಿಕೊಂಡು ಹುಚ್ಚೀಶನಲ್ಲಿಗೆ ತಿಳಸಲು, ಬೀಗತಿಯಾದ ಬಸಮ್ಮನನ್ನು ಕರೆಯಲು; ಬಸಮ್ಮ ಬಿಂಕದಿಂದ ಸಿಕ್ಕಸಿಕ್ಕ ಹಾಗೆ ಬಯ್ದು ತನ್ನ ಛಲವನ್ನು ಬಿಡದೆ ತಾನು ಸನ್ಯಾಸಿಯನ್ನು ನೋಡಬಾರದೆಂದು; ನಾನು ಬರುವದಿಲ್ಲವೆಂದು ಹೇಳಿದಳು. ಗುರುನಿಂದೆಯನ್ನು ಕೇಳಿ ಮನದಲ್ಲಿ ಮರುಗುತ್ತಲೇ ಹುಚ್ಚೀಶನಲ್ಲಿಗೆ ಬಂದು ಸರ್ವ ವಿಷಯನ್ನು ತಿಳಿಸಿದರು. ಇತ್ತ ಬಸಮ್ಮನ ಕಣ್ಣಾಗಳು ಕಾಣದಂತಾಗಿ ಕತ್ತಲೆಯು ಕವಿಯಿತು, ತಕ್ಷಣ ತನ್ನ ತಪ್ಪಿನ ಅರಿವಾಯಿತು.

ಕೂಡಲೆ ಬಿಲ್ವ ವನದಲ್ಲಿ ವಾಸಿಸಿದ ಹುಚ್ಚೀಶನಲ್ಲಿಗೆ ಒಂದು ಪಾದನನ್ನು ಘಟ್ಟಿ ಯಾಗಿ ಪಿಡಿದು ಕ್ಷಮೆ ಯಾಚಿಸಲು ಕಣ್ಣುಗಳು ಮೊದಲಿನಂತೆಯೆ ಪ್ರಕಾಶಮಾನ ವಾಗಲು, ಮೊಮ್ಮಗನನ್ನು ಕರುಣಿಸೆಂದು ಬೇಡಿಕೊಳ್ಳಲು,

ಪಾದಕ್ಕೆರಗಿದ ಬಸಮ್ಮನನ್ನು ನೋಡಿ ಗುರುವಾದ (ಹುಚ್ಚೀಶ) ಗುರುಸಿದ್ಧೇ-ಶ್ವರನು ನಿನ್ನ ಇದೆ ಸೊಸೆಯಿಂದ ಮೊಮ್ಮಗನನ್ನು ಪಡೆಯುವೆ ಜಂಗಮಾರಾಧಾನೆ-ಯನ್ನು ಮಾಡು ಅದರಿಂದ ನಮ್ಮನ್ನು ನಿಂದಿಸಿದ ಪಾಪವು ತೊಲಗಿ ನಿನಗೆ ಸುಖ ವಾಗುವದೆಂದು ಹೇಳಿ ಶಿವಪ್ಪನನ್ನು ನೋಡಲು ಎಲ್ಲರೂ ಒಪ್ಪಿಕೊಂಡು ಗುರುನುಡಿ ಯಂತೆ ನಡೆದು ತಮ್ಮ ತಮ್ಮ ಮನೆಗಳಲ್ಲಿ ಜಂಗಮಾರಾಧಾನೆಯನ್ನು ನಡೆಸಿ ಗುರು ಕೃಪೆಗೆ ಪಾತ್ರರಾದರು, ಬಸಮ್ಮನು ಸಹ ಅದೇ ಸೊಸೆಯಿಂದ ಮೊಮ್ಮಗನನ್ನು ಪಡೆದು ಗುರುಧ್ಯಾನದಲ್ಲಿಯೇ ಕಾಲ ಕಳೆದು ಚಿರಶಾಂತಿಯನ್ನು ಹೊಂದಿದರು.

ಹುಬ್ಬಳ್ಳಿಯಲ್ಲಿ ಶ್ರೀಪತಿಯೆಂಬ ಹೆಸರಿನ ವೈಷ್ಣವನು ಶ್ರೀವಂತನಾಗಿ, ಬಡ್ಡಿ ವ್ಯವಹಾರ ಮಾಡುತ್ತ ಬಡವರನ್ನು ಗೋಳಾಡಿಸುತ್ತ ಇದ್ದನು. ರಾಮಪ್ಪನೆಂಬ ಬಡವನು ಅವನಲ್ಲಿ ಒಂದು ಎಕರೆ ಹೊಲವನ್ನು ಒತ್ತಿ ಹಾಕಿ, ಶ್ರೀಮಂತನಿಚ್ಛೆ ಯಂತೆ ಬಿಳಿ ಹಾಳಿಯ ಮೇಲೆ ಸಹಿ ಮಾಡಿ ನೂರು ರೂಪಾಯಿಗಳನ್ನು ಸಾಲ ತೆಗೆದು ಕೊಂಡು ಒಂದು ವರ್ಷದ ಮೇಲೆ ಕೊಡಲು ಹೋದಾಗ ಇನ್ನೊಂದು ನೂರು ರೂಪಾಯಿಗಳನ್ನು ಯಾವಾಗ ಕೊಡುವೆ ಎಂದು ಕೇಳಿದನು, ಆಗ ರಾಮಪ್ಪನು ನಾನು ಒಂದೇ ನೂರು ರೂಪಾಯಿ ಒಯ್ದಿರುವೆನು; ಎನಲು ನೀನೆ ಸಹಿ ಮಾಡಿ ಎರಡು ನೂರು (೨೦೦) ರೂಪಾಯಿಗಳನ್ನು ಒಯ್ದಿರುವೆ ಇದೊ ನೋಡು ಎಂದು ಆ ಕೃತ್ರಿಮ ಪತ್ರವನ್ನು ತೋರಿಸಿದನು ಎಕೆಂದರೆ ಶ್ರೀಮಂತನಾದ ಶ್ರೀಪತಿಯಲ್ಲಿ ಬೇರೆಯವರ ಅಕ್ಷರ ಬರೆಯುವ ಕಲೆ ಇತ್ತು, ಅದನ್ನು ಯಾರಿಗೂ ತೋರಗೊಡದೆ ಒಳ್ಳೆಯವನಂತೆ ವರ್ತಿಸುತ್ತಿದ್ದ. ಆ ಪತ್ರವನ್ನು ನೋಡಿ ಬಡವ ನಾದ ರಾಮಪ್ಪನು ಗಾಬರಿಯಿಂದ ನಿಂತುಕೊಂಡನು ಜನರೆಲ್ಲರು ಅವನನ್ನು ಬಯ್ಯ ತೊಡಗಿರಲು, ದಿಟ್ಟನಾದ ರಾಮಪ್ಪನು ತನ್ನ ಸಂಗಡಿಗರೊಡನೆ ಹುಚ್ಚೀಶನಲ್ಲಿಗೆ ಹೋಗಿ ಬೇಡಿಕೊಂಡು ವಿನಯದಿಂದ ತನ್ನ ಗೆಳೆಯರೊಡನೆ ವಂದಿಸಿ ಒಂದೆಡೆ ಕುಳಿ ತನು, ಆಗ ಹುಚ್ಚೀಶನು ಆ ಪತ್ರವನ್ನು ಓದಿ ಹೇಳಬೇಕೆಂದು ಶ್ರೀಮಂತನಿಗೆ ಆಜ್ಞಾಪಿಸಿದ್ದನು; ಶ್ರೀಮಂತನು ಓದಲು ಹತ್ತಿದಾಗ ನೂರು ರೂಪಾಯಿಯೆಂದು ನುಡಿದನು ಅದರಂತೆ ಪತ್ರದಲ್ಲಿಯೂ ನೂರು ರೂಪಾಯಿಗಳೆಂದು ಲಿಪಿ ಬದಲಾ ಗಿತ್ತು ಅದನ್ನು ಕಂಡ ಶ್ರೀಪತಿಯು ಭಯಪಟ್ಟು ನನ್ನದು ತಪ್ಪಾಯಿತೆಂದು ಸ್ವಾಮಿಗೆ ಹೇಳಿ, ವಂದಿಸಿ ಬೇಡಿಕೊಂಡನು ಆಗ ಆ ಪತ್ರವನ್ನು ಹರಿದು ಹಾಕಿ ರಾಮಪ್ಪನು ಕೊಟ್ಟ ನೂರು ರೂಪಾಯಿಗಳನ್ನು ಹುಚ್ಚೀಶನ ಪಾದಕ್ಕೆ ಅರ್ಪಿಸಿ

ದನು ಆಗ ಹುಚ್ಚೀಶನು ಶ್ರೀಪತಿಯನ್ನು ನೋಡಿ ಶ್ರೀಮಂತನಾಗಿದ್ದರೂ ಹಣ ದಾಶೆ ಏಕೆ ಈ ಆಶೆಯಿಂದ ದುರಿತ ಜನ್ಮಗಳು ಬರುವವೆಂದು ಭೋಧಿಸಿದನು. ಆಗ ರಾಮಪ್ಪನು ಸಹ ನೀನೆ ಶಿವನು; ಕೈಲಾಸದಿಂದ ಬಂದವನು; ಎಂದು ಸುತಿಸಿದನು ಆಗ ಧನಿಕನಿತ್ತ ರೂಪಾಯಿಗಳನ್ನು ವಿದ್ಯಾರ್ಥಿಗಳಿಗೆ ಉಪಯೋಗಿಸಿರೆಂದು ಹೇಳಿ ಕಳುಹಿಸಿದನು, ಕೂಡಿದ ಭಕ್ತ ಸಮೂಹವನ್ನು ನೋಡಿ ಅವರವರ ಹೆಸರಿನಿಂದ ಕರೆದು ಆಶಿರ್ವದಿಸಿದನೆಂಬಲ್ಲಿಗೆ ಗುರುಕೃಪೆಯಿಂದ ನಾಲ್ಕನೆಯ ಸಂಧಿಯು ಸಂಪೂರ್ಣವಾಗಿದೆ.



## ಐದನೆಯ ಸಂಧಿ

ಸೂಚನೆ:— ಗುರುಸಿದ್ಧೇಶ್ವರನು ಕಲ್ಯಾಣಶೆಟ್ಟಿ, ಬಸಪ್ಪಶೆಟ್ಟಿ, ಕಾಡಪ್ಪಶೆಟ್ಟಿ ಕೆಂಚನಗೌಡ, ಮಲ್ಲನಗೌಡ ಇವರೆಲ್ಲರನ್ನು ಕಾಪಾಡಿದನು.

ಶೃತಿಗಳ ಸಮೂಹದಿಂದ ಹೊಗಳಿಸಿಕೊಳ್ಳುವವನೂ, ಮನ್ಮಥನನ್ನು ಜಯಿಸಿ ದವನೂ, ಜನರಿಗೆ ಹಿತವನ್ನು, ಬುದ್ಧಿಯನ್ನು, ಆಸ್ತಿಕ್ಯವನ್ನು ಕೊಡುವವನೂ, ಯತಿಶ್ರೇಷ್ಠರಿಂದ ನಮಸ್ಕರಿಸಿಕೊಳ್ಳುವವನು; ಉತ್ತಮ ಗತಿಯುಳ್ಳವನೂ; ಮೃತ್ಯುವನ್ನು ಜಯಿಸಿದವನು, ಹುಟ್ಟು ಸಾವುಗಳಿಂದ ದೂರಾದವನೂ, ಯಮ ನನ್ನು, ಅಂಧಕಾಸುರನನ್ನು ನಾಶಮಾಡಿದವನು, ಮುನಿಗಳ ಹೃದಯವನ್ನು ಅರ ಳಿಸುವವನೂ, ಆದ ಗುರುಸಿದ್ಧೇಶ್ವರನೆ ನನ್ನ ಮನದ ಮನೆಯಲ್ಲಿ ಯಾವಾಗಲು ವಾಸವಾಗಿರು.

ಶಿವಲಿಂಗ ಪೂಜೆಯಲ್ಲಿ, ಶಿವ ಭಜನೆಯಲ್ಲಿ ಶಿವಜ್ಞಾನ ಮಾರ್ಗದಲ್ಲಿ ಶಿವನ ಧ್ಯಾನದಲ್ಲಿ ಶಿವಚಿಂತೆಯಲ್ಲಿ; ಶಿವಧರ್ಮ-ಪ್ರೇಮದಲ್ಲಿ, ಶಿವಮಯವಾದ ಸರ್ವ ಭಾವನೆಯಲ್ಲಿ, ಶಿವಶರಣರ ಸಂಗದಲ್ಲಿ, ಶಿವ ಜೀವರ ಐಕ್ಯದಲ್ಲಿ ಗುರುಸಿದ್ಧನು ಕೂಡಿ ದ್ದನು. ಹೀಗಿರುವಾಗ ಗವಿಯಿಂದ ಹೊರಗೆ ಬಂದು ಗುರುಸಿದ್ಧೇಶ್ವರನು ಮೃಗ ಗಳನ್ನು ನೋಡಲು ಎಲ್ಲವೂ ಶಿವಾಕಾರವಾಗಿಯೆ ಕಾಣುತ್ತಿದ್ದವು; ಹೀಗೆ ನಿಂತಿರುವ ಸಮಯದಲ್ಲಿ, ಕಲ್ಯಾಣ ಶೆಟ್ಟಿ ನಾಮಕ ಭಕ್ತನು ಹೊಂಡದಲ್ಲಿ ಮುಖ-ಮಾರ್ಜನೆ ಯನ್ನು ಮಾಡಿಕೊಂಡು ಗುರುವಿಗೆ, ವಂದಿಸಿ, ಅವನ ಅಪ್ಪಣೆಯಿಂದ ಒಂದುಕಡೆ ಕುಳಿತುಕೊಂಡನು, ಗುರುವೆ; ನಿನ್ನ ಕೃಪೆಯಿಂದ ನನಗೆ ಯಾವುದಕ್ಕೂ ಕೊರತೆ ಯಿಲ್ಲ. ಆದರೆ ಮಕ್ಕಳ ಸಂಪತ್ತು ಕಡಿಮೆಯಿದೆ, ಅದಕ್ಕಾಗಿಯೇ ಅನೇಕ ವ್ರತ ಗಳನ್ನು ಮಾಡಿದೆ. ಕಂಡ ಕಂಡ ದೇವರಿಗೆ ಬೇಡಿಕೊಂಡೆ ಯಾವುದರಿಂದಲೂ

ಸಾಧ್ಯವಾಗಲಿಲ್ಲ. ನಾನು ಮೂರ್ಖನಿರುವೆ ನಿನ್ನನ್ನು ಮರೆತು, ಗುರು, ಲಿಂಗ, ಜಂಗಮರನ್ನು ತೊರೆದು ಮೂಢನಾಗಿರುವೆನು. ನನ್ನ ದೋಷವು ಏನಿದ್ದರೂ ಕ್ಷಮಿಸಿ ಕೃಪೆಮಾಡು, ಅವನ ಈ ಮಾತಿಗೆ ಗುರುಸಿದ್ಧ ಗುರುದೇವನು, ಒಂದು ಕಲ್ಲನ್ನು ತೋರಿಸಿ ಇದನ್ನು ಎತ್ತಲು ನಿನ್ನ ಸತಿಗೆ ಹೇಳು, ಆ ಕಲ್ಲು ಎಂದು ಹಗುರಾಗಿ ತೋರುವದೋ ಅಂದೆ ಅವಳು ಗರ್ಭವತಿಯಾಗಿ ಪುತ್ರವತಿಯಾಗುವಳು ಎಂದು ಹೇಳಿದನು, ಗುರುವಿನ ಈ ನುಡಿಯನ್ನು ನಂಬಿ ಹೆಂಡತಿಗೆ ತಿಳಿಸಲು, ಅವಳು ಭಕ್ತಿಯಿಂದ ಆ ವ್ರತವನ್ನು ನಡಿಸಲು ಪುತ್ರವತಿಯಾದಳು. ಆ ಕಲ್ಲು ಇಂದಿಗೂ ಶ್ರೀಮಠದಲ್ಲಿ ಇದೆಯೆಂದು ವದಂತಿಯಿದೆ.

ಹುಬ್ಬಳ್ಳಿಯಲ್ಲಿ ಬಸ್ಸಪ್ಪ ಶೆಟ್ಟಿ ನಾಮಕನು ಭಕ್ತಿವಂತನಾಗಿ, ಸದ್ಗುಣಿಯಾಗಿ, ಎಡರು ತೊರುಗಳನ್ನು ಎದುರಿಸುವವನಾಗಿ, ವ್ಯಾಪಾರವನ್ನು ಮಾಡುತ್ತಿದ್ದನು, ಅವನಿಗೆ ಯಾವಾಗಲು ವ್ಯಾಪಾರದಲ್ಲಿ ಲಾಭ ತೋರದೆ ಹಾನಿಯಾಗುತ್ತಿತ್ತು, ಅದರಿಂದ ಅವನು ಚಿಂತಾಕ್ರಾಂತನಾಗಿ ಸ್ವಾಮಿಯ (ಗುರುಸಿದ್ಧನ) ಸನ್ನಿಧಿಗೆ ಬಂದನು ನಮಸ್ಕರಿಸಿ ನಿಂತುಕೊಂಡನು ಆಗ ಗುರುದೇವನು ಅವನನ್ನು ನೋಡಿ ನೀನು ಚಿಂತಿಸಬೇಡ ಶಿವನು ನಿನಗೆ ಒಳ್ಳೆಯದನ್ನುಮಾಡುವನು, ಯಾವಾಗಲು, ದೀನ-ದರಿದ್ರರಿಗೆ, ಗುರು, ಲಿಂಗ, ಜಂಗಮರಿಗೆ, ಅನ್ನ ವಸ್ತ್ರಗಳನ್ನು ದಾನ ಮಾಡು ಇದರಿಂದ ನಿನ್ನ ವ್ಯಾಪಾರದಲ್ಲಿ ಲಾಭ ತೋರುವದು ನಿನ್ನ ಸಂಪತ್ತು ಹೆಚ್ಚಾಗುವುದು, ಅದು ಅಳಿಯದೆ ಉಳಿಯುವುದು ಎಂದು ಆಶೀರ್ವದಿಸಿ ಕಳಿಸಿದನು, ಬಸ್ಸಪ್ಪ ಶೆಟ್ಟಿಯು ಗುರುವಿನ ಆಜ್ಞೆಯಂತೆ ನಡೆಯಲು ವ್ಯಾಪಾರದಲ್ಲಿ ಲಾಭವು ತೋರಿ, ಸಂಪತ್ತು ವೃದ್ಧಿಯಾಯಿತು, ಗುರು, ಲಿಂಗ, ಜಂಗಮರ, ಆರಾಧನೆಗಳು ಜರುಗಿದವು.

"ಶಿವಯೋಗಿ" ಗುರುಸಿದ್ಧೇಶ್ವರನ, ಇನ್ನೊಂದು ಲೀಲೆ, ಹುಬ್ಬಳ್ಳಿಯಲ್ಲಿ ಕೆಂಚನಗೌಡ, ಮಲ್ಲನಗೌಡ, ಎಂಬ ಧನಿಕರು, ಗಿರಿಜೆ, ಗೌರಿಯರೆಂಬ ಮಕ್ಕಳನ್ನು ಪಡೆದಿದ್ದರು. ಅವರಲ್ಲಿ ಕೆಂಚನಗೌಡನ ಮಗಳಾದ ಗಿರಿಜೆಯು, ನಾಸ್ತಿಕಳು ಅವಳನ್ನು ಆಸ್ತಿಕಳನ್ನಾಗಿ ಮಾಡಲು ಎಷ್ಟು ಪ್ರಯತ್ನ ಪಟ್ಟರು ಸಾಧ್ಯವಾಗಲಿಲ್ಲ. ಇತ್ತ ಮಲ್ಲನಗೌಡನ ಸುತೆಯಾದ ಗೌರಿಯು ಆಸ್ತಿಕಳಾಗಿ ತಂದೆಗೆ ಆನಂದವನ್ನುಂಟು ಮಾಡುತ್ತಿದ್ದಳು, ಹೀಗಿರುವಾಗ ಗಿರಿಜೆ-ಗೌರಿಯರು ಒಂದು ದಿನ ವಿನೋದದಿಂದ ಶಿವಯೋಗಿ ವಾಸಿಸುವ ಬಿಲ್ವವನಕ್ಕೆ ಬಂದರು.

ಚಂದ್ರನಂತೆ ಮುಖವುಳ್ಳವರು, ಸರ್ಪದಂತೆ ಜಡೆಯುಳ್ಳವರೂ ಅಗಲವಾದ ಹಣೆಯುಳ್ಳವರೂ, ಬಳ್ಳಿಯಂತೆ ಬಳಕುವವರೂ, ಕಮಲದಂತೆ ನಯನ ಉಳ್ಳವರೂ, ಸಂಪಿಗೆಯಂತೆ ನಾಶಿಕ ಉಳ್ಳವರೂ ಹವಳದಂತೆ ತುಟಿಯುಳ್ಳವರೂ ಸೊಗಸಾಗಿ ಗಿಳಿಯಂತೆ ಮಾತನಾಡುವವರೂ; ಮುಂಗೂದಲುಗಳನ್ನು ಹೊಂದಿ ಶೃಂಗಾರ

ಸದನೆಯರಾಗಿ ವನಸ್ತ್ರೀಯರಂತೆ ಸ್ವಚ್ಛೆಯರಾಗಿ ತಿರುಗುತ್ತಲಿರುವಾಗ, ಗೌರಿಯು ಗಿರಿಜೆಗೆ, ಗೆಳತಿ ಕೇಳು ಎಂದಳು.

ಇಲ್ಲಿ ತಪಸ್ಸು ಮಾಡುವ ಶಿವಯೋಗಿಯ ಕೃಪೆಯಿಂದಲೆ, ಈ ವನವು ಸುಂದರ ವಾಗಿದೆ ಇದಕ್ಕೆ ಯಾವ ಪೊಷಣೆಯು ಇಲ್ಲ ಎಂದು ನಾಸ್ತಿಕಳಾದ ಗಿರಿಜೆಗೆ ಹೇಳಿ ದಳು ಅದಕ್ಕೆ ಅವಳು ಇದು ನಿನ್ನ ಮೂಢತನ, ಎಂದಾದರು ಜಪ ತಪಗಳಿಂದ ಗಿಡ ಬಳ್ಳಿಗಳು ಚಿಗುರುವವೆ. ಬೆನ್ನಿನ ಮೇಲೆ ಹೊಡೆದರೆ, ಹಲ್ಲು ಉದರುವವೆ"? ಎಂಬಂತೆ ನಿನ್ನ ಮಾತು, ಗೊಬ್ಬರ ನೀರು, ತಂಪಾದ ಭೂಮಿ ಇವುಗಳಿಂದ ವಿಕಸಿ ತವಾಗಿರುವದೆ ಹೊರತು ಮತ್ತಾವುದರಿಂದಲೂ ಇಲ್ಲ.

ಆಗ ಗೌರಿಯು ಅನೇಕ ಲೀಲೆಗಳನ್ನು ಮಾಡಿರುವ ಈ ಯೋಗಿಯನ್ನು ತಿರ ಸ್ಕರಿಸುವದು ಉಚಿತವೆ? ಸತ್ತವನಿಗೂ ಕೂಡ ಪ್ರಾಣವನ್ನು ಕೊಟ್ಟಿರುವನು, ಅವ ನನ್ನು ತೋರಿಸುತ್ತೇನೆ ನನ್ನೊಡನೆ ಬಾ ಎಂದು ಹೇಳಲು ಅದಕ್ಕೆ ಗಿರಿಜೆಯು ಹೀಗೆ ನುಡಿದಳು. ಇದ್ದ ಮಾತನ್ನು ಇದ್ದಂತೆ ಹೇಳಿದರೆ ಮನಸ್ಸು ಕೆಂಡದಂತಾಗುವದು ಇದರಿಂದ ನಮ್ಮಿಬ್ಬರ ಸ್ನೇಹವು ಕೆಡುವದು; ಇವನು ಮಹಾತ್ಮನಾಗಿದ್ದರೆ, ಈಗ ನನ್ನ ಪ್ರಾಣವನ್ನು ಕಳೆದು ಮತ್ತೆ ಬದುಕಿಸಲಿ, ಎಂದು ನುಡಿಯುತ್ತ ಹೂವನ್ನು ಹರಿಯ ಹತ್ತಿದಳು, ಅಷ್ಟರಲ್ಲಿ ಒಂದು ನಾಗರ ಹಾವು ಬಂದು ಗಿರಿಜೆಯ ಕಾಲಿನ ಕಿರುಬೆರಳನ್ನು ಕಚ್ಚಿ, ವಿಷವನ್ನು ಬಿಟ್ಟು, ಮರಳಿ ಕಾಣದಂತೆ ಹೊಯಿತು, ಆಗ ಗಿರಿಜೆಯು ತಂದೆ-ತಾಯಿಯರನ್ನು ನೆನೆಸಿ ವಿಷವೇರಿ ಪ್ರಾಣ ಬಿಟ್ಟಳು.

ಇದನ್ನು ಕಂಡು ಗೌರಿಯು ಗಾಬರಿಯಾಗಿ "ಗುರುಸಿದ್ಧೇಶ್ವರ"ನನ್ನು ನೆನೆದು ಮೂರ್ಛಿತಳಾದಳು, ಅಷ್ಟರಲ್ಲಿ ಅಲ್ಲಿಗೆ, ಕೆಂಚನಗೌಡ, ಮಲ್ಲನಗೌಡರು, ತಮ್ಮ ಮಕ್ಕಳನ್ನು ಶೋಧಿಸುತ್ತ ಬಂದರು. ಅವರ ಸ್ಥಿತಿಯನ್ನು ನೋಡಿ ದುಃಖಿತರಾದರು ಶಿವಯೋಗಿಯ ಧ್ಯಾನವನ್ನು ಮಾಡಿದ ಫಲದಿಂದ ಗೌರಿಯು ಕಣ್ತೆರದು ಎಲ್ಲ ವಿಷಯವನ್ನು ಹೇಳಿದಳು, ಅವರೊಡನೆ ಗವಿಯ ಬಾಗಿಲಿಗೆ ಬಂದು ನಮಸ್ಕ ರಿಸಿ, "ಎಲೈ ಹುಚ್ಚೇಶನೆ, ಶ್ರೇಷ್ಠ ಗುಣಗಳ ಸಮೂದಾಯನೆ ನನ್ನ ಗೆಳತಿಗೆ ಪ್ರಾಣವನ್ನು ದಯಪಾಲಿಸು ಎಂದು ಸ್ತುತಿಸಿದಳು. ಆಗ ಹೊಂಡಕ್ಕೆ ಹೋಗಿ ತಿಳಿ ನೀರನ್ನು ತೆಗೆದು ಕೊಂಡು ಹೋಗಿ ಗೆಳತಿಯ ಬಾಯಿಯಲ್ಲಿ ಹಾಕಲು ಅದ ರಿಂದ ಆಕೆಯು ಪುನಃ ಜನ್ಮವನ್ನು ತಾಳಿ ಎಲ್ಲರನ್ನು ನೋಡಿ ಆನಂದ ಪಟ್ಟು ಗವಿಗೆ ನಮ್ಮಸ್ಕರಿಸಿ.

"ಗುರುವೆ, ಬಾರಯ್ಯ ನನ್ನೊಳಿರುವ ನಾಸ್ತಿಕ್ಯವನ್ನು ಕಳೆಯೆನಲು ಆಸ್ತಿಕ್ಯ ದಿಂದ ಆನಂದ ಹೊಂದಿ, ಸುಖದಿಂದ ಬಾಳು ಇದು ನಿನ್ನ ಗೆಳತಿಯಾದ ಗೌರಿಯ ಸಂಗದಿಂದ ದೊರೆಯಿತುಯೆಂದು ಗುರು ನುಡಿದರು.

ಅಷ್ಟರಲ್ಲಿ ಕೆಂಚಗೌಡ ಮಲ್ಲನಗೌಡ, ಗೌರಮ್ಮ ಎಲ್ಲರು ಬಂದು ನಮಸ್ಕರಿಸಿ ನಿಂತರು ಅದಕ್ಕೆ ಹುಚ್ಚೀಶನು ನಿಮ್ಮ ಅರಿಕೆಯು ನಮಗೆ ತಿಳಿದಿದೆ. ನೀವು ಪುತ್ರ ಸಂತಾನವನ್ನು ಪಡೆದು ಬಾಳಿರಿ, ಎಂದು ಆಶಿರ್ವದಿಸಿ ಕಳುಹಿದರು ಗುರುಲೀಲೆ ಯನ್ನು ಸ್ಮರಿಸುತ್ತ ಎಲ್ಲರೂ ಸುಖವಾಗಿ ಬಾಳಿದರು. ಇಲ್ಲಿಗೆ ಪಂ|| ಪುಟ್ಟರಾಜ ಕವಿಗಳು ರಚಿಸಿದ "ಕರ್ತೃ ಶ್ರೀ ಗುರುಸಿದ್ಧೇಶ್ವರ ಪುರಾಣ"ದಲ್ಲಿ ಐದನೆಯ ಸಂಧಿಯ ವಿಷಯ ಮಂಗಲಗೊಳ್ಳುವದು.



## —: ಆರನೆಯ ಸಂಧಿ :—

ಸೂಚನೆ : ಮಾಡಳ್ಳಿಯ ಭಕ್ತನ ಮಹಾರೋಗವನ್ನು ಕಳೆದನು;
ಕರುಣೆಯಿಂದ ಮುಂಬೈ ಜನರನ್ನು ಕಾಪಾಡಿದನು;
ತಪದ ಪ್ರಭಾವದಿಂದ ಬೀಡ್ನಾಳ ಗ್ರಾಮದ ಪ್ಲೇಗನ್ನು ಕಳೆದು ಮೆರೆದನು.

"ದೋಸೆಗಾಗಿಯೇ ಮಣ್ಣನ್ನು ಹೊತ್ತಿರುವೆ, ಮೌನಿಯಾಗಿ ಸುರಸತಿಯರನ್ನು ಭಂಗಿಸಿದೆ, ನೀನು ಈಶ್ವರನಾಗಿ ಮೆರೆಯುತ್ತಿರುವೆ. ನಾನು ಜೀವಿಯಾಗಿರುವೆ, ಭೂಸುರತೆಯು ನಿನಗೇಕೆ ? ಅಸುರತೆಯು ನನಗೇಕೆ ? ಘಾಸಿಗೊಳಿಸದೆ ಇದನ್ನು ತಿಳಿಸು; ಇಲ್ಲವಾದರೆ ನಿನ್ನಂತೆ ನನ್ನನ್ನು ಮಾಡಿಕೊಂಡು ಕಾಪಾಡು.

ಒಂದು ದಿನ ಶಿವಯೋಗಿಯು, ಶಿವಪೂಜೆಯನ್ನು ಮುಗಿಸಿಕೊಂಡು ಪುಷ್ಪ ವಾಟಿಕೆಯಲ್ಲಿ ಸಂಚರಿಸಿ, ಗಿಡದಡಿಯ ಕಟ್ಟೆಯ ಮೇಲೆ ಕುಳಿತುಕೊಂಡಿರುವನು, ಆಗ ಓರ್ವನು ಬಂದು ನಮಸ್ಕರಿಸಿ ಕಣ್ಣೀರು ಸುರಿಸುತ್ತ, "ಸ್ವಾಮಿ" ನನ್ನ ಹೆಸರು ರಾಮರಾಯ ನನ್ನ ಊರು ಮಾಡಳ್ಳಿ ನನಗೆ ಕುಷ್ಠರೋಗವು ಅಂಟಿಕೊಂಡಿರುವದು ಇದು ಸಾಂಕ್ರಾಮಿಕ ರೋಗವಾದದ್ದರಿಂದ ನನ್ನ ಮನೆಯವರು ನನ್ನನ್ನು ಮನೆ ಯಿಂದ ಹೊರ ಹಾಕಿರುವರು, ನಿರಾಶ್ರಿತನಾದ ನಾನು ನಿಮ್ಮ ಚರಣದಾಶ್ರಯವನ್ನು ಹೊಂದಿರುವೆನು; ಬಡವನಾದ ನನ್ನನ್ನು ಉದ್ಧರಿಸಬೇಕೆಂದು ಬೇಡಿಕೊಂಡನು. ಆಗ ದಯಾಳುಗಳಾದ 'ಗುರುಸಿದ್ಧೇಶ್ವರರು ಆನಂದದಿಂದ ಅವನಿಗೆ ಬಿಲ್ವ ಪತ್ರಿ ದಳ ವನ್ನು ಕೊಟ್ಟು ಅದನ್ನು ಸೇವಿಸಲು ತಿಳಿಸಿದರು ಅಷ್ಟೆ ಅಲ್ಲ ಪವಿತ್ರವಾಗಿರುವಂತಹ ಈ ಬಿಲ್ವ ವನದ ಹುಡಿಯಲ್ಲಿ ಹುರುಳಾಡೆಂದು ಆಜ್ಞಾಪಿಸಿದರು, ಅದರಂತೆ ರೋಗಿ ಯಾದ "ರಾಮರಾಯ"ನು ಬಿಲ್ವವನ್ನು ಸೇವಿಸಿ, ಹುರುಳಾಡಿ ಹೊಂಡದಲ್ಲಿಯ ನೀರನ್ನು ಕುಡಿದು ಅಲ್ಲಿಯೆ ಮಲಗಿಕೊಂಡನು, ಏಳುವದರೊಳಗಾಗಿ, ರೋಗವು ತೊಲಗಿ ಚೈತನ್ಯ ಉಂಟಾಗಿ ಆನಂದದಿಂದ ಗುರು ಚರಣಕ್ಕೆ ನಮಿಸಿ ತನ್ನ ಊರಿಗೆ

ಬಂದು ಗುರು ಲೀಲೆಯನ್ನು ಕೊಂಡಾಡಿದನು, ಆಗ ಅಲ್ಲಿಯ ಕೆಲವರಾದ ವೈಷ್ಣವ ಬ್ರಾಹ್ಮಣರು ಕೂಡಿಕೊಂಡು, ರಾಮರಾಯನನ್ನು ನೋಡಿ ನಿನಗೆ ನಮ್ಮ ಜಾತಿಯ ಗುರುಗಳಾರು ಸಿಕ್ಕಲಿಲ್ಲವೆ? ಕ್ಷುದ್ರರಾದ ವೀರಶೈವರ ಹುಡಿಯಲ್ಲಿ ಹೊರಳಾಡಿ ಬಂದಿರುವ ನಿನಗೆ ಬಹಿಷ್ಕಾರ, ಈ ಊರಲ್ಲಿ ನಿನಗೆ ನೀರು ಸಿಗದಂತೆ ಮಾಡುವೆವೆಂದರು. ನಮಗೆ ಹೀನವಾದ ನಿನ್ನ ಮುಖವನ್ನು ತೋರಬೇಡವೆಂದೂ, ಇಲ್ಲಿಂದ ಹೊರಟು ಹೋಗು ಎಂದು ನುಡಿಯಲು.

"ಬೀದಿಯಲ್ಲಿಯೆ ನಿಂತುಕೊಂಡು ರಾಮರಾಯನು, ಎಲೈ' ಹುಚ್ಚೇಶನೆ, ನನ್ನನ್ನು ರಕ್ಷಿಸು ಎಂದು ಮೊರೆಯಿಡಲು, ಆ ದಿನ ರಾತ್ರಿಯಲ್ಲಿ ಕನಸಿನಲ್ಲಿ ನಿಂದಿಸಿದ ಬ್ರಾಹ್ಮಣರಿಗೆ, ಶ್ರೀ ಕೃಷ್ಣನು ದರ್ಶನ ನೀಡಿ ಭಕ್ತರೆ ರಾಮರಾಯನ ಕುಷ್ಟ ರೋಗವನ್ನು ಶಿವನೆ ಕಳೆದಿರುವನು, ಆದರೆ ರಾಮರಾಯನನ್ನು ನೀವು ಕಾಡಿದ್ದಾದರೆ ಆ ರೋಗವು ನಿಮಗೆ ಅಂಟಿಕೊಳ್ಳುವದು ಎಂದು ಹೇಳಿ ಹೋದನು. ಮರುದಿನ ಉದಯಕಾಲದಲ್ಲಿ ಎಲ್ಲಾ ಬ್ರಾಹ್ಮಣರು ಸೇರಿ ಪರಸ್ಪರ ವಿಚಾರ ಮಾಡಿ ಕೊಂಡು ಶಿವಯೋಗಿಯ ಧ್ಯಾನದಲ್ಲಿರುವ ರಾಮರಾಯನನ್ನು ಶೋಧಿಸಿ ಅವನಿಗೆ ರಾಮರಾಯರೆ ನಿಮ್ಮ ರೋಗವನ್ನು ಶಿವನೆ ಕಳೆದಿರುವನೆಂದು ಕೃಷ್ಣ ಪರಮಾತ್ಮನು ನಮಗೆ ಕನಸಿನಲ್ಲಿ ದರ್ಶನ ನೀಡಿ ತಿಳಿಸಿರುವನು. ನಿಂದೆಯಿಂದ ಪಾಪವು ಒದಗುವ ದೆಂದು ವೇದವು ಸಾರಿದೆ. ಅದಕ್ಕಾಗಿ ಶಿವಯೋಗಿ "ಗುರುಸಿದ್ಧೇಶ್ವರನ" ದರ್ಶನ ಮಾಡಿಸಿರೆಂದು ಕೇಳಲು, ಎಲ್ಲರೂ ಸೇರಿ ಬಿಲ್ವವನಕ್ಕೆ ಬಂದು ನಮ್ಮನ್ನು ಕ್ಷಮಿಸಿ ಕಾಪಾಡೆಂದು ಬೇಡಿಕೊಳ್ಳಲು; ಶಿವಯೋಗಿಯು ನೀವೆ ಧನ್ಯರು ಕೃಷ್ಣಪರಮಾತ್ಮನ ದರ್ಶನ ಪಡೆದುಕೊಂಡವರು; ನಮ್ಮಲ್ಲೇನಿದೆ. ಹರಿ ಕರುಣೆಯೆ ರಾಮರಾಯನ ರೋಗವನ್ನು ಕಳೆದಿರುವದೆಂದು ನುಡಿದನು ಅದಕ್ಕೆ ಬ್ರಾಹ್ಮಣರು ಹರಿಯು ನೀನೆ ಹರನು ನೀನೆ" ಏಕೆಂದರೆ ನಮ್ಮ ವಿಚಾರವನ್ನು ಮೊದಲು ತಿಳಿದುಕೊಂಡಿರುವಿರಿ. ನಿಮ್ಮ ಘನತೆಯನ್ನು ಅರಿಯದೆ ನಿಂದಿಸಿ ಪಾಪಕ್ಕೆ ಗುರಿಯಾಗಿರುವೆವು, ರಕ್ಷಿಸೆಂದು ಬೇಡಲು.

"ಗುರುಸಿದ್ಧ''ನು ಬ್ರಾಹ್ಮಣರನ್ನು ಕುರಿತು.

"ಲಿಂಗಧಾರಿಗಳಿಂದ ಪಾಕಗೈಸಿ ಜಂಗಮರನ್ನು ತೃಪ್ತಿಗೊಳಿಸಿರಿ. ಇದರಿಂದ ನಿಮ್ಮ ಪಾಪವು ತೊಲಗುವದು ಚೇತನವೆ ಲಿಂಗ ಜಂಗಮವೆಂದು ಎರಡು ಭಾಗ ವಾಗಿರುವದು, ಆ ಲಿಂಗವೆ ಸ್ಥಾವರವೆನಿಸಿಕೊಳ್ಳುವದು, ಜಂಗಮವೆ ಚರವೆನಿಸಿ ಕೊಳ್ಳುವವನು. ಈ ಎರಡರಲ್ಲಿ ಭೇದವೆಸಗದೆ ಎಲ್ಲ ವಸ್ತುವನ್ನು ಅದಕ್ಕೆ ಸಮರ್ಪಿಸಿ ಭೋಗಿಸಬೇಕು, ಅವನೇ ಶ್ರೇಷ್ಠಮಾನವನೆನಿಸಿ ಕೊಳ್ಳುವವನು, ಈ ಮಾನವರಲ್ಲಿ ಲಿಂಗಧಾರಿಯು ಅಧಿಕ, ಅವರಲ್ಲಿ ಶಿವಯೋಗಿಯೆ ಶ್ರೇಷ್ಠನು, ಇದನ್ನು ಅರಿತು ಅನ್ನ, ವಸ್ತ್ರ, ದಾನವನ್ನು ಮಾಡುವದು ಶ್ರೇಷ್ಠ ಕರ್ತವ್ಯವೆನಿಸುವದು; ಇದರಿಂದ

ನಿಮ್ಮ ಪಾಪವನ್ನು ಕಳೆದುಕೊಳ್ಳಿರಿ ಇವರಾರು ದೊರೆಯದಿದ್ದರೆ, ಅಂಗವಿಕಲರು, ದೀನಾನಾಥರು ಇವರಿಗೆ ದಾನ ಮಾಡಿರಿ. ಹೀಗೆ ಹೇಳಿ ಶಿವಯೋಗಿಯು ಶಿವಪೂಜೆ ಗಾಗಿ ಗವಿಯೊಳಗೆ ಹೋದನು ನಂತರ ಆನಂದದಿಂದ ಯೋಗಿಯನ್ನು ಸ್ತುತಿಸಿ ಮಾಡಳ್ಳಿಯ ಬ್ರಾಹ್ಮಣರು ದೃಢ ಸಂಕಲ್ಪವನ್ನು ಮಾಡಿಕೊಂಡು ಬಂದು ಊರಲ್ಲಿ ಗಣಾರಾಧನೆ ನಡಿಸಿ ಪಾಪದಿಂದ ಮುಕ್ತರಾದರು; ಇದರಿಂದ ನಿಂದಕರ ಪಾಪವು ತೊಲಗಿ ಆ ನಾಡೆ ಪಾವನವಾಯಿತು.

ಮುಂಬೈಯಲ್ಲಿ ಓರ್ವ ಅತ್ಯರ್ಥನೆಂಬ ಶೇಡ್ಜಿಯು ನಾನಾ ತರದ ಗಿಡಗಳನ್ನು ಚಂದವಾಗಿ ಬೆಳೆಸುತ್ತಿದ್ದನು. ಪಕ್ಕದ ಮನೆಯ ಬಾಲಕರು ಆ ತೋಟಕ್ಕೆ ಬಂದು ಗಿಡಗಳಿಗೆ ಮುಟ್ಟದೆ ಹೂಗಳನ್ನು ನೋಡಿ ನಲಿಯುತ್ತಿದ್ದರು, ತೋಟವು ನೋಡು ವವರಿಗೆ ಸುಂದರವಾಗಿ ಆಕರ್ಷಿತವಾಗಿತ್ತು. ಆದರೆ ಮಾಲಿಕನಾದ ಶೇಡ್ಜಿಗೆ ಆ ಬಾಲಕರಾಟ ಮನಸ್ಸಿಗೆ ಬಾರದೆ, ಮಕ್ಕಳ ಆಟವು ಅವನಿಗೆ ಸರಿಯೆನಿಸದೆ, ತೋಟಕ್ಕೆ ಹೋಗುವ ಮಾರ್ಗವನ್ನು ರದ್ದುಗೊಳಿಸಿದನು. ಅಂದರೆ ತೋಟದ ಬಾಗಿಲನ್ನು ಬೀಗಮುದ್ರೆಯಿಂದ ಭದ್ರಗೊಳಿಸಿದನು, ಎಲ್ಲಾ ಬಾಲಕರು ಬಂದು ಅದನ್ನು ನೋಡಿ ದುಃಖಿತರಾಗಿ ಮನೆಗೆ ಮರಳಿದರು. ಆ ಮಕ್ಕಳ ದುಃಖ ಹೆಚ್ಚಾದಂತೆ ಆ ತೋಟದಲ್ಲಿಯ ಗಿಡ ಬಳ್ಳಿಗಳು ಒಣಗ ಹತ್ತಿದವು ಇದನ್ನು ನೋಡಿದ ಮಾಲಕನಿಗೆ ಆಶ್ಚರ್ಯವಾಗಿ ಅಂಗಡಿಗೆ ಬಂದ ವ್ಯಾಪಾರಿಗಳನ್ನು ಬಂಧು ಬಾಂಧವರನ್ನು ಇದಕ್ಕೆ ಉಪಾಯವೇನೆಂದು ಕೇಳಹತ್ತಿದನು, ಆಗ ಕರ್ನಾಟಕದ ಓರ್ವ ವ್ಯಕ್ತಿಯು ಇದಕ್ಕೆ ನಾನು ಉಪಾಯವನ್ನು ಹೇಳುತ್ತೇನೆ, ನನ್ನೊಡನೆ ನೀನು ಬರಬೇಕು ಎಂದು ಹೇಳಿ ಶೇಡ್ಜಿಯನ್ನು ಮುಂಬೈಯಿಂದ ಹುಬ್ಬಳ್ಳಿಗೆ ಕರೆದುಕೊಂಡು ಬಂದು ಶಿವಯೋಗಿ ವಾಸಿಸುವ ಬಿಲ್ವವನ್ನು ತೋರಿಸಿ, ಅಲ್ಲಿರುವ ತಿಳಿ ನೀರಿನಿಂದ ತುಂಬಿರುವ ಹೊಂಡವನ್ನು; ರಕ್ಷಕರಿಲ್ಲದೆ ಬೆಳೆದಿರುವ ವೃಕ್ಷಗಳನ್ನು; ಮಕ್ಕಳು ಆಡಿ ಆನಂದ ಪಟ್ಟು ಹೋಗುವ ರೀತಿಯನ್ನು; ನೋಡಿ ಹುಚ್ಚೇಶನ ಮಹಿಮೆಗೆ ಬೆರ ಗಾದನು ಇದನ್ನೆಲ್ಲ ತನ್ನ ತೋಟವನ್ನು ಹೀಗೆ ಮಾಡಿಕೊಳ್ಳಬೇಕೆಂದು ಆನಂದದಿಂದ ಸದ್ಗುರುವೆ; ಹುಚ್ಚೀಶ ಜಗದರಕ್ಷಕ, ದೀನ ಬಂಧುವೆ, ನನ್ನ ಮೊರೆಯನ್ನು ಕೇಳಿ ನನ್ನನ್ನು ರಕ್ಷಿಸು ಎಂದು ಗುಜರಾಥ, ಭಾಷೆಯಲ್ಲಿ ಸ್ತುತಿಸಿದನು; ಅವನ ಭಕ್ತಿಗೆ ಮೆಚ್ಚಿ ಗವಿಯಿಂದ ಹೊರಗೆ ಬಂದು ಶಿವಯೋಗಿಯು ಅವನೊಡನೆ ಗುಜರಾಥ ಭಾಷೆಯಲ್ಲಿ ಮಾತನಾಡಿದನು, ನಿನ್ನ ತೋಟದಲ್ಲಿ ಆಡಿ ಆನಂದ ಪಡುವ ಬಾಲಕರ ದುಃಖವೆ ನಿನ್ನ ತೋಟವು ಹಾಳಾಗಲು ಕಾರಣವಾಗಿದೆ, ಅವರಿಗೆ ಮೊದಲಿನಂತೆ ಆಟಕ್ಕೆ ಅನುಕೂಲಿಸಲು ತೋಟವು ಶೋಭಿಸುವದೆಂದು ಮಕ್ಕಳಲ್ಲಿ ದೇವನಿರುವ ನೆಂದು ತಿಳಿಸಿ, ಇದರಿಂದ ಸಂಸಾರ ನಿನ್ನ ಸುಖಮಯವಾಗಿ ಸಾಗುವದೆಂದು ಹೇಳಿ, ಶೇಡ್ಜಿಯು ಗೆಳೆಯನಾದ "ಬಂಟ"ನನ್ನು ನೋಡಿ ನಿನ್ನ ಹೆಸರು ಇಂದಿಗೆ ಸಾರ್ಥಕ

ವಾಯಿತೆಂದು ಅವನಿಗೂ, ಆಶೀರ್ವದಿಸಿ, ಪೂಜೆಗೆ ಹೋದನು, ಆಮೇಲೆ ಅವರೀ-ರ್ವರು ಮುಂಬೈಗೆ ಬಂದು ಶಿವಯೋಗಿಯ ಅಪ್ಪಣೆಯಂತೆ ಬಾಲಕರಿಗೆ ತೋಟದಲ್ಲಿ ಆಡಲಿಕ್ಕೆ ಅನುಕೂಲ ಮಾಡಲು; ಮಕ್ಕಳ ಆನಂದವಾದಂತೆ ತೋಟವು ಅಂದವಾಗಿ ಚಂದವಾಗಿ ಸುಂದರವಾಗಿ ಆಕರ್ಷಿತವಾಯಿತು. ಇದರಿಂದ "ಗುರುಸಿದ್ಧ-ಗುರು ಲೀಲೆಯು" ಹುಬ್ಬಳ್ಳಿಯಿಂದ ಮುಂಬೈಯ ವರೆಗೆ ಪ್ರಚಾರವಾಗಿ ಅಲ್ಲಿಯಿಂದಲೂ ಭಕ್ತರು ಬರಲಾರಂಭಿಸಿದರು.

ಬೀಡ್ನಾಳ ಗ್ರಾಮಕ್ಕೆ "ಪ್ಲೇಗ್" (ಗುರುಳಿ-ಬೇನೆ) ಬಂದ ಸಮಯದಲ್ಲಿ, ಆ ಗ್ರಾಮ ವಾಸಿಗಳು ಊರನ್ನು ಬಿಟ್ಟು ಎಲ್ಲಿಯಾದರು ಗುಡಿಸಲುಗಳನ್ನು ಹಾಕಿ ಕೊಂಡು ಇರಬೇಕೆಂಬ ವಿಚಾರ ಇಟ್ಟುಕೊಂಡು, ಶಿವಯೋಗಿ ಇರುವ ಬಿಲ್ವವನವೇ ನಮಗೆ ಶ್ರೇಷ್ಠವೆಂದು ಅಲ್ಲಿಯೇ ವಾಸಿಸಬೇಕೆಂದು ಭಕ್ತರೆಲ್ಲರು ಕೂಡಿ ಆಲೋಚಿಸಿ ಕೊಂಡು ಶಿವಯೋಗಿಯ ಅಪ್ಪಣೆಯ ಪಡೆದುಕೊಳ್ಳುವದಕ್ಕಾಗಿ ಬಿಲ್ವ ವನಕ್ಕೆ ಬಂದಿ ದ್ದಾರೆ. ಅಷ್ಟರಲ್ಲಿ ಶಿವಯೋಗಿಯು ಗವಿಯಿಂದ ಹೊರಗೆ ಬಂದರು ಅಲ್ಲಿಯು ಇಲಿ ಗಳು ಕಣ್ಣಿಗೆ ಕಾಣಿಸಿಕೊಂಡವು, ಆಗ ಬೀಡ್ನಾಳ ಭಕ್ತರನ್ನು ಕುರಿತು; ನೀವು ಇಲ್ಲಿ ವಾಸಿಸಬೇಕೆಂದು ನಮ್ಮನ್ನು ಕೇಳಲು ಬಂದಿರುವಿರಿ ಇಲ್ಲವೆ? ನಿಮ್ಮ ಠಾಣಕ್ಕೆ ನೀವು ವಾಸಿಸಲು ನಮ್ಮನ್ನು ಏಕೆ ಕೇಳಬೇಕು? ಆಗ ಭಕ್ತರು, ಗುರುವೆ ನಾವು ಗುರುಳಿ ಬೇನೆಗೆ ಅಂಜಿ ಇಲ್ಲಿಗೆ ಬಂದಿರುವೆವು ನಮ್ಮನ್ನು ರಕ್ಷಿಸಬೇಕೆಂದು ಬೇಡಿಕೊಂಡರು. ಶಿವಯೋಗಿಯು ಈ ಬಿಲ್ವ ವನದ ದರ್ಶನದಿಂದ ನಿಮ್ಮ ಭಯವು ತೊಲಗಿಪೆ ಇಲ್ಲಿಯ ನೀರಿನಿಂದ, ಮಣ್ಣಿನಿಂದ ಅನೇಕ ಸಿದ್ಧಿಗಳನ್ನು ಪಡೆದು ಕೊಂಡಿರುವರು, ಆದ್ದರಿಂದ ಈ ಹೊಂಡದ ನೀರನ್ನು ಇಲ್ಲಿಯ ಮಣ್ಣನ್ನು ತೆಗೆದುಕೊಂಡು ಹೋಗಿ ಶಿವನನ್ನು ಧ್ಯಾನಿಸುತ್ತ ನಿಮ್ಮ ನಿಮ್ಮ ಮನೆ ಗಳಿಗೆ, ಸಿಂಪಡಿಸಿರಿ, ಆದರಿಂದ ನಿಮಗೆ ಅಂಟಿದ ಗುರುಳು ಬೇನೆಯು ತೊಲ ಗುವದೆಂದು ಅಪ್ಪಣೆ ಕೊಡಿಸಿದರು, ಶಿವನನ್ನು ಧ್ಯಾನಿಸುವದರಿಂದ ನಿಮ್ಮ ಬುದ್ಧಿಯು ವರ್ಧಿಸುವದು, ಸಂಪತ್ತು ಹೆಚ್ಚುವದು, ಕೇಳಿರಿ ಬಿಲ್ವ ವೃಕ್ಷದ ಚರಿತ್ರೆಯನ್ನು ಎಂದು ಹೇಳಿದನು. ಇದಕ್ಕೆ ಶ್ರೀಫಲವೆಂದು ಹೆಸರಿರುವದು, ಇದನ್ನು ವೇದವು ಕೂಡಾ ಕೊಂಡಾಡುವದು, ಪೂರ್ವಕಾಲದಲ್ಲಿ ಲಕ್ಷ್ಮಿಯು ಸಾವಿರ ಕಮಲಗಳನ್ನು ಅರ್ಪಿಸುವ ವ್ರತವನ್ನು ಇಟ್ಟುಕೊಂಡು ಲಿಂಗಪೂಜೆಯನ್ನು ಮಾಡುತ್ತಿದ್ದಳು. ಒಂದುಸಾರೆ ಶಿವನು ಅವಳನ್ನು ಪರೀಕ್ಷಿಸುವದಕ್ಕಾಗಿ ಒಂದು ಕಮಲವನ್ನು ಕಡಿಮೆ ಮಾಡಿದನು ಆಗ ಲಕ್ಷ್ಮಿಯು ತನ್ನ ಕಮಲದಂತಿರುವ ಕುಚವನ್ನೆ ಕೊಯ್ದು ಅರ್ಪಿ ಸಲು ಸಂತುಷ್ಟನಾದ ಶಿವನು ಪ್ರತ್ಯಕ್ಷನಾಗಿ ಅವಳಿಗೆ. ವರನನ್ನು ಕೊಟ್ಟ, ಕುಚವೆ ಬಿಲ್ವ-ವೃಕ್ಷವಾಗಲೆಂದು ಆಶೀರ್ವದಿಸಿದನು, ಈ ಬಿಲ್ವದಿಂದ ಅನೇಕ ರೋಗಗಳು ಕೂಡಾ ನಾಶವಾಗುವವು ಆದ್ದರಿಂದ ಇದನ್ನೆ ನಂಬಿರಿ, ಎಂದು ಶಿವಯೋಗಿಯು ಉಪದೇಶಮಾಡಿ, ಶಿವಪೂಜೆಗೆ ತೆರಳಿದನು, ಭಕ್ತರು "ಗುರುಸಿದ್ಧ ಶಿವಯೋಗಿ"ಯ

ಪ್ರಾಣಿಯನ್ನು ನಂಬಿ ಅಂತೆ ಅಲ್ಲಿಯ ನೀರನ್ನು ಮಣ್ಣನ್ನು ತೆಗೆದುಕೊಂಡು ಹೋಗಿ ಸಿಂಪಡಿಸಿ ಗುರುಳೆ ಬೇನೆಯನ್ನು ಕಳೆದುಕೊಂಡರು ಎಂಬಲ್ಲಿಗೆ.

ಪಂ॥ ಪುಟ್ಟರಾಜ ಕವಿ ಗವಾಯಿಗಳವರಿಂದ ರಚಿತವಾದದ ಹುಬ್ಬಳ್ಳಿ ಮೂರುಸಾವಿರಮಠದ ''ಕರ್ತೃ ಶ್ರೀ ಗುರುಸಿದ್ಧೇಶ್ವರ ಪುರಾಣದಲ್ಲಿ ಆರನೆಯ ಸಂಧಿಯು ಸಮಾಪ್ತಿಯಾಯಿತು.



## ಏಳನೆಯ ಸಂಧಿ

ಸೂಚನೆ:– ಬಾವಿಯಲ್ಲಿ, ಜಲವನ್ನು ತುಂಬಿಸಿ, ಅತಿವೃಷ್ಟಿಯನ್ನು ತಡೆದು, ಕೋಪಿಯಾದವನನ್ನು ಶಾಂತಗೊಳಿಸಿ, ಗರತಿಯನ್ನು ಕಾಪಾಡಿ, ರೂಪವನ್ನು ಬದಲಾಯಿಸಿ, ಲಗ್ನ ಮಾಡಿದನು, ಅವಿವೇಕಿಯನ್ನು ಕಾಪಾಡಿರುವನು.

ಕೃಷ್ಣನ ಸಹೋದರಿಯಾದ ಸುಭದ್ರೆಯ ಪತಿಯಾದ ಅರ್ಜುನನ, ತಪಸ್ಸಿನ ಗರ್ವವನ್ನು ವಿನೋದದಿಂದ ಕಳೆಯುವದಕ್ಕಾಗಿ, ಅವನ ಅಣ್ಣನಾದ ಭೀಮನಂ ಗದೆಯನ್ನು ಮೇಲಕ್ಕೆ ತೂರಿ ನಿನ್ನನ್ನು ಸ್ತುತಿಸಲು ಅವನನ್ನು ರಕ್ಷಿಸಿದೆ, ಈ ವಿಚಾರವು ಜಗತ್ ಪ್ರಸಿದ್ಧಿ, ವೇದಗಳಿಂದ ಹೊಗಳಿಸಿಕೊಳ್ಳುವಂಥವನೂ, ಮುನಿಗಳಿಂದ ಪೂಜಿಸಲ್ಪಟ್ಟ ನೀನು ಶ್ರೇಷ್ಠನೆಂದು ವಾದಿಸುವ ನನ್ನಲ್ಲೇಕೆ ಕಾಪಾಡಲೊಲ್ಲೆ ನಾನೇನು ತಪ್ಪು ಮಾಡಿರುವೆನು.

ಒಮ್ಮೆ ಬೇಸಿಗೆ ಕಾಲವು ಪ್ರಾಪ್ತವಾಯಿತು, ಸೂರ್ಯನ ಉಗ್ರವಾದ ತಾಪಕ್ಕೆ ತಾಳಲಾರದೆ ನೀರಿನಲ್ಲಿ ಮುಳುಗುತ್ತ ತಂಪಾದ ನೆರಳನ್ನು ಹುಡುಕುತ್ತ ಅದನ್ನಾಶ್ರಯಿಸಿ ತಾಪವನ್ನು ಕಳೆದುಕೊಳ್ಳುತ್ತಿದ್ದರು, ಇದರಂತೆ ಎಲ್ಲಾ ಜೀವಿಗಳು ತಂಪನ್ನೆ ಆಶ್ರಯಿಸುತ್ತಿದ್ದವು. ಹೀಗೆ ಭಯಂಕರವಾಗಿರುವ ಬಿಸಿಲಿನ ತಾಪಕ್ಕೆ ಜಲಾಶಯಗಳೆಲ್ಲವು ಬತ್ತಿ ಹೋದವು, ಎಲ್ಲಿಯೂ ನೀರು ಸಿಕ್ಕದೆ, ಶಿವಯೋಗಿಯ ಸನ್ನಿಧಿಗೆ ಬಂದು ನಮಸ್ಕರಿಸಿ ಕುಳಿತುಕೊಂಡು, ತಮ್ಮ ದುಃಖವನ್ನು ಹೇಳಿಕೊಂಡರು ಬೇಸಿಗೆಯ ತಾಪದಿಂದ ಎಲ್ಲಾ ಬಾವಿಗಳು ಬತ್ತಿ ಹೋಗಿರುವವು ನೀರನ್ನು ತೆಗೆದುಕೊಂಡು ಹೋಗುವದೆ ನಮಗೆ ಒಂದು ದೊಡ್ಡ ಉದ್ಯೋಗವಾಗಿರುವದು ದುಡಿದು ತಿನ್ನುವ ಬಡವರಿಗೆ ಇದರಿಂದ ಅಶನವು ಅಭಾವವು ಆದಿರುವುದು, ಗುರುವೇ ಈ ಪರಿತಾಪದಿಂಧ ನಮ್ಮನ್ನು ಪಾರಮಾಡಬೇಕೆಂದು ಬೇಡಿಕೊಂಡರು ಆಗ ಯೋಗಿಯು ಅವರನ್ನು ನೋಡಿ ಹೇಳಿದ್ದೆನೆಂದರೆ,

"ಲಿಂಗ ದೇವನ ಕ್ಷೋಭೆಯಾಗಿರುವದು, ನೀವು ಇಷ್ಟಲಿಂಗವನ್ನು ಧರಿಸಿ ಕೊಂಡು, ಪೂಜಿಸಿ, ಫಲವನ್ನು ಪಡೆಯದೆ, ಕಂಡ ಕಂಡ ದೇವರಿಗೆ ಕೈಮುಗಿದು, ಅಡ್ಡಬಿದ್ದು, ಬಹಳ ದ್ರವ್ಯವನ್ನು ಕೊಟ್ಟು ನಡೆದಿರುವಿರಿ. ಅದೆ ನಿಮ್ಮನ್ನು ಈ ಪ್ರಕಾರವಾಗಿ ಕಾಡುತ್ತಿರುವುದು, ಇದಕ್ಕೆ ಒಂದು ಕಥೆಯುಂಟು, ಕೇಳಿರಿ

"ಪೂರ್ವದಲ್ಲಿ ದಕ್ಷ ಬ್ರಹ್ಮನು ಅನೇಕ ಹೆಣ್ಣುಮಕ್ಕಳನ್ನು ಪಡೆದು ಎಲ್ಲಾ ದೇವತೆಗಳಿಗೂ ಮಕ್ಕಳನ್ನು ಕೊಟ್ಟು ಮಾವನಾಗಿದ್ದನು,ಶಿವನಿಗೂ ಕೂಡಾ 'ದಾಕ್ಷಾಯಿಣಿ' ಯೆಂಬ ಮಗಳನ್ನು ಕೊಟ್ಟಿದ್ದನು, ಒಂದು ಸಾರೆ "ದಕ್ಷಬ್ರಹ್ಮನು, ಎಲ್ಲಾ ಅಳಿಯಂದಿರ ಮನೆಗೆ ಹೋಗಿ ಮರ್ಯಾದೆಯನ್ನು ಹೊಂದಿದನು, ಇದರಂತೆ ಶಿವನಿಂದಲೂ ಮರ್ಯಾದೆಯನ್ನು, ಹೊಂದಬೇಕೆಂದು ಶಿವಸಭೆಗೆ ಬಂದನು. ದಕ್ಷ-ಬ್ರಹ್ಮನ ಗರ್ವವನ್ನು ತಿಳಿದಂತಹ ಪರಶಿವನು ಉದಾಸೀನ ಮಾಡಿದನು, ಆದರಿಂದ ನನಗೆ ಅಪಮಾನವಾಯಿತೆಂದು ದಕ್ಷಬ್ರಹ್ಮನು ಎಲ್ಲಾ ದೇವತೆಗಳನ್ನು ಕೂಡಿಕೊಂಡು ಶಿವನ ವಿರುದ್ಧವಾಗಿ ಒಂದು ಯಜ್ಞವನ್ನು ನಡೆಸಿದನು, ಇದನ್ನರಿತ ಡಾಕ್ಷಾ-ಯಿಣಿಯು ತನ್ನ ಪತಿಯ ಮಾತನ್ನು ಮೀರಿ ತಂದೆಗೆ ಬುದ್ಧಿ ಹೇಳುವುದಕ್ಕಾಗಿ, ಯಾಗ ಶಾಲೆಗೆ ಬಂದಳು, ಆಗ ದಕ್ಷನು–

"ತಿರುಕನಾದ ಶಿವನಿಗೆ ನಿನ್ನನ್ನು ಕೊಟ್ಟುದುದೆ ನನ್ನ ತಪ್ಪಾಗಿದೆ; ಅವನ ಪತ್ನಿಯಾದ ನೀನು ಇಲ್ಲಿಗೆ ಬಂದದ್ದರಿಂದ ಈ ಯಜ್ಞ ಶಾಲೆಯು ಅಪವಿತ್ರವಾಯಿತು, ಇಲ್ಲಿ ನೀನು ಇರಬೇಡ ನಡೆ ಎಂದು ತಿರಸ್ಕರಿಸಿದನು. ಆಗ ದಾಕ್ಷಾಯಣಿಯು ಎಲ್ಲಾ ದೇವತೆಗಳನ್ನು ಕುರಿತು ನೀವು ಈ ರೀತಿ ಮಾಡುವದು ಯೋಗ್ಯವಲ್ಲ ಹಿಂದೊಮ್ಮೆ ನಾನು ಹೆಚ್ಚು, ನಾನು ಹೆಚ್ಚು, ಎಂದು ಕಾದಾಡುತ್ತಿರುವಾಗ, ಶಿವನು ಒಂದು ತೃಣದಿಂದ ನಿಮ್ಮೆಲ್ಲರನ್ನು ಮುಖಭಂಗಿತರನ್ನಾಗಿ ಮಾಡಿರುವನು, ಇದನ್ನು ನೀವು ಈಗಾಗಲೇ ಮರೆತಿರುವಿರಿ ಎಂದು ಹೇಳಿ ಎಚ್ಚರಕೊಡಲು ಆಗ ದಕ್ಷಬ್ರಹ್ಮನು ಮಗಳನ್ನು ನೋಡಿ ಮೂರ್ಖಳೆ ಸ್ಮಶಾನವಾಸಿ, ಬೂದಿ ಬಡುಕ ಆ ತಿರುಕನನ್ನು ಎಷ್ಟು ವರ್ಣಿಸುವೆ ಈ ಸಭೆಯಲ್ಲಿ; ಅವನು ಸತ್ತು ಹೋಗಲಿ ಎಂದು ವಿಷವನ್ನು ಕೊಟ್ಟಿದ್ದರೂ, ನಿನ್ನ ತಾಳಿಯ ಬಲದಿಂದ ಅವನು ಉಳಿದುಕೊಂಡಿರುವನು, ಸಾಕು ನೀನು ನಿಲ್ಲ ಬೇಡ ಇಲ್ಲಿಂದ ಹೊರಟು ಹೋಗು ಎಂದು ನುಡಿಯಲು, ನಿನ್ನಿಂದ ಬಂದ ಶರೀರವು ನಿನ್ನ ಈ ಯಜ್ಞ ಅಗ್ನಿಗೆ ಆಹುತಿಯಾಗಲೆಂದು, ಪತಿಯ ನಿಂದೆಯನ್ನು ಕೇಳಿದ ಪಾಪದ ಪ್ರಾಯಶ್ಚಿತ್ತವೆ ಎಂದು ಅಗ್ನಿಯಲ್ಲಿ ಧುಮುಕಿದಳು. ಇದನ್ನರಿದ ಶಿವನು ತನ್ನ ಜಡೆಯನ್ನು ಭೂಮಿಗೆ ಅಪ್ಪಳಿಸಲು "ವೀರಭದ್ರ"ನ ಜನನವಾಗಿ ಶಿವದ್ರೋಹಿಗಳನ್ನು ಶಿಕ್ಷಿಸುವದಕ್ಕಾಗಿ ಯಾಗ ಮಂಟಪವನ್ನು ಹೊಕ್ಕನು, ಒಂದೇ ಬಾಣವನ್ನು ಬಿಡುತ್ತಿರುವಾಗ ದೇವತೆಗಳು ಕಾಗೆಗಳಾಗಿ ಪಾರಾಗಲು ಓಡಿ ಹೋದರು, ತಕ್ಷಣವೆ ಒಂದು ಕಣ್ಣನ್ನು ಕಿತ್ತಿರು

ವನು ಆದರ ಕುರುಹಿಗಾಗಿ ಈಗಲೂ ಕಾಗೆಗೆ ಒಂದೆ ಕಣ್ಣೆ ಇರುವದು. ಅದೇ ಸಮಯದಲ್ಲಿ ಸೂರ್ಯನ ಹಲ್ಲನ್ನು ಕಿತ್ತನು, ಶಾರದೆಯ ಮೂಗನ್ನು ಕೊಯ್ದನು, ಅಗ್ನಿಯ ನಾಲಿಗೆಯನ್ನು ಸೀಳಿದನು, ಯಾಗದ ಅಗ್ರಸ್ಥಾನವನ್ನು ಹೊಂದಿದ ವಿಷ್ಣುವಿನ ದೇಹವನ್ನು ಕಪ್ಪು ಮಾಡಿದನು; ದಕ್ಷನಿಗೆ ಕುರಿಯ ತಲೆಯನ್ನು ಹಚ್ಚಿದನು; ಈ ಅನಾಹುತವನ್ನು ನೋಡಿ ಎಲ್ಲಾ ಋಷಿಗಳು ಧ್ಯಾನ್ಯದಲ್ಲಿ ಮಗ್ನರಾದರು ಆಗ ದ್ರಾಕ್ಷಯಿಣಿಯು ಗಿರಿಜೆಯಾಗಿ ಶಿವನನ್ನು ಲಗ್ನವಾದಳು, ಈ ಕಥೆಯನ್ನು ಹೇಳಿ ಎಲ್ಲರೂ ಲಿಂಗ ಪೂಜೆಯನ್ನು ಮಾಡಬೇಕೆಂದು ಅಪ್ಪಣೆ ಕೊಡಿಸಿ ಶಿವ ಯೋಗಿಯು ಮೌನಿಯಾದನು. ಇದನ್ನರಿತ ಭಕ್ತರೆಲ್ಲರು ಲಿಂಗವನ್ನು ಧರಿಸುವೆವೆಂದು ದೃಢ ಪ್ರತಿಜ್ಞೆಯನ್ನುಗೈದು; ಲಿಂಗವಂತರೆಲ್ಲರೂ ಇಷ್ಟಲಿಂಗವನ್ನು ಪಡೆದುಕೊಂಡರು. ಇದರಿಂದ ಜಲವಿಲ್ಲದ ಜಲಾಶಯಗಳು ತುಂಬಿ, ನೀರಿನ ತೊಂದರೆಯು ತಪ್ಪಿ ಹೋಯಿತು, ಈ ಲೀಲೆಯಿಂದ ಎಲ್ಲ ಮತಿಯರು ತಮ್ಮ ತಮ್ಮ ಧರ್ಮದಲ್ಲಿ ನಿಷ್ಠೆಯನ್ನಿಟ್ಟು ಚಿರಸುಖವನ್ನು ಪಡೆದೆಸೆದರು.

ಮಳೆಯಿಂದ ಸಕಲ ಸಂಪತ್ತು, ಈ ಮಳೆಗಾಗಿಯೆ ಪೂರ್ವಜರು ಯಜ್ಞ-ಯಾಗಾದಿಗಳನ್ನು ಅಚರಿಸಿ ಕಾಲ ಕಾಲಕ್ಕೆ ಮಳೆಯನ್ನು ಪಡೆಯುತ್ತಿದ್ದರು, ಈ ಪದ್ಧತಿಯು ಬಹು ದಿವಸದಿಂದ ನಮ್ಮಲ್ಲಿ ನಡೆದು ಬಂದಿದೆ; ಹೀಗಿರುವಾಗ ಒಂದು ಸಮಯದಲ್ಲಿ ಬೆಳೆಗಳು ಕೈಗೆ ಬಂದು ಜನರು ಆನಂದದಿಂದ ಇರುವ ಸಮಯದಲ್ಲಿ ನಂಬಿಗೆಯನ್ನು ಹುಟ್ಟಿಸುವದಕ್ಕಾಗಿ ಶಿವನನ್ನು ನಂಬಿದ ಜನರನ್ನು ಕೊಳ್ಳುವದಕ್ಕಾಗಿ ಪ್ರಕೃತಿ–ದೇವಿಯೆ, ಮೋಡಗಳಿಗೆ ಆಜ್ಞಾಪಿಸಿ ಭಯಂಕರವಾದ ಮಳೆಯನ್ನು ಕೊಟ್ಟಳೊ ಏನೊ ಎಂಬಂತೆ ಮಳೆಯು ಸುರಿಯ ಹತ್ತಿತು. ಭೂಮಿಯು ಆಕಾಶವು ಏಕಾಗುವಂತೆ ಮಳೆಯು ಸುರಿಯ ಹತ್ತಿತು. ಭೂಮಿಯನ್ನೆ ಲಿಂಗವನ್ನಾಗಿ ಮಾಡಿಕೊಂಡು ಪ್ರಕೃತಿ ದೇವಿಯ ಅಭಿಷೇಕ ಮಾಡುವಳೊ ಏನೊ ಎಂಬುವಂತೆ ಮಳೆಯು ಸುರಿಯ ಹತ್ತಿತು, ಇದನ್ನು ತಪ್ಪಿಸಲು, ಅಸಾಧ್ಯವೆಂದು ಸಜ್ಜನರು ತಿಳಿದು "ಗುರು ಸಿದ್ಧೇಶ"ನ ಸನ್ನಿಧಿಗೆ ಕಾಯಿಕರ್ಪೂರಾದಿಗಳನ್ನು ತೆಗೆದುಕೊಂಡು,ಬಂದುಭಕ್ತಿಯಿಂದ ಬೇಡಿಕೊಂಡರು, ಆಗ ಶಿವಯೋಗಿಯು ಗವಿಯಿಂದ ಹೊರಗೆ ಬಂದು ಭಯಂಕರವಾಗಿ ಸುರಿಯುವ ಮಳೆಯಲ್ಲಿ ನಿಂತಿರುವ ಭಕ್ತರನ್ನು ನೋಡಿ ಗುರುವು ಇದಕ್ಕೇಕೆ ಚಿಂತಿಸುವಿರಿ, ನಿಮ್ಮ ನಿಮ್ಮ ಮನೆಗಳಲ್ಲಿ; ಗುರುಮಠಗಳಲ್ಲಿ, ದೇವಾಲಯಗಳಲ್ಲಿ ದೀಪೋತ್ಸವಗಳನ್ನು ಆಚರಿಸಿರಿ, ಅದರಿಂದ ಈ ಅತಿವೃಷ್ಟಿಯು ನಿಲ್ಲುವದು ಎಂದು ಅಪ್ಪಣೆಕೊಡಿಸಲು; ಅದರಂತೆ ಭಕ್ತರು ದೀಪೋತ್ಸವವನ್ನು ಆಚರಿಸಲು, ಮಳೆಯು ನಿಂತಿತು, ಎಲ್ಲರಿಗೂ ಆನಂದವಾಯಿತು.

ಧಾರವಾಡದಲ್ಲಿ "ಮಹಾದೇವ ಭಟ್ಟ"ನೆಂಬ ಬ್ರಾಹ್ಮಣನಿದ್ದನು, ಅವನು ಸಕಲ ವಿದ್ಯೆಗಳಲ್ಲಿ ಪಾರಾಂಗತನಾಗಿ ಸದ್ಗುಣಿಯಾಗಿ ಬಾಳುತ್ತಿದ್ದನು; ಆದರೆ ಬಡ

ತನವು ಅವನನ್ನು ಬಹು ಕಾಡುತ್ತಿತ್ತು. ಅವನ ಪತ್ನಿಯು ಒಂಬತ್ತು ಮಕ್ಕಳ ತಾಯಿಯಾಗಿದ್ದರೂ ಮಕ್ಕಳ ಉಪಜೀವನದ ಚಿಂತೆಯಿಲ್ಲದೆ, ಉಡಿಗೆ ತೊಡಿಗೆಗಳನ್ನು ಬಯಿಸಿ ಪತಿಯನ್ನು ವಿಪರೀತಿವಾಗಿ ಕಾಡುತ್ತಿದ್ದಳು. ಬಡತನದ ಬೇಗೆಯಿಂದ; ಹೆಂಡತಿಯ ಕಾಟದಿಂದ, ಮರಣವನ್ನು ಬಯಿಸಿ ಚಿಂತಿಸುತಿರುವಾಗ "ಗುರುಸಿದ್ಧ" ಶಿವಯೋಗಿಯ ನೆನಪಾಯಿತು ಹೆಂಡರು-ಮಕ್ಕಳಿಗೆ ತಿಳಿಸದೆ; ಶಿವಯೋಗಿ ವಾಸಿಸುವ ಬಿಲ್ವವನದಲ್ಲಿ ನಿಂದು 'ಗುರುವೆಬಾ, ಹರಿಯೆ ಬಾ, ಸುರತರುವೆ ಬಾ ಎಂದು ಸ್ತೋತ್ರ ಮಾಡಲು ಗುರುಸಿದ್ಧ ಗುರುವು ಅವನ ಭಕ್ತಿಗೆ ಒಲಿದು ಬಂದು, ಎಲೈ ವಿಪ್ರನೆ: ಕಷ್ಟಗಳಿಗೆ ಹೆದರಿ ಪ್ರಾಣವನ್ನು ತ್ಯಜಿಸುವದುಚಿತವೆ, "ಉರಿ ಬರಲಿ, ಸಿರಿ ಬರಲಿ" ಬೇಕು ಬೇಡೆನ್ನದೆ ಭೋಗಿಸುವದೆ ಜ್ಞಾನಿಯ ಕರ್ತವ್ಯ; ತಿಳಿದವನಾದ ನೀನು ಸಂಸಾರವನ್ನು ತ್ಯಜಿಸಬೇಡ. ತೆಗೆದುಕೊ "ಇದು ಶ್ರೀ ವಿಭೂತಿ'' ಇದಕ್ಕೆ ಕಂತಿಯನ್ನಿಡಿಸಿ, ಇದನ್ನೆ ದೇವರೆಂದು ತಿಳಿದು ಇದನ್ನು ಪೂಜಿಸು, ನಿನ್ನ ಕಷ್ಟವು ತೊಲಗಿ, ನಿನ್ನ ಮಡದಿಯು ವಿನಯವಂತಳಾಗಿ ನಿನ್ನೊಡನೆ ಬಾಳುವಳು, ಯಾವ ತರಹದ ಕಷ್ಟಗಳು ನಿನಗೆ ಬರುವದಿಲ್ಲ, ನಿನ್ನ ಬಡತನವು ಹೋಗಿ ನಿನ್ನ ಸಂಪತ್ತು ಬೆಳೆದು; ನಿನ್ನ ಜೀವನ ಸುಖಮಯವಾಗಿ ಸಾಗುವದು; ಎಂದು ಆಶೀರ್ವದಿಸಿ ಕಳಿಸಿದನು. ಅದಕ್ಕೆ ಮಹಾದೇವ ಭಟ್ಟನು ಮರುಗಿ ನಮಸ್ಕರಿಸಿ ವಿಭೂತಿಯನ್ನು ಪಡೆದು ಅದಕ್ಕೆ ಕಂತಿಯನ್ನು ಹಿಡಿಸಿಕೊಂಡು ಮನೆಗೆ ಬಂದನು. ಅವನ ಹೆಂಡತಿಯು ಎಂದಿನಂತಿರದೆ, ನೋಡಿದವರಿಗೆ ಆಶ್ಚರ್ಯಪಡುವಂತೆ ಮೊದಲು ಪತಿಯ ಚರಣಗಳಿಗೆರಗಿ ನಿಂತು ನಿನ್ನೆಯ ರಾತ್ರಿ "ಹುಚ್ಚೇಶ"ನು ಕನಸಿನಲ್ಲಿ ಬಂದು ಪತಿಭಕ್ತಿಯನ್ನು ಬೋಧಿಸಿ. ತನ್ನ ಹೆಸರನ್ನು ತಿಳಿಸಿ, ನೀವು ಅವನ ಸನ್ನಿಧಿಗೆ ಹೋದ ವಿಷಯವನ್ನು ಹೇಳಿ, ಅದೃಶ್ಯನಾದನು ಎಂದು ತನ್ನ ಪತಿಗೆ ವಿನಯದಿಂದ ಹೇಳಿದಳು. ಆವಾಗ್ಗೆ ಆನಂದಪಟ್ಟು ಗುರುಕೊಟ್ಟ ಭಸ್ಮವನ್ನು ಸ್ನಾನಮಾಡಿ ಪೂಜಿಸಿ, ಗುರು-ವಚನದಲ್ಲಿ ವಿಶ್ವಾಸವನ್ನಿರಿಸಿ ಸಕಲ-ಸಂಪತ್ತನ್ನು ಪಡೆದು ಸುಖಿಯಾದನು.

"ಕರೂರ" ಗ್ರಾಮದಲ್ಲಿ "ಶಾಂತಲಾದೇವಿ" ಎಂಬ ಹೆಣ್ಣುಮಗಳು, ರೂಪವತಿಯು, ಗುಣವತಿಯು, ಆಗಿ "ಗುರುಸಿದ್ಧೇಶ್ವರ"ನ ಪಾದ ಭಕ್ತಿಯನ್ನು ಹೊಂದಿ ಸುಖವಾಗಿದ್ದಳು. ಇವಳ ಪತಿ ಕಡುಬಡನಾಗಿದ್ದರೂ ಅವನ ರೂಪಕ್ಕೆ ಮೆಚ್ಚಿ, ತಂದೆ ತಾಯಿಗಳು ಬೇಡವೆಂದರೂ ಅವನನ್ನೆ ಮದುವೆ ಮಾಡಿಕೊಂಡಳು. ಹೀಗಿರುವಾಗ ಒರ್ವ ಶ್ರೀಮಂತನು ಅವಳಿಗೆ ಧನದ ಆಶೆಯನ್ನು ತೋರಿಸಿ ಅವಳನ್ನು ಒಲಿಸಿ ಕೊಳ್ಳಬೇಕೆಂಬ ದುರಾಶೆಯಿಂದ ಪ್ರಯತ್ನ ಪಟ್ಟನು. ಗುಣವತಿಯರು, ಸಾಧ್ವಿಯರು, ಪತಿವೃತೆಯರು, ಅಂದಕ್ಕೆ ನಲಿಯುವರೆ? ಆ ಶ್ರೀಮಂತನು ತನ್ನ ಪ್ರಯತ್ನಕ್ಕೆ ಒಳಗಾಗದಿದ್ದನ್ನು ತಿಳಿದು; ಗಂಡನಿಂದ ಅವಳ

ಪ್ರೇಮವನ್ನು, ಅವರ ಸಂಸಾರವನ್ನು ಕೆಡಿಸಬೇಕೆಂದು ಅವಳ ಗಂಡನಿಗೆ "ನಿನ್ನ ಸತಿಯು ವ್ಯಭಿಚಾರಿಣಿ" ಎಂದು ಹೇಳಿದನು ಅವನು ಪತ್ನಿಯನ್ನು ಕೇಳಿದನು ಆಗ ಸಾಧ್ವಿಯು ತನ್ನ ಗಂಡನಿಂದ ಇದನ್ನೆಲ್ಲ ಅರಿತು ಶ್ರೀಮಂತನನ್ನು ಕರೆಯಿಸಿ, ನಾನು ವ್ಯಭಿಚಾರಿಯಾಗದೆ ಗರತಿಯಾಗಿದ್ದರೆ ನಿನ್ನ ವಾಣಿಯು ನಿಂತು ಹೋಗಲಿ, ಇದಕ್ಕೆ ಗುರುಸಿದ್ಧೇಶ್ವರನೇ ಸಾಕ್ಷಿ ಎಂದು ನುಡಿಯಲು; ಆಗ ಅವನ ವಾಣಿಯು ನಿಂತು ಹೋಯಿತು ಇದನ್ನರಿತ ಜನರು ಹುಬ್ಬಳ್ಳಿಯ ಬಿಲ್ವ ವನದಲ್ಲಿರುವ ಗುರುಸಿದ್ಧೇಶ್ವರನಲ್ಲಿಗೆ ಅವನನ್ನು ಕರೆದುಕೊಂಡು ಬಂದು ನಮಸ್ಕರಿಸಿ ನಿಜ ಸ್ಥಿತಿಯನ್ನು ಹೇಳಿಕೊಂಡರು ಆಗ ಗುರುಸಿದ್ಧೇಶ್ವರನ್ನು ನನ್ನಲ್ಲಿ ಏನು ಇರುವದಲ್ಲ.

ಆ ಸಾಧ್ವಿಯಲ್ಲಿಯೇ ಅಗಾಧವಾದ ಶಕ್ತಿಯಿರುವದು ಅವಳ ಪಾದಕ್ಕೆ ನಮಸ್ಕರಿಸಿ ಬೇಡಿಕೊಂಡರೆ ಇವನ ಮೂಕತ್ವವು ತೊಲಗುವದು ಎಂದನು. ಗುರುವಿನಾಜ್ಞೆಯಂತೆ ಸಾಧ್ವಿಯಾದ ಶಾಂತಲಾದೇವಿಯನ್ನು ಬೇಡಿಕೊಂಡನು. ತಕ್ಷಣವೆ ಅವನಿಗೆ ವಾಣಿಯು ಬಂದಿತು. ನನ್ನ ಮೂಕತ್ವವನ್ನು ಕಳೆದು. ಬುದ್ಧಿಗಲಿಸಿ ಸದ್ಗುಣಿಯನ್ನಾಗಿ ಮಾಡಿದ ತಾಯಿಯು ನೀನು, ನಿನ್ನ ಹೊರತು ನನಗೆ ಮತ್ತಾವ ದೈವ ಇಲ್ಲೆಂದು ಕೊಂಡಾಡಲು, ನನ್ನಲ್ಲೇನಿದೆ ಇದಕ್ಕೆಲ್ಲ ಶ್ರೀಗುರು ಗುರುಸಿದ್ಧೇಶ್ವರನೇ ಕಾರಣನು, ಎಂದು ಗುರುವನ್ನು ಸ್ಮರಿಸಿದಳು.

ಮದ್ರಾಸ ನಗರದಿಂದ 'ವಿವೇಕ'ನೆಂಬ ಭಕ್ತನು ಗುರುಸಿದ್ಧೇಶ್ವರ ಕೀರ್ತಿಯನ್ನು ಕೇಳಿ, ಹುಬ್ಬಳ್ಳಿಯಲ್ಲಿಯೇ ನೆಲಿಸಿದನು. ಅವನ ಮಡದಿಯು ಬಹಳ ಕುರೂಪಿ ಇದ್ದಳು, ಆದ್ದರಿಂದ ಅವಳ ರೂಪವನ್ನು ಬದಲಾಯಿಸಲು ಪಾದದಲ್ಲಿ ಬೇಡಿಕೊಂಡನು, ಆ ಗುರುಸಿದ್ಧನು ವಿವೇಕನನ್ನು ನೋಡಿ ಅವನಿಗೆ ಸ್ವಲ್ಪ ಬೂದಿಯನ್ನು ಕೊಟ್ಟನು, ಇದನ್ನು ನಿನ್ನ ಸತಿಯು ಸ್ನಾನಮಾಡುವ ನೀರಿನಲ್ಲಿ ಬೆರಿಸು, ಇದರಿಂದ ಅವಳು ರೂಪವತಿಯಾಗುವಳು ಎಂದು ಅಪ್ಪಣೆ ಕೊಡಿಸಲು, ಅದರಂತೆ ನಡೆದುಕೊಂಡು ಹುಬ್ಬಳ್ಳಿಯಲ್ಲಿಯೇ ವಾಸವಾಗಿದ್ದನು. ತದನಂತರ ಗುರುವನ್ನು ಸ್ಮರಿಸದೆ ಹೆಂಡತಿಯನ್ನು ಅಗಲದೆ, ಇರುತ್ತಿದ್ದನು. ದುಡಿಯಲಿಕ್ಕೆ ಹೋಗುವ ಪ್ರಸಂಗದಲ್ಲಿ ಮನೆಗೆ ಬೀಗ ಹಾಕಿಕೊಂಡು ಹೋಗುತ್ತಿದ್ದನು, ಹೀಗಿರುವಾಗ ಓರ್ವ ಶ್ರೀಮಂತನು ಅವಳನ್ನು ಅಪಹರಿಸಲು ಪ್ರಯತ್ನಪಟ್ಟನು, ವಿವೇಕನು ಬಂದು ನೋಡುವದರೊಳಗಾಗಿ ಹೆಂಡತಿಯು ಕಾಣಲಿಲ್ಲ, ತಕ್ಷಣವೆ, "ಗುರುಸಿದ್ಧ" ಶಿವಯೋಗಿಯಃ ಸ್ಮರಣೆಯಾಗಿದೆ, ಬಿಲ್ವ-ವನಕ್ಕೆ ಬಂದು ಹುಚ್ಚೇಶ ಎಂದು ಕೂಗಿ ಯೋಗಿಯನ್ನು ಕಾಣದೆ, ಗವಿಯ ಬಾಗಿಲಕ್ಕೆ, ತನ್ನ ತಲೆಯನ್ನು ಅಪ್ಪಳಿಸಲಣಿಯಾದಾಗ, ಗುರುವಿನ ದರ್ಶನವಾಗಿದೆ, ಗುರುವು ತನ್ನ ಭಕ್ತನನ್ನು ನೋಡಿ "ಮೊದಲು ನಾವು ಹೇಳಲಿಲ್ಲವೆ ಕುರೂಪಿಯೆ ಇರಲೆಂದು,ಆಗಲಿ

ಈಗಲಾದರೂ ಕೇಳು, ಈಗ ಮೊದಲಿನ ರೂಪವನ್ನು ಕೊಟ್ಟರೆ ಅವಳು ಸುಖವಾಗಿ ಬಾಳುತ್ತಾಳೆ, ಇನ್ನು ಒಂದು ಕ್ಷಣದಲ್ಲಿ ಶ್ರೀಮಂತನಿಂದ ಭ್ರಷ್ಟಳಾಗುತ್ತಾಳೆ, ಹೇಗೆ ಮಾಡಬೇಕೆಂದು ಹೇಳಲು, ಹೇಗಾದರು ಮಾಡಿ ತಮ್ಮ ಕೃಪೆಯೆಂದು ನುಡಿಯಲು, ಅವನ ಹೆಂಡತಿಯು ಶ್ರೀಮಂತನು ಶಿವಯೋಗಿಯನ್ನು ಕಂಡರು; ಶ್ರೀಮಂತನು, ಗುರುವೆ, ನಿನ್ನ ಭಕ್ತಳೆಂದು ತಿಳಿಯದೆ ನಾನು ಕೆಟ್ಟೆನು, ಇವಳನ್ನು ಆಲಿಂಗಿಸಲು ಚಾಚಿದ ಕೈಗಳು ಕೆಳಗಿಳಿಯದೆ ಹಾಗೆ ನಿಂತಿರುವವು ನನ್ನನ್ನು ರಕ್ಷಿಸೆಂದನು. ಆಗ ಶಿವಯೋಗಿಯು, ಪಾಪದ ಕಾರ್ಯವನ್ನು ಮಾಡಬಾರದು, ಪಾಪಕೃತಿಯೆಸಗಲಂಜದವಗೆ ಇದೇ ರೀತಿ ಶಿಕ್ಷೆ, ಆ ಸಾಧ್ವಿಯನ್ನೇ ಬೇಡಿಕೊ ನಿನ್ನ ಪಾಪವು ಪರಿಹಾರವಾಗುವದೆಂದು ಶಿವಯೋಗಿಯು ನುಡಿದನು, ಗುರುವಚನದಂತೆ ಸಾಧ್ವಿಯಲ್ಲಿ ಬೇಡಿಕೊಂಡು ತನ್ನ ಕರಗಳನ್ನು ಪಡೆದುಕೊಂಡನು, ಈ ಲೀಲೆಯನ್ನು ಕೇಳಿದ (ಕಂಡ) ಜನರು ಪರನಾರಿ ಸಹೋದರರಾಗಿ ಬಾಳಿದರು.

"ಪೂವಳ್ಳಿಯಲ್ಲಿ ಮತ್ತೊಂದು ಲೀಲೆ, ಅದೇನಂದರೆ ಅಂಗವಿಕಲನಾದ ಓರ್ವ ತರಣನು "ಅಷ್ಟವಕ್ರ" ಯೆಂಬ ನಾಮವನ್ನು ಇಟ್ಟುಕೊಂಡು ಅಷ್ಟಾಂಗವಕ್ರ ನಾಗಿಯೆ ಉಳಿದಕೊಂಡಿದ್ದ. ಅವನು ಶ್ರೀಗುರುವಿನ ಸನ್ನಿಧಾನಕ್ಕೆ ಬಂದು ನಮಿಸುತ್ತಿರಲು, ಗುರುವು ಅವನನ್ನು ನೋಡಿ, ನೀನು ಅಳಬೇಡ, ಈ ಫಲಗಳನ್ನು ತೆಗೆದುಕೊ ಅಗೊ! ಆ ಹೊಂಡದಲ್ಲಿ ಸ್ನಾನಮಾಡಿ ಇವುಗಳನ್ನು ಭುಂಜಿಸಿ ಇಲ್ಲಿಯೆ ಮಲಗಿಕೊ ಎಂದು ಹೇಳಿ. ಅಂತರ್ಧಾನನಾದನು, ಗುರುವಿನ ಅಪ್ಪಣೆಯಂತೆ ಸ್ನಾನಮಾಡಿ ಹಣ್ಣನ್ನು ಭುಂಜಿಸಿ ಅಲ್ಲಿಯೆ ಮಲಗಿಕೊಂಡನು; ಏಳುವದರೊಳಗಾಗಿ ಗುರುವಿನ ಕೃಪೆಯಿಂದ ಸುಂದರ ಕಾಯವನ್ನು ಧರಿಸಿ, ಭವ್ಯಕಾಯನಾಗಿ ಸುಂದರತೆಯಿಂದ ಶೋಭಿಸಿದನು, ಅಷ್ಟರಲ್ಲಿ ಅಕ್ಕನಾದ ಭದ್ರೆಯು ಅಲ್ಲಿಗೆ ಬಂದು ಅವನನ್ನು ನೋಡಿ ಹುಚ್ಚೀಶನಿರುವ ಬಿಲ್ವವನ ಇದೆಯೇನಪ್ಪ? ಅದಕ್ಕೆ ಅಕ್ಕ ನಾನು ನಿನಗೆ ಪರಿಚಯ ಇಲ್ಲವೆ ಅಪರಿಚಿತರಂತೆ ಕೇಳುವೆಯಲ್ಲ, ನಾನು ನಿನ್ನ ತಮ್ಮ, ಅಷ್ಟಾಂಗವಕ್ರ ಶ್ರೀಗುರುವಿನ ಕೃಪೆಯಿಂದ ಹೀಗಾಗಿರುವೆನು ಈಗಲಾದರು ನಿನ್ನ ಮಗಳನ್ನು ಕೊಡುವೆಯೊ? ಇಲ್ಲವೊ ಎಂದನು, ಅವಳು ನಿನ್ನನ್ನು ಅಣುಕಿಸಿ ನಾನು ಕೆಟ್ಟೆ, ಆದ್ದರಿಂದ, ಗುರುಸಿದ್ಧ ಶಿವಯೋಗಿಯನ್ನು ಹುಡುಕುತ್ತ ಬಂದಿರುವೆ, ನನ್ನ ಮಗಳು ಅಷ್ಟಾಂಗವಕ್ರಳಾಗಿರುವಳು. ಈಗಲೇ ಅವಳನ್ನು ಇಲ್ಲಿಗೆ ಕರೆತರುವೆನೆಂದು ಹೇಳಿ ಮನೆಗೆ ಹೋಗಿ ಮಗಳನ್ನು ಕರೆತಂದಳು, ಆಗ ಅವರ್ನು ಗವಿಯ ಬಾಗಿಲಲ್ಲಿ ನಿಂತು; ಕರುಣಾಕರನೆ, ದೀನ ಬಂಧುವೆ, ಚರವರ ಶ್ರೇಷ್ಠನೆ, ಕರುಣೆಯಿಂದ ನಮ್ಮನ್ನು ಕಾಪಾಡು ಎಂದು ಪ್ರಾರ್ಥನೆ ಮಾಡಲು, ಅಕ್ಕನು ಗುರುವಿಗೆ ನಮಸ್ಕರಿಸಿ ಸ್ವಾಮಿ ನಾನು ಅಪರಾಧಿಯಾಗಿರುವೆ, ದುಡ್ಡಿನ ಆಶೆಯಿಂದ ತವರು ಮನೆಯನ್ನು ನಿಂದಿಸಿ ದೋಷಕ್ಕೆ ಗುರಿಯಾಗಿರುವೆನು; ಕಾರಣ ಈ

ಕರ್ಮದಿಂದ ನನ್ನನ್ನು ಉದ್ಧರಿಸಬೇಕೆಂದಳು ಆಗ ಶಿವಯೋಗಿಯು ಇವನಿಗೆ ನಿನ್ನ ಮಗಳನ್ನು ಕೊಟ್ಟು ಮದುವೆಮಾಡಬೇಕು ಅಂದರೆ ಅವಳಿಗೆ ಅಂಟಿದ ಅಷ್ಟಾಂಗ ವಕ್ರವು ತೊಲಗುವದು ಎಂದನು; ಗುರುನುಡಿಯಂತೆ ನಡೆದು ಮಗಳನ್ನು ಅವನಿಗೆ ಕೊಟ್ಟು "ಭದ್ರಾಂಗ'' ಎಂದು ಹೆಸರಿಟ್ಟು, ವಿವಾಹ ಮಾಡಿ ಗುರುಸಿದ್ಧ ಶಿವಯೋಗಿಯ ಭಕ್ತರಾಗಿ ಬಾಳಿದರು.

ಇನ್ನೊಂದು ಲೀಲೆ, "ಹರಿರಾಯ"ನೆಂಬ ಬ್ರಾಹ್ಮಣನು ಅಚ್ಯುತನೆಂಬ ಮಗನಿದ್ದನು, ಅವನಿಗೆ ೮ ವರ್ಷವಾದರು, ಆ ಬಾಲಕನಿಗೆ ಓದು ಬರಹ ಬರಲಿಲ್ಲ ಶಾಲೆಗೆ ಹೋಗುತ್ತಿರಲಿಲ್ಲ, ಹೋಗುವವರನ್ನು ಬಿಡಿಸಿ ಆಟ ಆಡಲು ಕರೆಯುತ್ತಿದ್ದನು ತಿಂಡಿ ತಿನಿಸುಗಳ ಮೇಲೆ, ಆಶೆ ಇಟ್ಟುಕೊಂಡು ಹುಡುಗರನ್ನು ಕೂಡಿಕೊಂಡು ಕಾಲವನ್ನು ಕಳೆಯುತ್ತಿದ್ದನು, ಅದಕ್ಕೆ ಆ ಬ್ರಾಹ್ಮಣನು, ನಮಗೆ ವಿದ್ಯೆಯೆ ಆಸ್ತಿಯಾಗಿರುವದಲ್ಲದೆ ಭೂಷಣವಾಗಿರುವದು, ಅದನ್ನು ಕಲಿಯದೆ ಮಗನು ಉಡಾಳನಾಗಿ, ತಿರುಗುತ್ತಿರುವನು, ವಂಶಕ್ಕೂ ಕೂಡ ಕುಂದನ್ನು ತರುವನು, ಇದಕ್ಕೆ ಗತಿಯೇನೆಂದು ಹಗಲಿರಳು ಚಿಂತಿಸುತ್ತಿದ್ದನು, ಈ ಕರ್ಮನ್ನು ಕಳೆದುಕೊಳ್ಳುವದಕ್ಕಾಗಿ, ಯಾವ ಗುರುಗಳಲ್ಲಿಗೆ ಅವರು ಎಲ್ಲಿ ದೊರೆಯುವರೆಂದು ಚಿಂತಿಸುತ್ತಿರುವಾಗ, ಅವನ ಬಂಧುವಾದ ಒಬ್ಬ ಮನುಷ್ಯನು ಬಂದು ಹುಚ್ಚೀಶನನ್ನು ವರ್ಣಿಸಿ, ಅವನಲ್ಲಿಗೆ ಬ್ರಾಹ್ಮಣನನ್ನು ಕರೆದುಕೊಂಡು ಬಂದನು, ಜೊತೆಗೆ ಮಗನನ್ನು ಕೂಡಾ ಕರೆದುಕೊಂಡು ಬಂದನು. ಬಿಲ್ವವನ ಸಮೀಪಕ್ಕೆ ಬರಲು ಅಚ್ಚುತನು ಭಕ್ತಿವಂತನಾಗಿ ಆಸ್ತಿಕ್ಯದಿಂದ ಗವಿಯ ಬಾಗಿಲಕೆ, ವಂದಿಸಿ ಗುರುವೆ ನನ್ನನ್ನು ಕಾಪಾಡು ಎಂದು ಬೇಡಿಕೊಂಡನು. "ಗುರುಸಿದ್ಧ''ನು ಬಂದನು. ಎಲೈ ಹರಿರಾಯ, ನೀನು ಭ್ರಮೆಯಲ್ಲಿ ಸಿಲುಕಿರುವೆ, ಎಲ್ಲಾ ದೇವರೆಲ್ಲ ಒಂದೆ, ಇಂದಿನಿಂದ ನೀನು ಬುದ್ಧಿವಂತನಾಗು ನಿನ್ನ ಮಗನು ಕೂಡಾ ವಿದ್ಯಾವಂತನಾಗುವನು, ಅವನೇ ನಿನ್ನ ವಂಶದ ಕೀರ್ತಿ ತರುವನು, ಎಂದು ಅವರು ತಂದಿರುವ ಫಲಗಳನ್ನು ಅವರಿಗೆ ಆಶೀರ್ವದಿಸಿ ಕೊಟ್ಟನು. ಇಲ್ಲಿಗೆ ಏಳನೆಯ ಸಂಧಿ ಸಮಾಪ್ತಿ ಆಯಿತು.



## ಎಂಟನೆಯ ಸಂಧಿ.

ಕಲ್ಯಾಣದ ಚನ್ನಬಸವೇಶ್ವರನು, ಮೂರುಸಾವಿರ ಶರಣರೊಡನೆ ಗುರುಸಿದ್ಧೇಶನ ಸನ್ನಿಧಿಗೆ ಬಂದು ಉನ್ನತವಾದ ಶರಣ-ಸಾಹಿತ್ಯವನ್ನು ಅವರಿಗೆ ಅರ್ಪಿಸಿ ರಕ್ಷಿಸೆಂದು ಬೇಡಿದನು;

ಜೇಡರ ಹುಳವು ತನ್ನಲ್ಲಿ ಹುಟ್ಟುವ ನೂಲಿನಿಂದ ಸುತ್ತಿಕೊಂಡು, ಅದರ ಲ್ಲಿಯೆ ಬಿದ್ದು ಸಾಯುವಂತೆ, ನನ್ನ ಮನಸಿನಲ್ಲಿ ಹುಟ್ಟಿದ ಆಶೆಯಿಂದ ನಾನು ಮರಣ ಹೊಂದುತ್ತಿರುವೆನು, ನನ್ನನ್ನು ರಕ್ಷಿಸುವವರು ಯಾರು ಇಲ್ಲ; ಇದನ್ನರಿದು ನೀನೆ ರಕ್ಷಿಸು ಶಿವ :—

ಬಿಲ್ವ ವನದ ಗವಿಯಲ್ಲಿ ಹುಚ್ಚೇಶನು "ಗುರುಸಿದ್ಧನೆಂಬ ನಾಮಾಕಿಂತದಿಂದ ತಪ್ಪಸ್ಸನು ಆಚರಿಸುತ್ತಿದ್ದನು, ಇವನ ಸತ್-ಕೀರ್ತಿಯನ್ನು ಪ್ರಚಾರ ಪಡಿಸಬೇ ಕೆಂಬ ಸದಿಚ್ಛೆಯಿಂದಲೂ ಬಸವಾದಿ ಶರಣನ್ನು ಪರೀಕ್ಷಿಸುವದಕ್ಕಾಗಿಯೂ, ಶೀಲ ವನ್ನು ಬಿಟ್ಟಂತೆ, ತೋರಿ, ಕುಷ್ಟರೋಗಿಯಾಗಿ, ರಕ್ತ, ಕೀವು, ಸುರಿಸುತ್ತ, ಕಲ್ಯಾಣ ಬೀದಿಯಲ್ಲಿ, ಅಲ್ಲಮ ಪ್ರಭುವು ಅಲೆದಾಡುತ್ತಿದ್ದನು, ಇವನನ್ನು, ಕಂಡಂತಹ ಗುರುಲಿಂಗ ಜಂಗಮ ಪ್ರೇಮಿಯಾದಂತಹ ಬಸವಣ್ಣನು ಪ್ರಭುದೇವರನ್ನು ಗುರಿ ತಿಸಿ ನಮಸ್ಕರಿಸಲು,ಪ್ರಭು ನನಗೆ ಮುಟ್ಟಬೇಡ ನಾನು ಕುಷ್ಟರೋಗಿಎನಲು, ನಿನ್ನ ಕುಷ್ಟರೋಗವು ಅಂಟಿ ನನ್ನ ಭವರೋಗವನ್ನು ಕಳೆಯಲಿ ಎಂದು ಬಸವಣ್ಣನು ನುಡಿಯುತ್ತ, ಅವರನ್ನು ಪಲ್ಲಕ್ಕಿಯಲ್ಲಿ ಕೂಡ್ರಿಸಿ ವಾದ್ಯ ವೈಭವಗಳೊಡನೆ. ಅನುಭವ ಮಂಟಪಕ್ಕೆ ಕರೆತಂದನು. ಪ್ರಭುವಿನ ಕುಷ್ಠರೋಗವು ತೊಲಗಿ ನಿಂದಕರಿಗೆ ಅಂಟಿಕೊಂಡಿತು. ಆ ಪ್ರಭುವು ಬಸವ–ಚನ್ನಬಸವ ಕರಸ್ಪರ್ಶದಿಂದ ನನ್ನ ರೋಗವು ತೊಲಗಿತು ಎಂದು ನುಡಿಯುತ್ತ ಅನುಭವ ಮಂಟಪದಲ್ಲಿ ಮನ್ನಣೆ ಪಡೆದನು,

ಶೂನ್ಯ ಸಿಂಹಾಸನವನ್ನು ನೋಡಿ ಪ್ರಭುವು ಈ ರೀತಿಯಾಗಿ ಬಣ್ಣಿಸತೊಡಗಿ ದನು. ಈ ಪೀಠವು ನೋಡಿದವರಿಗೆ ಆನಂದವನ್ನುಂಟು ಮಾಡುತ್ತಿರುವುದು. ಶೂನ್ಯ ಎಂದರೆ ಸೊನ್ನೆ ಎಂದರ್ಥ ಏನು ಇಲ್ಲವೆಂದು ಅಭಿಪ್ರಾಯ, ಶೂನ್ಯವು ಹೇಗೆ ಪೀಠವಾಗುವದು ? ಜನ್ಯತ್ವದಲ್ಲಿ ರಾಹಿತ್ಯ ಇರುವದು, ಅಂದ ಮೇಲೆ ಇದಕ್ಕೆ ಶೂನ್ಯ ಪೀಠವೆಂದು ಏಕೆನ್ನಬೇಕು, ಅದಕ್ಕಾಗಿಯೆ ಕನ್ನಡಿಗರು, ಪೂಜಿ ಎಂದು ಹೇಳುವರು, ಇದು ಬಿಂದು ಆಕಾರವಿರುವದು. ಬಿಂದುವೆಂದರೆ ಗೋಲಾಕಾರ ಲಿಂಗವು ಕೂಡಾ ಗೋಲಾಕಾರವಿರುವದು.

ಆ ಬಿಂದುವೆ ನಾದವನ್ನು; ಚಿತ್ತವನ್ನು; ಕಲೆಯನ್ನು ಹೊಂದಿಕೊಂಡಿರುವುದು, ಈ ಆತ್ಮವೆ ನಿರಂಜನವೆನಿಸಿಕೊಂಡಿರುವುದು ಇದನ್ನರಿತ ಬಸವಣ್ಣನು ನನ್ನನ್ನು ಕರೆದು ತಂದಿರುವನೆಂದು ಪ್ರಭುವು ಹೇಳತೊಡಗಿದನು. ಜಂಗಮನ ಕೀರ್ತಿಗೆ ಭಕ್ತನೆ ಆಧಾರ, ಬಸವಣ್ಣ ಇರದಿದ್ದರೆ ನಮ್ಮನ್ನು ಕೇಳ್ವರಾರು ? ಆದ್ದರಿಂದಲೆ, ಈ ಪೀಠವನ್ನು ರಚಿಸಿ ನಮಗೆ ಕೊಟ್ಟಿರುವನು.

ಶೂನ್ಯವೇ ಒಂದು ಮನೆಯಾಗಿರುವದು, ಇದಕ್ಕೆ ಚಿನ್ಮಯ ಒಂಭತ್ತು ಪ್ರಣವಗಳೆ ಸೋಪಾನಂಗಗಳಾಗಿರುವವು. ಇದಲ್ಲದೆ ಒಂಭತ್ತು ಚಕ್ರ, ಒಂಭತ್ತು ಕಮಲ, ಒಂಭತ್ತು ಶಕ್ತಿ, ಒಂಭತ್ತು ಭಕ್ತಿ ಇದರಂತೆ ವರ್ಣ, ರೂಪ, ಹಸ್ತ, ಮುಖ, ಅಂಗ, ಸ್ಥಲ ಇವುಗಳು ಇದರಲ್ಲಿ ಶೋಭಿಸಿರುವವು. ಇಂತಹ ಭವ್ಯವಾದ ಪೀಠವನ್ನು ಅಲಂಕರಿಸುವದಾದರೆ, ಗುರುಸ್ವರೂಪಿಗಳಾದ ನಿಮ್ಮ ಹಾಗು ಬಸವಣ್ಣನವರ ಕೃಪೆಯಿರಲಿ ಎಂದು ಶಿವಶರಣ ತಿಂತಿಣಿಗೆ ಮಣಿದು 'ಶೂನ್ಯ ಸಿಂಹಾಸನ' ವನ್ನು ಶ್ರೀಮದಲ್ಲಮಪ್ರಭುದೇವರು ಏರಿ ಅಲಂಕೃತರಾದರು; ಇವನೆ ಶಂಭೂವೆಂದು; ಇವನೆ ನಮ್ಮ ಉದ್ಧಾರಕ್ಕಾಗಿ ಬಂದವನೆಂದು; ಎಲ್ಲರೂ ಮನಸಾರೆ, ಸತ್ಯಪ್ರಭವೆ, ನಿತ್ಯ ಪ್ರಭುವೆ, ಪ್ರಭುವೆ ರಕ್ಷಿಸೆಂದು ಕೊಂಡಾಡಿದರು.

"ಹರಳಯ್ಯ"ನವರು ಬಸವಣ್ಣನವರ ದರ್ಶನಕ್ಕೆಂದು ಬರುವಾಗ ಹಾದಿಯಲ್ಲಿಯೆ ಬಸವಣ್ಣನವರ ದರ್ಶನವಾಗಿದೆ. ಅವರನ್ನು ಕಂಡು ಹರಳಯ್ಯನವರು ಶರಣೆನ್ನಲು ಅದಕ್ಕೆ ಬಸವಣ್ಣನವರು ಶರಣ ಶರಣು ಎಂದು ನುಡಿದು ಹೋದರು. ಹರಳಯ್ಯನು ತನಗೆ ಭಾರವಾಯಿತೆಂದು, ತನ್ನ ಮಡದಿಯಾದ "ಕಲ್ಯಾಣಿ"ಯನ್ನು ಕುರಿತು ಆಲೋಚಿಸಿದನು; ಅವಳು ಈ ರೀತಿಯಾಗಿ ಸಲಹೆ ಕೊಟ್ಟಳು, ನಿಮ್ಮ ಬಲತೊಡೆಯ ಚರ್ಮವನ್ನು ನನ್ನ ಎಡತೊಡೆಯ ಚರ್ಮವನ್ನು ತೆಗೆದು, ಪಾದರಕ್ಷೆಯನ್ನು ಮಾಡಿ ಬಸವೇಶನಿಗೆ ಅರ್ಪಿಸಿರಿ, ಇದರಿಂದ ನಿಮ್ಮ ಚಿಂತೆಯು ತೊಲಗಿ, ಭಾರವು ಇಳಿಯುವದು, ಎಂದಳು. ಹರಳಯ್ಯನು ಅದೇ ರೀತಿ ಪಾದರಕ್ಷೆಗಳನ್ನು ಮಾಡಿಕೊಂಡು ಅರಮನೆಗೆ ಹೋಗಿ ಬಸವಣ್ಣನವರಿಗೆ ಅರ್ಪಿಸಿ ನಮಸ್ಕರಿಸಿದನು ಬಸವೇಶನು ಇವುಗಳನ್ನು ಮೆಟ್ಟಲು ಸಮರ್ಥರಾರು ಇಲ್ಲ, ಇವುಗಳನ್ನು 'ಸಂಗಮೇಶ್ವರ'ನಿಗೆ ಯೋಗ್ಯವಾದವು ಎಂದು ಹೇಳಿ ಅವುಗಳನ್ನು ತನ್ನ ತಲೆಯ ಮೇಲಿಟ್ಟುಕೊಂಡು, ಪುನಃ ಹರಳಯ್ಯನಗೆ ಕೊಟ್ಟನು, ಅವುಗಳನ್ನು ಭಕ್ತಿಯಿಂದ ಮನೆಗೆ ತರುತ್ತಿರುವಾಗ ಮಧುವರಸನು ಹರಳಯ್ಯನಿಂದ ಅವುಗಳನ್ನು ಬಸವಾದಿ ಪ್ರಮಥರನ್ನು ನಿಂದಿಸುತ್ತ, ಆ ಚರ್ಮದ ಪಾದರಕ್ಷೆಗಳನ್ನು ಮೆಟ್ಟಿದನು, ತಕ್ಷಣವೆ ಉರಿ ಹತ್ತಿ ಅವನ ದೇಹವೆಲ್ಲ ಕಂದಿ ಹೋಯಿತು, ಮತ್ತೆ ಅದರಿಂದ ಶಾಂತಿಯನ್ನು ಹೊಂದಲು ಅರಮನೆಗೆ ದಾಸ ದಾಸಿಯರಿಂದ ಸೇವೆ

ಮಾಡಿಸಿಕೊಳ್ಳುವಾಗ ಒರ್ವ ದಾಸಿಯು ಹರಳಯ್ಯನವರು ಸ್ನಾನಮಾಡಿದ ನೀರನ್ನು ತಂದು ಅವನಿಗೆ ಕುಡಿಸಿದಳು; ಅದರಿಂದ ಅವರಿಗೆ ಶಾಂತಿಯಾಯಿತು, ಇದನ್ನರಿದು ಹರಳಯ್ಯನ ಮನೆಗೆ ಹೋಗಿ ಕ್ಷಮೆಯನ್ನು ಯಾಚಿಸಿ; ಅವನೊಡನೆ ಅನುಭವ ಮಂಟಪಕ್ಕೆ ಹೋಗಿ ಚನ್ನ ಬಸವಣ್ಣನವರಿಂದ ದೀಕ್ಷೆಯನ್ನು ಹೊಂದಿ, ಹರಳಯ್ಯನ ಮಗನಿಗೆ ತನ್ನ ಮಗಳನ್ನು ಕೊಟ್ಟು, ವಿವಾಹ ಮಾಡಲು ಸಿದ್ಧನಾದನು, ಇದನ್ನು ತಿಳಿದು; ಬಿಜ್ಜಳ ಮಹಾರಾಜನು ವಿಚಾರಿಸಲು ತೊಡಗಿದನು, ಆಗ ತ್ರಿಕಾಲ ಜ್ಞಾನಿಯಾದ ಕಲ್ಯಾಣದ ಭವಿಷ್ಯವನ್ನು ತಿಳಿದವನಾದ ಅಲ್ಲಮ ಪ್ರಭುವು ಚನ್ನಬಸವಣ್ಣನವರನ್ನು ಕುರಿತು, ಶರಣ-ಸಾಹಿತ್ಯವನ್ನು ನೀವು ರಕ್ಷಿಸಬೇಕು, ಅದಕ್ಕಾಗಿ ಇಲ್ಲಿ ನೀವು ಉಳಿಯದೆ ಉಳವಿಗೆ ದಯಮಾಡಿಸಬೇಕು, ಮಾರ್ಗದಲ್ಲಿ ಪೂವಳ್ಳಿ ಎಂಬ ಗ್ರಾಮ ಅಲ್ಲಿ ಒಂದು ಬಿಲ್ವವನ ಆ ವನದ ಗವಿಯಲ್ಲಿ ಶಿವಯೋಗಿ ವಾಸಿಸುವನು, ಅವನೆ ಈ ಶರಣ–ಸಾಹಿತ್ಯವನ್ನು ರಕ್ಷಿಸಲು ಬಂದವನು ಅವನೆ ಗುರುಸಿದ್ಧೇಶ ನೀವು ಮೂರು ಸಾವಿರ ಗಣರೊಡನೆ ಅಲ್ಲಿಗೆ ದಯಮಾಡಿಸಿರಿ ಎಂದು ಅಪ್ಪಣೆ ಕೊಡಿಸಿದನು ಅದಕ್ಕೆ ಚನ್ನಬಸವೇಶ್ವರರು ಒಪ್ಪಿಗೆಯನ್ನು ಸೂಚಿಸಿದರು, ಅಷ್ಟರಲ್ಲಿ ಬಸವಣ್ಣನವರೂ ಅರಮನೆಯಿಂದ ಬಂದು ಪ್ರಭುವಿಗೆ ನಮಸ್ಕರಿಸಿ ಒಂದೆಡೆ ಕುಳಿತರು. ಬಾಡಿದ ಮುಖವುಳ್ಳ ಬಸವೇಶ್ವರರನ್ನು ಪ್ರಭುವು ನೋಡಿ ಸಮಾಚಾರ ವೇನೆಂದು ಕೇಳಲು. ಬಸವಣ್ಣನವರು ಇನ್ನು ಇಲ್ಲಿ ನಾನಿರಲಾರೆ ಇಲ್ಲಿ ಶರಣ–ವಧೆ ಯಾಗುತಿಹುದು ನನಗೆ ಅಪ್ಪಣೆಯನ್ನು ಕೊಡಬೇಕೆಂದು ನಾನು ಈಗಲೆ ಸಂಗಮ ಕ್ಷೇತ್ರಕ್ಕೆ ಹೊರಡುವೆ ಎಂದನು. ಆಗ ಪ್ರಭುದೇವರು ಕೆಲವು ಶರಣರನ್ನು ಕೂಡಿ ಕೊಂಡು ಶ್ರೀಶೈಲಕ್ಕೆ ಚನ್ನಬಸವೇಶ್ವರರು ಮೂರು ಸಾವಿರ ಪ್ರಮಥರೊಡನೆ ಉಳವಿಗೆ ತೆರಳಿದರು, ಮರುದಿವಸವೆ ಹರಳಯ್ಯ–ಮಧುವಗಸರ ಕೊಲೆಯಾಗಲು, ರೊಚ್ಚಿಗೆದ್ದ ಶರಣರು ಕಲ್ಯಾಣವನ್ನು ಬಿಟ್ಟರು ಇದನ್ನು ತಿಳಿದ ರಾಜ ಸೈನಿಕರು ಶರಣರ ಮುಖ್ಯಸ್ಥರನ್ನು ಶೋಧಿಸತೊಡಗಿದನು. ಶರಣ_ಸಾಹಿತ್ಯ ಭಾರ ಹೊತ್ತ ಚನ್ನಬಸವೇಶ್ವರನು ಶರಣರನ್ನು ಕೂಡಿಕೊಂಡು ಅಲ್ಲಲ್ಲಿ ಶಿವಪೂಜೆಮಾಡುತ್ತ ಹುಬ್ಬಳ್ಳಿಗೆ ಧಾವಿಸಿ ಬಂದರು.

"ಅಲ್ಲಿಯ ಭಕ್ತರನ್ನು ನೋಡಿ ಇಲ್ಲಿ ಯಾರಾದರು ಮಹಾತ್ಮರು ಇರುವರೊ ಎಂದು ಕೇಳಲು ಭಕ್ತರು ಇಲ್ಲಿ ಯಾರು ಶರಣರು ಮಹಾತ್ಮರು ಇಲ್ಲ; ಅಗೋ ಆ ಬಿಲ್ವನದಲ್ಲಿ ''ಹುಚ್ಚ"ನೊಬ್ಬನಿದ್ದಾನೆ ಎಂದು ಉತ್ತರ ಕೊಟ್ಟರು.

ಆ ಬಿಲ್ವವನಕ್ಕೆ ಚನ್ನಬಸವೇಶ್ವರರು ಹಾಗು ಪ್ರಮಥರು ಬಂದರು ಅಲ್ಲಿಯ ಶಾಂತ ವಾತಾವರಣವನ್ನು ಕಂಡು ಎಲ್ಲರಿಗೂ ಆನಂದವಾಗಿದೆ, ಅಲ್ಲಿ ವೈರತ್ವವನ್ನು ಮರೆತು ಹಾವು ಮುಂಗಲಿಗಳು ಸ್ನೇಹದಿಂದ ಆಡುವುದನ್ನು ಕಂಡು, ಪ್ರಭುವಿನಅಪ್ಪಣೆಯೆದಿಟ

ವೆಂದು ನಂಬಿ ಅಲ್ಲಿಯೇ ತಂಗಿದರು, ಸ್ನಾನ ಪೂಜೆಯನ್ನು ಮಾಡಿಸಿದರು ಚನ್ನ ಬಸವೇಶ್ವರನು "ಗುರುಸಿದ್ಧ"ನ ಲೀಲೆಯನ್ನು ಅಲ್ಲಿಯ ಭಕ್ತರಿಂದ ಕೇಳಿದನು, ಆಗ ಬಸಪ್ಪಶೆಟ್ಟಿಯು ಬಂದು ವಂದಿಸಿ,ಎಲ್ಲರನ್ನು ಮನೆಗೆ ಕರೆದುಕೊಂಡು ಹೋಗಿ ಸ್ನಾನ ಪೂಜೆಯನ್ನು ಮಾಡಿಸಿದನು, ಶಿವಾನುಭವ ಕಾರ್ಯವನ್ನು ಮುಗಿಸಿ ಗುರುಸಿದ್ಧನ ದರ್ಶನಕ್ಕಾಗಿ ಹೋಗಬೇಕೆನ್ನುವಷ್ಟರಲ್ಲಿ ಆತನೆ ಅಲ್ಲಿಗೆ ಬಂದನು;ಚನ್ನಬಸವೇಶ್ವರರು ಪ್ರಮಥರು ಗುರುಸಿದ್ಧನಿಗೆ ಮಣಿದರು. "ನನಗೆ ಜನರು ಹುಚ್ಚನೆಂದು ಕರೆ ಯುವರು ಎಂದು ಹೇಳಲು ಚನ್ನಬಸವಣ್ಣನವರು ಪ್ರಭುದೇವರು ನಮಗೆ ಅಪ್ಪಣೆ ಯನ್ನು ಕೊಟ್ಟಿರುವರು, ಶಿವನೆ ಗುರುಸಿದ್ಧನಾಗಿ ಭೂಮಿಗೆ ಇಳಿದಿರುವನು, ಶರಣ-ಸಾಹಿತ್ಯವನ್ನು, ರಕ್ಷಣೆ ಮಾಡಲು, ಅವನೇ ಬಂದಿರುವನೆಂದು,ಅದಕ್ಕೆ ಗುರುಸಿದ್ಧನು, ಪ್ರಭುವಿನ ಕೃಪೆಯಿಂದಲೆ ಈ ಸ್ಥಾನವು ಪವಿತ್ರವಾಗಿರುವದು, ಆತನ ಕೃಪೆಯಿಂದಲೆ, ಇಲ್ಲಿ ಲೀಲೆಗಳು ಜರುಗುತ್ತಿರುವವು, ಇಗ ನಿಮ್ಮ ಪಾದ ಸೋಂಕಿ, ಜೀವರು ಉದ್ಧಾರಾಗಲಿಕ್ಕೆ ಮತ್ತಿಷ್ಟು ಅನೂಕೂಲವಾಗಿರುವದು, ಎಲ್ಲವು ಪ್ರಭುವಿನಿಂದಲೆ; ಇಂದಿನಿಂದ ಹುಚ್ಚನೆಂಬ ಹೆಸರುಬೇಡ ಪ್ರಭುವಿತ್ತ "ಗುರುಸಿದ್ಧ"ನೆಂಬ ನಾಮವೆ ನಿಮಗೆ ಯೋಗ್ಯವಾಗಿರುವದು. ಆದರಿಂದಲೆ ನಿಮ್ಮ ಕೀರ್ತಿಯು ಹಬ್ಬಲಿ, ಈ ಶರಣ–ಸಾಹಿತ್ಯ ಭಾಂಡಾರವನ್ನು ರಕ್ಷಿಸಿರೆಂದು ಚನ್ನಬಸವೇಶ್ವರರು ಗುರುಸಿದ್ಧೇಶ್ವರ ರಿಗೆ ಅಪ್ಪಣೆ ಕೊಟ್ಟರು, ಆನಂದಪಟ್ಟರು. ಎಂಬಲ್ಲಿಗೆ ಎಂಟನೆಯ ಸಂಧಿ ಸಮಾಪ್ತಿ ಆಯಿತು.



## ಒಂಭತ್ತನೆಯ ಸಂಧಿ

ಚನ್ನಬಸವೇಶ್ವರನು ಗುರುಸಿದ್ಧರಿಂದ ಅಪ್ಪಣೆಯನ್ನು ಪಡೆದು, ಮೂರು ಸಾವಿರ ಗಣರನ್ನು ಬಿಟ್ಟು ಬಿಲ್ವ ವನದಿಂದ ಉಳವಿಗೆ ತೆರಳಿದನು.

ಬಹು ಮೇಲಕ್ಕೇರಿದ ಹದ್ದು ಹೆಣವನ್ನು ನೋಡಿ ಸದ್ದಿಲ್ಲದೆ ಎರಗುವಂತೆ, ಮಾನವನು ವಿಷಯಕ್ಕೆರಗುವನು. ಅದನ್ನು ಬಿಡಿಸಿ ನಿನ್ನ ಪಾದಾಶ್ರಯವನ್ನೇ ಕರುಣಿಸು. ಹದ್ದು ಮೀರಿದ ಭಕ್ತಿಯಿಂದ ಬಾಳುವಂತೆ ಪ್ರಭುವೇ, ನನ್ನನ್ನು ಕಾಪಾಡು.

ಪೂಬಳ್ಳಿಯ ಜನರು ತಮ್ಮ ಗುರುವಿನ ಹೆಸರು ಗುರುಸಿದ್ಧನೆಂದು ತಿಳಿದು ಭಕ್ತಿಯನ್ನೂ ತಿಳಿದರು ಬಸಪ್ಪ ಶೆಟ್ಟರು ಮೊದಲಾದವರೆ ಕೂಡಿಕೊಂಡು ಚನ್ನಬಸ ವೇಶ್ವರರ ಸನ್ನಿಧಿಗೆ ಬಂದು ನಮಸ್ಕರಿಸಿ ಅವರ ಅಪ್ಪಣೆಯಿಂದ ಅಲ್ಲಿಯೇ ಕುಳಿತರು, ನಂತರ ಈ ರೀತಿಯಾಗಿ ಕೇಳಿದರು ಇನ್ನು ಮೂರು ತಿಂಗಳೊಳಗಾದಿ ಅವರಿಗೆ

ಭವ್ಯವಾದ ಒಂದು ಮಠವನ್ನು ಕಟ್ಟಿ ಒಂದು ಸಿಂಹಾಸನವನ್ನು ಮಾಡಿ ಅವರನ್ನು ಆರೋಹಿಸಿ ಅಂದೋಲಿಕಾ ಮೆರವಣಿಗೆಯನ್ನು ಮಾಡಬೇಕೆಂದು ನಿಶ್ಚಯಿಸಿಕೊಂಡಿರುವೆವು, ಆ ಕಾಲಕ್ಕೆ ತಾವು ಇರಬೇಕು, ತಮ್ಮಿಂದಲೆ ಎಲ್ಲ ಕಾರ್ಯಗಳು ಜರುಗಬೇಕೆಂಬ ಆಶೆ ಎಂದು ಬಸಪ್ಪಶೆಟ್ಟಿಯು ಚನ್ನಬಸವೇಶ್ವರನ್ನು ಕೇಳಿಕೊಂಡನು, ಆಗ ಚನ್ನಬಸವೇಶ್ವರರು ಆ ಕಾಲವು ಇನ್ನು ಬಂದಿರುವದಿಲ್ಲ ಅದಕ್ಕೆ ಅವರು ಒಪ್ಪುವದಿಲ್ಲ ಮೊದಲು ಮಠವನ್ನು ಕಟ್ಟಿಸಿ ಆ ಮೇಲೆ ಸಿಂಹಾಸನವನ್ನು ಮಾಡಿ ಅವರ ಶಿಷ್ಯರಲ್ಲಿಯೆ ಯಾರನ್ನಾದರು ಅಧಿಕಾರಿಯನ್ನಾಗಿ ನೋಡೋಣ; ಎಂದು ಭಕ್ತರಿಗೆ ಚನ್ನಬಸವೇಶ್ವರರು ಅಪ್ಪಣೆ ಕೊಡಿಸಿದರು; ಶರಣ ಸಾಹಿತ್ಯವನ್ನು ನೋಡುತ್ತಿರುವ ಗುರುಸಿದ್ಧೇಶ್ವರನು ಬಂದು ನಮಸ್ಕರಿಸಿದನು, ಶರಣ-ಸಾಹಿತ್ಯವು ಬಹಳ ಸೊಗಸಾಗಿದೆ, ಅದನ್ನು ನೋಡಲು ತಮಗೆ ಆಸಕ್ತಿಯೆನ್ನುವದನ್ನು ತಿಳಿಸಿದನು, ಪ್ರಭುವಿನ ಕೃಪೆಯಿಂದ ಇದು ನನಗೆ ದೊರೆಯಿತು, ಇದರ ಪ್ರಚಾರವು ಜನತೆಯಲ್ಲಿ ಆಗಲೆಬೇಕು, ಇದನ್ನು ಕಾಯ್ದುಕೊಳ್ಳುವ ರೀತಿ ಹೇಗೆ? ಎಂಬುವದನ್ನು ಷಟ್‌ಸ್ಥಲೇಶ್ವರನಾದ ನೀನೆ ತಿಳಿಸೆಂದು ಕೇಳಿಕೊಂಡನು, ಆಗ ಚನ್ನಬಸವೇಶ್ವರರು; ನೀವು ಈ ತಾಣದಲ್ಲಿ ಶಿವಾನುಭವವನ್ನು ನಡೆಸಿರಿ. ಈ ತಾಣವೆ ಇದಕ್ಕೆ ಯೋಗ್ಯಸ್ಥಾನ, ಈ ಮೂರುಸಾವಿರ ಗಣರು ನಿಮಗೆ ಶಿಷ್ಯರಾಗುವರು, ಅವರಿಂದಲೆ ತತ್ತ್ವ ಪ್ರಚಾರವನ್ನು ಮಾಡಿಸಿರಿ, ಅವರು ಅಲ್ಲಲ್ಲಿ ಮಠಗಳನ್ನು ಕಟ್ಟಿ ಮಠಾಧೀಶರಾಗಿ ಈ ತತ್ತ್ವ ಪ್ರಚಾರವನ್ನು ಮಾಡುವರು, ಇದರಿಂದ ಜಗದ್ಗುರು ಮೂರುಸಾವಿರ ಮಠದ ಒಡೆಯನೆಂದು ಪ್ರಸಿದ್ಧಿಯಾಗುವುದು, ಮುಂದೆ ನಾನು 'ಉಳವಿ'ಯ ಬನಕ್ಕೆ ಹೋಗಿ ಅನುಷ್ಠಾನವನ್ನು ಮಾಡಲು ಪ್ರಾರಂಭಿಸುವೆನು, ತಾವು ಆಶೀರ್ವದಿಸಿರಿ, ಎಂದು ನುಡಿಯಲು ಊಳಿಗದವನಿಗೇಕೆ ಆಶೀರ್ವಾದಕೊಡುವ ಮಾತು ಅಳಲಿಯು ಎಲ್ಲಾದರು ಕಲ್ಲಿನ ಭಾರವನ್ನು ಹೊರುವದೆ? ಎಂದು ಗುರುಸಿದ್ಧೇಶ್ವರನು ನುಡಿದನು.

ಪ್ರಭುವಿನ ಅಪ್ಪಣೆಯಂತೆ ಬಂದ ಮೂರುಸಾವಿರ ಗಣರು ಹುಬ್ಬಳ್ಳಿಯ ಭಕ್ತರಿಂದ ಉಪಚಾರವನ್ನು ಹೊಂದಿ ಆನಂದದಿಂದ ಬಿಲ್ವವನದಲ್ಲಿ ತಂಗಿದರು. ಇಲ್ಲಿಗೆ ಒಂಭತ್ತನೆಯ ಸಂಧಿ ಸಂಪನ್ನವಾಯಿತು.



## ಹತ್ತನೆಯ–ಸಂಧಿ

ಕರ್ತೃ ಗುರುಸಿದ್ಧೇಶ್ವರನು ಚನ್ನಬಸವೇಶ್ವರರ ಆದೇಶದಂತೆ ಉಳಿದಕೊಂಡ ಮೂರುಸಾವಿರ ಗಣರಿಗೆ ವಿರತ ಸಂಸ್ಕಾರವನ್ನು ಕೊಟ್ಟು ತತ್ತ್ವ ಪ್ರಚಾರಕ್ಕಾಗಿ ಕಳಿಸಿದನು:–

ಕವಿಗಳು ತಾವರೆಯನ್ನು ಯಾವಾಗಲು ಶ್ರೇಷ್ಠವೆಂದು; ಮುಖಕ್ಕೆ; ಕಣ್ಣಿಗೆ; ಹೃದಯಕ್ಕೇ ಶ್ರೇಷ್ಠವೆಂದು ಹೋಲಿಸುವರು ಇದನ್ನರಿತು, ನಿನ್ನ ಪಾದಕ್ಕೆ ಅರ್ಪಿಸುವ ಹೃದಯ ನನ್ನಲಿಲ್ಲ. ನಾನು ಅಂಧನಾಗಿರುವದರಿಂದ ಆನಂದಪಡಿಸುವ ಮುಖ ಮನಸ್ಸುಗಳು ನನ್ನಲಿಲ್ಲವಾದ್ದರಿಂದ ನೀನು ಕೊಟ್ಟ ಮನಸ್ಸನ್ನೇ ನಿನಗೆ ಅರ್ಪಿಸುವೆನು.

"ಗುರುಸಿದ್ಧೇಶ್ವರ"ನ ಆಚಾರ ವಿಚಾರ, ತಪಸ್ಸು, ಲೀಲೆ ಇವುಗಳನ್ನೆಲ್ಲ ಕಂಡ ಮೂರುಸಾವಿರ ಪ್ರಮಥರು ಅವನಿಯ ಜನತೆ ಬೆರಗಾಗುವಂತೆ ಸೇವೆಯನ್ನು ಮಾಡುತ್ತಿದ್ದರು ಅದರಲ್ಲಿ ಮೂರುಸಾವಿರದಯ್ಯನೆಂಬುವ ಗಣವರನು ಗುರು ಸಿದ್ಧೇಶನ ಸಮೀಪದಲ್ಲಿಯೆ ಇದ್ದು ಯಾವಾಗಲು ಭಕ್ತಿಯಿಂದ ಗುರುಸೇವೆಯನ್ನು ಮಾಡುತ್ತಿದ್ದನು, ಇದನ್ನು ಕಂಡು ಒಂದು ದಿವಸ ಗುರುಸಿದ್ಧೇಶ್ವರನು ಅವನನ್ನು ನಿನ್ನ ಹೆಸರೇನು ಕೇಳಿದರು, ಆಗ ನನ್ನ ಹೆಸರು ಮೂರುಸಾವಿರದಯ್ಯ; ನಾನೂ ಸೇರಿಕೊಂಡು ಈ ಗಣರೆಲ್ಲರು ನಿಮ್ಮಿಂದ ಅನುಗೃಹಿತರಾಗಿ ವಿರತಿಯಿಂದ ತತ್ತ್ವ ಪ್ರಚಾರ ಮಾಡಲು ಹೊರಡಬೇಕೆಂದಿರುವೆವು; ಅದಕ್ಕೆ ತಾವು ಕೃಪೆಮಾಡಬೇಕೆಂದು ಕೇಳಿಕೊಂಡನು, ಆಗ ಗುರುಸಿದ್ಧೇಶ್ವರನು; ಮಧ್ಯರಾತ್ರಿಯಲ್ಲಿ ನೀವೆಲ್ಲರು ಬಿಲ್ವ ವನಕ್ಕೆ ಬನ್ನಿರೆಂದು ಹೇಳಿದನು, ಅದೇ ಪ್ರಕಾರವಾಗಿ ಮೂರುಸಾವಿರ ಗಣರು ಬರಲು ಬಿಲ್ವವನವು ನಂದನ ವನವಾಗಿ ಕಾಣುತ್ತಿತ್ತು, ಎಲ್ಲಿ ನೋಡಿದೊಡಲ್ಲಿ ಮಂಗಲ ವಾದ್ಯಗಳು ಮೊಳಗುತ್ತಿರಲು, ಗುರುವನ್ನು ಕಂಡು ಎಲ್ಲರು ಭಕ್ತಿಯಿಂದವಂದಿಸಿದರು. ಆಗ ಮೂರುಸಾವಿರದಯ್ಯನು ಗಣರನ್ನು ನೋಡಿ ಇದೆಲ್ಲ ಕರ್ತೃ ಗುರುಸಿದ್ಧೇಶ್ವರ ಲೀಲೆ ಎಂದು ಕೊಂಡಾಡಿದನು, ತಕ್ಷಣವೆ ಗುರು ಅಲ್ಲಿಯೇ ದರ್ಶನ ನೀಡಲು ಅವರು ಚಿದ್ದೀಕ್ಷೆಯ ನೀಡಬೇಕೆಂದು ಬೇಡಲು, ಗುರುವು ಮೂರುಸಾವಿರ ಗುರುಗಳ ರೂಪವನ್ನು ತಾಳಿ ವೇದೋಕ್ತವಾಗಿ, ಕಾರ್ಯವನ್ನು ನಡಿಸಿ, ಸಿದ್ಧಾಂತವನ್ನು ಬೋಧಿಸುತ್ತಿದ್ದಾರೆ. ನಿಗಮಾಗಮಂಗಳಲ್ಲಿ ಲಿಂಗ ಸಾಹಿತ್ಯವೇ ಶ್ರೇಷ್ಠವು ಲಿಂಗವೆ ಬ್ರಹ್ಮ ಈ ಬ್ರಹ್ಮವು ಮುಕ್ಕಣ್ಣನೆ ಮೊದಲಾದ ದೇವತೆಗಳನ್ನೊಳಗೊಂಡು, ಜೀವಿಗಳಲ್ಲಿ ಆತ್ಮವಾಗಿ ತೋರುವದು; ಇಷ್ಟೆ ಅಲ್ಲ ಬ್ರಹ್ಮಾಂಡ ಪಿಂಡಾಂಡಗಳನ್ನು ರಚಿಸಿ ಭಕ್ತಿಯನ್ನು ಹುಟ್ಟಿಸಿ ಅಂಗಲಿಂಗಗಳೆಂಬ ಎರಡು ಭಾಗಗಳಾಗಿ ಅಂಗದಿಂದ ವಿಸ್ತಾರವಾಗಿ ಮೊದಲಿನ ಸ್ಥಿತಿಯಾದ ಲಿಂಗವಾಗಲು ಯತ್ನಿಸುವುದು,

ನಾಶವಿಲ್ಲದ ಹೆಸರನ್ನು ಪಡೆದುಕೊಂಡಿರುವೆವು ಅವುಗಳ ಹೆಸರನ್ನು ಭಕ್ತಿಯಿಂದ ಕೇಳಿರೆಂದು ಹೇಳತೊಡಗಿದನು.

ಸ್ಥಲ, ಚಕ್ರ, ದಳ, ಕುಳ, ಪ್ರಣವ, ಲಿಂಗ, ಆಕೃತಿ, ತನು, ಆತ್ಮ, ಅಧಿದೇವತೆ, ಕಲೆ ಸಾದಾಖ್ಯ, ಲಕ್ಷಣ, ನಾದ ಸೌಂಜ್ಞೆ, ವೇದ, ದಿಕ್ಕು, ಇವು ಪ್ರತಿಯೊಂದು ಜೀವರಲ್ಲಿ, ಮೇಳವಿಸಿರುವವು, ಅವುಗಳನ್ನು ಗುಣಿಸಿದರೆ ಎರಡು ನೂರಾ ಹದಿನಾರಾಗುವವು, ಇದನ್ನು ನೀವು ಅರಿತುಕೊಳ್ಳಬೇಕು, ಈಗ ಅವ್ರಗಳ ಹೆಸರುಗಳನ್ನು ಕೇಳಿರಿ.

ನವ ಲಿಂಗಗಳು: ಆಚಾರ-ಲಿಂಗ, ಗುರು–ಲಿಂಗ, ಶಿವ–ಲಿಂಗ, ಚರ–ಲಿಂಗ, ಪ್ರಸಾದ-ಲಿಂಗ, ಮಹಾ-ಲಿಂಗ, ಇಷ್ಟ-ಲಿಂಗ, ಪ್ರಾಣ-ಲಿಂಗ, ಭಾವ ಲಿಂಗ.

ನವಶಕ್ತಿಗಳು: ಕ್ರಿಯಾಶಕ್ತಿ, ಇಚ್ಛಾಶಕ್ತಿ ಜ್ಞಾನಶಕ್ತಿ, ಚಿಚ್ಛಕ್ತಿ, ಆದಿ ಶಕ್ತಿ, ಪರಾಶಕ್ತಿ, ಆನಂದಮಯ ಶಕ್ತಿ, ನಿಭ್ರಾಂತ ಶಕ್ತಿ, ನಿರಾಮಯ ಶಕ್ತಿ, ಇವು ಲಿಂಗದಿಂದಲ್ಲಿ ಅವಿನಾಭಾವದಿಂದ ಕೂಡಿಕೊಂಡಿರುವವು, ಇದರಿಂದಲೆ ಅಂಗವು ಸೃಷ್ಟಿಯಾಗಿರುವದು.

ನವ ಅಂಗಗಳು: ಭುವನ, ಸಲಿಲ, ಅಗ್ನಿ, ವಾಯು, ಆಕಾಶ, ಆತ್ಮ, ತ್ಯಾಗ, ಭೋಗ, ಯೋಗ.

ನವಭಕ್ತಿಗಳು: ಶ್ರದ್ಧಾ; ನೈಷ್ಠಿಕ, ಸಾವಧಾನ. ಅನುಭವ, ಆನಂದ, ಸಮರಸ, ಪರಿಪೂರ್ಣ, ನಿರಂಜನ, ಅಪ್ರಮೇಯ, ಇವು ಸೂಕ್ಷ್ಮರೂಪವಾಗಿ ಶರೀರದಲ್ಲಿರುವವು.

ನವ ತನುಗಳು: ಸ್ಥೂಲತನು, ಸೂಕ್ಷ್ಮತನು, ಕಾರಣ ತನು, ಮಹಾತ್ಮನು, ಆನಂದ ತನು, ಶುದ್ಧ ತನು, ಚಿನ್ಮಯ ತನು, ಚಿದ್ರೂಪ ತನುವು.

ನವ ಚಕ್ರಗಳು: ಆಧಾರ, ಸ್ವಾಧಿಷ್ಠಾನ ಮಣಿಪೂರಕ, ಅನಾಹತ, ವಿಶುದ್ಧಿ, ಆಗ್ನೇಯ, ಬ್ರಹ್ಮರಂಧ್ರ, ಶಿಖಾ, ಪಶ್ಚಿಮ.

ಕಮಲದ ದಳಗಳು: ನಾಲ್ಕು, ಆರು, ಹತ್ತು ಹನ್ನೆರಡು, ಹದಿನಾರು, ಎರಡು, ಮೂರು, ಸಹಸ್ರ, ಒಂದು ಹೀಗೆ ಕಮಲಗಳ ದಳಗಳು, ಅವುಗಳ ಸ್ಥಾನಗಳಾವವೆಂದರೆ, ಆಧಾರ, ಲಿಂಗ, ನಾಭಿ, ಎದೆ, ಕುತ್ತಿಗೆ, ಭ್ರೂಮಧ್ಯ, ಹಣೆಯ ಮೇಲ್ಭಾಗ ನೆತ್ತಿ, ತಲೆಯ ಹಿಂಭಾಗ ಇವುಗಳಲ್ಲಿ ಹೊಂದಿಕೊಂಡಿರುವವು, ಲಿಂಗದ ಆಕೃತಿಯನ್ನು ಹೇಳುವೆನು ಕೇಳಿರಿ, ತಾರಕ, ದಂಡ, ಕುಂಡಲ, ಅರ್ಧ ಚಂದ್ರ ದರ್ಪಣ, ಜ್ಯೋತಿ, ನಿಷ್ಕಲ, ನಿರಂಜನ, ನಿಶೂನ್ಯ ಚಿತ್ತಕೊಟ್ಟು ಕೇಳಿರಿ, ಶಿಷ್ಯವರ್ಯರೆ ಆತ್ಮಗಳ ಹೆಸರುಗಳನ್ನು

ಜೀವಾತ್ಮ, ಅಂತರಾತ್ಮ ಪರಮಾತ್ಮ ನಿರ್ಮಳಾತ್ಮ ಶುದ್ಧಾತ್ಮ, ಜ್ಞಾನಾತ್ಮ, ಮಹಾತ್ಮ, ದಿವ್ಯಾತ್ಮ ಚಿನ್ಮಯಾತ್ಮ ಇವುಗಳನ್ನು ಹೊಂದುಕೊಂಡು ಅಧಿದೇವತೆಗಳು ಇರುವರು.

ನವ ವರ್ಣ : ಪೀತ ವರ್ಣ, ಶ್ವೇತ ವರ್ಣ, ರಕ್ತ ವರ್ಣ, ಹರಿತ ವರ್ಣ ನೀಲವರ್ಣ, ಮಾಣಿಕ್ಯ ವರ್ಣ, ಜ್ಯೋತಿ ವರ್ಣ, ಮಹಾ ಜ್ಯೋತಿ, ಅಗಣಿತ.

ನವ ಹಸ್ತಗಳು : ನಿರಹಂಕಾರ, ಸುಚಿತ್ತ, ಸುಮತಿ; ಸುಮನ, ಸುಜ್ಞಾನ, ಸದ್ಭಾವ, ನಿರಾಳ, ನಿರಾಮಯ, ನಿಶ್ಚಲ ಹಸ್ತಗಳು.

ನವ ಪ್ರಸಾದಗಳು : ಗಂಧ, ರಸ, ರೂಪ, ಸ್ಪರ್ಶ ಶಬ್ದ, ತೃಪ್ತಿ, ಆನಂದ, ಪರಿಣಾಮ, ಅವಿರಳ, ಇವು ಪ್ರಸಾದಗಳು ಇವುಗಳನ್ನು ಜೀವಾತ್ಮನು, ಪಡೆಯುವದಲ್ಲದೆ ಒಂಭತ್ತು ಲಕ್ಷಣಗಳನ್ನು ಹೊಂದುವನು.

ನವ ಲಕ್ಷಣಗಳು : ಸತ್, ಚಿತ್, ಆನಂದ, ನಿತ್ಯ ಪರಿಪೂರ್ಣ, ಅಖಂಡ, ಅನಾಮಯ, ಅಗಮ್ಯ ಅಗೋಚಾರ, ಇವು ಲಕ್ಷಣಗಳು.

ನವ ನಾದಗಳು : ದುಂಬಿ ನಾದ, ವೀಣಾನಾದ, ಘಂಟಾನಾದ, ಮೇಘನಾದ, ಪ್ರಣವನಾದ, ದಿವ್ಯನಾದ, ಸಿಂಹನಾದ, ಮಹಾನಾದ, ಇವುಗಳಿಗೆ ಅನಾಹತ ನಾದಗಳೆಂದು ಹೇಳುವರು ಇನ್ನು ಮಂತ್ರಗಳು.

ನವ ಪ್ರಣವಗಳು : ನ,ಕಾರ, ಮ,ಕಾರ, ಶಿ,ಕಾರ, ವ,ಕಾರ ಯ,ಕಾರ ಓಂ,ಕಾರ, ಅಕಾರ, ಉ,ಕಾರ, ಮಕಾರ

ಈ ಅಕ್ಷರಗಳನ್ನು ಹಿಡಿದು ಕೊಂಡು ಭೂತಳದ ಸಾಹಿತ್ಯದಲ್ಲಿ ಒಂಭತ್ತು ವೇದಗಳು ಆಗಿರುವವು.

ನವ ವೇದಗಳು : ಋಗ್ವೇದ, ಯಜುರ್ವೇದ; ಸಾಮವೇದ, ಅಜಪವೇದ, ಗಾಯತ್ರಿವೇದ; ಧನುರ್ವೇದ, ಗಂಧರ್ವ ವೇದ, ನಿಶ್ಯಬ್ದ ವೇದ, ಇವು ಗುಪ್ತವಾಗಿದ್ದು ತನುವಿನಲ್ಲಿ ಶೋಭಿಸುವವು,

ನವ ಸಾದಾಖ್ಯಗಳು : ಕರ್ಮ ಸಾದಾಖ್ಯ, ಕರ್ತೃ ಸಾದಾಖ್ಯ ಮೂರ್ತಿ ಅಮೂರ್ತಿ, ಶಿವ, ಅವಿರಳ, ಮಹಾ, ನಿರ್ಮಲ, ತತ್ವ; ಶಬ್ದದಿಂದ, ಭೋಗಮುಖಗಳನ್ನು ತಿಳಿಯಿರಿ ಘ್ರಾಣ, ಜಿಹ್ವೆ, ನೇತ್ರ ತೊಕ್ಕು, ಶ್ರೋತ್ರ, ಹೃದಯ, ಬ್ರಹ್ಮರಂಧ್ರ ಉನ್ಮನಿ, ಪಶ್ಚಿಮ ಈ ಮುಖಗಳಿಂದ ನವಲಿಂಗಗಳನ್ನು ಗಂಧಾದಿಗಳನ್ನು ಸೇವಿಸವವು.

ಭಕ್ತ ಮಹೇಶ, ಪ್ರಸಾದಿ, ಶರಣ, ಐಕ್ಯ ನಿಷ್ಕಲ, ಬ್ರಹ್ಮ, ನಿರಂಜನ, ಈ ಸ್ಥಳಗಳು ಬ್ರಹ್ಮವೆಂದು ಹೇಳಿಸಿಕೊಳ್ಳುತ್ತವೆ. ಬ್ರಹ್ಮವೆ ಅಂಗಲಿಂಗವೆಂದು ಎರಡು ವಿಧವೆನಿಸಿರುವುದು, ಇನ್ನು ದಿಕ್ಕುಗಳು-

**ನವದಿಕ್ಕುಗಳು**— ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ, ಊರ್ಧ್ವಪಾತಾಳ, ಹೃತ್ಕಮಲ, ಶುದ್ಧ, ದಿವ್ಯ,

ಹೃದಯ ಕಮಲವು ಎದೆಗುಂಡಿಗೆಯಲ್ಲಿರುವದು. ಈ ಕಮಲವು ಹನ್ನೆರಡು ದಳಗಳಿಂದ ಶೋಭಿಸುವುದೆಂದು ಮೊದಲೇ ತಿಳಿಸಿದೆ. ಮೇಲಿರುವ ನಾಲ್ಕು ದಳಗಳಿಂದ ಜೀವನಿಗೆ ಜಾಗ್ರಾವಸ್ಥೆ ದೊರೆಯುವದು, ಮಧ್ಯಕ್ಕೆ ಬರಲು ನಾಲ್ಕು ದಳಗಳಿಂದ ಸ್ವಪ್ನಾವಸ್ಥೆ ದೊರೆಯುವುದು, ಕೆಳಕ್ಕಿಳಿಯಲು ನಾಲ್ಕು ದಳಗಳಿಂದ ದೇವರ ದರ್ಶನ ಇದರಿಂದ ದಿಕ್ಕುಗಳೆಲ್ಲವು ಗೋಚರಿಸಿ ತೂರ್ಯ, ತೂರ್ಯಾತೀತಾವಸ್ಥೆಯು ಕೂಡ ದೊರೆಯುವದು, ಚರಲಿಂಗವೆ ಇಲ್ಲಿ ಮುಖ್ಯ ವಾಗಿರುವದು. ಈ ಭೂಮಿಯಲ್ಲಿ ಇಷ್ಟಲಿಂಗವೇ ಮುಖ್ಯವಾಗಿರುವದು. ಯಾವ ಕಾರ್ಯಕ್ಕಾದರೂ ಇದರಲ್ಲಿ ಒಂಭತ್ತಾಗಿವೆ ಎಂದು ಭಾವಿಸಬೇಕು. ಲಿಂಗದಿಂದ ಅನುಭವ ಅರ್ಪಣವೇ ಫಲವಾಗಿ ದೊರೆಯುವದು, ಫಲವೇ ಅನುಭವ; ಅದು ಅರ್ಪಣದಿಂದ ದೊರೆಯುವದು, ಅರ್ಪಣವು ನವವಿಧವಾಗಿ ಇರುವುದು, ವೀರಶೈವರಿಗೆ ಅದೇ ಪ್ರಯೋಜನವು. ವೀರಶೈವರಿಗೆ ಫಲದಾಶೆ ಇಲ್ಲದಿರುವುದರಿಂದ, ಅದನ್ನೆ ಲಿಂಗಕ್ಕರ್ಪಿಸುತ್ತ ನಡೆಯುವ ನೇಮವೇ ಅರ್ಚನ ಎನಿಸುವದು, ಆ ಅರ್ಚನೆ ಕ್ರಮವನ್ನು ಕೇಳೆಂದು ಗುರುವು ತಿಳಿಸಹತ್ತಿದನು.

ತನು ಶುದ್ದಿಯೆ ಅಭಿಷೇಕ, ಶುದ್ಧಮನವೆ ಪೀಠವು; ಸಮತೆಯೆ ಗಂಧ, ಅಭೇದವೆ ಅಕ್ಷತೆ, ಸದ್ಭಾವವೇ ಧೂಪ; ಅರಿವೆ ಆರತಿ, ಶ್ರೇಷ್ಠವಾದ ಪರಿಣಾಮವೆ ನೈವೇದ್ಯ;ತ್ರಿಕರಣ ಶುದ್ಧಿಯೆ ತಾಂಬೂಲ; ಸದ್ಗುಣವೇ ದಕ್ಷಿಣ,ಪ್ರದಕ್ಷಿಣೆಯೆ ಪ್ರಣತಿ, ಅನುರಾಗ ವಿಜ್ಞಪ್ತಿಯೆ ಮೊದಲಾದವುಗಳಿಂದ ನಿತ್ಯಲೂ ನವಲಿಂಗ ಪೂಜೆಯು ನಡೆ ಯುವುದು ಸೋಹಂ ಎಂಬುದೆ ಮಂತ್ರಜಪ ಇದು ಒಂದು ದಿನಕ್ಕೆ ಇಪ್ಪತ್ತೊಂದು ಸಾವಿರದ ಆರನೂರು ಬಾರಿ ನಡೆಯುತ್ತದೆ, ಮನವು ಇದನ್ನು ಹಂಸ ಸಂಖ್ಯೆಯಂತೆ ಜಗ್ಗುವುದು, ಇದರಿಂದ ಪೃಥ್ವಿ, ಅಪ್ಪು, ತೇಜ, ವಾಯು, ಆಕಾರವೆಂಬ ಪಂಚ ಭೂತಗಳು ಹುಟ್ಟಿರುವವು ಇವುಗಳಿಂದಲೆ ಬ್ರಹ್ಮಾಂಡವಾಗಿರುವುದು, ಬ್ರಹ್ಮಾಂಡ ದಲ್ಲಿ ಜಗತ್ತು ಅಡಗಿರುವುದು, ಜಗತ್ತೆ ಮನೋಮಯವಾಗಿರುವುದು, ಆತ್ಮ ತತ್ವವೇ ಓಂಕಾರ, ಇದು ಮಂತ್ರಕ್ಕೆ ಬೆರೆಯಲು ಷಡಕ್ಷರ ಮಂತ್ರವಾಗುವದು, ಇದರ ರೂಪವೆ ನವಲಿಂಗಗಳು.

ಶಿವಯೋಗಿಯೊದ ಗುರುವು ತನ್ನ ಬಲಹಸ್ತವನ್ನು ಶಿಷ್ಯನ ಶಿರದ ಮೇಲಿರಿಸಿ ಅವನ ಮನಸ್ಸಿನಲ್ಲಿ ತನ್ನ ಮನಸ್ಸನ್ನೂ; ಅವನ ದೃಷ್ಟಿಯಲ್ಲಿ ದೃಷ್ಟಿಯನ್ನಿರಿಸಿ ಭಾವದಲ್ಲಿ ಭಾವವನ್ನು ಬೆರಿಸಿ, ನೆತ್ತಿಯಲ್ಲಿರುವ ಚಿತ್ಕಳೆಯನ್ನು ತೆಗೆದು ಶಿಲಾಮಯದ ಲಿಂಗದಲ್ಲಿ ಇರಿಸಿ ಶಿಷ್ಯನ ಕರದಲ್ಲಿ ಕೊಡುವನು; ಇದೆ ಸರ್ವಲಿಂಗಗಳ ರೂಪವು, ಇದನ್ನು ಯಾವಾಗಲು ಕೊರಳಲ್ಲಿ ಧರಿಸಿಕೊಂಡು ವಾಮಕರದಲ್ಲಿಟ್ಟುಕೊಂಡು

ಪೂಜೆ ಮಾಡಬೇಕು, ಈ ಲಿಂಗದಲ್ಲಿ ದೃಷ್ಟಿಯಿಟ್ಟು ನವಲಿಂಗಗಳನ್ನು ಕಾಣುತ್ತ, ನವವಿಧವಾದ ಅರ್ಪಣೆಯನ್ನು ಮಾಡುವುದು; ಇಷ್ಟಲಿಂಗಕ್ಕೆ ರೂಪು, ಪ್ರಾಣಲಿಂಗಕ್ಕೆ ರುಚಿ, ಭಾವಲಿಂಗಕ್ಕೆ ತೃಪ್ತಿ, ಹೀಗೆ ಆಚಾರ ಲಿಂಗವೆ ಮೊದಲಾದ ನವಲಿಂಗಳಿಗೆ ಅರ್ಪಿಸಬೇಕು.

ಹೀಗೆ ಷಟ್ ಪ್ರಸಾದಗಳನ್ನು ಅರ್ಪಿಸಿ, ಒದಗುವ ಕಷ್ಟಗಳನ್ನು ಕಳೆದು ಕೊಂಡು ಪೂರ್ವಜರು ಶ್ರೇಷ್ಠರಾಗಿರುವರು; ಇದನ್ನು ತಿಳಿಯಿರೆಂದು ಗುರುಸಿದ್ಧೇಶನು ಶಿಷ್ಯರಿಗೆಹೇಳಲು; ಮೂರುಸಾವಿರದಯ್ಯನು ಇದಕ್ಕೊಂದು ಉದಾಹರಣೆ ಕೊಡಿರೆಂದು ಕೇಳಿದನು, ಆಗ ಗುರುವು ಉಧಾಹರಣೆ ಹೇಳಿದನು.

ಆಂದ್ರ ದೇಶದಲ್ಲಿ ತಿರುವಾರೂರ ಎಂಬ ಗ್ರಾಮದಲ್ಲಿ ಮಿರುಮಿಂಡದೇವನೆಂಬ ಶರಣನು ಇದ್ದನು, ಇವನು ಒಂದು ಶಿವಲಿಂಗ ದೇವಾಲಯದಲ್ಲಿ ವಾಸಿಸಿ ಆ ನಾಡಿನ ಭಕ್ತರಿಗೆಲ್ಲ ನವಲಿಂಗದ ಸಕೀಲವನ್ನು ಬೋಧಿಸುತ್ತಿದ್ದನು; ದೇವಾಲಯಕ್ಕೆ ಬಂದ ಭಕ್ತರಿಗೆ ಶಿವಭಕ್ತಿ, ಶಿವಜ್ಞಾನ, ಶಿವ-ವೃತ; ಶಿವಪೂಜೆ ಶಿವ-ಅನುಸಂಧಾನ ಇವು ಗಳನ್ನು ತಿಳಿಸುತ್ತ ಇಷ್ಟಲಿಂಗದಲ್ಲಿ ನವ-ಲಿಂಗಗಳನ್ನು ಕಾಣುತ್ತ ಆ ನಾಡಿಗೆ ಶ್ರೇಷ್ಠ ಗುರುವಾಗಿದ್ದನು. ಅಲ್ಲಿಗೆ ಒಂದು ದಿನ ಸೌಂದರನಂಬಿ, ಎಂಬ ಭಕ್ತನು ಬಂದನು. ಇವನಿಗೆ ಶಿವನು ನನ್ನ ಮಗನೆಂದು ನಿತ್ಯಲೂ ಸಾವಿರ ಹೊನ್ನುಗಳನ್ನು ಕೊಡುತ್ತಿದ್ದನು, ಇದರಿಂದ ಅವನು ದೇವಸ್ಥಾನದಲ್ಲಿರುವ ಶಿವಭಕ್ತರನ್ನು ಲಕ್ಷಿಸದೆ ಗರ್ಭ-ಗುಡಿಯಲ್ಲಿ ಪ್ರವೇಶಿಸಿದನು. ಆಗ ಮಿರುಮಿಂಡದೇವನು ಕೋಪಾವೇಶ ದಿಂದ ಘರ್ಜಿಸುತ್ತ, ಅವನು ಯಾವನೇ ಇರಲಿ ಶಿವಭಕ್ತರನ್ನು ಲಕ್ಷಿಸಲಾರದ್ದಕ್ಕಾಗಿ ಅವನಿಗೆ ಬಹಿಷ್ಕಾರ, ಅಷ್ಟೆ ಅಲ್ಲ ಅಂಥವನಿಗೆ ನಿತ್ಯವೂ ಸಾವಿರ ಹೊನ್ನುಗಳನ್ನು ನೀಡುವ ಪರಶಿವನಿಗೂ ಬಹಿಷ್ಕಾರ, ಎಂದು ಜಾಘುಟೆಯನ್ನು ತೆಗೆದುಕೊಂಡು ಓಣಿಯಲ್ಲಿ ಸಾಗಿದನು. ಆಗ ಶಿವನು ಲಿಂಗದಿಂದುದಿಸಿ ಗದಗದನೆ ನಡುಗುತ್ತ ಸೌಂದರನ ಕೈಹಿಡಿದು ದೂರ ಕರೆದುಕೊಂಡು ಹೋಗಿ ಅವನಿಗೆ ಅರವತ್ಮೂರು ಜನ ಪುರಾತನರ ಕಥೆಗಳನ್ನು ಹೇಳಿ ಭಕ್ತಿಯನ್ನು ಹುಟ್ಟಿಸಿ, ಭಕ್ತರಿಗೆ ವಂದಿಸಲು ಹೇಳಿ; ಎಲ್ಲರನ್ನು ಕೈಲಾಸಕ್ಕೆ ಕರೆಯಲು ಅಲ್ಲಿ ಏನಿದೆ ನಾನು ಬರುವದಿಲ್ಲವೆಂದು ನವಲಿಂಗ ಪೂಜೆಯನ್ನು ಮಾಡುತ್ತ ಇಲ್ಲಿಯೇ ಉಳಿದನು ಆಗ ಸೌಂದರನು ಇವನ ಆಚಾರ ವಿಚಾರಗಳಿಗೆ ಮೆಚ್ಚಿ ಅವನಿಂದ ಅರಿತು ತಾನು ಶಿವಯೋಗಿಯಾಗಿ ಬಾಳಿದನು, ಹೀಗೆ ಮಿರುಮಿಂಡದೇವನು ಶಿವನನ್ನು ಕೂಡಾ ತಿರಸ್ಕರಿಸಿದ ವಿಚಾರ ವನ್ನು ಲಿಂಗದಲ್ಲಿ ದೃಷ್ಟಿಯಿಟ್ಟು ಗುರುಸಿದ್ಧೇಶ್ವರನು ಮೌನಿಯಾದನು; ಆಗ ಮೂರುಸಾವಿರದಯ್ಯನೆ ಮೊದಲಾದವರು ಅನಂತ ರೀತಿಯಾಗಿ ಬೇಡಿಕೊಳ್ಳಲು ಮತ್ತೆ ಕಣ್ತೆರೆದು ಶರಣ ಸೇವೆಯೇ ನಮ್ಮ ಸೇವೆಯೆಂದು ಹೇಳಿ ಶರಣ ಸಾಹಿತ್ಯ ಸೇವೆಗೆ ಹಚ್ಚಿದರು. ಎಂಬುವಲ್ಲಿಗೆ ಗುರುಕೃಪೆಯಿಂದ ಹತ್ತನೆಯ ಸಂಧಿಯ ವಿಚಾರವು ಸಂಪನ್ನವಾಯಿತು.

## ಹನ್ನೊಂದನೆಯ ಸಂಧಿ

ಸೂಚನೆ: ಗುರುಸಿದ್ಧೇಶ್ವರನು ಮೂರುಸಾವಿರ ಗಣರನ್ನು ಶರಣ ಸಾಹಿತ್ಯ ಪ್ರಚಾರಕ್ಕೆ ಕಳುಹಿಸಿದನು; ಮಠವನ್ನು ಕಟ್ಟಿಸಿದನು; ಆಶೆಯನ್ನು ಕಳೆದಿರುವನು.

ಮಂಗವು ತಾಳೆಯ ಮರವನ್ನೇರಿ ಕೆಡಿಸುವಂತೆ, ಟೊಂಗೆ ಟೊಂಗೆಗಳಿಗೆ ಜಿಗಿದು ಫಲವನ್ನು ತಳಿರುಗಳನ್ನು ಕಿತ್ತು ಹಾಕುವಂತೆ ನನ್ನ ಪರಿಯಾಗಿದೆ. ನನ್ನ ತನುವನ್ನೂ ಇಂದ್ರಿಯಗಳನ್ನೂ, ರಕ್ಷಿಸಿ, ಸುಬುದ್ಧಿಯನ್ನು ಕೊಟ್ಟು ಕಾಪಾಡು ಶಿವನೆ.

ಗುರುಸಿದ್ಧೇಶನು ಎಂದಿನಂತೆ ಶಿವಪೂಜೆಯನ್ನು ಮುಗಿಸಿಕೊಂಡು, ಲತಾ ಮಂಟಪದಲ್ಲಿ ಕುಳಿತಿರುವಾಗ; ಮೂರು ಸಾವಿರ ಗಣರು ಬಂದು ನಮಸ್ಕರಿಸಿ, ಕೈ ಮುಗಿದು ನಿಂತಿರಲು ಮಹೇಶ್ವರರೇ ಸುಪ್ರಸಾದವನ್ನು ಕೊಡದೆ ನಿಮ್ಮನ್ನು ಹೇಗೆ ಸಾಹಿತ್ಯ ಸೇವೆಗೆ ಕಳುಹಿಸಬೇಕೆಂದು ನುಡಿಯಲು ಅಷ್ಟರಲ್ಲಿ ಒಬ್ಬ ಭಕ್ತನು ಆಶೀರ್ವಾದಕ್ಕಾಗಿ ಒಂದು ಟೆಂಗಿನಕಾಯಿಯನ್ನು ತಂದು ಮುಂದಿರಿಸಿ ನಮಸ್ಕರಿಸಿದನು, ಆಗ ಗುರುಸಿದ್ಧೇಶ್ವರನು ಒಬ್ಬಬ್ಬರನ್ನಾಗಿ ಎಲ್ಲಾ ಗಣರನ್ನು ಕರೆದು ಕಾಯಿ ಒಂದರಲ್ಲಿಯೆ ಮೂರುಸಾವಿರ ಕಾಯಿಗಳನ್ನಾಗಿ ಮಾರ್ಪಡಿಸಿ ಕಳುಹಿಸಿದನು; ಅಲ್ಲದೆ ಕಾಯಿ ತಂದ ಭಕ್ತನಿಗೂ ಒಂದು ಕಾಯಿಯನ್ನು ಆಶೀರ್ವದಿಸಿದನು, ಇದು ನಿನ್ನ ಹಸ್ತದಿಂದ ನಡಿಯಿತೆಂದು ತಿಳಿ, ಏಕೆಂದರೆ ಒಂದು ಬೀಜವನ್ನು ಭೂಮಿಗೆ ಹಾಕಲು ಅದರಿಂದ ಅನೇಕ ಫಲಗಳನ್ನು ಪಡೆಯುವಂತೆ, ಎಂದು ಗುರುವು ನುಡಿದು, ಗುರು ದರ್ಶನಕ್ಕೆ ಬರಿಗೈಯಿಂದ ಬರಕೂಡದು ನೀನು ಪೂರ್ವಜರ ಪದ್ಧತಿಯಂತೆ ಬಂದಿರುವೆ ಇದಕ್ಕೆ ದೃಷ್ಟಾಂತವನ್ನು ಕೇಳೆಂದನು.

ಚೋಳಮಂಡಲದಲ್ಲಿ ಧರ್ಮವತಿ ಎಂಬ ನಗರದಲ್ಲಿ ಚನ್ನನೆಂಬ ರಾಜಸೇವಕ ಇದ್ದನು. ಇವನು ಕುದುರೆಗಳ ಸೇವೆಯಲ್ಲಿ ತೊಡಗಿರುತ್ತಿದ್ದನು, ಜಾತಿಯಲ್ಲಿ ಮಾದಿಗನಾಗಿದ್ದರೂ ಸದ್ಗುಣಿಯಾಗಿ ದುರುಳರನ್ನು ಬೆರೆಯದೆ, ಕಲಿಕಾಲ ಚೋಳನಿಗೂ ಹಾಗೂ ಊರಿನ ಸಜ್ಜನರಿಗೂ ಬೇಕಾದವನಾಗಿದ್ದನು. ಮಹಾರಾಜನು ಶಿವಭಕ್ತಿಯುಳ್ಳವನು, ಅವನೂ ನಿತ್ಯವೂ ಶಿವನನ್ನು ತೃಪ್ತಿಪಡಿಸುತ್ತಿದ್ದನು, ಇವನ ಈ ಪದ್ಧತಿಯು ಚನ್ನನಿಗೆ ಬಹಳ ಆನಂದವೆನಿಸಿತು; ಅವನಂತೆ ತಾನೂ ಶಿವನನ್ನು ತೃಪ್ತಿ ಪಡಿಸಬೇಕೆಂಬ ಬಯಕೆಯಿಂದ ಪ್ರಯತ್ನಿಸಿ ಸ್ತೋತ್ರ ಮಾಡುವನು. ಎಲೈ ಪರಶಿವನೇ, ನಿನ್ನ ಸನ್ನಿಧಿಗೆ ಬರುವ ಯೋಗ್ಯತೆ ನನಗಿಲ್ಲವೆಂದು ಅನಂತ ರೀತಿಯಾಗಿ ಬೇಡಿಕೊಂಡನು.

ಶಿವನು ಅವನ ಭಕ್ತಿಗೆ ಮೆಚ್ಚಿ, ಎಲೆ ಚನ್ನ, ನಿನ್ನ ನುಡಿ ಚನ್ನ; ನಡೆ ಚನ್ನ, ನಾನು ರಾಜನೊಡನೆ ಕುಳಿತು ಊಟ ಮಾಡಿಲ್ಲ. ಬೇರೆ ಕುಳಿತು ಊಟ ಮಾಡಿರುವೆ ಎಂದು ಶಿವನು ನುಡಿಯಲು; ಚನ್ನನು ಶಿವಪಾದಕ್ಕೆರಗಿ ನನ್ನೊಡನೆ ಊಟ ಮಾಡುವುದು ಬೇಡ ನಿನ್ನಯ ಮಿಕ್ಕ ಪ್ರಸಾದವನ್ನು ಸೇವಿಸುವ ಬುದ್ಧಿಯನ್ನು ನೀಡೆಂದನು ಆಗ ಪರಶಿವನು ಚನ್ನನನ್ನು ತನ್ನೊಡನೆ ಕರೆದುಕೊಂಡನು, ಚನ್ನನ ಹೆಂಡತಿಯಾದ ಮಾಳಮ್ಮನು ಭಕ್ತಿಯಿಂದ ಮಣ್ಣಿನ ಪಾತ್ರೆಯಲ್ಲಿ ಮಾಡಿದ ಅಂಬಲಿಯನ್ನು; ಹಣ್ಣು ಮೆಣಸಿನ ಕಾಯಿಯ ಚಟ್ನಿಯನ್ನು ಎಡೆಮಾಡಿದಳು; ಇವನು ಪ್ರಸಾದ ಸ್ವೀಕರಿಸುವದನ್ನು ಕಂಡು ಪಾರ್ವತಿಯು ಬೆರಗಾದಳು; ಹೀಗೆ ನಡೆದಿರಲು ಇತ್ತ ಕಲಿಕಾಲ ಚೋಳನು ನಿತ್ಯದಂತೆ ಶಿವನು ತೃಪ್ತಿ ಪಡದಿರುವುದನ್ನು ಕಂಡು ಲಿಂಗದಸನ್ನಿಧಿಯಲ್ಲಿ ನಿಂತು ಬೇಡಿಕೊಂಡನು, ಲಿಂಗದಿಂದ ನಿನ್ನ ಅರಮನೆಯ ಭಕ್ಷ್ಯ ಭೋಜ್ಯಕ್ಕಿಂತಲೂ ಚನ್ನನ ಮನೆಯ ಅಂಬಲಿಯ ಪ್ರಸಾದವು ಮಿಗಿಲಾಗಿರುವದೆಂಬ ಧ್ವನಿಯ ಕೇಳಿ ಬಂದಿತು. ಆಗ ಮಹಾರಾಜನು ಚನ್ನನ ಗುಡಿಸಲನ್ನು ಶೋಧಿಸುತ್ತ ಸಾಗಿ ಅವನ ಗುಡಿಸಲಿನಲ್ಲಿ ಶಿವ-ಚನ್ನಯ್ಯನವರ ಭೋಜನವನ್ನು ಕಂಡನು ಆವನು ನಮಸ್ಕರಿಸಿದನು ಇಂದಿನಿಂದ ಚನ್ನಯ್ಯನೇ ನನ್ನ ಗುರುವೆಂದು ಅವನ ಪಾದಕ್ಕೆ ಎರಗಿದನು ಇದನ್ನು ಕಂಡು ಚನ್ನಯ್ಯನು; ಸ್ವಾಮಿ ನಾನು ಮಾದಿಗ ನಾನು ನಿಮ್ಮ ಆಳಿನ ಆಳು ನನಗೇಕೆ ವಂದಿಸಿ ಪಾಪದ ಕೂಪಕ್ಕೆ ತಳ್ಳುವಿರಿ? ಎಂದು ನುಡಿಯಲು, ಶಿವನು ನೀವೀರ್ವರು ನನ್ನ ಭಕ್ತರೆ; ಇನ್ನು ಮೇಲೆ ಇಲ್ಲಿ ವಾಸಿಸುವದು ಬೇಡೆವೆಂದು ಕೈಲಾಸಕ್ಕೆ ಕರೆದುಕೊಂಡು ಹೋಗಿ ಗಣಪದವಿಯನ್ನು ನೀಡಿದನು.

ಈ ಕಥೆಯನ್ನು ಭಕ್ತನಾದ ಅಮರಪ್ಪನಿಗೆ ಹೇಳಿ ಆಶೀರ್ವದಿಸಿದನು, ಶಿವಪೂಜೆಗಾಗಿ ಗವಿಯೊಳಗೆ ಹೋದನು. ಇದರಿಂದ ದೊಡ್ಡವರು ಮಾಡಿದ ಕಾರ್ಯವು ಸ್ಥಿರವಾಗುವದೆಂಬುದು ದಿಟವಾಯಿತು ಗುರುವಿನ ಅಪ್ಪಣೆಯನ್ನು ತೆಗೆದುಕೊಂಡು ಹೋದ ಮೂರುಸಾವಿರ ಗಣರು ಶರಣ ಸಾಹಿತ್ಯವನ್ನು ಪ್ರಚಾರಗೊಳಿಸುತ್ತ ಅಲ್ಲಲ್ಲಿ ಮಠಗಳನ್ನು ಕಟ್ಟಿ ಗುರುವಿಗೆ ಆನಂದವಾಗುವಂತೆ ನಡೆದಿದ್ದರು ಇತ್ತ ಗುರುವು ಶರಣ-ಸಾಹಿತ್ಯದ ವಿಷಯವನ್ನು ತಿಳಿಸುತ್ತ ಹುಬ್ಬಳ್ಳಿಯ, ಬಿಲ್ವವನದ ಗವಿಯಲ್ಲಿದ್ದನು.

ಒಂದು ದಿನ ಬಸಮ್ಮನೆಂಬ ಸ್ತ್ರೀಯಳು ಚಿನ್ನದ ಆಭರಣಗಳನ್ನು ಧರಿಸಿಕೊಂಡು ಬಂದು ಗುರುವಿಗೆ ನಮಸ್ಕರಿಸಿದಳು ಆಗ ಗುರುವು ಇಷ್ಟೊಂದು ಆಭರಣಗಳನ್ನು ಧರಿಸಿ ತಿರುಗಬಾರದು ಇಲ್ಲಿ ಕಳ್ಳರ ಭೀತಿ ಹೆಚ್ಚಾಗಿದೆ ಎಂದು ನುಡಿಯಲು, ಆವಳು ಎಷ್ಟೋ ಸಾರಿ ಒಡವೆಗಳನ್ನು ಕಳೆದುಕೊಂಡಿರುವೆನು ಇಷ್ಟೆ ಅಲ್ಲ ಕಳ್ಳರಿಂದ ಬಡಿಸಿಕೊಂಡಿರುವೆನು; ಆದರೂ ಆಭರಣದ ಮೇಲಿನ ಪ್ರೇಮವು ಹೋಗಲೊಲ್ಲದು ಗಂಡನನ್ನು ಕಾಡಿ ಬೇಡಿ ಒಡವೆಗಳನ್ನು ಮಾಡಿಸಿಕೊಂಡಿರುವೆನು, ಇದಕ್ಕಾಗಿ ನಮ್ಮ

ಆಸ್ತಿಯು ಹಾಳಾಗಿರುವುದು; ಕಾರಣ ನನಗೆ ಸುಬುದ್ಧಿಯನ್ನು ನೀಡಿ ಕಾಪಾಡೆನಲು, ಸದ್ಗುರುವು ತಾಯೆ! ಮೊದಲು ನಾವು ಆಶೆಯನ್ನು ತೊರೆಯಬೇಕು; ಆಶೆಯನ್ನು ತೊರೆಯಬೇಕಾದರೆ ಪರರಿಗೆ ದಾನ ಮಾಡುವದನ್ನು ಕಲಿಯಬೇಕು. ಈ ದಾನವು ಸತ್ಪಾತ್ರಕ್ಕೆ ಸಲ್ಲಬೇಕು ಸತ್ಪಾತ್ರವೆಂದರೆ ಅಂಧರೂ, ಅನಾಥರೂ, ಅಂಗವಿಕಲರೂ, ವಿರಾಗಿಗಳೂ ಇವರಿಗೆ ದಾನ ಮಾಡುವುದರಿಂದ ನಮಗೆ ಸದ್ಗತಿಯು ದೊರೆಯುವುದು ಇದಕ್ಕೊಂದು ಕಥೆಯುಂಟು ಕೇಳು.

ಪೂರ್ವದಲ್ಲಿ ಬೇಡರ ಜಾತಿಯಲ್ಲಿ ಬೆಸ್ತನೆಂಬುವವನು ಮೀನುಗಳನು ಹಿಡಿದು ಜೀವಿಸುತ್ತಿದ್ದನು, ಇವನು ಒಂದು ವ್ರತವನ್ನು ಹಿಡಿದಿದ್ದನು. ಅದೆನೆಂದರೆ ಮೊದಲಿಗೆ ದೊರೆತ ಮೀನನ್ನು ಶಿವಾರ್ಪಣವೆಂದು ಅದನ್ನು ಬಿಟ್ಟನಂತರ ಉಳಿದ ಮೀನುಗಳನ್ನು ಮಾರಿ ತನ್ನ ಜೀವನವನ್ನು ನಡೆಸುತ್ತಿದ್ದನು; ಹೀಗಿರುವಾಗ ಒಂದು ದಿನ ಶಿವನು ಅವನಿಗೆ ಬಂಗಾರದ ಮೀನು ಸಿಗುವಂತೆ ಮಾಡಿದನು ಅದನ್ನು ಬೆಸ್ತನು ನಿರಾಶೆಯಿಂದ ಶಿವಾರ್ಪಣೆವೆಂದು ಎಸೆದನು; ಮತ್ತೆ ಜಾಲವನ್ನು ಎಸೆದನು ಅದೆ ಮೀನು ದೊರೆಯಿತು ಇದು ಶಿವನಿಗೆ ಅರ್ಪಿತವಾದ ಮೀನು ಎಂದು ಮತ್ತೆ ಎಸೆದು ಬೇರೆ ಕೊಳ್ಳಕ್ಕೆ ಸಾಗಿದನು, ಅಲ್ಲಿಯೂ ಅದೇ ಮೀನವು ದೊರೆಯಲು, ಇದು ಶಿವನ ಲೀಲೆಯೆಂದು; ನನ್ನ ವ್ರತವು ಕೆಟ್ಟಿತೆಂದು ಪ್ರಾಣಬಿಡಲು ಸಿದ್ಧನಾದನು; ತಕ್ಷಣ ಶಿವನು ದರ್ಶನವನ್ನು ಕೊಟ್ಟು ಕೈಲಾಸಕ್ಕೆ ಕರೆಯಲು, ನನಗೆ ಗಣಪದವಿಯ ಆಶೆ ಇಲ್ಲವೆಂದು ನಿನ್ನ ಪಾದ ಭಕ್ತಿಯನ್ನೇ ನನಗೆ ಕರುಣಿಸೆದು ಕೇಳಿಕೊಳ್ಳಲು ನಿನ್ನ ಭಕ್ತಿಗೆ ಮೆಚ್ಚಿದನೆಂದು ಹೇಳುತ್ತ ನಿನ್ನ ಹೆಸರು ಜಗತ್ತಿನಲ್ಲಿ ಪ್ರಸಿದ್ಧಿ ಪಡೆಯಲೆಂದು ಆಶಿರ್ವದಿಸಿ ಕಳುಹಿದನು, ಶಿವನ ಕೃಪೆಯಿಂದ ಕೊನೆಯವರೆಗೂ ಭೂಮಿಯಲ್ಲಿ ತನ್ನ ಕಾಯಕವನ್ನೆ ನಡೆಸಿ ದೇಹಾಂತ್ಯಕ್ಕೆ ಗಣಗದವಿಯನ್ನು ಹೊಂದಿನನು. ಆದ ಕಾರಣ ನಾವು ಆಶೆಯನ್ನು ತೊರೆಯಲೇಬೇಕು. ಈ ಮಹಿಮೆಯನ್ನು ಕೇಳಿದ ಸ್ತ್ರೀಯಳು ಗುರುಮಹಿಮೆಯನ್ನು ಕೊಂಡಾಡಿದಳು, ಆಗ ಗುರುವು ತಾಯೆ ಪರಶಿವನ ಧ್ಯಾನದಿಂಡ, ನಿನ್ನ ಪತಿಯ ಸೇವೆಯಿಂದ ನಿನ್ನ ಆಶೆಯು ತೊಲಗಲಿ, ಜೀವನದಲ್ಲಿ ಚಿರ-ಶಾಂತಿಯನ್ನು ಪಡೆಯೆಂದು ಆಶೀರ್ವದಿಸಿ ಕಳುಹಿದನು.

ಇದನ್ನು ಕಂಡ ಹುಬ್ಬಳ್ಳಿಯ ಭಕ್ತರು ಗುರುಸಿದ್ಧ ಗುರುವನ್ನು ತಮಗೆ ತಿಳಿದಂತೆ ಕೊಂಡಾಡಿದರೆಂಬಲ್ಲಿಗೆ, ಗುರುಕೃಪೆಯಿಂದ ಹನ್ನೊಂದದೆಯ ಸಂಧಿಯ ವಿಷಯವು ಮಂಗಲವಾಯಿತು.



## —: ಹನ್ನೆರಡನೆಯ ಸಂಧಿ :—

ಸೂಚನೆ: ಬ್ರಹ್ಮ ರಾಕ್ಷಸವನ್ನು ಬಿಡಿಸಿ; ಪಾಳು ಭೂಮಿಯಲ್ಲಿ ಬೂದಿಯಿಂದ ಫಲ ವನ್ನು ಪಡೆದು, ಭೂತಗಳಿಂದ ಸೇವೆಯನ್ನು ಪಡೆದನು.

ಸುತ್ತಲು ಮುಳ್ಳುಗಳನ್ನು ಹೊಂದಿಕೊಂಡ ಗುಲಾಬಿಯು ಅರಳಿ ಲೋಕ ಪ್ರಿಯವಾಗಿ ನಿನಗೂ ಕೂಡ ಪ್ರಿಯವಾಗುವದು, ಅದರಂತೆ ನಾನು ಕೂಡ ಉನ್ನತ ನಾಗುವ ಪರಿಯನ್ನು ಹೇಳು ಇಲ್ಲವಾದರೆ ನಿನ್ನ ಪಾದ ಭಕ್ತಿಯನ್ನು ಕೊಟ್ಟು ನನ್ನನ್ನು ರಕ್ಷಿಸು ಶಿವನೆ.

ಗುರುಸಿದ್ಧೇಶ್ವರನ ಪೂಜೆಯು ನಿರಂತರವಾಗಿ ನಡೆದಿರಲು ಮೂರುಸಾವಿರ ಶಿಷ್ಯರಿಂದ ಶರಣ ಸಾಹಿತ್ಯ ಪ್ರಚಾರವು ಸಾಗಿರಲು ಸತ್ಕೀರ್ತಿ ಎಂಬ ಬೆಳದಿಂಗಳು ಪಸರಿಸಲು ಒಂದು ದಿವಸ ಹೂಬಳ್ಳಿಯ ಬಿಲ್ವವನಕ್ಕೆ ರಾಯಚೂರಿನ ನೈನಪ್ಪನೆಂಬ ಓರ್ವ ಮನುಷ್ಯನು ಬಂದನು ಇವನ ಹೆಂಡತಿಯು ಬಹಳ ಆಲಸಿ ಇದ್ದಳು; ಮನೆಯ ಕೆಲಸವನ್ನು ಮಾಡದೆ ಗಂಡನಿಂದಲೆ ಕೆಲಸವನ್ನು ಮಾಡಿಸುತ್ತ; ಭೂತ ಬಡಿದವ ಳಂತೆ ನಟಿಸುತ್ತಿದ್ದಳು, ಹೀಗೆಯೆ ನಡೆದಿರಲು ಒಂದು ದಿವಸ ನಿಜವಾದ ಬ್ರಹ್ಮ ರಾಕ್ಷಸವು ಅಂಟಿಕೊಂಡಿತು, ಗಂಡನು ಅನ್ನವನ್ನು ಕೊಟ್ಟರೂ ಮುಟ್ಟಲಿಲ್ಲ ತಾನು ಗಂಡನಿಗೆ ಮಾಡಿದ ಮೋಸದ ಕರ್ಮ ಫಲವು ಈ ರೀತಿ ಅವಳನ್ನು ಕಾಡಿಸಹತ್ತಿತು ಇದನ್ನು ತಿಳಿದ ಬಂಧು-ಬಾಂಧವರು ಮಾಂತ್ರಿಕರನ್ನು ಕರೆತಂದರು ಅವರಿಂದಲೂ ಸಾಧ್ಯವಾಗಲಿಲ್ಲ ಆಗ ಮತ್ತೋರ್ವನು ಹುಬ್ಬಳ್ಳಿಯಲ್ಲಿ ಓರ್ವ ಮಹಾತ್ಮನಿರುವನು, ಅವನಿಗೆ ಮೂರು ಸಾವಿರ ಜನ ಶಿಷ್ಯರಿರುವರು, ಅವನ ಹೆಸರಿನಿಂದ ಎಷ್ಟೋ ಕಷ್ಟ ಗಳು ದೂರಾಗುವವು, ಅವನ ಸನ್ನಿಧಿಗೆ ಹೋಗು ಎಂದು ನುಡಿದನು. ನೈನಪ್ಪನು ಗುರುಸಿದ್ಧೇಶ್ವರನನ್ನು ಧ್ಯಾನಿಸುತ್ತ ಬ್ರಹ್ಮರಾಕ್ಷಸ ಒಡಿದ ಹೆಂಡತಿಯನ್ನು ಕರೆದು ಕೊಂಡು ಹುಬ್ಬಳ್ಳಿಗೆ ಬಂದು ಗುರುವನ್ನು ಕಂಡು ನನ್ನನ್ನು ಕಾಪಾಡೆಂದು ಬೇಡಿ ಕೊಂಡನು. ಆಗ ಗುರುಸಿದ್ಧೇಶ್ವರನು ಅವಳ ಮುಖಕ್ಕೆ ಬೂದಿಯನ್ನು ಎರಚಲು ಬ್ರಹ್ಮರಾಕ್ಷಸವು ಅವಳನ್ನು ಬಿಟ್ಟು ಬಂದು ಗುರುವಿಗೆ ನಮಿಸಿ ಕೈಮುಗಿದು ಗುರು ವಿನ ಆಶ್ರಮದಲ್ಲಿ ಇದ್ದು ಮಾಡಬಾರದ ಕೃತಿಯನ್ನು ಮಾಡಿದ್ದರಿಂದ ಶಾಪದ ಪರಿ ಣಾಮದಿಂದ ಹೀಗಾಗಿರುವೆನು, ನನ್ನ ಸುಕೃತದ ಫಲದಿಂದ ನಿನ್ನ ಪಾದ ದರ್ಶನ ನದಿಂದ ನಿಶ್ಯಾಪವಾಯಿತು ಇನ್ನು ನಾನು ಬರುತ್ತೇನೆಂದು ಪಿಶಾಚಿಯು ಹೇಳಿ ವಂದಿಸಿ ಗುರುವಿನ ಆಶ್ರಮಕ್ಕೆ ಹೋಯಿತು. ಆನಂತರ ಆ ಕಮಲಾಬಾಯಿಯು ಗುರುವಿಗೆ ವಂದಿಸಿ ಕೈಮುಗಿದು ಗುರುವೆ ನನ್ನನ್ನು ಉದ್ಧರಿಸಿದಿರಿ ನಾನು ಗಂಡನಿಗೆ ಮಾಡಿದ ವಂಚನೆಯಿಂದ ಈ ಪಿಶಾಚಿಯು ನನಗೆ ಘಟಿಸಿತ್ತು ಎಂದು ನುಡಿದಳು ಆಗ ಸದ್ಗುರುವು ತಂಗಿ ಜಗತ್ತಿನಲ್ಲಿ ಗಂಡನೆ ದೇವರು ಗಂಡನೆ ಗುರುವು, ಗಂಡನೇ ದೈವ

ಅವನನ್ನು ವಂಚಿಸಬಾರದು ಇದಲ್ಲದೆ ಗುರು-ಹಿರಿಯರನ್ನು ಕೂಡಾ ದೈವವೆಂದು ತಿಳಿದುಕೊಂಡು ವಿಧೇಯಳಾಗಿ ವರ್ತಿಸಿ ಗಂಡನ ಪ್ರೇಮವನ್ನು ಸಂಪಾದಿಸಬೇಕು, ಮನುಷ್ಯರಲ್ಲಿ ಸ್ತ್ರೀ-ಪುರುಷರೆಂಬ ಎರಡು ವರ್ಗಗಳಿರುವವು. ಅದರಲ್ಲಿ ಸ್ತ್ರೀ ಧರ್ಮವು ಬಹಳ ಸೂಕ್ಷ್ಮವಾಗಿರುವದು ಇದನ್ನು ಯಾವಾಗಲೂ ಎಚ್ಚರದಿಂದ ತಿಳಿದು ಕೊಂಡು ಬಾಳಬೇಕು; ಹಿಂದಿನ ಸ್ತ್ರೀಯರನೇಕರು ಇದನ್ನರಿತುಕೊಂಡು ಮಹಾ ಪತಿವ್ರತೆಯರಾಗಿ ಬಾಳಿರುವರು, ಕೇಳಿದಕ್ಕೊಂಡು ಕಥೆಯುಂಟು.

ಪೂರ್ವ ಕಾಲದಲ್ಲಿ ತ್ರಿಮೂರ್ತಿಗಳನ್ನು ತನ್ನ ಪಾತಿವ್ರತ್ಯದ ಬಲದಿಂದ ಕೂಸು ಗಳನ್ನು ಮಾಡಿಆಡಿಸಿದ ಅನುಸೂಯಾದೇವಿಯು ಅನಲಾಯಿಯೆಂಬ ಮಗಳನ್ನು ಸಾಕಿ ಸಲುಹಿದ್ದಳು ಅವಳು ತಪಸ್ಸು ಮಾಡುವ ಇಚ್ಛೆಯಿಂದ ವನಕ್ಕೆ ಹೊರಟಳು ಆಗ ತಂದೆ ಯಾದ ಅತ್ರಿ ಮಹರ್ಷಿಗಳು ಬೇಡವೆಂದರೂ ಪಿತೃಗಳ ಮಾತನ್ನು ಮೀರಿ ಅರಣ್ಯಕ್ಕೆ ಹೋಗಿ ತಪಸ್ಸನ್ನು ಮಾಡಹತ್ತಿದಳು, ಆ ಅರಣ್ಯಕ್ಕೆ ಒಮ್ಮೆ ಕಾಡ್ಗಿಚ್ಚು ಬಿದ್ದು ವನವೆಲ್ಲ ಉರಿಯ ಹತ್ತಿತು, ಇತ್ತ ತಾಯಿಯಾದ ಅನಸೂಯಾದೇವಿಯು ತನ್ನ ಪತಿಯ ಪಾದೋದಕವನ್ನು ಅರಣ್ಯದ ದಿಕ್ಕಿಗೆ ಎರಚಿದಳು, ಇದನ್ನು ಕಂಡು ಅತ್ರಿ ಮಹರ್ಷಿಗಳು ಕಾರಣವೇನೆಂದು ಕೇಳಲು ವಿಷಯವನ್ನು ತಿಳಿಸಿದಳು. ಅದರ ನಿರ್ಧಾರ ಕ್ಕಾಗಿ ಅವರು ಅರಣ್ಯಕ್ಕೆ ಸಾಗಿದರು ನಿಜವಾದ ವಿಷಯವನ್ನೂ ತಿಳಿದು ಸಂತೋಷ ಪಟ್ಟರು. ತಂದೆ-ತಾಯಿಗಳಿಗೆ ನಮಸ್ಕರಿಸಿದಳು ಆಗ ಅವಳಿಗೆ ಪಾತಿವ್ರತದ ಮಹಿಮೆ ಯನ್ನು ಬೋಧಿಸಿ ಅವಳಿಗೆ ವಿವಾಹ ಮಾಡಿದರು, ಅವಳ ದೈವಕ್ಕೆ ಹೆಳವನಾದ ಅಘೋರ ಋಷಿಯು ಪತಿಯಾಗಿ ದೊರೆತನು, ಉಚ್ಚ ನೀಚ ಭಾವನೆಯಿಲ್ಲದೆ ಆತನ ಸೇವೆಯನ್ನು ಮಾಡುತ್ತಿದ್ದಳು, ಹೀಗಿರುವಾಗ ಗಂಡನ ಇಚ್ಛೆಯಂತೆ ತೀರ್ಥ ಯಾತ್ರೆಗೆ ಹೊರಟಳು, ಗಂಡನನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡು ಸಂಚರಿಸುತ್ತ ಕಾಶೀ ಕ್ಷೇತ್ರಕ್ಕೆ ಬಂದಳು ಅಲ್ಲಿ ಧರ್ಮಛತ್ರದಲ್ಲಿ ಉಳಿದುಕೊಂಡು ಗಂಗಾ ಸ್ನಾನವನ್ನು ಮಾಡಿ ವಿಶ್ವನಾಥನನ್ನು ಪೂಜಿಸಿ ಸತ್ಪಾತ್ರಕ್ಕೆ ದಾನಗೈದು ಗಂಡನನ್ನು ಕರೆದುಕೊಂಡು ಬರುವಾಗ ಅಘೋರ ಋಷಿಯು ಓರ್ವ ವೇಶ್ಯೆಯನ್ನು ಕಂಡನು, ಅವಳ ರೂಪ ಲಾವಣ್ಯಕ್ಕೆ ಮೋಹಿತನಾಗಿ ಅವಳ ಸಂಗವನ್ನು ಮಾಡಿಸಲು ಹೆಂಡತಿಗೆ ಹೇಳಿದನು. ಇದನ್ನು ಮಾಡದಿದ್ದರೆ ನಾನು ಉಳಿಯುವದಿಲ್ಲವೆಂದು ಕೂಡಾ ತಿಳಿಸಿದನು, ಸಾಧ್ವಿ ಅನಲಾಯಿಯು ವೇಶ್ಯಯನ್ನು ಶೋಧಿಸಿ, ಅವಳ ಒಲಿಸುವದಕ್ಕಾಗಿ, ನಸುಕಿನಲ್ಲಿ ಆ ವೇಶ್ಯಯ ಮನೆಯ ಅಂಗಳ ಕಸವನ್ನು ಗೂಡಿಸಿ ಬಾಗಿಲನ್ನು ತೊಳೆದು; ರಂಗೋಲಿ ಹಾಕಿ ಹೋಗುವ ಸೇವೆಯನ್ನು ಕೈಕೊಂಡಳು. ಇದನ್ನು ನೋಡಿದ ಆ ಗಣಿಕೆಯು ಕಾರಣವೇನೆಂದು ಕೇಳಲು, ನಿನ್ನ ಸಂಗವನ್ನು ಹೆಳವನಾದ ನನ್ನ ಪತಿಯು ಬಯಸಿರುವನು ಆದ್ದರಿಂದ ಅವನ ಬಯಕೆಯನ್ನು ಪೂರ್ತಿಗೊಳಿಸಬೇಕೆಂದು ಕೇಳಿದಳು. ಆಗ ಆ ವೇಶ್ಯೆಯು ಇಷ್ಟೇಕೆ ಬೇಡಿ

ಕೊಳ್ಳುವುದು, ಈ ದಿನದ ರಾತ್ರಿಯೇ ಅವನನ್ನು ಕರೆದುಕೊಂಡು ಬಾ ಎಂದು ಹೇಳಿದಳು ಆಗ ಅನಲಾಯಿಯು ಗಂಡನನ್ನು ವೇಶ್ಯಯ ಮನೆಗೆ ಕರೆತಂದು ಮರಳಿ ನಸುಕಿನಲ್ಲಿಯೇ ಹೋಗುವಾಗ ಹಾದಿಯಲ್ಲಿ ಮಾಂಡವ್ಯಋಷಿಗೆ ಅವಳ ಪತಿಯ ಮಂಡ ಕಾಲು ತಾಕಲು ಆಗ ಮಾಂಡವ್ಯ ಋಷಿಯು "ಕೋಪದಿಂದ ನನಗೆ ಕಾಲು ತಾಕಿಸಿದವನು ಯಾರೆ ಇರಲಿ ಸೂರ್ಯೋದಯಕ್ಕೆ ಅವನ ತಲೆಯು ಸಹಸ್ರ ಭಾಗ ವಾಗಲೆಂದು" ಶಾಪವನ್ನು ಕೊಟ್ಟನು. ಇದನ್ನರಿತ ಅನಲಾಯಿಯು ಗಂಡನನ್ನು ಉಳಿಸುವದಕ್ಕಾಗಿ ಸೂರ್ಯನಿಗೆ ನೀನು ಉದಯಿಸಲೇ ಬೇಡವೆಂದು ಶಿವನ ಆಣೆಯನ್ನು ಇಟ್ಟಳು, ಆಗ ಲೋಕವೆ ತತ್ತರಿಸಿ ಹೋಯಿತು, ಶಿವನೆ ಅನಲಾಯಿಯ ಹತ್ತಿರ ಬರಬೇಕಾಯಿತು. ಬಂದು ತಾಯಿ ಆಣೆಯನ್ನು ಒಂದಕ್ಕೆ ತೆಗೆದುಕೊ ಎಂದು ಕೇಳಿಕೊಂಡನು ಆಗ ಅನಲಾಯಿಯು ಹಾಗಾದರೆ ನನ್ನ ಗತಿ ಯೇನೆಂದು ಕೇಳಿದಳು. ಅದಕ್ಕೆ ಶಿವನು ನಾನಿರುವೆನೆಂದು ಹೇಳಲು ಶಿವನಾಣೆಯನ್ನು ತೆಗೆದುಕೊಂಡಳು. ಸೂರ್ಯನು ಉದಯಿಸಿದನು ಅಘೋರಋಷಿಯ ತಲೆಯು ಸಹಸ್ರ ಭಾಗವಾಯಿತು. ಆಗ ಶಿವನು ಪ್ರಾಣದಾನ ಮಾಡುವದಲ್ಲದೆ ಸುಂದರ ಕಾಯವನ್ನು ಕೊಟ್ಟನು, ಅಲ್ಲದೆ ಹೇಳವತನವನ್ನು ಕೂಡ ಕಳೆದನು. ಇದು ಅನಲಾಯಿಯ ಪತಿ-ಭಕ್ತಿಯ ಪ್ರಭಾವವೆಂದು ಗುರುಸಿದ್ಧೇಶ್ವರನು ತಿಳಿಸಿ, ತಂಗಿ ಈಕಥೆಯು ನಿನ್ನ ಜೀವನಕ್ಕೆ ಆಧಾರವಾಗಿರಲಿ ಮರೆಯಬೇಡವೆಂದು ಹೇಳಿದನು. ಈ ವಿಷಯವನ್ನು ತಿಳಿದ ಕೇಳಿದ ಭಕ್ತ ಸಮೂಹವು ಗುರುಸಿದ್ಧೇಶ್ವರನನ್ನು ಅನಂತ ರೀತಿಯಾಗಿ ಕೊಂಡಾಡಿತು.

ಮತ್ತೊಂದು ಲೀಲೆ ಏನೆಂದರೆ, ಕಲಬುರ್ಗಿಯಲ್ಲಿ ಸಿದ್ಧಪ್ಪನೆಂಬ ಬಡವನು, ಒಂದು ಕೂರಿಗೆ ಹೊಲದಲ್ಲಿ ಕೃಷಿಕಾರ್ಯದಿಂದ ಚಿನ್ನದಂತೆ ಬಾಳನ್ನು ಸಾಗಿಸುತ್ತಿದ್ದನು ಇದನ್ನು ನೋಡಿ ಸಹಿಸಲಾರದೆ ಭೂಮಿಯು ಬೆಳೆಯದಂತೆ ಒರ್ವ ದುಷ್ಟನು ಮಾಟ ಮಾಡಿಸಿದ್ದನು, ಅದರಿಂದಾಗಿ ಮಳೆ ಸಮಯಕ್ಕನುಸರಿಸಿ ಬಂದರೂ ಬೆಳೆಯ ಮಾತ್ರ ಬರಲೇ ಇಲ್ಲ ಸಿದ್ಧಪ್ಪನು ಕಷ್ಟಕ್ಕೆ ಗುರಿಯಾದನು. ತನ್ನ ಗೆಳೆಯನಿಂದ ಹುಬ್ಬಳ್ಳಿಯ ಗುರುಸಿದ್ಧೇಶನ ಮಹಿಮೆಯನ್ನು ಕೇಳಿ ಬರಲು ಕಾಸು ಇಲ್ಲದೆ, ಎರಡನೆಯವರಿಂದ ಸಾಲ ಹುಟ್ಟಲಿಲ್ಲ, ಬಹಳ ಕಷ್ಟಕ್ಕೆ ಗುರಿಯಾದನು. ಹಗಲಿರುಳು ಗುರುಸಿದ್ಧೇಶನ ಧ್ಯಾನ್ಯದಲ್ಲಿಯೇ ತಲ್ಲೀನನಾದನು ಹೀಗಿರುವಲ್ಲಿ ಒಂದು ದಿನ ಅವನ ಭಕ್ತಿಗೆ ಒಲಿದ ಗುರುಸಿದ್ಧೇಶನು ಕನಸಿನಲ್ಲಿ ಬಂದು ನಿನ್ನ ಹೊಲಕ್ಕೆ ಗುರುವನ್ನು ಸ್ಮರಿಸಿ ಬೂದಿಯನ್ನು ಎರಚು, ಅದರಿಂದ ನೀನು ಫಲವನ್ನು ಪಡೆದು ಸುಖವನ್ನು ಹೊಂದುವೆಯೆಂದು ಹೇಳಿ ಅದೃಶ್ಯನಾದನು ಮರುದಿನ ಸ್ನಾನಮಾಡಿ ಮಡಿಯಿಂದ ಬೂದಿಯನ್ನು ತೆಗೆದು ಕೊಂಡು ಹೊಲದಲ್ಲಿ ಸಿಂಪಡಿಸಿದನು ತಕ್ಷಣವೆ ಮಾಟಮಾಡಿದ ಒಡವೆಗಳು ಸಿಡಿದು ಹೋಗಿ, ಅವನಿಗೆ ಆನಂದವಾಯಿತು; ಆ ವರ್ಷವೇ ಭೂಮಿಯು ಚೆನ್ನಾಗಿ ಬೆಳೆ

ಯಿತು, ಇದರಿಂದ ಭಕ್ತಿಯು ಹೆಚ್ಚಾಗಿ, ಆಪ್ತರನ್ನು ಬಂಧು-ಬಾಂಧವರನ್ನು ಕೂಡಿಕೊಂಡು ಗುರುಸಿದ್ಧನ ಸನ್ನಿಧಿಗೆ ಬಂದು ವಂದಿಸಿ ಅನಂತ ರೀತಿಯಾಗಿ ಕೊಂಡಾಡಿದನು ಅದಕ್ಕೆ ಗುರುವು ನನ್ನಲ್ಲಿ ಏನು ಇಲ್ಲ ಎಲ್ಲವೂ ಆ ಬೂದಿಯ ಮಹಿಮೆ ಬೂದಿಯಲ್ಲಿ ಅಂತಹ ಶಕ್ತಿ ಇರುವುದು, ಇದಕ್ಕೆ ಶಿವನ ಮೈ ಬೆಳಗು, ಭಸಿತ, ಎಂದು ಕರೆಯುವರು, ಭೂತಿ ಶಬ್ದದ ಅರ್ಥವು ಐಶ್ವರ್ಯವೆಂದಾಗುವುದು, ಐಶ್ವರ್ಯವೆಂದರೆ ಈಶ್ವರನೆಂದಾಗುವುದು ಭೂತಿ ಶಬ್ದದ ತದ್ಭವ ಬೂದಿಯೆಂದಾಗುವುದು, ಇದಕ್ಕಿಂತ ಮಿಗಿಲಾದದ್ದು ಭೂತಲದಲ್ಲಿ ಯಾವುದು ಇಲ್ಲ, ಆದಕ್ಕಾಗಿ ಶಿವಭಕ್ತರು ಇದನ್ನು ಪ್ರೇಮದಿಂದ ಧರಿಸುವರು; ಶಿವನು ಕೂಡ ಇದನ್ನು ಧರಿಸುವನು ಈ ವಿಭೂತಿಯು ಗೋಮಯದಿಂದ ಆದದ್ದೇ ಶ್ರೇಷ್ಠವು, ಇದರಿಂದ ಯಾವಾಗಲೂ ಸಕಲ ಸಂಪದ ಸಿದ್ಧಿಗಳಾಗುವವು, ಎಂದು ಹೇಳಿ ಸಿದ್ದಪ್ಪನಿಗೆ ಆಶೀರ್ವದಿಸಲು ಗುರುವಿನ ಅಪ್ಪಣೆಯನ್ನು ತೆಗೆದುಕೊಂಡು ಮರುದಿವಸ ಅಲ್ಲಿಯೇ ಗಣಾರಾಧನೆಯನ್ನು ನಡೆಸಿ ಸುಖವಾಗಿ ತನ್ನ ಊರಿಗೆ ಬಂದು ಸೇರಿದನು, ಕಲಬುರ್ಗಿಯಲ್ಲಿ ಈ ವಿಷಯವನ್ನು ಕೇಳಿ, ಜನರು ಗುರುಸಿದ್ಧೇಶ್ವರನನ್ನು ಕೊಂಡಾಡಿದರು.

ಇನ್ನೊಂದು ಲೀಲೆ ಗುರುಸಿದ್ಧೇಶ್ವರನು ಭಕ್ತರ ಇಷ್ಟಾರ್ಥಗಳನ್ನೂ ಪೂರ್ಣ ಮಾಡುತ್ತ ಲಿಂಗಾನಂದದಲ್ಲಿ ಇರುವಾಗ, ಒಬ್ಬ ಸಿದ್ಧನು ಬಂದನು, ಅವನು ವಿನಯದಿಂದ ನಮಸ್ಕರಿಸದೆ ಗರ್ವದಿಂದ ಅವರ ಎದುರಿನಲ್ಲಿ ಕುಳಿತು ನಿಮಗೆ ಗುರುಸಿದ್ಧನೆಂಬ ಹೆಸರೇಕೆ? ಇದು ಸರಿಯಲ್ಲ ನೀವು ಯಾವ ಯಾವ ಸಿದ್ಧಿಗಳನ್ನು ಪಡೆದುಕೊಂಡಿರುವಿರಿ, ಅದನ್ನು ನನಗೆ ತೋರಿಸಿರಿ ನಾನು ಸಿದ್ಧಿಯನ್ನು ಪಡೆದುಕೊಂಡಿರುವೆನು, ನೀವು ನಿಮ್ಮ ಸಿದ್ಧಿಯನ್ನು ತೋರಿಸಿ ನಿಮ್ಮ ಗೌರವವನ್ನು ಕೀರ್ತಿಯನ್ನು ಕಾಯ್ದುಕೊಳ್ಳಿರಿ, ನಿಮಗೆ ನಾನು ಸೋತರೆ ರಾಜನೆಂಬ ಬಿರುದು ಇರಲಿ ಇಲ್ಲವಾದರೆ ಸಿದ್ಧನೆಂಬ ಹೆಸರಷ್ಟೇ ಇರಲಿ, ಹೀಗೆ ನುಡಿಯುತ್ತ ಮಂತ್ರವನ್ನು ಪಠಿಸಿದನು. ಆಗ ನಾನಾ ಜಾತಿಯ ಸರ್ಪಗಳು ಬಂದು ಗುರುಸಿದ್ಧನ ಪಾದಕ್ಕೆ ಸುತ್ತಿ ನಮಿಸಿ ಮಾಯವಾದವು, ಮತ್ತೆ ಮಂತ್ರವನ್ನು ಪಠಿಸಲು ದೊಡ್ಡ ದೊಡ್ಡ ಗಿರಿಗಳು ತೋರಿ ಮಾಯವಾದವು ಬಿರುಗಾಳಿ ಬೀಸಲೆಂದು ನುಡಿದರೆ ತಂಗಾಳಿಯಾಗಿ ಪರಿಣಮಿಸಿತು ಗುರುಸಿದ್ಧನನ್ನು ಸುಡಲು ಉರಿಯನ್ನು ಹೊತ್ತಿಸಿದರೆ, ಆ ಮಾಂತ್ರಿಕ ಸಿದ್ಧನಿಗೆ ತಾಳಲಾರದ ತಾಪವಾಯಿತು, ಆಗ ಸಿದ್ಧನು, ಗುರುಸಿದ್ಧರಾಜನ, ಪಾದಕ್ಕೆ ಬಿದ್ದು ಈ ರೀತಿ ಸ್ತೋತ್ರ ಮಾಡಿದನು ಸಿದ್ಧರಿಗೆ ಸಿದ್ಧನು ನೀನೆ, ವೃದ್ಧರಿಗೆ ವೃದ್ಧನು ನೀನೆ, ಎಂದು ಅವನ ಶಿರವನ್ನು ಎತ್ತಿ ಹಿಡಿದು ಇನ್ನು ಮೇಲೆ ಶಿವಭಕ್ತರನ್ನು ಕಾಡಬೇಡ; ಯಾರನ್ನೂ ನಿಂದಿಸಬೇಡ ನಿನ್ನ ವರ್ಣನೆಯನ್ನು ಮಾಡಿಕೊಳ್ಳಬೇಡ; ಶಿವನು ನಿನಗೆ ಕಲ್ಯಾಣವನ್ನು ಮಾಡುವನೆಂದು ಹೇಳಿ ಕಳುಹಿಸಿದನು ಇದರಿಂದ ಆ ನಾಡಿನ ಪ್ರಸಿದ್ಧ ಚಾಟಕ ವಿದ್ಯೆಯ ಜನರು ಗುರುವಿನ ಪಾದಕ್ಕೆ ಬಂದು

ಬಿದ್ದು ವಿನಯವನ್ನು ತೋರಲಾದರು, ಅಲ್ಲದೆ ದಾಸಿಮಯ್ಯನು ಶಿವನಿಂದ ಸೇವೆಯನ್ನು ತೆಗೆದುಕೊಂಡನೆಂಬುದನ್ನು; ಕಲ್ಲಯ್ಯನೆಂಬ ಶರಣನು ವೇದಗಳನ್ನು ನಾಯಿಗಳಿಂದ ಓದಿಸಿದನೆಂದು ಕೇಳಿ ಪುಸಿಯೆನ್ನುತ್ತಿದ್ದವು, ಅವನ ಕೀರ್ತಿಯನ್ನು ಕೇಳಿಕೊಂಡು, ಬಾಲಕರೂ, ವೃದ್ಧರೂ, ಸ್ತ್ರೀಯರೂ ಎಲ್ಲರೂ ಗುರುಸಿದ್ಧೇಶನ ದರ್ಶನಕ್ಕೆ ಬಂದರನೇಕರು; ಅಂದಿನಿಂದ ಪೂವಳ್ಳಿಯು ಹುಬ್ಬಳ್ಳಿಯಾಯಿತು. ಇಲ್ಲಿ ನೆಲಸುತ್ತ ತಮ್ಮ ತಮ್ಮ ಉದ್ಯೋಗದಲ್ಲಿ ನಿರತರಾಗಿರುವರು, ಎಂಬುವಲ್ಲಿಗೆ ಗುರುಕೃಪೆಯಿಂದ ಹನ್ನೆರಡನೆಯ ಸಂಧಿಯ ವಿಷಯ ಸಮಾಪ್ತಿಯಾಯಿತು.



## ಹದಿಮೂರನೆಯ ಸಂಧಿ

ಸೂಚನೆ: ಪರಮತಕೆ ಒಲಿದವನನ್ನು, ಪರದೈವಕ್ಕೊಲಿದವನನ್ನು ಹಾಗೂ ಪರಧರ್ಮ ನಿಂದಕನನ್ನು ಗುರುಸಿದ್ಧೇಶನು ಜ್ಞಾನವನ್ನು ಕೊಟ್ಟು ಕರುಣೆಯಿಂದ ಕಾಪಾಡಿದನು.

ಶುಭ್ರತೆಯನ್ನು, ಸುಗಂಧವನ್ನು ಪಡೆದುಕೊಂಡ ಮಲ್ಲಿಗೆಯು ಭೂತಲದಲ್ಲಿ ನಿನಗೆ ಪ್ರಿಯವಾಗಿದ್ದರೂ, ಅದಕ್ಕಿಂತಲೂ ನಾನು ಶ್ರೇಷ್ಠನೆಂದು ತೋರಿಸಿಕೊಳ್ಳಲು ಮಲ್ಲಿನಾಥನೆಂಬ ಹೆಸರನ್ನು ಪಡೆದಿರುವೆ ಆದರೂ ಮಲ್ಲಿಗೆಯ ಸುಗಂಧಕ್ಕೆ ಮನಸೋತು ಅದನ್ನು ತಲೆಯ ಮೇಲೆ ಇಟ್ಟುಕೊಂಡಿರುವೆ, ಹೀಗಿದ್ದರೂ ನನ್ನ ಅಂಗಕ್ಕೆ ಲಿಂಗವಾಗಿ ಏತಕ್ಕೆ ಬಂದೆ ಶಿವನೆ?

ಗುರುಸಿದ್ಧೇಶ್ವರನು ಒಮ್ಮೆ ಗವಿಯಲ್ಲಿ, ಮತ್ತೊಮ್ಮೆ ಒಲೆಯ ಮಠದಲ್ಲಿ ಒಮ್ಮೆ ಬಿಲ್ವ ವನದಲ್ಲಿ ಧ್ಯಾನಸ್ಥನಾಗಿರುತ್ತಿದ್ದನು, ಬಂದ ಭಕ್ತರ ಪಾಪವನ್ನು ನಿವಾರಣೆ ಮಾಡುತ್ತಿದ್ದರೂ, ಶಿವನೆ ತಾನಾಗಿದ್ದರೂ ಶಿವನನ್ನು ಸಾಧಕರಂತೆ, ಧ್ಯಾನಿಸುತ್ತಿದ್ದನು ಈ ರೀತಿಯಾಗಿ ಇರುವ ಕಾಲದಲ್ಲಿ ಬೀದರ ಪುರದ ಸೋಮೇಶನೆಂಬ ವೀರಶೈವನು ಅನ್ಯಮತದ ಗುರುವಿನಲ್ಲಿ ಸೇರಿ ಶಿವಯೋಗವನ್ನು ನಿಂದಿಸುತ್ತ ಯೋಗವನ್ನು ಒಲಿಸಿಕೊಂಡು ಗುರುಸಿದ್ಧನಿಗೆ ತನ್ನ ಶಕ್ತಿಯನ್ನು ತೋರಿಸುವುವದಕ್ಕಾಗಿ ಹುಬ್ಬಳ್ಳಿಗೆ ಬಂದು ಬಿಲ್ವ ವನದ ವೃಕ್ಷಗಳನ್ನು ಒಣಗಿಸ ಹತ್ತಿದನು, ಅದರಿಂದ ಅವನ ಶರೀರದ ರಕ್ತವು ಸುಟ್ಟು ಶಕ್ತಿಗುಂದಿ ದುಃಖಿಸ ತೊಡಗಹತ್ತಿದನು ಆಗ ಗುರುಸಿದ್ಧೇಶನು ಬಂದು ಅವನ ಹೀನ ಸ್ಥಿತಿಯನ್ನು ನೋಡಿ ಕರುಣೆಯಿಂದ ಅವನಿಗೆ ಈ ರೀತಿಯಾಗಿ ಹೇಳಿದನು "ಎಲೈ ಸೋಮೇಶನೆ ಇದು ಅಲ್ಲಮ ಪ್ರಭುಗಳ ಪಾದ ಸೋಂಕದ ಪುಣ್ಯ ಭೂಮಿ'' ಇಲ್ಲಿ ನಿನ್ನ ಯೋಗ ಬಲವು ತೋರುವದಿಲ್ಲ,

ನೀನು ವೀರಶೈವನಾಗಿ ಶಿವಯೋಗವನ್ನು ತಿಳಿದುಕೊ ಎಂದನು, ಆದಿ ತತ್ತ್ವವೇ ಶಿವ, ಶ್ರೇಷ್ಠವಾಗಿ ಅವನಲ್ಲಿರುವ ಒಂದು ರೀತಿಯೆ ಶಿವಯೋಗ, ಶಿವನೇ ಲಿಂಗವು, ಈ ಲಿಂಗವೆ ಇಷ್ಟಲಿಂಗ; ಪ್ರಾಣಲಿಂಗ, ಭಾವಲಿಂಗವೆಂದು ಮೂರು ಪ್ರಕಾರವಾಗಿ, ಸ್ಥೂಲ; ಸೂಕ್ಷ್ಮ, ಕಾರಣ ತನುಗಳನ್ನು ಹೊಂದಿಕೊಂಡಿರುವುದು, ಗುರುವು ಶಿಷ್ಯನ ಮಸ್ತಕದಿಂದ ಇಷ್ಟ ಲಿಂಗದ ಕಲೆಯನ್ನು ತೆಗೆದು ತನ್ನ ಶಿವಯೋಗ ಬಲದಿಂದ ಶಿಲಾಲಿಂಗದಲ್ಲಿ ಸ್ಥಾಪಿಸಿ, ಇಷ್ಟಲಿಂಗವೆಂದು ಹೆಸರಿಟ್ಟು ಶಿಷ್ಯನ ಕೈಗೆ ಕೊಡುವನು, ಇದುವೆ ಶಿವಯೋಗ, ಇದಕ್ಕಿಂತಲೂ ಹೆಚ್ಚಿನ ಯೋಗಗಳಿಲ್ಲ. ನೀನು ಲಿಂಗವನ್ನು ಧರಿಸಿ, ಪೂಜಿಸಿ, ನೋಡಿ, ಕೂಡಿ ಶಿವಯೋಗವನ್ನು ಸಾಧಿಸಿಕೊ, ನೋಡಲು ಅಸಾಧ್ಯ ವಾದರೆ, ಶಿವಭಕ್ತಿಯಿಂದ ಶಿವ-ವ್ರತದ್ದಿಂದ, ಶಿವ-ಪೂಜೆಯಿಂದ, ಶಿವ-ಅನುಸಂಧಾನ ದಿಂದ, ಶಿವ-ಜ್ಞಾನಗಳಿಂದ ಶಿವಯೋಗವು ಸಾಧಿಸುವುದು ಸುಲಭ, ದೃಷ್ಟಿಯಿಂದ ಯೋಗವು ಅಷ್ಟೆ ಸಾಧಿಸುವುದು, ಈ ಶಿವಯೋಗದಲ್ಲಿರುವ ಒಂದೊಂದಕ್ಕೆ ಪ್ರಾಣ ಯಾಮವೇ ಮೊದಲಾದ ಯೋಗಗಳು ಸಮವಾಗಲಾರವು, ಇದನ್ನರಿತು ಬಾಳು, ಶಿವವ್ರತವೇ ಹಠಯೋಗವೆನಿಸುವುದು, ಶಿವಭಕ್ತಿಯೇ ಲಯಯೋಗವು, ಶಿವ-ಧ್ಯಾನವೇ ಮಂತ್ರಯೋಗವು ಶಿವ-ಜ್ಞಾನವೇ ರಾಜಯೋಗವು, ಗರ್ವರಹಿತನಾಗಿರು ವುದೇ ಶಿವಾನುಸಂಧಾನವು, ಇದೇ ಶಿವಯೋಗದ ರಹಸ್ಯ.

ಲಿಂಗದಲ್ಲಿ ಅಚಲವಾದ ದೃಷ್ಟಿಯನ್ನು ಇಡಲು ಮನಸ್ಸು ನಿಲ್ಲುವುದು, ಆಗ ಅಲ್ಲಿ ಬಿಂದು ಕಾಣುವುದು, ಅಷ್ಟೆ ಅಲ್ಲದೆ ನಾದವು ಕೇಳಿ ಜೊತೆಯಿಲ್ಲಿರುವ ಕಲೆಯು ಕೂಡ ತೋರುವುದು, ಇದಕ್ಕೆ ಪ್ರಾಣಲಿಂಗವೆಂದು ಹೆಸರು, ಮಂಗಲಕರವಾದ ಕಲಾತೀತ ವಸ್ತುವೇ ಭಾವಲಿಂಗವು ನಿನ್ನ ರೂಪವು ಈ ಲಿಂಗಗಳಲ್ಲಿ ಕೂಡಿಕೊಂಡಿ ರುವುದು, ದೃಷ್ಟಿಸಾಧನವು ಕಠಿಣವಾದದ್ದು, ಅದನ್ನು ಕಲಿಯಲು ಹೋಗಿ ನೀನು ಕೆಟ್ಟಿರುವೆ, ಶಿವಯೋಗವನ್ನು ಸಾಧಿಸುವುದೇ ಒಳ್ಳೆಯದು ದೃಷ್ಟಿಸಾಧನೆಯನ್ನು ತಿಳಿಸೆಂದರೆ ಓಲೆಯ [ಮಠಕ್ಕೆ ನಡೆ, ಎಂದು ಗುರುವು ಸೂಚಿಸಿ ಅದೃಶ್ಯನಾದನು, ಈ ಲೀಲೆಯನ್ನು ಕಂಡು ಸೋಮೇಶ್ವರನು, ಯೋಗವನ್ನು ತೊರೆದು ಶಿವಯೋಗ ವನ್ನು ಸಾಧಿಸಿ ಚಿರಸುಖವನ್ನು ಹೊಂದಿದನು. ಅದನ್ನು ನೋಡಿದ ಭಕ್ತರು ಗುರುವನ್ನು ಅನಂತ ರೀತಿಯಾಗಿ ಕೊಂಡಾಡಿದರು.

ಮೈಸೂರಲ್ಲಿ ಬಸಪ್ಪನೆಂಬ ಭಕ್ತನು ಪಾರ್ವತಿಯೆಂಬ ಹೆಂಡತಿಯೊಡನೆ ಬಾಳುತ್ತಿದ್ದನು, ಇವನೂ ಕೂಡಾ ವೀರಶೈವನಾಗಿದ್ದರೂ ಗುರು-ಲಿಂಗ-ಜಂಗಮ ನಿಷ್ಠೆ ಇಲ್ಲದೆ, ಅನ್ಯದೇವತೆಗಳಿಗೆ ಶರಣು ಹೋಗುತ್ತಿದ್ದನು, ಎಷ್ಟು ದೇವರನ್ನು ಪೂಜಿಸಿದರೂ ಸಮಾಧಾನವಿರಲಿಲ್ಲ, ಅವನಿಗೆ ಲಿಂಗ ಪೂಜೆಯನ್ನು ಮಾಡುವದು, ಗುರು, ಜಂಗಮರ ಪಾದೋದಕ ತೆಗೆದುಕೊಳ್ಳುವುದು ಇಷ್ಟವಿರಲಿಲ್ಲ; ಇವನ

ಹೆಂಡತಿಯು ಗುರು-ಲಿಂಗ-ಜಂಗಮ ಪ್ರೇಮಿಯಾಗಿ ಲಿಂಗವನ್ನು ಮರೆಯದೆ, ಮಂತ್ರವನ್ನು ಪಠಿಸುತ್ತ, ತನ್ನ ಗಂಡನ ಸ್ಥಿತಿಗೆ ಮರುಗಿ ಕಣ್ಣೀರು ಸುರಿಸುತ್ತಿದ್ದಳು. ಹೀಗಿರುವಾಗ ಅವಳ ಸ್ಥಿತಿಯನ್ನು ನೋಡಿದ ಭಕ್ತನೋರ್ವನು. ತಾಯಿ ನೀನು ನಿತ್ಯ ಲಿಂಗ ಪೂಜೆಯ ನಂತರ "ಗುರುಸಿದ್ಧ 'ಗುರುವನ್ನು ಸ್ಮರಿಸು ಅವನ ಧ್ಯಾನ ದಿಂದ ನಿನಗೆ ಸಮಾಧಾನವಾಗುವದೆಂದು ಹೇಳಿದನು, ಅದರಂತೆ ಅಂದಿನಿಂದ ಹುಬ್ಬಳ್ಳಿ ಬಿಲ್ವ-ವನದ ಗುರುಸಿದ್ಧೇಶ್ವರನ ಧ್ಯಾನದಲ್ಲಿ ತತ್ಪರಳಾದಳು, ಒಂದು ದಿನ ಕನಸಿನಲ್ಲಿ ಪಾರ್ವತಿಗೆ ಗುರುವು ದರ್ಶನವನ್ನಿತ್ತು ಒಂದು ಪುಷ್ಪವನ್ನು ಕೊಟ್ಟು ಇದನ್ನು ಲಿಂಗಕ್ಕೆ ಧರಿಸು ನಿನಗೆ ಒಳ್ಳೆಯದಾಗುವದೆಂದು ಹೇಳಿ ಹೋದನು, ಈ ವಿಷಯವನ್ನು ಗಂಡನಿಗೆ ತಿಳಿಸಿದಳು, ಆಗ ಸತಿ-ಪತಿಗಳಿರ್ವರೂ ಗುರು ದರ್ಶನಕ್ಕೆ ಹುಬ್ಬಳ್ಳಿಗೆ ಬಂದರು, ಅವರನ್ನು ನೋಡಿ ಗುರುವು ಬಸಪ್ಪನೆಂಬ ಸೊಗಸಾದ ಹೆಸರನ್ನು ಬಿಟ್ಟು ಬೇರೆ ನಾಮವನ್ನು ಏಕೆ ಧರಿಸಿಕೊಂಡಿರುವೆ ಎಂದು ಕೇಳಿದನು. ಅದಕ್ಕೆ ಅವನು ಸುಮ್ಮನೆ ನಿಂತನು, ಮತ್ತೆ ಗುರುವು ನೀನು ಹೇಳಿ ದಿದ್ದರೆ ನಾವು ಹೇಳುತ್ತೇವೆ ನೋಡು, ನಿನ್ನ ಮನಸ್ಸಿಗೆ ಶಾಂತಿ ಇಲ್ಲ, ಸರ್ವ ದೇವತೆಗಳಿಗೂ ಆಧಾರವಾದ ಇಷ್ಟಲಿಂಗವನ್ನು ತೊರೆದು, ಅನ್ಯ ದೈವಗಳಿಗೆ ನೀನು ಎರಗುತ್ತಿರುವೆ, ಲಿಂಗದಿಂದಲೆ ಜಗತ್ತು ಹುಟ್ಟಿರುವದು, ಸ್ಥಾವರ ಲಿಂಗವಾದರೂ ಈ ಲಿಂಗದಿಂದಲೇ ಒಂದು ಶಕ್ತಿಯನ್ನು ಪಡೆದುಕೊಂಡಿರುವುದು, ಇದನ್ನು ತಿಳಿದು ಕೊಂಡು ಲಿಂಗವನ್ನು ಪೂಜಿಸದೆ. ಅನ್ಯ ದೇವರಿಗೆ ಅಡ್ಡ ಬೀಳುವ ನಿನಗೆ ಯಾವ ನರಕವು ಸಿದ್ಧವಿರುವದೊ ನಾನು ಹೇಳಲಾರೆ ಎನ್ನಲು ಬಸಪ್ಪನು ಗುರುವಿನ ಪಾದಕ್ಕೆ ಮಣಿದು ಗುರುವೆ ನಿನ್ನ ಕೃಪೆಯಿಂದ ಎಲ್ಲವನ್ನು ತಿಳಿದುಕೊಂಡಿರುವೆನು, ನನ್ನಂತಹ ಅಜ್ಞಾನಿಯು ಯಾರೂ ಇಲ್ಲ, ನನ್ನ ಹೆಂಡತಿಯ ಸುಕೃತದಿಂದ ನಿನ್ನ ಪಾದವು ಲಭಿಸಿತು, ಇಂದಿನಿಂದ ನಾನು ಲಿಂಗವನ್ನು ಧರಿಸುವೆ ಅಲ್ಲದೆ ಅರ್ಚಿಸು ವೆನು, ನನ್ನ ಹೆಸರು ಮೊದಲಿನಂತೆಯೇ ಬಸಪ್ಪನೆಂದು ಧರಿಸಿಕೊಂಡು ಮೋಹನ ನೆಂಬುದನ್ನು ತೊರೆದು ವೀರಶೈವ ಪದ್ಧತಿಯಂತೆ ಬಾಳುವೆನೆಂದು ಪ್ರತಿಜ್ಞೆಗೈದನು ಅವನ ಹೆಂಡತಿಗೂ ಆನಂದವಾಯಿತು. ಈ ಲೀಲೆಯನ್ನೂ ಸಹ ಕಂಡ ಜನರು ಗುರುವನ್ನು ಕೊಂಡಾಡಿದರು,

ಬೆಂಗಳೂರಲ್ಲಿ ಆದಯ್ಯನೆಂಬ ಶ್ರೀಮಂತನು, ಸುಶೀಲೆಯೂ, ಸುಂದರಿಯಾದ ಮಾದಮ್ಮನೆಂಬ ಹೆಂಡತಿಯೊಡನೆ ಬಾಳುತ್ತಿದ್ದನು. ಇವನು ತನ್ನಲ್ಲಿರುವ ಧನದ ಮದದಿಂದ ಧರ್ಮನಿಂದಕನಾಗಿ ದುರ್ಗುಣಿಯಾಗಿ ಶಿವಭಕ್ತರಿಗೆ ಬೇಸರವಾದ ಜೀವನವನ್ನು ಸಾಗಿಸುತ್ತಿದ್ದನು. ಇಷ್ಟಾದರೂ ಅವನ ಶ್ರೀಮಂತಿಕೆಯು ಹೆಚ್ಚು ತ್ತಿತ್ತು, ಇದಕ್ಕೆ ಎಲ್ಲರೂ ಆಶ್ಚರ್ಯ ಪಡುತ್ತಿದ್ದರು, ಇವನ ಹೆಂಡತಿಯ ಸದ್ಗುಣಕ್ಕೆ; ಶಿವಭಕ್ತರು ಆನಂದಪಡುತ್ತಿದ್ದರು. ಹೀಗಿರುವಾಗ ಅವಳಿಗಿಂತಲೂ ರೂಪವತಿ

ಯಾದ ಒರ್ವ ಸ್ತ್ರೀಯಳು ಅವನ ಶ್ರೀಮಂತಿಕೆಗೆ ಒಲಿದು ಬಂದಳು, ನಂತರ ಅವಳು ಹಣವನ್ನು ಸೆಳೆಯ ಹತ್ತಿದಳು, ಅವಳನ್ನು ಶ್ರೀಮಂತನು ಹೆಂಡತಿಗೆ ತಿಳಿಯದಂತೆ ಬೇರೆ ಮನೆಯನ್ನು ಮಾಡಿ ಇಟ್ಟಿದ್ದನು. ಆ ಮೋಹಿನಿಯು ಬೇರೊಬ್ಬ ವಿಟನೊಡನೆ ಕೂಡಿಕೊಂಡು, ಮೋಸದಿಂದ ಆಸ್ತಿಯನ್ನು ಬರೆಯಿಸಿಕೊಂಡು ಆದಯ್ಯನನ್ನು ಹೊರ ಹಾಕಿದಳು. ಸಾಕಿದ ಬೆಕ್ಕು ಕಣ್ಮುಚ್ಚಿ ಹಾಲು ಕುಡಿದರೆ ಒಡತಿಗೆ ಕಾಣ ದಿರುವುವೆ? ಇಷ್ಟಾದರೂ ಧರ್ಮ ನಿಂದೆಯನ್ನು ಬಿಡಲಿಲ್ಲ, ಕಷ್ಟವು ತಪ್ಪಲಿಲ್ಲ; ಮಾದಮ್ಮನ ಯತ್ನವು ನದಿಗೆ ನೀರು ಚಲ್ಲಿದಂತೆ ವ್ಯರ್ಥವಾಯಿತು, ಬೇರೆಯವರ ಹೊಲದಲ್ಲಿ ದುಡಿಯಲಿಕ್ಕೆ ಹೋದಾಗ ಅಲ್ಲಿ ಮಣ್ಣಿನಲ್ಲಿ ಚೇಳುಗಳನ್ನು ಕಂಡು ಅದರ ಮಾಲಕನಿಗೆ ತಿಳಿಸಿದರು ಅವನು ನಿಮ್ಮ ಕಾಲ್ಗುಣದಿಂದ ಹೀಗಾಗಿದೆ ಎಂದು ಕೋಪದಿಂದ ನುಡಿದನು. ಅದಕ್ಕೆ ಗುರುಸಿದ್ಧೇಶ್ವರನ ಪರಮ ಭಕ್ತೆಯಾದ ಮಾದಮ್ಮನು ಇವು ಚೇಳುಗಳಲ್ಲ ಇವು ಬಂಗಾರದ ನಾಣ್ಯಗಳೆಂದು ನುಡಿಯಲು ಅವು ಬಂಗಾರದ ನಾಣ್ಯಗಳಾಗಿದ್ದವು. ಇದನ್ನು ಕಂಡ ಹೊಲದೊಡೆಯನು ಅವರಿಗೆ ಭೂಮಿಯನ್ನೇ ದಾನ ಮಾಡಿದನು. ಇದರಿಂದ ಆದಯ್ಯನಿಗೆ ಗುರುಸಿದ್ಧೇಶ್ವರನಲ್ಲಿ ಭಕ್ತಿ ಹುಟ್ಟಿ ಅವನನ್ನು ಕಾಣಲು ಹುಬ್ಬಳ್ಳಿಯ ಬಿಲ್ವವನಕ್ಕೆ ಬಂದು ಗುರುವಿಗೆ ನಮಸ್ಕರಿಸಿದನು, ಆಗ ಶ್ರೀಗುರುವು ಧರ್ಮವನ್ನು ನಿಂದಿಸಬಾರದು, ಧರ್ಮದಿಂದ ಜಗತ್ತು ಶಾಂತಿಯಿಂದ ಬಾಳುವುದೆಂದು ಬೋಧಿಸಿದನು, ಇದರಿಂದ ಆದಯ್ಯನು ತನ್ನ ಸತಿಯೊಡನೆ ಧರ್ಮವನ್ನು ನಂಬಿ; ಗುರುಭಕ್ತಿಯಿಂದ ಶಾಂತಿಯನ್ನು ಪಡೆದನು.

ಇತ್ತ ಗುರುಸಿದ್ಧೇಶ್ವರನು ಸಜ್ಜನರ ಸ್ತುತಿಗೆ ಹಿಗ್ಗದೆ ದುರ್ಜನರ ನಿಂದೆಗೆ ತಗ್ಗದೆ ಶಿವಪೂಜಾಲೋಲನಾಗಿ ಇರುವಾಗ, ಮೂರುಸಾವಿರದಯ್ಯನಿಂದ ಶರಣ-ಸಾಹಿತ್ಯದ ಪ್ರಚಾರದ ವಿಷಯವನ್ನು ಕೇಳಿ ಸಂತೋಷಪಟ್ಟನು, ಇಲ್ಲಿಗೆ ಹದಿಮೂರನೆಯ ಸಂಧಿಯ ವಿಚಾರ ಪೂರ್ಣವಾದುದು.



## ಹದಿನಾಲ್ಕನೆಯ ಸಂಧಿ

ಸೂಚನೆ :— "ಕರ್ತೃ ಗುರುಸಿದ್ಧೇಶ್ವರ"ನು ಸೊಸೆಯನ್ನು, ಭಕ್ತಿಯಿಂದ ಪ್ರಾರ್ಥಿಸಿದ ನಾರಿಯನ್ನೂ, ತುಂಟನಾದ ಮಗನನ್ನು ಕಾಪಾಡಿದನು, ಗೂಳಿಯ ಉಪಟಳವನ್ನು ತಡೆದನು.

ಬೇವಿನ ವೃಕ್ಷವು ಎಲ್ಲಿ ನೋಡಿದರು ಕಹಿ ಇರುವುದು, ಹಣ್ಣು ಮಾತ್ರ ಸಿಹಿ ಇರುವುದು, ಆದರೆ ಮಾನವನ ಜೀವನದಲ್ಲಿ ಆರಂಭದಿಂದ ಕೊನೆಯವರೆಗೂ ಕಷ್ಟಗಳು ಬಂದೇ ಬರುತ್ತವೆ, ನರನು ಮರಕ್ಕಿಂತ ಕಡೆಯೆ ? ಕರುಣೆಯಿಂದ ಕಾಪಾಡು ಶಿವನೆ.

ಮೂರುಸಾವಿರದಯ್ಯನು ಗುರುಸಿದ್ಧೇಶ್ವರನಿಗೆ ವಂದಿಸಿ ಅಪ್ಪಣೆಯಂತೆ ಶರಣ–ಸಾಹಿತ್ಯದ ಪ್ರಚಾರದಲ್ಲಿದ್ದನು. ಲಿಂಗಾನಂದದಲ್ಲಿ ಜಗದ್ಗುರು ಗುರು–ಸಿದ್ಧೇಶ್ವರನು ತಲ್ಲೀನನಾಗಿರಲು ಲೀಲೆಯೊಂದು ಘಟಿಸಿತು.

ಧಾರವಾಡದ ಮಹಾಮನೆಯವರ ಮನೆಯಲ್ಲಿ ಮಹಾಂತಪ್ಪನ ಹೆಂಡತಿಯಾಗಿ ಸೋಮಲಾದೇವಿ ಎಂಬ ಸ್ತ್ರೀಯಳು ಸುಶಿಕ್ಷಿತೆಯಾಗಿದ್ದಳು ಬಂದವರನ್ನು ಉಪಚರಿಸಿ ಗುಣವತಿ ಎನಿಸಿಕೊಂಡಿದ್ದಳು. ಇವಳ ಅತ್ತೆಯಾದ ಪದ್ಮಮ್ಮಳು ಇವಳಿಗೆ ಬಹಳ ಕಾಡುತ್ತಿದ್ದಳು. ಆದರೂ ತವರುಮನೆಯಿಂದ್ಯ ಧನವನ್ನು ತರಿಸಿ ದಾನ ಮಾಡುತ್ತಿದ್ದಳು. ಅತ್ತೆಯು ಒಂದುದಿನ ಬಾಗಿಲು ಹಾಕಿ ಸೊಸೆಯನ್ನು ಬಡಿಯುತ್ತಿದ್ದಳು. ಆ ಸಮಯದಲ್ಲಿಯೂ ಗುರುಸಿದ್ಧನನ್ನು ಸೋಮಲೆಯು ಸ್ಮರಿಸುತ್ತಿದ್ದಳು. ಇದರ ಬಲದಿಂದ ಎಲ್ಲಿಯೋ ಹೋಗಿದ್ದ ಮಹಾಂತಪ್ಪನಿಗೆ ಬಡಿತದ ನೋವು ಕಾಣಿಸಹತ್ತಿತು. ಆದ್ದರಿಂದ ಅವಸರದಿಂದ ಮನೆಗೆ ಬರಲು, ತಾಯಿಯು ಮಹಾಂತನನ್ನು ನೋಡಿ, ನಿನ್ನ ಹೆಂಡಿತಿಯು ವ್ಯಭಿಚಾರಿಣಿಯೆಂದು ದೋಷವನ್ನು ಹೊರಿಸಿದಳು, ಇಬ್ಬರೂ ಸೇರಿ ನಿರಪರಾಧಿಯಾದ ಸೋಮಲೆಯನ್ನು ಅರ್ಧರಾತ್ರಿಯಲ್ಲಿ ಹಾಳು ಹಗೆಯೊಂದರಲ್ಲಿ ದೂಡಿ ಕಲ್ಲು ಹಾಕಿ ಮುಚ್ಚಲು ಪ್ರಯತ್ನಿಸಲು ಪರಶಿವನು ಸತ್ಯವಂತರನ್ನು ಕಾಪಾಡುವದಕ್ಕಾಗಿ ವೃದ್ಧ ವೇಷದಿಂದ ಬಂದು ಜನರನ್ನು ಕೂಡಿಸಿ, ಸೋಮಲೆಯನ್ನು ಕಾಪಾಡಿದನು.

ಆಲೂರಲ್ಲಿ ಲಲಿತಮ್ಮ ಹಾಗು ಗುರುವಪ್ಪ ಎಂಬ ದಂಪತಿಗಳಿದ್ದರು. ಗಂಡನ ಹಿತಕ್ಕಾಗಿ ಸತಿಯು ಯಾವತ್ತು ಸತ್ಕರ್ಮಗಳನ್ನು ಆಚರಿಸುತ್ತಿದ್ದಳು, ಅದರಂತೆ ಒಂದು ಸಾರೆ ವರದ-ಶಂಕರ ಪೂಜೆಯ ನೇಮವನ್ನು ಕೈಕೊಂಡಳು, ಅದು ಗುರುವಪ್ಪನಿಗೆ ಸರಿಯೆನಿಸಿಸಲಿಲ್ಲ. ಆದ್ದರಿಂದ ಆ ಪುಸ್ತಕವನ್ನೇ ತೆಗೆದುಕೊಂಡು ಹೊರಗೆ ಹರಿದು ಹಾಕಿದನು, ಆದರೂ ಸತಿಯು ಮತ್ತೆ ಬೇರೆ ಪುಸ್ತಕವನ್ನು ತರಿಸಿ ವ್ರತವನ್ನು ನಡಿಸಿದಳು. ಆಗ ಗುರುವಪ್ಪನು ಅತೀ ಕೋಪದಿಂದ ಮಧ್ಯರಾತ್ರಿ

ಯಲ್ಲಿ ಸತಿಯನ್ನು ಹಾಗೂ ಪುಸ್ತಕವನ್ನು ತುಂಬಿದ ಹೊಳೆಯಲ್ಲಿ ಚಲ್ಲಿ ಮನೆಗೆ ಬಂದನು. ಆ ಹೊಳೆಯಲ್ಲಿ ಗಂಭೀರ ಧ್ವನಿಯಿಂದ "ಗುರುಸಿದ್ಧ" ಎಂದು ಕೂಗಿದಳು, ನಂಬಿ ಕರೆದೊಡೆ ಓ ಎನ್ನನೆ ಶಿವನು ?

ಆಗ ಗುರುಸಿದ್ಧೇಶನು ತನ್ನ ಭಕ್ತಳಿಗೆ ಮರದ ಸಹಾಯವನ್ನು ನೀಡಿ; ಅಂಬಿಗನಿಗೆ ಕನಸಿನಲ್ಲಿ ದರ್ಶನ ನೀಡಿ; ಸಮಾಚಾರವನ್ನು ತಿಳಿಸಿದನು, ಅರ್ಧರಾತ್ರಿ ಯಲ್ಲಿಯೇ ಅಂಬಿಗನು ದೀಪ ಹಿಡಿದು ನೋಡಲು ಸ್ತ್ರೀಯೊಬ್ಬಳು ಕಂಡಳು. ಅವಳನ್ನು ನಾವಿಯ ಸಹಾಯದಿಂದ ಪಾರು ಮಾಡಿದನು, ಗುರುಸಿದ್ಧೇಶ್ವರನ ಸನ್ನಿಧಿಯಲ್ಲಿ ಈ ವಿಷಯ ನಡೆಯಲು, ಗುರುವಪ್ಪನನ್ನು ನೋಡಿ ನಿನ್ನ ಹೆಂಡತಿಯು ಯಾವ ಕೆಟ್ಟ ಕೆಲಸಗಳನ್ನು ಮಾಡಿಲ್ಲ, ಅವಳು ವ್ರತಗಳನ್ನು ಆಚರಿಸುವದಾದರೆ ನಿನ್ನ ವಂಶದ ಕೀರ್ತಿಗಾಗಿ, ಹಾಗು ನಿನಗಾಗಿ ಎಂದರು. ಹಾಗೂ ಅವಳನ್ನು ನೋಡಿ, ನೀನು ಅನ್ಯ ವ್ರತಗಳನ್ನು ಆಚರಿಸಬೇಡ ಇಷ್ಟಲಿಂಗವನ್ನು ಪೂಜಿಸು ಹಾಗೂ ನಿನ್ನ ಪತಿಸೇವೆಯನ್ನು ಮಾಡು ಎಂದು ಹೇಳಿ,ಸಂಸಾರವನ್ನು ಸುಖಮಯ ವನ್ನಾಗಿ ಮಾಡಿದನು.

ಹಳ್ಯಾಳದಲ್ಲಿ ಒಂದು ಗೂಳಿಯು ಸೊಕ್ಕಿನಿಂದ ತಿರುಗುತ್ತಿತ್ತು. ಅದು ಕಟುವಾಳಿಯಿದ್ದುದರಿಂದ ಅದನ್ನು ದೇವರಿಗೆ ಕೊಟ್ಟಿದ್ದರು. ಅದರ ಹಾವಳಿಯು ಇನ್ನೂ ಹೆಚ್ಚಾಯಿತು. ಇದನ್ನು ಹಿಡಿಯಲು ಯಾರಿಗೂ ಸಾಧ್ಯ ವಾಗುತ್ತಿರಲಿಲ್ಲ. ಒಂದು ದಿನ ಬೀದಿಯಲ್ಲಿ ಬಾಲಕಿಯೊಬ್ಬಳು ಆಡುತ್ತಿರುವಾಗ ಎಲ್ಲಿಂದಲೋ ಗೂಳಿಯು ಬಂದಿತು. ಅದನ್ನು ಕಂಡು ಅವಳು ಘಟ್ಟಿಯಾಗಿ, "ಗುರುಸಿದ್ಧೇಶ, ಕಾಪಾಡು" ಎಂದು ಕೂಗಿದಳು. ಕೂಡಿದ ಜನರೆಲ್ಲರು ಗಾಬರಿ ಯಾದರು. ಅದು ಅವಳನ್ನು ಸಾವಕಾಶವಾಗಿ ಕೊಂಬಿನಿಂದ ಬೆನ್ನಮೇಲೆ ಹಾಕಿ ಕೊಂಡು ಬಿಲ್ವವನಕ್ಕೆ ಸಾಗಿ ಗುರುಸಿದ್ಧನ ಸನ್ನಿಧಿಯಲ್ಲಿ ನಿಂತಿತು, ಆ ಬಾಲಕಿಯ ಪಿತೃಗಳು ದುಃಖಿತರಾಗಿ ಓಡಿ ಬಂದಿದ್ದಾರೆ. ಆನಂದದಿಂದ ನಗುತ್ತಿರುವ ತಮ್ಮ ಮಗಳನ್ನು ಕಂಡು ಹರ್ಷಿತರಾಗಿ ಗುರುಸಿದ್ಧ ಗುರುದೇವನನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿದರು. ಗುರುವಿನ ಹಸ್ತಸ್ಪರ್ಶದಿಂದ ಗೂಳಿಯು ಅಂದಿನಿಂದ ತನ್ನ ಕೋಪವನ್ನು ತೊರಿದು ಶಾಂತತೆಯಿಂದ ಜೀವಿಸಿತು. ಇದನ್ನು ಕಂಡ ಭಕ್ತರು ಅನಂತ ರೀತಿಯಾಗಿ ಗುರುವನ್ನು ಕೊಂಡಾಡಿದರು. ನಂಬಿದವರನ್ನು ಕಾಪಾಡುವ ಹುಚ್ಚೀಶ, ಸರ್ವೇಶನೆಂದು.

ಬೆಳಗಾವಿಯಲ್ಲಿ ಚಿನ್ನಮ್ಮ ಶೀಲವಂತ ಎಂಬ ದಂಪತಿಗಳು ಅವರಿಗೆ; ಓರ್ವನೇ ಮಗ, ಅವನ ಹೆಸರು ಚನ್ನರಸ, ಅವನು ಬಲು ತುಂಟ, ಆಟ ಆಡುವಾಗ ಜಗಳ ಆಡಿ ಮನೆಗೆ ಬರುತ್ತಿದ್ದ, ಇದೇ ರೀತಿ ಬಾಲ್ಯದಿಂದಲೂ ಬಹು ಕಿಡಿಗೇಡಿಯಾಗಿ ತಂದೆ ತಾಯಿಗಳಿಗೆ ಅಪಕೀರ್ತಿಯನ್ನು ತರಹತ್ತಿದ, ಇದನ್ನು ನೋಡಿ ತಂದೆ-ತಾಯಿ

ಗಳು ಇಂತಹ ಮಗನನ್ನು ಕರುಣಿಸುವುದಕ್ಕಿಂತ, ಮಕ್ಕಳಾಗದಿದ್ದರೇನೆ ಸುಖವಾಗಿ ಇರುತ್ತಿದ್ದೆವು ಎಂದು ನಿತ್ಯಲೂ ಕಣ್ಣೀರು ಸುರಿಸುತ್ತಿದ್ದರು; ಅವನು ಪ್ರಾಯಕ್ಕೆ ಬಂದಾಗ ಇನ್ನೂ ದುರ್ಗುಣಗಳು ಹೆಚ್ಚಾದವು, ಅವನಿಗೆ ಗುರು ಹಿರಿಯರನ್ನು ನೆನೆಯುವ ಮನವಿಲ್ಲ,ಅವನಿಗೆ ವೇಶ್ಯೆಯರ ರೂಪವೆ ಅಹ್ಲಾದಕರ, ಅವರ ನುಡಿಗಳೆ ಅವನ ಕಿವಿಗಳಿಗೆ ಆನಂದ, ಹೀಗಿರುವಾಗ ಒಂದು ದಿನ ದುರ್ವ್ಯಸನಕ್ಕಾಗಿ ಹಣವನ್ನು ಕದಿಯುವಾಗ ತಂದೆಯು ಬಡಿದನು, ಮರಳಿ ತಂದೆಯನ್ನು ಬಡೆಯಲು ಕೈಯೆತ್ತಲು ಎಲ್ಲಿಂದಲೋ ಒಂದು ಸರ್ಪವು ಬಂದು ಚನ್ನರಸನ ಕೈಗಳನ್ನು ಬಿಗಿಯ ಲಾರಂಭಿಸಿತು, ಅದರ ಬಿಗಿತವನ್ನು ತಾಳಲಾರದೆ ಕೂಗಾಡಲು ತಾಯಿಯಾದ ಚಿನ್ನಮ್ಮನು ಗುರುಸಿದ್ಧೇಶನನ್ನು ಸ್ಮರಿಸು ಎಂದಳು, ತಾಯಿಯ ನುಡಿಯಲ್ಲಿ ವಿಶ್ವಾಸವಿಟ್ಟು ಗುರುನಾಮವನ್ನು ಸ್ಮರಿಸಿದನು ಆಗ ಸರ್ಪವು ಸಾವಕಾಶ ಬಿಟ್ಟು ಹೋಯಿತು, ಆ ಕ್ಷಣವೆ ತಂದೆ ತಾಯಿಗಳು ಮಗನನ್ನು ಕರೆದುಕೊಂಡು ಹುಬ್ಬಳ್ಳಿಗೆ ಬಂದು ಗುರುವಿಗೆ ಬೇಡಿಕೊಂಡರು ಅದಕ್ಕೆ ಗುರುವು, ನಿಮ್ಮ ಮೇಲೆ ಶಿವಕೃಪೆಯು ಹೆಚ್ಚಿರುವುದು ಇಂದಿನಿಂದ ನಿಮ್ಮ ಮಗನು ಗುಣವಂತನಾದನು, ಎಷ್ಟು ಶ್ರೀಮಂತಿಕೆ ಇದ್ದರೇನು ನೀರ ಮೇಲಿನ ಗುರುಳೆಯಂತೆ ಎಂಬುದಾಗಿ ಬೋಧಿಸುತ್ತ ಶಿವಪೂಜೆಗೆ ಸಾಗಿದನು ಇಲ್ಲಿಗೆ ಹದಿನಾಲ್ಕನೆಯ ಸಂಧಿಯು ಸಂಪನ್ನವಾಯಿತು.



## ಹದಿನೈದನೆಯ ಸಂಧಿ

ಸೂಚನೆ: ಮನರೋಗವನ್ನು, ಮಲರೋಗವನ್ನು, ಮೈಲಿಬೇನೆಯನ್ನು, ಘನ ರೋಗವನ್ನು ಕುಷ್ಟರೋಗವನ್ನು ಗುರುಸಿದ್ಧನು ಕಳೆದಿರುವನು.

ಕಬ್ಬಿನ ಹೊಲದಲ್ಲಿ ಆನೆ; ಆಡುಗಳನ್ನು ಹೊಗಿಸಿದರೆ ಸೊಗೆಯನ್ನು ಮೈಯ್ಯು ವುದು ಆಡು, ಕಬ್ಬನ್ನು ತಿನ್ನುವುದು ಆನೆ, ಅದರಂತೆ ವಿಷಯಕ್ಕೆ ಮೋಹಿತನಾಗದೆ ನಿತ್ಯಲೂ ಸತ್ಸಂಗದಲ್ಲಿರಿಸಿ ನಿನ್ನ ಪಾದಭಕ್ತಿಯನ್ನು ಕರುಣಿಸಿ, ಮನದ ಮಲಿನವ ಕಳೆ ಶಿವನೆ.

ಗುರುಸಿದ್ಧೇಶನು ಲಿಂಗ ಪೂಜಾಲೋಲನಾಗಿರುತ್ತಿದ್ದನು ಗುರುಸಿದ್ಧನ ಭಕ್ತನಾದ ದಾನಪ್ಪ ಎಂಬುವವನಿಗೆ ಒರ್ವ ಮಗನಿದ್ದನು ಅವನಿಗೆ ಕಿರಿಯ ವಯಸ್ಸಿನಲ್ಲಿಯೇ ವೈರಾಗ್ಯ ಉಂಟಾಗಿ ಮನೆಯನ್ನು ತೊರೆದನು, ಆಗ ದಾನಪ್ಪನಿಗೆ ತನ್ನ ವಂಶದ ಗತಿಯೇನೆಂದು ಚಿಂತೆ ಆವರಿಸಿತು ಗುರುವಿನ ಬಳಿಗೆ ತನ್ನ ಮಗನನ್ನು ಕರೆದುಕೊಂಡು ಬಂದು ಸಮಾಚಾರವನ್ನು ತಿಳಿಸಿದನು, ಅದಕ್ಕೆ ಗುರುವು ನಾಲ್ಕು

ದಿನ ನಿನ್ನಮಗನು ನನ್ನ ಸೇವೆಯನ್ನು ಮಾಡಲಿ, ಆಮೇಲೆ ಎಲ್ಲಾ ಸರಿಹೋಗುವುದು ನೀನು ನಡೆ ಎಂದು ತಂದೆಯನ್ನು ಕಳಿಸಿದನು.

ಒಂದುದಿನ ನಾಗರ ಸರ್ಪವು ತನ್ನ ರತ್ನವನ್ನು ಕೆಳಗಿಟ್ಟು ಆಹಾರಕ್ಕಾಗಿ ಸ್ವಲ್ಪದೂರ ಹೋಗಿತ್ತು ಅದನ್ನು ಆ ಶಿಷ್ಯನು ನೋಡಿ ತೆಗೆದುಕೊಂಡನು, ನಾಗರ ಹಾವು ರಭಸದಿಂದ ಬಂದು ಅವನ ಕಾಲಿಗೆ ಸುತ್ತಿಕೊಂಡಿತು, ಆಗ ಅವನು ಗುರುವನ್ನು ಸ್ಮರಿಸದೆ ತಂದೆಯನ್ನು ಸ್ಮರಿಸಲು ಗುರುವು ಒಗೆಯಲು ತಿಳಿಸಿದರು, ಆಗ ನಾಗರಹಾವು ಬಿಟ್ಟು ಹೋಯಿತು, ಅವನಿಗೆ ಗುರುಗಳು ಇನ್ನು ಪೂರ್ವಾಶ್ರಮದ ಆಶೆ ಇದೆ ಆದ್ದರಿಂದ ನೀನು ತಂದೆ ತಾಯಿಗಳ ಸೇವೆಯನ್ನು ಮಾಡಿ, ಗೃಹಸ್ಥನಾಗಿ ಜೀವನ ಸಾಗಿಸೆಂದು ಹೇಳಿ ಗೃಹಸ್ಥಾಶ್ರಮವು ಶ್ರೇಷ್ಠವೆಂದು ಅದರ ಮಹತ್ವವನ್ನು ತಿಳಿಸಿ ಅವನನ್ನು ಮನೆಗೆ ಕಳಿಸಿದನು, ಇದರಿಂದ ದಾನಪ್ಪನಿಗೂ ಆನಂದವಾಗಿದೆ.

ಬಂಕಾಪೂರದಲ್ಲಿ ಸಂಗಪ್ಪನೆಂಬುವನು ಮಲರೋಗದಿಂದ ಪರಿತಪಿಸುತ್ತಿದ್ದನು, ಅಗ್ನಿ, ಬಿಸಿಲು, ಜಲ, ಇವುಗಳನ್ನು ಕಂಡೊಡನೆ ಅದು ಹೆಚ್ಚಾಗಿ ಕಾಡುತ್ತಿತ್ತು, ಇದಕ್ಕೆ ಎಲ್ಲ ಯಾಂತ್ರಿಕರು ಬೇಸತ್ತು ಬಿಟ್ಟು ಹೋಗಿದ್ದರು, ಆ ರೋಗಿಯು ಗುರುಸಿದ್ಧ ನೀನೆ ಕಾಪಾಡೆಂದು ಬೇಡಿಕೊಂಡನು, ಆ ಭಕ್ತಿಯ ಪ್ರಭಾವದಿಂದ ಮಲರೋಗವು ವಾಸಿಯಾಯಿತು, ಸಂಗಪ್ಪನ ಅಣ್ಣನಾದ ಸಣ್ಣಪ್ಪನು ಆಸ್ತಿಯ ಪಾಲು ಬೇಕಾಯಿತಲ್ಲ ಎಂದು ತಿಳಿದು, ಆ ಸಂಗಪ್ಪನಿಗೆ ಮಾಟ ಮಾಡಿಸಿದನು; ಸಫಲವಾಗಲಿಲ್ಲ, ಅವನನ್ನು ಕೊಲೆ ಮಾಡಿಸಲು ಯೋಚಿಸಿದನು ಅದು ಫಲಕಾರಿಯಾಗದೆ ಹೋಯಿತು, ಅಲ್ಲದೆ ಆ ಪಾಪದಿಂದ ಸಣ್ಣಪ್ಪನು ಮಹಾರೋಗಿಯಾಗಿ ಬಳಲ ಹತ್ತಿದನು, ಈ ಪಾಪದಿಂದ ಬಳಲಿ ಬೆಂಡಾಗಿ ಗುರುಸಿದ್ಧನ ಸನ್ನಿಧಿಗೆ ಬಂದು ಬೇಡಿಕೊಂಡನು, ಅದಕ್ಕೆ ಗುರುವು ನೀನು ನಿನ್ನ ತಮ್ಮನಿಗೆ ಕೊಟ್ಟಿರುವ ತಾಪವೆ ನಿನಗೆ ಪಾಪವಾಗಿ ಕಾಡಿದೆ, ಅವನಲ್ಲಿ ನೀನು ಬೇಡಿಕೊ ಎಂದು ಹೇಳಿದನು. ಅದರಂತೆ ಸಣ್ಣಪ್ಪನು ಸಂಗಪ್ಪನನ್ನು ಬೇಡಲು ಅವನು ಕೂಡ ಗುರುವನ್ನು ಸ್ಮರಿಸೆಂದು ಹೇಳಿದನು, ಇದರಿಂದ ಅವರೀರ್ವರು ಸುಖವಾಗಿ ಬಾಳಿದರು.

ಕಡಪಟ್ಟಿ ಗ್ರಾಮದಲ್ಲಿ ಗುರುಶಾಂತಪ್ಪ, ನೆಂಬ ವೀರಶೈವನು, ಲಿಂಗವನ್ನು, ರುದ್ರಾಕ್ಷಿ, ಭಸ್ಮ ಧಾರಿಗಳನ್ನು ಕಂಡರೆ ಅಪಹಾಸ್ಯ ಮಾಡುತ್ತಿದ್ದನು, ಅವನ ಪತ್ನಿಯು ಸಹ ವೀರಶೈವರನ್ನು ನಿಂದಿಸುತ್ತಿದ್ದಳು, ಇವರಿಗೆ ಮಹಾಂತನೆಂಬ ಮಗ ನಿದ್ದನು ಅವನಿಗೆ ಐದು ವರ್ಷ ತುಂಬಲು, ಮೈಲಿ ಬೇನೆಯು ಬಂದಿತು, ಎಷ್ಟು ಉಪಚಾರ ಮಾಡಿದರೂ ಕಡಿಮೆಯಾಗಲಿಲ್ಲ. ತಂದೆ ತಾಯಿಗಳ ಕನಸಿನಲ್ಲಿ ದೇವತೆಗಳು ಬಂದು ಗುರುಸಿದ್ಧೇಶನನ್ನು ಧ್ಯಾನಿಸುತ್ತ ನೀವು ಬೂದಿಯನ್ನು ಲೇಪಿಸಿರೆಂದು

ತಿಳಿಸಿದರು, ದಂಪತಿಗಳು ಭಯಭಕ್ತಿಯಿಂದ ಅದರಂತೆ ಬೂದಿಯನ್ನು ಲೇಪಿಸಲು, ಮಗನು ಆನಂದದಿಂದ ಕುಣಿದಾಡಹತ್ತಿದನು ಇದರಿಂದ ಅವರಿಗೆ ಗುರು ಭಕ್ತಿಯು ಬೆಳೆದು ಹುಬ್ಬಳ್ಳಿಗೆ ಬಂದು, ವೀರಶೈವ ಸಿದ್ಧಾಂತವನು ತಿಳಿದು ಲಿಂಗಧಾರಿಗಳಾಗಿ ಭಕ್ತಿವಂತರಾಗಿ ಬಾಳಿದರು,

ಬೀಡ್ನಾಳದಲ್ಲಿ ವಿರುಪಾಕ್ಷಪ್ಪ ಎಂಬ ಧನಿಕನು ಮಹಾ ಪಾಪ ಕರ್ಮಗಳನ್ನು ಮಾಡಿದ್ದರಿಂದ ಅವನಿಗೆ ಶ್ವೇತ ಕುಷ್ಟರೋಗವು ಅಂಟಿತು ಅವನಿಗೆ ಕನ್ಯೆಯನ್ನು ಯಾರೂ ಕೊಡದಾದರು, ಬಾಂಧವರು ದೂರಾದರು ಇದರಿಂದ ಅವನ ಜೀವನವೆಲ್ಲ ಅಶಾಂತಿಮಯವಾಯಿತು, ಆಗ ಅಲ್ಲಿಯ ಭಕ್ತರಿಂದ ಗುರುಸಿದ್ಧೇಶನ ಮಹಿಮೆ ಗಳನ್ನು ಕೇಳುತ್ತಿದ್ದನು ಅದರಂತೆ ಗುರುವಿನ ನಾಮಸ್ಮರಣೆಯನ್ನು ಮಾಡಿ ರೋಗವನ್ನು ಕಳೆದುಕೊಂಡು, ಸಿರಿವಂತಿಕೆಯನ್ನು ವರ್ಧಿಸಿಕೊಂಡನೆಂಬಲ್ಲಿಗೆ, ಹದಿನೈದನೆಯ ಸಂಧಿಯು ಮುಗಿಯಿತು.



## ಹದಿನಾರನೆಯ ಸಂಧಿ

ಸೂಚನೆ : ಸ್ವಮತದಲ್ಲಿ ನಿಷ್ಠೆಯನು ಬೋಧಿಸಿದನು, ಗರತಿಯನ್ನು ಸಲುಹಿದನು.

ಮೊಸಳೆಯು ತನ್ನ ಸ್ಥಾನದಲ್ಲಿ ಇದ್ದರೆ ಆನೆಯನ್ನು ಕೂಡ ಎಳೆಯುವುದು, ಸ್ಥಾನಪಲ್ಲಟವಾದರೆ ಆ ಮೊಸಳೆಯನ್ನು ಒಂದು ನಾಯಿಗೂ ಕೂಡಾ ಹೆದರುವುದು, ಅದರಂತೆ ನಿನ್ನ ಪಾದವೇ ನನ್ನ ಸ್ಥಾನ, ಅಲ್ಲಿರಲು ನನಗೆ ಯಾವ ಭಯವಿಲ್ಲ,ಹೊರ ಹಾಕಿದರೆ, ಮಾಯೆಯೆಂಬ ನಾಯಿಯ ಭಯವೆನಗಿದೆ. ಕಾರಣ ಕರುಣೆಯಿಂದ ಕಾಪಾಡು ಶಿವನೆ:

ವೈಷ್ಣವನಾದ ಮಾಧವರಾಯನು ಗುರುಸಿದ್ಧನ ಸನ್ನಿಧಿಗೆ ಬಂದು ಲಿಂಗವನ್ನು ಧರಿಸಬೇಕೆಂಬ ಆಶೆ; ಶಿವಮತಕೆ ಸೇರಬೇಕೆಂಬ ಆಶೆ ಅದಕ್ಕೆ, ಲಿಂಗವನ್ನು ಕರುಣಿಸು ಎಂದು ಬೇಡಿದನು. ಅದಕ್ಕೆ ಗುರುವು ನಿನ್ನ ಮತದಲ್ಲಿಯೇ ನಿಷ್ಠೆಯಿಂದ ಬಾಳು, ಅದರಿಂದಲೇ ನಿನಗೆ ಮುಕ್ತಿ ದೊರೆಯುವುದೆಂದು ಹೇಳಿದನು, ವೈಷ್ಣವನಾದ ತುಕಾರಾಮನು ಹೆಂಡತಿ ಮಕ್ಕಳನ್ನು ಕೂಡಿಕೊಂಡು, ಹರಿಯನ್ನು ಭಜಿಸಿ, ಭಕ್ತರಿಗೆ ಭಕ್ತಿಯನ್ನು ತಿಳಿಸಿದನು, ಕೇಳು ಇದಕ್ಕೊಂದು ಚರಿತ್ರೆಯನ್ನು ಕುಂತಳ ದೇಶದಲ್ಲಿ ಚಂದ್ರಹಾಸನೆಂಬ ರಾಜನು; ಇವನು ವಿಷ್ಣು ಭಕ್ತನು, ಹುಟ್ಟಿದ ಕೂಡಲೆ ತಂದೆ ತಾಯಿಗಳನ್ನು ಕಳೆದುಕೊಂಡು ಸಾಲಿಗ್ರಾಮವನ್ನು ಪೂಜಿಸುತ್ತ ಅನ್ಯರಿಂದ ರಕ್ಷಣೆಯನ್ನು ಹೊಂದಿ ಕೊನೆಗೆ ರಾಜನಾಗಿ, ಭಕ್ತಿಯಿಂದ ಬಾಳಿದನಲ್ಲದೆ, ಕೀರ್ತಿ

ಶಾಲಿಯಾದನು ಹೀಗೆ ಯಾವ ಮತದವರೇ ಇರಲಿ,ಭಕ್ತಿವಂತರಾಗಬೇಕು ಭಕ್ತಿಯೇ ಹರನು, ಭಕ್ತಿಯೇ ಹರಿಯು, ಭಕ್ತಿಯೇ ಸರ್ವವು ಎಂದು ಹೇಳಿ ಅವರವರಿಗೆ ಅವರವರ ಮತವೇ ಶ್ರೇಷ್ಠವೆಂದು ಬೋಧಿಸಿದನು.

ಉಣಕಲ್ ಎಂಬ ಗ್ರಾಮದಲ್ಲಿ ಅಣ್ಣಪ್ಪನೆಂಬ ವೀರಶೈವನು ಕಡುಬಡವನು ಅವನು ಯಾವ ಉದ್ಯೋಗ್ಯ ಮಾಡಿದರು ಫಲಕಾರಿಯಾಗದೆ ಹೋಯಿತು, ಬಡತನ ಭೂತಕ್ಕೆ ಬೆದರಿ ಬೇರೆ ಮತಕ್ಕೆ ಸೇರಿದರೆ ಬೇಡಿದ ಅನೂಕೂಲ ಮಾಡಿಕೊಡುವರೆಂದು ತಿಳಿದು ತನ್ನ ತಂದೆಯನ್ನು ಕೇಳಿದನು. ತಂದೆ ತಾಯಿಗಳು ಇಬ್ಬರೂ ಒಪ್ಪಲಿಲ್ಲ ಆಗ ಎಲ್ಲರೂ ಭಕ್ತಿಯಿಂದ ಕರ್ತೃ ಗುರುಸಿದ್ಧೇಶನನ್ನೇ ಬೇಡಿಕೊಂಡರು, ಅದರಿಂದ ಅವರ ಬಡತನವು ಕಳೆದು ಶ್ರೀಮಂತರಾಗಿ ಗುರುಸಿದ್ಧನ ಭಕ್ತರಾಗಿ ಬಾಳಿ ಶಾಂತಿಯನ್ನು ಪಡೆದರು.

ಹುಬ್ಬಳ್ಳಿಯಲ್ಲಿ ಶಾಂತಪ್ಪನೆಂಬುವನು ವಿಮಲೆಯೆಂಬುವ ಮಗಳನ್ನು ಪಡೆದುಕೊಂಡು ಬಾಳುತ್ತಿದ್ದನು; ಅವಳು ಗುಣವತಿಯು, ವಿದ್ಯಾವತಿಯೂ ಸಾಧ್ವಿಯು ಆಗಿದ್ದಳು, ಆದರೂ ಇವಳಿಗೆ ತಕ್ಕ ವರನೆ ಸಿಕ್ಕಿರಲಿಲ್ಲ ಬಂದ ವರಗಳಿಗೆ ತಂದೆ ತಾಯಿಗಳು ದೋಷವನ್ನು ಆರಿಸುತ್ತಿದ್ದರು, ಎಷ್ಟೋ ವರಗಳು ಅವಳ ರೂಪಕ್ಕೆ ಮೆಚ್ಚಿ ಬಂದಿರಲು, ಅವರ ಕೃತಿಗೆ ಮನದಲ್ಲಿಯೆ ಮರುಗಿ ಮರಳಿ ಹೋಗುತ್ತಿದ್ದರು ಒಂದು ಸಾರೆ ಒರ್ವನು ಬಂದು ಇವಳನ್ನು ನನಗೆ ಕೊಟ್ಟರೆ ಸರಿ ಇಲ್ಲವಾದರೆ ಬಲಾತ್ಕಾರದಿಂದಾದರು ಇವಳನ್ನು ವಶ ಮಾಡಿಕೊಳ್ಳುವೆನೆಂದು ಹೇಳಿದನು, ತಂದೆ ತಾಯಿಗಳು ಗಾಭರಿಯಾಗಿ ಅವನನ್ನೂ ತಮ್ಮ ಮಗಳನ್ನೂ ಕೂಡಿಕೊಂಡು ಗುರುಸಿದ್ಧನ ಸನ್ನಿಧಿಗೆ ಬಂದರು. ಗುರುವು ವಿಷಯವನ್ನು ತಿಳಿದು ಇವನಿಗೇನೆ ನಿಮ್ಮ ಮಗಳನ್ನು ಕೊಟ್ಟು ವಿವಾಹ ಮಾಡಿರಿ, ಬಣ್ಣಕ್ಕೆ ಮನಸೋಲಬಾರದು ಇವನು ಗುಣವಂತನಿರುವನು, ಬಣ್ಣಕ್ಕೆ ಸೋತವರ ಕಥೆಯನ್ನು ಕೇಳಿರೆಂದು ಹೇಳಿದನು.

ಪೂರ್ವಕಾಲದಲ್ಲಿ ಮಣಿಭದ್ರನೆಂಬುವವನು ಅತಿರೂಪವತಿಯಾದ ಸ್ತ್ರೀಯಳನ್ನು ಮದುವೆ ಮಾಡಿಕೊಂಡಿದ್ದನು, ಆದ್ದರಿಂದ ತನ್ನ ಮನೆಗೆ ಯಾರನ್ನು ಕರೆದುಕೊಂಡು ಬರುತ್ತಿರಲಿಲ್ಲ, ಒಮ್ಮೆ ಬ್ರಾಹ್ಮಣನೋರ್ವನು ಊಟಕ್ಕೆ ಬಂದನು. ಅವನಿಗೆ ಮಣಿಭದ್ರನು ಊಟಕ್ಕೆ ಕುಳಿತಾಗ ನನ್ನ ಹೆಂಡತಿಯ ಮುಖವನ್ನು ನೋಡಕೂಡದು, ಎಂದು ಆಜ್ಞಾಪಿಸಿ ಊಟಕ್ಕೆ ಕರೆದುಕೊಂಡು ಕುಳಿತನು, ಊಟದ ಸಮಯದಲ್ಲಿ ಬಡಿಸಲು ಬಂದ ಸ್ತ್ರೀಯಳ ಪಾದದ ಬಣ್ಣಕ್ಕೆ ಮನಸೋತು ಆಜ್ಞೆಯನ್ನು ಮರೆತು ಅವಳ ಮುಖವನ್ನು ನೋಡಿದನು, ಆಗ ಮಣಿಭದ್ರನು ಕನಿಕರವಿಲ್ಲದೆ ಅವನನ್ನು ದಂಡಿಸಿ ಹೊರಗೆ ಹಾಕಿದನು, ಇದರಿಂದ ಆ ಬ್ರಾಹ್ಮಣನು ಸೂರ್ಯನನ್ನು ಕುರಿತು ತಪಸ್ಸು ಮಾಡಿ ಇಚ್ಛಿತವರಗಳನ್ನು ಪಡೆದು, ದ್ವಿತಿಯ

ಮಣಿ ಭದ್ರನಾಗಿ ಅವನ ಮನೆಯನ್ನು ಸೇರಿ ಅವಳನ್ನು ಭೋಗಿಸಿದನು ಇದರಿಂದ ಎಲ್ಲರೂ ನಿಜವಾದ ಮಣಿಭದ್ರನನ್ನು ಒಡಿದು ಕಳುಹಿಸಿದರು, ಆಯುಷ್ಯ ತೀರಲು ಮಣಿಭದ್ರರೀರ್ವರು ಮಡಿದು ಹೋದರೆಂದು ಗುಣವು ಬಣ್ಣಕ್ಕಿಂತಲೂ ಶ್ರೇಷ್ಠವೆಂದು ಹೇಳಿ ಕರುಣೆಯಿಂದ ಅವರೆಲ್ಲರನ್ನು ಕಾಪಾಡಿದನು. ಎಂಬವಲ್ಲಿಗೆ ಹದಿನಾರನೆಯ ಸಂಧಿಯು ಸಮಾಪ್ತಿ ಆಯಿತು.



## ಹದಿನೇಳನೆಯ ಸಂಧಿ

ಸೂಚನೆ: ಕುಮಾರರಾರ್ಯನೆಂಬ ಮಹೇಶ್ವರನಿಗೆ ಏಕೋತ್ತರ ಶತಸ್ಥಲದಲ್ಲಿರುವ ಳಳ ಅಂಗಸ್ಥಲಗಳ ವಿಚಾರವನ್ನು ಹೇಳಿದನು.

ಕಲ್ಲಾಗಿ, ಮಣ್ಣಾಗಿ, ಗಿಡಬಳ್ಳಿಗಳಾಗಿ, ಹುಲ್ಲಾಗಿ. ಕ್ರಿಮಿಕೀಟಗಳಾಗಿ ಪಶು–ಪಕ್ಷಿಗಳಾಗಿ, ಮೃಗವಾಗಿ, ಮಾನವನಾಗಿ, ಭಕ್ತನಾಗಿ ನಿನ್ನ ಪಾದಕ್ಕೆ ಸಲ್ಲಿರುವೆನು ಮತ್ತೆ ಮರಳದಂತೆ ನಿನ್ನ ಪಾದದಲ್ಲಿರಿಸಿ ಕಾಪಾಡು, ಇಲ್ಲವಾದರೆ ಗುರುವಾಗಿ ಬಂದು ತಿಳಿಸು ಶಂಕರ,

ಶಿವಪೂಜೆಯನ್ನು ಮುಗಿಸಿ ಕುಳಿತ ನಂತರ ಕುಮಾರಾರ್ಯನು ಬಂದು ನಮಸ್ಕರಿಸಿ, ಹೇ ಜಗದ್ಗುರುವೆ ವೀರಶೈವ ಸಿದ್ಧಾಂತದೊಳಗಿರುವ ನೂರೊಂದು ಸ್ಥಲಗಳ ವಿಚಾರವನ್ನು ತಿಳಿಸೆಂದು ಬೇಡಿಕೊಂಡನು.

ಎಂಟು ವರ್ಷದ ಬಾಲಕನಾದ ಈ ಕುಮಾರಾರ್ಯನ ನುಡಿಯನ್ನು ಕೇಳಿ ಆನಂದವಾಗಿ, ಶಿವನಪ್ಪಣೆಯನ್ನು ಪಡೆದು ಬಂದ ಷಣ್ಮುಖನೆ ಇವನೆಂದು ತಿಳಿದು ಶಿವಸಿದ್ಧಾಂತವನ್ನು ಹೇಳತೊಡಗಿದನು.

ಜಗತ್ತು ಯಾವುದರಿಂದ ಹುಟ್ಟಿ, ಯಾವುದರಿಂದ ರಕ್ಷಿತವಾಗಿ ಯಾವುದರಲ್ಲಿ ಅಡಗುವುದೊ ಅದಕ್ಕೆ ನಮ್ಮವರು ಸ್ಥಲವೆಂದು ಕರೆಯುವರು ಇದೆ ಲಿಂಗ, ಇದೇ ಅಂಗ, ಇದು ಮೂರಾಗಿ, ನಂತರ ಆರಾಗಿ ಮತ್ತು ಒಂಭತ್ತಾಗಿ ಏಕೋತ್ತರವಾಗುವುದು, ಅವುಗಳಲ್ಲಿ ಮೊದಲು ಳಳ ಅಂಗ ಸ್ಥಲಗಳ ವಿಚಾರವನ್ನು ಕೇಳು,

ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂದು ಆರು ಭೇದಗಳಿರುವವು, ಅದರಲ್ಲಿ ನಾಲ್ವತ್ನಾಲ್ಕು ಭೇದಗಳಾಗುವವು, ಭಕ್ತ ಸ್ಥಲದಲ್ಲಿ

ಹದಿನೈದು ಭೇದಗಳು, ಪಿಂಡ, ಪಿಂಡಜ್ಞಾನ, ಸಂಸಾರ ಹೇಯು, ಗುರು–ಕಾರುಣ್ಯ ಲಿಂಗ ಧಾರಣ, ಭಸ್ಮ-ಧಾರಣ, ರುದ್ರಾಕ್ಷಧಾರಣ, ಮಂತ್ರಪಠನ, ಭಕ್ತ–ಮಾರ್ಗ ಕ್ರಿಯಾ, ಉಭಯ, ತ್ರಿವಿಧ ಸಂಪತ್ತಿ, ಪ್ರಸಾದ-ಸ್ವೀಕಾರ, ಸೋಪಾಧಿದಾನ, ನಿರುಪಾಧಿದಾನ, ಸಹಜದಾನ, ಇವುಗಳನ್ನು ಶಿವಭಕ್ತನ ಅಂಗನೆಂದು ತಿಳಿಯ ಬೇಕು ಅನಂತ ಜನ್ಮಗಳ ಪಾಪವಳಿದು ಪುಣ್ಯಾತ್ಮನಾಗಿ ಶೋಭಿಸುವವನೆ ಪಿಂಡನು, ಶರೀರ–ಆತ್ಮಗಳ ಸುವಿಚಾರಿಯೆ ಪಿಂಡಜ್ಞಾನಿಯು; ಸತಿಸುತರಿಂದಾಗುವ ಅಲ್ಪ ಸುಖವನ್ನು ತ್ಯಜಿಸುವವನೆ, ಸಂಸಾರ ಹೇಯಿಯು, ಶಿವ–ಸ್ವರೂಪಿಯಾದ ಗುರುವಿನ ಸೇವೆಯನ್ನು ಮಾಡುವವನೆ, ಗುರುಕಾರುಣ್ಯ, ಗುರು ಕೊಟ್ಟ ಇಷ್ಟಲಿಂಗವನ್ನು ಭಕ್ತಿಯಿಂದ ಧರಿಸುವುದೇ, ಲಿಂಗಧಾರಣವು; "ಗೋಮಯದಿಂದ ತಯಾರಿಸಿದ ವಿಭೂತಿಯನ್ನು ಕ್ರಮದಿಂದ ಧರಿಸುವದೆ ಭಸ್ಮಧಾರಣವು.

ಶಿವನ ಅಕ್ಷಿಗಳಿಂದ ಜನಿಸಿದವುಗಳು; ಕ್ರಮವರಿತು ಧರಿಸುವುದೆ ರುದ್ರಾಕ್ಷ ಧಾರಣವು;

ಶಿವನಾಮವಾದ ಈ ಮಂತ್ರವನ್ನು ಕ್ರಮದಿಂದ ಪಠಿಸುವುದೆ; ಮಂತ್ರ ಪಠಣವು ನಿಷ್ಠೆಯೇ ಭಕ್ತಿ ಭಕ್ತಿಯುಳ್ಳವನೇ ಭಕ್ತನಾಗುವುನು, ಯಾರನ್ನು ನಿಂದಿಸದಿಹುದೆ, ಭಕ್ತ ಮಾರ್ಗ ಕ್ರಿಯೆಯು,

ಗುರುವಿನ ಅಪ್ಪಣೆಯೆ, ಶಿವನಪ್ಪಣೆಯೆಂದು ತಿಳಿಯುವುದೆ ಉಭಯವು, ಜಂಗಮನೇ ಮೂರುಲೋಕಕ್ಕೆ ಶ್ರೇಷ್ಠ ಅವನೆ ತ್ರಿಮೂರ್ತಿ ಸ್ವರೂಪವೆಂದು ತಿಳಿಯುವದೆ ತ್ರಿವಿಧ ಸಂಪತ್ತಿಯು,

ಭಕ್ತನಾದವನು ಗುರು–ಲಿಂಗ-ಜಂಗಮರ ಪಾದೋದಕವನ್ನು ಹೇಗೆ ಕೊಳ್ವನೊ ಹಾಗೆ ಅವರ ಪ್ರಸಾದವನ್ನು ಕೂಡ ಪಡೆಯುವದೆ ಪ್ರಸಾದ-ಸ್ವೀಕಾರವು,
ಫಲಾಪೇಕ್ಷೆಯಿಂದ ದಾನಮಾಡುವುದು, ಸೋಪಾಧಿ ದಾನವು;
ನಿರಪೇಕ್ಷೆಯಿಂದ ದಾನಮಾಡುವುದು, ನಿರುಪಾಧಿ ದಾನವು,
ಜಂಗಮನೆ ಶಿವನೆಂದು ತಿಳಿದು ಸರ್ವವನ್ನು ಅರ್ಪಿಸುವುದು ಸಹಜ ದಾನವು;

ಇನ್ನು ಎಲೈ, ಕುಮಾರದೇವನೆ ಮಹೇಶ ಸ್ಥಲದಲ್ಲಿ ಒಂಭತ್ತು ಪ್ರಕಾರ ಇರುವದು ಅವುಗಳ ಹೆಸರುಗಳನ್ನು ಕೇಳು,

ಮಹೇಶ ಪ್ರಶಂಸೆ, ಲಿಂಗ ನಿಷ್ಠೆ, ಪೂರ್ವಾಶ್ರಯ ನಿರಸನ ಸರ್ವಾದ್ವೈತ ನಿರಸನ; ಆವ್ಹಾನ ನಿರಸನ; ಅಷ್ಟಮೂರ್ತಿ ನಿರಸನ; ಸರ್ವಗತ್ವ ನಿರಸನ; ಶಿವ–ಜಗನ್ಮಯ; ಭಕ್ತ–ದೇಹಿಕ; ಇವುಗಳ ವಿಸ್ತಾರಗಳನ್ನು ಕೇಳಿರಿ. ಪರವು, ಪರ–ಧನವ ತ್ಯಜಿಸಿ, ಷಡರ್ಥ ಸಂಗ್ರಹದಲ್ಲಿರುವುದೆ, ಮಹೇಶ ಪ್ರಶಂಸೆ; ಪಡೆದ ಲಿಂಗವನ್ನು ಅಗಲದೆ ನಿಷ್ಠೆಯಿಂದ ಧರಿಸುವುದೆ, ಲಿಂಗ ನಿಷ್ಠಾಸ್ಥಲ; ಬ್ರಹ್ಮ ಸೃಷ್ಟಿಗೆ

ಸಂಬಂಧವಾದ ವಿಷಯವನ್ನು ತ್ಯಜಿಸಿ, ಶಿವಸೃಷ್ಟಿಯಲ್ಲಿ ಸೇರಿ ಶಿವಧರ್ಮವನ್ನು ಉಜ್ವಲಗೊಳಿಸುವುದೆ, ಪೂರ್ವಾಶ್ರಯ-ನಿರಸನ ಸ್ಥಲವು; ವೀರಮಹೇಶ್ವರನೆ ಸರ್ವ ಶ್ರೇಷ್ಠನೆಂದು ತಿಳಿದುಕೊಳ್ಳುವುದೆ ಸರ್ವಾದ್ವೈತ ನಿರಸನವು,ಶಿವಸ್ವರೂಪಿಯಾದವನು ಆವ್ಹಾನ ವಿಸರ್ಜನೆ ಮಾಡಬಾರದು, ಇದುವೆ ವೀರಶೈವರ ಆವ್ಹಾನ ನಿರಸನ ಸ್ಥಲ, ಪೃಥ್ವಿ, ಅಪ್ಪು, ವಾಯು, ತೇಜ, ಆಕಾಶ, ಸೂರ್ಯ, ಚಂದ್ರ, ಪ್ರಾಣ ಇವು ಎಂಟು.

ಶಿವನಿಗೆ ಬಿನ್ನವೆಂದು ತಿಳಿಯುವುದನೇ, ಅಷ್ಟಮೂರ್ತಿ ನಿರಸನವು, ಇಷ್ಟ ಲಿಂಗವೇ ಶಿವನೆಂದು, ಇದುವೆ ಸರ್ವಶ್ರೇಷ್ಠವೆಂದು ತಿಳಿಯುವುದೆ ಸರ್ವಗತ್ವ ನಿರಸನ; ಸ್ಥಲವು, ಲಿಂಗವೆ ಶಿವ, ಶಿವನೆ ಜಗತ್ತೆಲ್ಲ ತುಂಬಿರುವನೆಂದು ವಿಶಾಲ ಭಾವನೆಯಿಂದ ಪೂಜಿಸುವುದೆ ಶಿವಜಗನ್ಮಯ ಸ್ಥಲ, ಆಗಮದಲ್ಲಿ ಹೇಳಿದಂತೆ, ಶಿವನು ವಿಶ್ವವನ್ನು ವ್ಯಾಪಿಸಿರುವಂತೆ ಭಕ್ತನ ದೇಹದಲ್ಲಿ ವ್ಯಾಪಿಸಿಕೊಂಡು ಭಕ್ತ ಮೋಹಿಯಾಗಿರುವನು, ಇದುವೆ ಭಕ್ತ-ದೇಹಿಕ ಸ್ಥಲವು, ಇನ್ನು ಪ್ರಸಾದ ಸ್ಥಲದ ಏಳು ಉಪಭೇದಗಳು.

ಪ್ರಸಾದ-ಮಹಾತ್ಮೆ, ಗುರು-ಮಹಾತ್ಮೆ, ಲಿಂಗ-ಮಹಾತ್ಮೆ, ಜಂಗಮ-ಮಹಾತ್ಮೆ, ಭಕ್ತ-ಮಹಾತ್ಮೆ, ಶರಣ-ಮಹಾತ್ಮೆ, ಶಿವಶೇಷಮಹಾತ್ಮ; ಪ್ರಸಾದವನ್ನು ಲಿಂಗಕ್ಕೆ ನಿವೇದಿಸಿ ಸೇವಿಸುವುದೆ, ಪ್ರಸಾದ ಮಹಾತ್ಮೆ ಶಿವನೆ, ಗುರುವೆಂದು ಶಿವನೆ ಶಿವಯೋಗಿಯೆಂದು, ಅನನ್ಯ ಭಕ್ತಿಯಿಂದ ಇರ್ವರಲ್ಲಿ ಭೇದವನ್ನರಿಯದೆ ಪ್ರಸಾದ ವನ್ನು ಸ್ವೀಕರಿಸುವುದೇ ಗುರು ಮಹಾತ್ಮೆ ಗುರುವಿನ ಸಂಗದಿಂದ ಜ್ಞಾನವು ಸಿಗುವುದು, ಈ ಜ್ಞಾನವೆ ಲಿಂಗವು, ಈ ಲಿಂಗವು ಶಿವ-ಶಕ್ತಿಯಿಂದ ಕೂಡಿರುವುದು ಇದುವೆ ಲಿಂಗ ಮಹಾತ್ಮೆಯು, ಲಿಂಗ ಕಲೆಯೆ ಜಂಗಮ ಇವನು ಸ್ವರೂಪವೆಂದು ತಿಳಿವುದೆ ಜಂಗಮ ಮಹಾತ್ಮೆ ಗುರು, ಲಿಂಗ, ಜಂಗಮರ, ಸಂಗದಿಂದ ಕಾಮಾದಿ ಗಳನ್ನು ಜಯಿಸಿ ಶಿವ-ಮೋಹಿ ಎನಿಸಿಕೊಳ್ಳುವುದೇ ಭಕ್ತ-ಮಹಾತ್ಮೆಯು; ಗುರು-ಹಿರಿಯರಿಂದ ಸದ್ಬೋಧೆಯನ್ನು ಪಡೆದು ಪಾಪ ಸಮುದಾಯಗಳಿಂದ ದೂರಿರುವದು ಇದುವೆ ಶರಣ-ಮಹಾತ್ಮೆಯು; ಗುರು, ಲಿಂಗ, ಜಂಗಮ ನಿಷ್ಠೆಯುಳ್ಳವನಿಗೆ ಶಿವ ಕರುಣೆಯಾಗುವುದು. ಆ ಕರುಣೆಯೆ ಸುಪ್ರಸಾದವೆನಿಸುವುದು, ಅದರಿಂದ ಸಕಲ ಸಂಪತ್ತು ದೊರೆಯುವುದು ಇದುವೆ ಶಿವಶೇಷ ಮಹಾತ್ಮೆ;

ಇನ್ನು ಪ್ರಾಣಲಿಂಗ ಸ್ಥಲದ ಐದು ಉಪಭೇದಗಳನ್ನು ತಿಳಿದಿಕೋ; ಪ್ರಾಣ ಲಿಂಗಿ ಸ್ಥಲ; ಪ್ರಾಣ-ಲಿಂಗಾರ್ಚನ; ಶಿವಯೋಗ ಸಮಾಧಿ; ಲಿಂಗ ಸ್ಥಲ ಅಂಗ ಲಿಂಗ ಸ್ಥಲ; ಪ್ರಾಣ-ಅಪಾನಗಳ ಸಂಗದಿಂದ ನಾಭಿಯಲ್ಲಿ ಕಾಣುವ ಚೇತನವೆ ಪ್ರಾಣಲಿಂಗವು; ಷೋಡಶೋಪಚಾರಗಳಿಂದ, ಹೃದಯ ಕಮಲದಲ್ಲಿ ಚಿತ್‌ಕ್ರಿಯೆ

ಗಳನ್ನು ಅರ್ಚಿಸುವುದೆ ಪ್ರಾಣಲಿಂಗಾರ್ಚನವುಪ್ರಾಣಲಿಂಗಾರ್ಚನೆಯು ಸದಾ ನಡೆದು ಕೊನೆಗೆ ಸಮಾಧಿ ಸ್ಥಿತಿಯನ್ನು ಹೊಂದಿಕೊಂಡಿರುವುದೆ ಶಿವಯೋಗ ಸಮಾಧಿಯು; ಶಿವನೇ ಲಿಂಗವಾಗಿ ಕರಸ್ಥಲಕ್ಕೆ ಬಂದಿರುವನೆಂದು ಧೃಡವಾಗಿ ನಂಬುವುದೆ ಲಿಂಗ ನಿಜ ಸ್ಥಲ; ಅಂಗಲಿಂಗಗಳ ಹೆಸರುಗಳನ್ನು ತಿಳಿದುಕೊಂಡು, ಅಂಗವು ಲಿಂಗದಲ್ಲಿ ಲಿಂಗವು ಅಂಗದಲ್ಲಿ ಬೆರೆಯುವುದೇ ಅಂಗ ಲಿಂಗ ಸ್ಥಲವು; ಕರ್ತೃ ಗುರುಸಿದ್ಧೇಶ್ವರನು ಎಲೈ ಕುಮಾರಾರ್ಯನೆ ಕೇಳೆಂದು ಶರಣ ಸ್ಥಲದ ನಾಲ್ಕು ಉಪಭೇದಗಳನ್ನು ತಿಳಿಸಿದನು; ಶರಣ ಸ್ಥಲ; ತಾಮಸ-ನಿರಸನ-ಸ್ಥಲ; ನಿರ್ದೇಶ-ಸ್ಥಲ; ಶೀಲಸಂಪಾದನೆ ಸ್ಥಲ ಶರಣ-ಸತಿಯಾಗಿ, ಲಿಂಗ ಪತಿಯಾಗಿ ಶಿವನನ್ನು ನಂಬಿ ಬಾಳುವುದೆ ಶರಣ ಸ್ಥಲವು; ತಪಸ್ಸನ್ನು ಆಚರಿಸುವಾಗ ಅದನ್ನು ಕೆಡಿಸುವ ಕಾಮಾದಿಗಳ ಬಾಧೆಯನ್ನು ಕಳೆದುಕೊಳ್ಳುವುದೆ ತಾಮಸ ನಿರಸನ ಸ್ಥಲವು; ಗುರುವಾದವನು, ಕಾಮಾದಿಗಳ ಭಯಗಳನ್ನು ಬಿಡಿಸಿ, ಕರುಣೆಯನ್ನು ಧೃಡಪಡಿಸುವುದೆ ನಿರ್ದೇಶನ ಸ್ಥಲವು.

ಪತಿವೃತೆಯಾದ ಸ್ತ್ರೀಯಳಿಗೆ ಪತಿಯೇ ಹೇಗೆ ಶ್ರೇಷ್ಠವು ಹಾಗೆ ಲಿಂಗವೆ ಸ್ಥಲ ಲಿಂಗ ತತ್ತ್ವವೆ ಶ್ರೇಷ್ಠವೆನ್ನುವುದೆ ಶೀಲಸಂಪಾದನೆಯು; ಇಲ್ಲಿಗೆ ನಾಲವತ್ತುಗಳಾದವು ಇನ್ನು ನಾಲ್ಕು ಸ್ಥಲಗಳನ್ನು ತಿಳಿದಿಕೊ ಐಕ್ಯಸ್ಥಲದ ನಾಲ್ಕು ಉಪಭೇದಗಳು; ಐಕ್ಯಸ್ಥಲ, ಆಚಾರ ಸಂಪತ್ತಿಸ್ಥಲ ಏಕ ಬಾಜನ ಸ್ಥಲ; ಸಹ ಭಾಜನ ಸ್ಥಲ; ಜಗತ್ತೆಲ್ಲವು ಲಿಂಗ ಸ್ವರೂಪವೆಂದು ತಿಳಿಯುವುದೆ ಐಕ್ಯಸ್ಥಲವು, ಶಿವಚಿಂತನೆಯು ಸದಾ ಮನದಲ್ಲಿ ನೆಲಿಸಿರುವುದೆ,ಆಚಾರ ಸಂಪತ್ತಿಸ್ಥಲವು, ಜೀವವೆ ಶಿವನೆಂದು ತಿಳಿದು ಏಕತ್ವದಿಂದ ಬಾಳುವುದೇ ಏಕಭಾಜನ ಸ್ಥಲವು, ಶಿವನೆ-ಗುರುವು. ಗುರುವೆ ಶಿವನು ಶಿವಮಯವಾಗಿ ಬಾಳುವುದೆ ಸಹಭಾಜನ ಸ್ಥಲವು, ಇಲ್ಲಿಗೆ ಅಂಗಸ್ಥಲಗಳು ಸಂಪೂರ್ಣ ಹೊಂದಿದವೆಂದು, ಗುರುವು ಶಿವಪೂಜೆಗೆ ತೆರಳಿದನು, ಕುಮಾರಾರ್ಯನಿಗೆ ಶಿವ ಸಾಹಿತ್ಯವನ್ನು ಕೇಳಿ ಆನಂದವಾಯಿತ, ಇಲ್ಲಿಗೆ ಹದಿನೇಳನೆಯ ಸಂಧಿ ಮುಗಿಯಿತು.



## ಹದಿನೆಂಟನೆಯ ಸಂಧಿ

ಸೂಚನೆ: ಭಕ್ತಿಯುಳ್ಳ ಕುಮಾರ ದೇವನಿಗೆ, ಏಕೋತ್ತರ ಶತಸ್ಥಲದಲ್ಲಿ ಐವತ್ತೇಳು ಲಿಂಗ ಸ್ಥಲಗಳ ವಿಚಾರವನ್ನು ಬೋಧಿಸಿರುವನು.

ಕನ್ನಡಿ ಇಲ್ಲದೆ ಹೇಗೆ ಮುಖವು ಕಾಣುವುದಿಲ್ಲವೊ ಹಾಗೆ ಲಿಂಗವಿಲ್ಲದೆ ಆತ್ಮ ಸ್ವರೂಪವು ಕಾಣದು; ಜ್ಞಾನವಿಲ್ಲದೆ ಗುರು ಲಿಂಗ ಜಂಗಮರನ್ನು ತೊರೆದು ಜಗತ್ತು ಕೆಡುತ್ತಿಹುದು; ಕನ್ಯೆಯಲ್ಲಿ ಸ್ನೇಹ ಹುಟ್ಟುವಂತೆ, ಭಕ್ತಿಯಲ್ಲಿ ಪ್ರೇಮವನ್ನು ಹುಟ್ಟಿಸಿ ಕಾಪಾಡು ಶಿವನೆ;

ಕರ್ತೃ ಜಗದ್ಗುರು ಗುರುಸಿದ್ಧೇಶ್ವರನು, ಕುಮಾರಾರ್ಯನಿಗೆ ಲಿಂಗಸ್ಥಲ ಗಳನ್ನು ಭಕ್ತಿಯಿಂದ ಕೇಳೆಂದು ತಿಳಿಸಿದನು; ಭಕ್ತ ಸ್ಥಲದಲ್ಲಿರುವ ಒಂಭತ್ತು ಉಪ ಭೇದಗಳನ್ನು ತಿಳಿದಿಕೊ ದೀಕ್ಷಾ ಗುರು ಸ್ಥಲ; ಶಿಕ್ಷಾ ಗುರು ಸ್ಥಲ; ಜ್ಞಾನ ಗುರು ಸ್ಥಲ; ಕ್ರಿಯಾಲಿಂಗ ಸ್ಥಲ; ಭಾವಲಿಂಗ ಸ್ಥಲ; ಜ್ಞಾನ ಲಿಂಗ ಸ್ಥಲ; ಸ್ವಸ್ಥಲ, ಚರಸ್ಥಲ; ಪರಸ್ಥಲ; ಮಲಪಾಶಗಳನ್ನು ಕಳೆಯುವವನೇ ದೀಕ್ಷಾಗುರು; ಆಚಾರ ವನ್ನು ತಿಳಿಸಿ ಜ್ಞಾನವನ್ನು ಬೋಧಿಸುವವನೇ ಶಿಕ್ಷಾಗುರು; ಪ್ರಜ್ಞಾನ ಉಳ್ಳವನೇ ಜ್ಞಾನ ಗುರುವು;

ಗುರುವಿನ ಕ್ರಿಯಾಯೋಗದಿಂದ ದೊರೆಯುವುದು ಕ್ರಿಯಾಲಿಂಗ ಸ್ಥಲವು; ಕ್ರಿಯೆಯು ಎಲ್ಲಿ ಅಳಿಯುವುದೋ, ಅದುವೆ ಭಾವಲಿಂಗವು; ಮರಣ ಭಯವನ್ನು ಬಿಡಿಸಿ; ಜ್ಞಾನ ಬೋಧಕವಾದ ಜ್ಞಾನವೇ, ಜ್ಞಾನಲಿಂಗವು; ಭಾವ ಬೋಧಕ ಕ್ರಿಯೆಯು ಯಾವನಲ್ಲಿ ಅಡಗಿರುವುದೊ ಅವನೆ ಸ್ವಯಂ ಎನಿಸುವನು, ಜ್ಞಾನವನ್ನು ಹೊಂದಿ, ಭಕ್ತರನ್ನು ಪೊರೆಯುವಪದಕ್ಕಾಗಿ ದೇಶವನ್ನು ಚರಿಸುವವನೆ ಚರನು;

ಶಿವನೆ ತಾನೆನಿಸಿಕೊಂಡು, ಬೋಧಕನಾಗಿ ಭಕ್ತರನ್ನು ಪೊರೆಯುವವನೆ ಪರನು; ಇನ್ನು ಮಹೇಶ ಸ್ಥಲದಲ್ಲಿರುವ ಒಂಭತ್ತು ಉಪಭೇದಗಳನ್ನು ತಿಳಿದಿಕೊ; ಕ್ರಿಯಾಗಮ, ಭಾವಾಗಮ; ಜ್ಞಾನಾಗಮ; ಸಕಾಯ; ಅಕಾಯ; ಪರಕಾಯ; ಧರ್ಮಾಚಾರ; ಭಾವಾಚಾರ; ಜ್ಞಾನದಾಚಾರ; ಇವುಗಳ ವಿಸ್ತಾರವನ್ನು ಕೇಳು; ಕ್ರಿಯೆ ಶಾಸ್ತ್ರಗಳ ಜ್ಞಾನವನ್ನು ಪಡೆದವನೆ ಕ್ರಿಯಾಗಮಿಯು; ಶಿವಪೂಜೆಯನ್ನು ಮಾಡುವುದಕ್ಕೆ ಶಿವಭಾವನೆ ಬೇಕು, ಅದುವೇ, ಭಾವಾಗಮಿಯು ಶಿವ-ಭಾವ ದಿಂದ ಹುಟ್ಟುವುದೆ ಶಿವಜ್ಞಾನವು, ಅದುವೇ ಜ್ಞಾನಾಗಮವು; ದೇವಗಾಗಿ ಪರಿಣ ಮಿಸುವ ಮೂರ್ತಿಯೆ ಸಕಾಯವು; ದೇಹದ ಮೋಹವನ್ನು ತೊರೆದು ಜಗತ್ತೇ ನನ್ನ ಶರೀರವೆಂದು ತಿಳಿಯುವುದೆ ಅಕಾಯ ಸ್ಥಲವು; ಮಾಯೆಯನ್ನು ತೂರಿ, ಪ್ರಕೃತಿ ಯನ್ನು ಗೆದ್ದ ಪರ ಬ್ರಹ್ಮ ಸ್ವರೂಪನೇ ಪರಕಾಯನು;

ಇನ್ನು ಪ್ರಸಾದ ಸ್ಥಲದಲ್ಲಿರುವ ಒಂಭತ್ತು ಉಪಭೇದಗಳನ್ನು ತಿಳಿದಿಕೊ, ಕಾಯಾನುಗ್ರಹ, ಇಂದ್ರಿಯಾನುಗ್ರಹ, ಪ್ರಾಣಾನುಗ್ರಹ, ಕಾಯಾರ್ಪಣ, ಕರುಣಾರ್ಪಣ, ಭಾವಾರ್ಪಣ, ಶಿಷ್ಯ ಸ್ಥಲ, ಶುಶ್ರೂಷ ಸ್ಥಲ, ಸೇವ್ಯಸ್ಥಲ, ಇವುಗಳ ವಿಸ್ತಾರಗಳನ್ನು ತಿಳಿದಿಕೊ;

ಶಿವಯೋಗಿಯು ಕಾಯವನ್ನು ಹೊಂದಿ, ಅದರ ಲೇಪವಿಲ್ಲದೆ ಭಕ್ತರನ್ನು ಪೊರೆಯುವುದೇ ಕಾಯಾನುಗ್ರಹಿಯು,

ಮನವನ್ನು ಶಿವನಿಗೆ ಅರ್ಪಿಸಿದ ಶಿವಯೋಗಿಯೆ, ಇಂದ್ರಿಯಾನುಗ್ರಹಿಯು.

ಅಸು ನಿರೋಧದಿಂದ ಶ್ರೇಷ್ಠವಾದ ಕಾಯ:ದಲ್ಲಿ ಶಿವನ ದರ್ಶನವಾಗುವುದೆ ಪ್ರಾಣಾನುಗ್ರಹಸ್ಥಲವು.

ಕಾಯವನ್ನು ನಿರಾಶೆಯಿಂದ ಪರಶಿವನಿಗೆ ಅರ್ಪಿಸುವದೇ ಕಾಯಾರ್ಪಣವು,

ಲಿಂಗದಲ್ಲಿ ಸರ್ವ ಕರಣಂಗಳನ್ನು ಅರ್ಪಿಸಿ ತಲ್ಲೀನಗೊಳಿಸುವುದೆ; ಕರುಣಾರ್ಪಣವು;

ಶಿವನೇ ಗುರುವು, ಗುರುವೇ ಶಿವನೆಂದು ಅಭೇದದಿಂದ ಸೇವಿಸುವವನೆ ಶಿಷ್ಯ ಸ್ಥಲನು;

ಗುರುವಿನಿಂದ ಬೋಧೆಯನ್ನು ಪಡೆದು ಸುಜ್ಞಾನಿಯಾಗಿದ್ದರೂ ಗುರುವಿನ ಸೇವೆಯನ್ನು ಮಾಡುವವನೆ, ಶುಶ್ರೂಷನು;

ಗುರುವಿನಿಂದ ಜ್ಞಾನವನ್ನು ಪಡೆದು, ಬೋಧಿಸುವವನೆ ಸೇವ್ಯಸ್ಥಲವು;

ಇದುವರೆಗೆ ಲಿಂಗಸ್ಥಲಗಳಲ್ಲಿ ಇಪ್ಪತ್ತೇಳು ಭೇದಗಳನ್ನು ಹೇಳಲಾಯಿತು; ಇನ್ನು ಮುಂದಿನ ಸ್ಥಲಗಳನ್ನು ತಿಳಿದುಕೊ,

ಪ್ರಾಣಲಿಂಗಿ ಸ್ಥಲದ ಒಂಭತ್ತು ಉಪಭೇದಗಳನ್ನು ಕೇಳು. ಆತ್ಮ ಅಂತರಾತ್ಮ; ಪರಮಾತ್ಮ; ನಿರ್ದೇಹಾಗಮ, ನಿರ್ಭಾವಾಗಮ. ನಷ್ಟಾಗಮ, ಆದಿಪ್ರಸಾದಿ, ಅಂತ್ಯಪ್ರಸಾದಿ, ಸೇವ್ಯಪ್ರಸಾದಿ, ಇನ್ನಿವರ ವಿಸ್ತಾರಗಳನ್ನು ಕೇಳು;

ಸುಶ್ರವಣ; ಗುರುಬೋಧೆಯಿಂದ ಜೀವಭಾವವನ್ನು ಬಿಟ್ಟು; ಹೃದಯದಲ್ಲಿರುವುದೆ ಆತ್ಮಸ್ಥಲವು;

ಜೀವಾತ್ಮ-ಪರಮಾತ್ಮರ ನಡುವೆ ಇರುವ ಸ್ಥಿತಿಯೆ ಅಂತರಾತ್ಮ ಸ್ಥಲವು;

ಜೀವತ್ವವನ್ನು ಕಳೆದುಕೊಂಡು ಅಂತರಾತ್ಮನಾಗಿ, ಗುರುಬೋಧೆಯಿಂದ ಅವನ್ನು ಕಳೆದುಕೊಳ್ಳುವವನೇ ಪರಮಾತ್ಮನೆನಿಸಿಕೊಳ್ಳುವನು.

ಸತ್; ಚಿತ್; ಆನಂದವನ್ನೂ ಹೊಂದಿ; ಆಣವಾದಿ ಮಲಗಳನ್ನು ಕಳೆದು ಕೊಂಡು ಪ್ರತ್ಯಗಾತ್ಮನು ನಿರ್ಗುಣಿಯಾದವನಿಗೆ, ನಿರ್ದೇಶಹಾಗಮಿಯು ಎನ್ನುವರು

ಭಾವದಿಂದ ಮೀರಿದವನೂ, ಮತಿಯಿಂದಲೂ ಮೀರಿದವನಿಗೆ, ನಿರ್ಭಾವಾಗಮಿ ಎನ್ನುವರು.

ಶಿವನೇ ಸರ್ವಕ್ಕೆ ಒಡೆಯನೆಂದು ತಿಳಿದು; ಅವನ ಕೃಪೆಯನ್ನು ಪಡೆದು ಬಾಳುವವನೆ ಆದಿ ಪ್ರಸಾದಿಯು;

ಲಯವು ಎಲ್ಲಿ ಆಗುವದೋ ಅದನ್ನು ಅರಿತವನೇ ಅಂತ್ಯ ಪ್ರಸಾದಿಯು; ಸರ್ವ ಸುಖಕ್ಕೆ ಶಿವನೆ ಕಾರಣನೆಂದು ತಿಳಿದವನೆ ಸೇವ್ಯ ಪ್ರಸಾದಿಯು.

ಇನ್ನು ಶರಣ ಸ್ಥಲದಲ್ಲಿರುವ ಹನ್ನೆರಡು ಉಪ ಭೇದಗಳನ್ನು ತಿಳಿದಿಕೊ ದೀಕ್ಷಾ ಪಾದೋದಕ; ಶಿಕ್ಷಾ-ಪಾದೋದಕ; ಜ್ಞಾನ-ಪಾದೋದಕ; ಕ್ರಿಯಾನಿಷ್ಪತ್ತಿ; ಭಾವನಿಷ್ಪತ್ತಿ; ಜ್ಞಾನ ನಿಷ್ಪತ್ತಿ; ಪಿಂಡಾಕಾಶ; ಬಿಂದ್ವಾಕಾಶ; ಮಹಾಕಾಶ; ಕ್ರಿಯಾ ಪ್ರಕಾಶ; ಇವುಗಳ ವಿಸ್ತಾರವನ್ನು ತಿಳಿಯಿರಿ.

ಶಿಷ್ಯನಿಗೆ ದೀಕ್ಷೆಯಿಂದುಂಟಾದ ಜ್ಞಾನವೇ ದೀಕ್ಷಾ ಪಾದೋದಕ;

ರಕ್ಷಿಸುವ ಗುರುವೆ ಪದ, ಶಿಷ್ಯನೇ ಉದಕವೆಂಬ ಜ್ಞಾನವೆ ಶಿಕ್ಷಾ-ಪಾದೋದಕ; ಶ್ರೇಷ್ಠವಾದ; ಜ್ಞಾನಸಂಪನ್ನನಾದ; ಗುರುವನ್ನು ಹೊಂದುವವನೇ ಜ್ಞಾನ-ಪಾದೋದಕ;

ಜ್ಞಾನಿಗೆ ಯಾವ ಕರ್ಮಗಳಿಲ್ಲ ಎಂದು ತಿಳಿಯುವುದೆ, ಕ್ರಿಯಾ ನಿಷ್ಪತ್ತಿಯು;

ಚಿತ್ತವು ಸದಾ ಈಶ್ವರನಲ್ಲಿ ನೆಲಿಸಿರುವುದೇ ಭಾವ ನಿಷ್ಪತ್ತಿಯು;

ಶಿವಜ್ಞಾನವನ್ನುಳಿದು ಮತ್ತೊಂದನ್ನು ಬಯಸದನೇ ಜ್ಞಾನ ನಿಷ್ಪತ್ತಿಯು; ಹೊರಗಿನ ಬಯಲು ಒಳಗೆ ಇರುವುದು ಅದರಂತೆ ಒಳಗಿನ ಬಯಲು ಹೊರಗೆ ಇರುವುದೆಂದು ತಿಳಿದು ಅದನ್ನು ಸಾಧಿಸುವುದೇ ಪಿಂಡಾಕಾಶವು;

ಘಟದಲ್ಲಿ ಆಕಾಶ ಇರುವಂತೆ ಎಲ್ಲಾ ಕಡೆಗೆ ಆತ್ಮವು ತುಂಬಿರುವದೆಂಬ ಜ್ಞಾನವೆ ಬಿಂದ್ವಾಕಾಶವು;

ಹೊರಗಿನ ಬಯಲು ಘಟದಲ್ಲಿ ಸೇರುವಂತೆ, ಆತ್ಮವು ಬ್ರಹ್ಮಾಂಡದಲ್ಲಿ ಸೇರಿ ಒಂದಾಗುವದಕ್ಕೆ ಮಹಾಕಾಶವೆನ್ನುವರು;

ಶಿವನ ಹಾಗು ಆತ್ಮ ಸಂಧಾನದಲ್ಲಿ ತೊಡಗಿ ಕಾಲವನ್ನು ಕಳೆಯುವವನೇ ಕ್ರಿಯಾ ಪ್ರಕಾಶನು;

ಜಲವೇ ಭಿನ್ನವಾಗಿ ತರಂಗಗಳಾಗುವಂತೆ, ಬುದ್ಧಿ ಮೊದಲಾದವುಗಳು ತೋರುವುದೆ ಭಾವ ಪ್ರಕಾಶವು;

ಶಿವಯೋಗಿಯಾದವನು ಜಗತ್ತನ್ನೇ ಶಿವರೂಪವೆಂದು ತಿಳಿಯುವನು, ಇದುವೆ ಜ್ಞಾನ ಪ್ರಕಾಶಸ್ಥಲ;

ಇನ್ನು ಐಕ್ಯ ಸ್ಥಲದಲ್ಲಿರುವ ಒಂಭತ್ತು ಉಪಭೇದಗಳನ್ನು ತಿಳಿಯಿರಿ ಸ್ವೀಕೃತ ಪ್ರಸಾದ; ಶಿಷ್ಟೌದನ; ಚರಾಚರಲಯ; ಬಾಂಡ; ಭಾಜನ;ಅಂಗಾಲೇಪನ; ಸ್ವಪರಾಜ್ಞ; ಭಾವಾಭಾವಲಯ; ಜ್ಞಾನ ಶೂನ್ಯ; ಇನ್ನಿವರ ವಿಸ್ತಾರವನ್ನು ಕೇಳಿರಿ;

ಸಚ್ಚಿದಾನಂದ ಸಾಗರನಾಗಿ ಶುದ್ಧಾತ್ಮದಿಂದ ಲಿಂಗಕ್ಕೆ ಸರ್ವವನ್ನು ಅರ್ಪಿಸುತ್ತ ಭೋಗಿಸುವವನೇ ಸ್ವೀಕೃತ ಪ್ರಸಾದಿಯು;

ಸರ್ವರಲ್ಲಿ ತೋರುವ ಮಾಯೆಯು, ಮಹಾಲಿಂಗ ಸ್ವರೂಪದಲ್ಲಿ ಅಡಗುವುದೊ ಆ ಮಹಾಲಿಂಗ ಸ್ವರೂಪವೇ ಶಿಷ್ಟೌದನ ಸ್ಥಲವು;

ನಿದ್ರೆಗೈಯ್ಯುವವನ ಮನದೆ ಮಂಗಾಟವು ಹೇಗೆ ಇಲ್ಲವೊ ಹಾಗೆ ಲಿಂಗಾಂಗಿಗೆ ಈ ಚರಾಚರವು ಇಲ್ಲ ಇದುವೆ ಚರಾಚರಲಯವು ಸಮಸ್ತ ಬ್ರಹ್ಮಾಂಡಗಳು ಹುಟ್ಟಿ; ಎಲ್ಲಿ ಅಳಿಯುವವೊ, ಆದರ ವಿಮರ್ಶೆ ಉಳ್ಳವವನೇ ಲಿಂಗದೇಹೀ, ಶಿವಯೋಗಿಯೆ ಭಾಂಡ ಸ್ಥಲನೆನಿಪನು; ಅಂತಹ ವಿಮರ್ಶಕೆಯು; ಬುದ್ಧಿಯಸ್ಥಾನವೆ ಭಾಜನ ವೆನಿಪುದು;

ಕಾಲವೇ ಮೊದಲಾದ ಪ್ರಪಂಚದಿಂದ ದೂರಾಗಿ ಬ್ರಹ್ಮದಲ್ಲಿ ಬೆರೆದಿರು ವವನೇ ಅಂಗಾಲೇಪಿಯು;

ಲೀಲೆಯಿಂದ ಬ್ರಹ್ಮದಲ್ಲಿ ಬೆರೆದು ಸ್ವ-ಪರಜ್ಞಾನವಿಲ್ಲದೆ ತೋರುವವನೇ ಸ್ವ–ಪರಜ್ಞನೆನಿಸಿಕೊಳ್ಳುವನು;

ಶಿವಯೋಗಿಯು ಶಿವನಲ್ಲಿ ಸಾಮರಸ್ಯವನ್ನು ಹೊಂದಿ; ಅಹಂಭಾವವನ್ನು ತೊರೆಯುವದೇ ಭಾವಾಭಾವಲಯ ಸ್ಥಲ;

ರೂಪಭಾವನೆಗಳ ವಿವೇಚನೆಯುಳ್ಳಯಾವ ಭೇದವು ಶಿವಯೋಗಿಯಲ್ಲಿ ಇರುವದಿ ಲ್ಲವೋ ಅಂತಹ ಬೇದಜ್ಞಾನ ಶೂನ್ಯತೆಯನ್ನು ಪ್ರತಿಪಾದಿಸುವುದೆ ಜ್ಞಾನ ಶೂನ್ಯ ಸ್ಥಲವು.

ಒಟ್ಟು ಇಲ್ಲಿಗೆ ಐವತ್ತೇಳು ಲಿಂಗಸ್ಥಲಗಳಾದವು, ಇವೆಲ್ಲವುಗಳನ್ನು ಕ್ರಮ ದಿಂದ ತಿಳಿದು, ಬಾಳು ಎಂದು ಗುರುವು ನುಡಿದು ಕುಮಾರದೇವನಿಗೆ ಸರ್ವವನ್ನು ತಿಳಿಸಿರಲು ಮೂರುಸಾವಿರ ಪ್ರಮಥರು ಬಂದು ಶ್ರೀಗುರುವಿಗೆ ನಮಸ್ಕರಿಸಿದರೆಂಬ ರಲ್ಲಿಗೆ ಹದಿನೆಂಟನೆಯ ಸಂಧಿ ಸಂಪೂರ್ಣವಾಯಿತು.



## ಹತ್ತೊಂಭತ್ತನೆಯ ಸಂಧಿ

ಮೂರುಸಾವಿರ ಪ್ರಮಥರ ಇಚ್ಛೆಯಂತೆ; ಗುರುಸಿದ್ಧೇಶ್ವರನು ಮೂರುಸಾವಿರ ದಯ್ಯನಿಗೆ ಅಧಿಕಾರವನ್ನು ಕೊಟ್ಟು ತಾನಿರುವ ಮಠಕೆ ಶ್ರೀ ಜಗದ್ಗುರು ಮೂರುಸಾವಿರಮಠ ಎಂದು ಹೆಸರಿಟ್ಟನು.

ಕಮಲವನ್ನು ಕವಿಗಳು, ಮನುಷ್ಯನ ಕಣ್ಣಿಗೆ; ಮುಖಕ್ಕೆ ಕೈಗೆ ಮತ್ತು ಶಿವನ ಸಮಾನರಾದ ಶಿವಯೋಗಿಗಳ ಪಾದಕ್ಕೆ ಹೋಲಿಸುವರು, ಮನಸ್ಸನ್ನು ಭ್ರಮರಕ್ಕೆ ಹೋಲಿಸುವರು, ಭ್ರಮರ ಸ್ವರೂಪವಾದ ನನ್ನ ಮನಸ್ಸು ಸ್ತ್ರೀಯರ ಮುಖ ಕಮಲದಲ್ಲಿ ರಮಿಸುವಂತೆ ಶಿವಯೋಗಿಯ ಪಾದದಲ್ಲಿ ಏಕೆ ರಮಿಸಲೊಲ್ಲದು, ಶಿವನೆ ಇದರ ಇಂಗಿತವನ್ನು ತಿಳಿಸಿ ಕಾಪಾಡು;

ಗುರುಸಿದ್ಧೇಶ್ವರನ ಕೃಪೆಯನ್ನು ಪಡೆದುಕೊಂಡ ಕುಮಾರದೇವನನ್ನು ಮೂರು ಸಾವಿರದಯ್ಯನು ಮೂರುಸಾವಿರ ಗಣರಿಗೆ ಪರಿಚಯ ಮಾಡಿಕೊಟ್ಟನು; ಚಿಕ್ಕವನಾದ ಕುಮಾರದೇವನು ಭಕ್ತಿಯಿಂದ ಗುರುಗಳ ಪ್ರಮಥರ ಸೇವೆಯನ್ನು ಮಾಡುತ್ತಿದ್ದನು.

ಶ್ರೀಮದಲ್ಲಮಪ್ರಭುಗಳು ತಮ್ಮ ವಚನ ಮುದ್ರಿಕೆಗೆ ಗುಹೇಶ್ವರ ಎಂದು ಏಕೆ ತೆಗೆದುಕೊಂಡರು, ಹಾಗೆಂದರೇನು ಎಂದು ಮೂರು ಸಾವಿರದಯ್ಯನು ಗುರುವನ್ನು ಕೇಳಿದನು ಆದಕ್ಕೆ ಗುರುವು "ಎಲೈ ಮೂರುಸಾವಿರದಯ್ಯದೇಶಿಕನೆ, ಈ ವಿಚಾರವು ಗಹನವಾದದ್ದು, ಇದಕ್ಕೆ ಅನಂತ ಅರ್ಥಗಳುಂಟು, ಒಂದು ಷಣ್ಮುಖನೆಂದು ಅರ್ಥ ವಾಗುವುದು ಮತ್ತೊಂದು ಗುಹೆಯಲ್ಲಿರುವ ಆತ್ಮವೆಂದರ್ಥವಾಗುವದು; ಆರು ಮನುಗಳೆ ಷಣ್ಮುಖನ ಆರು ಮುಖಗಳು, ಷಣ್ಮುಖನು ವೀರಶೈವರ ಮಂತ್ರವಾದ ಷಡಕ್ಷರದ ಪ್ರಚಾರಕ್ಕಾಗಿಯೇ ಬಂದಿರುವನು, ಅದರಂತೆ ವೀರಶೈವ ಮತವನ್ನು ರಕ್ಷಿಸುವದಕ್ಕಾಗಿ ಬಂದಿರುವವನೆ ಈ ಕುಮಾರದೇವನು ಇವನನ್ನು ಷಣ್ಮುಖನೆಂದು ನೀವು ತಿಳಿದುಕೊಳ್ಳಿರಿ, ಇದಕ್ಕೆ ಇನ್ನೊಂದು ಅರ್ಥವನ್ನು ಕೇಳಿರಿ, ಎಲ್ಲಾ ಜೀವ ದಲ್ಲಿರುವ ಆತ್ಮವು ಹೃದಯವೆಂಬ ಗುಹೆಯನ್ನು ಸೇರಿಕೊಂಡಿರುವದರಿಂದ, ಗುಹೇ ಶ್ವರನೆಂಬ ಹೆಸರಿರುವುದು, ಮಲತ್ರಯಗಳಿಂದ ದೂರಿರುವ ಆತ್ಮನೇ ಶ್ರೇಷ್ಠನು, ಇವನ ಮುಖವೆ ಪಶ್ಚಿಮ ಚಕ್ರವು, ಇಲ್ಲಿಯೇ ನಿರಂಜನ ಗಣೇಶನಾಗಿ ತೋರುವನು ಜಗದೋದ್ಧಾರಕ್ಕಾಗಿ ನಿರಂಜನ ಗಣೇಶ್ವರನಾಗಿ ಬಂದಿರುವದರಿಂದ, ಶ್ರೀಮನ್ನಿ ರಂಜನ ಪ್ರಣವ ಸ್ವರೂಪರೆಂಬ ಹೆಸರು ವೀರಶೈವ ವಿರಕ್ತರಿಗೆ ಸಲ್ಲಿರುವದು, ಎಂದು ಗುರುವು ತಿಳಿಸುತ್ತ ಮೂರು ಸಾವಿರ ಗಣಾಧೀಶ್ವರರನ್ನು ಕರೆಯಿಸಿ ಅವರಿಗೆ, ಇನ್ನು ಶ್ರೀಮಠದ ಅಧಿಕಾರವನ್ನು ಮೂರುಸಾವಿರದಯ್ಯನಿಗೆ ವಹಿಸಿಕೊಟ್ಟು, ನಾವು

ಇದೇ ಶ್ರಾವಣ ಕೊನೆಯ ಸೋಮವಾರದಂದು ನಿರ್ವಿಕಲ್ಪಕ ಸಮಾಧಿಯನ್ನು ಹೊಂದುವೆವು ಈ ಮೂರು ಸಾವಿರದಯ್ಯನು ಮಠದ ಅಧಿಕಾರದ ನಂತರ ಕುಮಾರ ದೇವನಿಗೆ ವಹಿಸಿಕೊಡಬೇಕು, ಶರಣ-ಸಾಹಿತ್ಯದ ಪ್ರಚಾರವಾಗಬೇಕು ಇದು ನಮ್ಮ ಸಂಕಲ್ಪವೆಂದು ತಿಳಿಸಿದರು.

ಈ ಸಮಾಚಾರವನ್ನು ಮೂರುಸಾವಿರದ ಪ್ರಮಥರು ಬಂದ ಭಕ್ತರಿಗೆ ತಿಳಿಸಿದರು. ಭಕ್ತರು ಭಕ್ತಿಯಿಂದ ಗುರುಸಿದ್ಧೇಶನ ಸ್ತೋತ್ರ ಮಾಡಲು, ಗುರುವು ಅವರಿಗೆ ದರ್ಶನ ಕೊಟ್ಟು ಈ ಸ್ಥಲಕ್ಕೆ "ಜಗದ್ಗುರು ಮೂರು ಸಾವಿರಮಠವೆಂದು ಕರೆಯಬೇಕು. ತೀವ್ರವಾಗಿ ಕಾರ್ಯಕ್ಕೆ ವ್ಯವಸ್ಥೆಮಾಡಿರಿ. ಎಂದು ಹೇಳಿದರು. ಅದರಂತೆ ಭಕ್ತರು ಎರಡು ತಿಂಗಳುಗಳಲ್ಲಿ ಭವ್ಯವಾದ ಮಠವನ್ನು ಕಟ್ಟಿಸಿ ಅಧಿಕಾರಕ್ಕೆ ವ್ಯವಸ್ಥೆ ಮಾಡಿದರು.

ಆ ಸಮಾರಂಭಕ್ಕೆ ನಾಡಿನ ಕೀರ್ತನಕಾರರು, ಪುರಾಣ, ಪ್ರವಚನಕಾರರು, ಸಂಗೀತಗಾರರು, ಗುಂಪು ಗುಂಪಾಗಿ ಬಂದು ಸೇವೆ ಸಲ್ಲಿಸಿರಲು, ಎಲ್ಲಾ ಕಾರ್ಯಕ್ರಮಗಳು ಸಾಂಗವಾಗಿ ನಡೆದಿರಲು ವೈಶಾಖ ಶುದ್ಧ, ತೃತಿಯಾ, ರೋಹಿಣಿ ನಕ್ಷತ್ರವಿರಲು ಆ ಶುಭ ಮೂಹೂರ್ತದಲ್ಲಿ ಸರ್ವ ಸಂಸ್ಕಾರವನ್ನು ಗೈದು ಸಿಂಹಾಸನಾರೋಹಣ ಮಾಡಿಸಿ "ಮೂರುಸಾವಿರಮಠದ ಜಗದ್ಗುರುವೆಂದು" ಎಂದು ನಾಮಕರಣಮಾಡಿ ಕರತಾಡನ ಮಾಡಿದರು. ಸರ್ವ ಭಕ್ತರು ಆನಂದಗೊಂಡರು. ಇಂದಿನಿಂದ ಇಲ್ಲಿ ಧರ್ಮಪ್ರಚಾರ, ವಿದ್ಯಾಪ್ರಚಾರ ನಡೆಯಲೆಂದು ಗುರುವು ಆಶೀರ್ವದಿಸಿದನು. ಇಲ್ಲಿಗೆ ಹತ್ತೊಂಭತ್ತನೆಯ ಸಂಧಿ ವಿಷಯ ಸಮಾಪ್ತಿ ಆಯಿತು.



## ಇಪ್ಪತ್ತನೆಯ ಸಂಧಿ

ಸೂಚನೆ: ಮೂರು ಲೋಕದ ಒಡೆಯನಾಗಿ ಕರ್ತೃ ಗುರುಸಿದ್ಧೇಶ್ವರನು, ಮೂರ ಸಾವಿರ ಮಠದ ಗವಿಯ ನಿರ್ವಿಕಲ್ಪಕ ಸಮಾಧಿಯಲ್ಲಿ ಶೋಭಿಸುವನು;

ದೇಹವು ಪಂಚಭೂತಗಳನ್ನು ಹೊಂದಿ, ಪಂಚ ತತ್ವಗಳೆನಿಸಿಕೊಂಡು ತತ್ವದಲ್ಲಿ ಬೆರೆಯುವುದು, ಎಲೈ ಶಿವನೆ ಅದರಂತೆ ನಿನ್ನೊಳಗೆ ನಾನು ಬೆರೆಯಲು ಏಕೆ ಆಗುವುದಿಲ್ಲ, ಪ್ರೇಮದಿಂದ ಹೇಳು, ವಿಷಯಾದಿಗಳಿಗೆ ಮೋಹವನ್ನು ಹುಟ್ಟಿಸಿ ಕಾಮನಿಗೆ ನನ್ನನ್ನು ಮಾರಿ, ಭವಸಾಗರದಲ್ಲಿ ತಳ್ಳಿರುವಿ ಯಾವಾಗ ನನ್ನನ್ನು ಉದ್ಧರಿಸುವೆ ಶಿವನೆ?

ಒಂದುದಿನ ಶ್ರೀ ಕರ್ತೃವು ಮೂರುಸಾವಿರದಯ್ಯನನ್ನು ಪರೀಕ್ಷಿಸುವದಕ್ಕಾಗಿ ನೀನು ಜಗದ್ಗುರುವಾಗಿದ್ದರೂ ನನ್ನ ಸೇವೆಯನ್ನು ಏಕೆ ಮಾಡುವೆ ಎಂದು ಕೇಳಿದನು, ಅದಕ್ಕೆ ಮೂರುಸಾವಿರದಯ್ಯನು ನಿನ್ನ ಆಳಿನ ಆಳಾಗುವ ಯೋಗ್ಯತೆ ನನಗಿಲ್ಲ. ನಾನೆಂತು ಜಗದ್ಗುರುವೆಂದು ಉತ್ತರಿಸಿದನು, ಅದಕ್ಕೆ ಗುರುವು ನೀನು ಸಮಾಜ ಸೇವೆಯನ್ನು ಮುಂದುವರಿಸುತ್ತ ಸಾಗಬೇಕು ನೀನು ನುಡಿದದ್ದನ್ನು ನಾನು ನುಡಿಯುವೆ, ನೀನು ಕೇಳಿದ್ದನ್ನು ನಾನು ಕೇಳುವೆ, ನಿನಗೂ ನನಗೂ ಯಾವ ಭೇದವು ಇಲ್ಲ. ನಿನ್ನ ನಂತರ ಶ್ರೀಮಠದ ಪೀಠವನ್ನು ಕುಮಾರದೇವನು ಶೋಭಿಸಲಿ, ಎಂದು ಹೇಳಿದರು.

ಶ್ರಾವಣ ಮಾಸವು ಸಮೀಪಿಸಿತು ಆಗ ಭಕ್ತ ವೃಂದವು ತಂಡೋಪತಂಡವಾಗಿ ಬರಹತ್ತಿತು; ಗಣಾರಾಧನೆಗಳು ನಡೆದವು ಕೊನೆಯ ಸೋಮವಾರ ಬರಲು ಗುರುಸಿದ್ಧೇಶ್ವರನು ಲತಾಮಂಟಪದಲ್ಲಿ ಮಂಡಿಸಿ, ಭಕ್ತರನ್ನು ಉದ್ದೇಶಿಸಿ, ಭಕ್ತರೇ ಇದುವೆ ನಮ್ಮ ಕೊನೆಯ ಸಂದೇಶ ಭಕ್ತಿಯಿಂದ ಆಲಿಸಿರಿ; ನಮಗೂ ನಿಮ್ಮ ಭಕ್ತಿಯನ್ನು ಸ್ವೀಕರಿಸುವನ್ನು ಬಿಟ್ಟು ಹೋಗುವ ಇಚ್ಛೆಯೆ ಇಲ್ಲ, ಅದಕ್ಕಾಗಿಯೆ ನಿರ್ವಿಕಲ್ಪಕ ಸಮಾಧಿಯಲ್ಲಿ ನೆಲಿಸಿ, ಜಪಾನುಷ್ಠಾನವನ್ನು ಗೈಯುತ್ತ, ನಿಮ್ಮ ಭಕ್ತಿಯನ್ನು ಸ್ವೀಕರಿಸಿ ನಿಮ್ಮ ವಾಂಛಿತವನ್ನು ನೀಡುತ್ತ ಸದಾ ಇಲ್ಲಿಯೆ ಇರುವೆವು, ನೀವು ಮರೆತರೆ ನಾವು ಮರೆಯುವೆವು, ಈ ಮರವೆಯನ್ನು ಕಳೆದು ಕೊಳ್ಳುವುದಕ್ಕೆ ಧರ್ಮಾಚರಣೆಯೆ ಮೂಲ; ಧರ್ಮದಲ್ಲಿ ಎರಡು ಪ್ರಕಾರವಿರುವದು; ಸಾಮಾನ್ಯ ಧರ್ಮ, ವಿಶೇಷಧರ್ಮವೆನಿಸುವುದು, ವೀರಶೈವರಾದ ನಾವು ಯಾವಾಗಲೂ ಲಿಂಗವನ್ನು ಧರಿಸಬೇಕು ಲಿಂಗವೆಂದರೆ ಜ್ಞಾನ, ಪರಬ್ರಹ್ಮ ಇದನ್ನು ಗುರುವಿನಿಂದ ಸವಿಸ್ತಾರವಾಗಿ ತಿಳಿದುಕೊಂಡು ಆಚರಿಸಬೇಕು ಇನ್ನು ಮೇಲೆ ಅನುಷ್ಠಾನ ಗೈಯಲು ತೆರಳುವೆವು ಗವಿಯ ಬಾಗಿಲ ಭದ್ರವಾಗಿರಲಿ ನಿಮಗೆಲ್ಲರಿಗೆ ಸನ್ಮಂಗಲವಾಗಲೆಂದು ಹರಿಸಿ ಗವಿಯೊಳಕ್ಕೆ ಸಾಗಿದನು, ಪ್ರಮಥರೂ, ಕೂಡಿದ ಭಕ್ತ

ಸಮೂಹವು ಗುರುವಿನ ವಿಯೋಗದಿಂದ ಶೋಕಸಾಗರದಲ್ಲಿ ಮುಳುಗಿದರು, ಅವರಲ್ಲಿ ಓರ್ವನು ಇನ್ನೊಮ್ಮೆ ಗುರುವನ್ನು ನೋಡಬೇಕೆಂದು ಬಾಗಿಲವನ್ನು ತೆಗೆದನು ಅವನ ಕಣ್ಣಿನ ಪ್ರಕಾಶವೆ ಕುಂದಿ ಹೋಯಿತು ಕೊನೆಗೆ ಪಶ್ಚಾತಾಪವನ್ನು ಹೊಂದಿ, ಗುರುಧ್ಯಾನದಿಂದ ಮರಳಿ ದೃಷ್ಟಿಯನ್ನು ಪಡೆದನು, ಇದರಿಂದ ಗುರುಸಿದ್ಧೇಶ್ವರನು ಇಲ್ಲಿ ಸದಾ ನೆಲಿಸಿರುವನೆಂದು ಎಲ್ಲರಿಗೂ ಮನವರಿಕೆಯಾಗಿ ಗುರುಧ್ಯಾನವನ್ನು ಮಾಡಹತ್ತಿದರು. ಮೂರುಸಾವಿರದಯ್ಯನವರೇ ಮೊದಲಾದವರು ಸೇರಿ ಗವಿಯ ಮೇಲೆ ಗದ್ದುಗೆಯನ್ನು ನಿರ್ಮಿಸಿ ನಿತ್ಯವೂ ಪೂಜಿಸ ಹತ್ತಿದರು, ಆ ಕರ್ತೃವಿನ ಯೋಗಗದ್ದುಗೆಯು ಇಂದಿಗೂ ಹುಬ್ಬಳ್ಳಿ ನಗರದಲ್ಲಿ ಭವ್ಯವಾಗಿ ಶೋಭಿಸುತ್ತಿದೆ ಅಷ್ಟೇ ಅಲ್ಲ ಭಕ್ತಿಯಿಂದ ಭಜಿಸಿದ, ಅರ್ಚಿಸಿದ ಭಕ್ತರ ಇಷ್ಟಾರ್ಥಗಳನ್ನು ಸಲ್ಲಿಸುವನು, ಗುರುವೆಂದು ಅಲ್ಲಿಯ ಭಕ್ತರ ವಿಶ್ವಾಸ; ಮೂರುಸಾವಿರಮಠದ ಒಡೆಯನೂ ಮಹಾಂತನೂ ಆದ ಗುರುಸಿದ್ಧೇಶ್ವರನಿಗೆ ಸನ್ಮಂಗಲವಾಗಲಿ;



## —: ಇಪ್ಪತ್ತೊಂದನೆಯ ಸಂಧಿ :—

ಕರ್ತೃ ಗುರುಸಿದ್ಧೇಶ್ವರನ ಗವಿಯ ಮೇಲಿರುವ ಗದ್ದುಗೆಯ ಮಹಿಮೆಯನ್ನು ಜಗದ್ಗುರುಗಳ ಪರಂಪರೆಯ ನಾಮಗಳನ್ನು ಹೇಳುವೆನು.

ಜೇನು ಮಧುವನ್ನು ಶೋಧಿಸುತ್ತ ಕಬ್ಬಿನ ಮೇಲೆ ಹುಟ್ಟನ್ನು ಇಡಲು ಆ ಮಧುವಿಗೆ ಬಂದ ರೂಚಿಯು ಮತ್ತಾವ ಸ್ಥಾನದಲ್ಲಿ ಹುಟ್ಟನ್ನು ಇಡಲು ಬರುವದಿಲ್ಲ ಆದರಂತೆ ಸುಜನ ವಂದ್ಯನಾದ ಶಿವನೇ ನಿನ್ನಲ್ಲಿ ನನ್ನ ಮನಸ್ಸು ಫಲಕಾರಿಯಾಗುವದಿಲ್ಲ ಆದುದರಿಂದ ನಿನ್ನನ್ನು ಅಗಲಲಾರದಂತಹ ಮನಸ್ಸನ್ನು ಕೊಡು ಶಿವನೆ.

ಮೂರುಸಾವಿರದಯ್ಯ ಜಗದ್ಗುರವು ಪವಿತ್ರವಾದ ಬಿಲ್ವವನದ ಮಠದಲ್ಲಿ ಕಿಂಕರವೃತ್ತಿಯಿಂದ, ನಿರ್ವಿಕಲ್ಪಕ ಸಮಾಧಿಗೆ ವಂದಿಸುತ್ತ ಶಾಂತನಾಗಿ ಲಿಂಗಪೂಜೆಯನ್ನು ಮಾಡುತ್ತಿದನು, ಕುಮಾರದೇವನು ಭಕ್ತಿಯಿಂದ ಕರ್ತೃ ಗದ್ದುಗೆಯ ಪೂಜೆ ಮಾಡ ತ್ತಿದ್ದನು, ಬರುಬರುತ್ತ ಭಕ್ತರ ಭಕ್ತಿಯು ಹೆಚ್ಚಾಗಿ ಜನದಟ್ಟಣೆಯು ವಿಶೇಷವಾಯಿತು, ಗುರುಸಿದ್ಧನ ಲೀಲೆಗಳು ಅನಂತಮುಖವಾಗಿ ಜರುಗಹತ್ತಿದವು, ಬೇಡಿಕೊಂಡವರ ಇಷ್ಟಾರ್ಥಗಳು ಸಿದ್ಧಿಸಹತ್ತಿದವು ಇದರ ಒಂದು ದೃಷ್ಟಾಂತಕ್ಕೆ

ಶಿವಮೊಗ್ಗ ಜಿಲ್ಹೆಯಲ್ಲಿ ಕಲ್ಯಾಣಹಳ್ಳಿ ಎಂಬ ಗ್ರಾಮ ಇರುವದು, ಅಲ್ಲಿ ಶಾಖಾ ಮೂರುಸಾವಿರ ಮಠ ಇದೆ, ಆ ಮಠದಲ್ಲಿ ಶ್ರಾವಣದ ಕೊನೆಯ ಸೋಮವಾರ ಆ ಊರ ಗೌಡನು ಆರಾಧನೆಯನ್ನು ಮಾಡಿಸುತ್ತಿದ್ದನು ಅವನ ಹೆಸರು ಸಹ ಗುರುಸಿದ್ದಗೌಡ, ಈ ಪರಂಪರೆಯು ಬಹು ದಿವಸದಿಂದಲೂ ನಡೆದು ಬಂದಿರುವದು ತಪ್ಪಿದರೆ ಮನೆತನಕ್ಕೆ ಕೇಡೆಂದು ತಿಳಿದಿದ್ದನು ಒಂದು ಸಾರೆ ದಾವಣಗೇರಿಯಿಂದ ಅಡಿಗೆಯನ್ನು ಮಾಡಿಕೊಂಡು ಬಂಧು ಬಾಂಧವರೊಡನೆ ಕೂಡಿಕೊಂಡು ಹೋದನು ಶ್ರೀಮಠದಲ್ಲಿ ಸಾಗುವಾಗ ಮಧ್ಯದಲ್ಲಿ ನಾಗರಹಾವು ಬಂದು ತಡೆಯಿತು, ಇದರಿಂದ ತನ್ನ ತಪ್ಪು ಅರಿವಾಗಿ ಅಲ್ಲಿಯೇ ಅಡಿಗೆಯನ್ನು ಮಾಡಿಸಿ ಗಣತೃಪ್ತಿಗೈಯ್ದನೆಂದು ಕೇಳಿ ಬರೆದಿರುವ ಪ್ರತ್ಯಕ್ಷ ನಿದರ್ಶನ ಲೀಲೆಯೆಂದು ಬರೆದಿರುವೆನು, ಇವನ ನಂತರ ಗುರು ಕುಮಾರನು ಪೀಠವನ್ನು ಅಲಂಕರಿಸಿದ್ದನು ಶ್ರೀಮಠದ ಪರಂಪರೆಯು ಬಹು ಪ್ರಾಚೀನವಾದದ್ದು.

ಶ್ರೀಮಠದ ಐವತ್ತನೆಯ ಪಟ್ಟವನ್ನು ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗಿಂದ್ರ ಮಹಾಸ್ವಾಮಿಗಳವರು ೧೯೫೮ನೇ ಇಸ್ವಿ ೫ನೇ ತಿಂಗಳು ೧ನೇ ದಿನಾಂಕ ಶುಭ ಮುಹೂರ್ತದಲ್ಲಿ ಪೀಠಾಲಂಕೃತರಾದರು ಇವರೇ ಕರ್ತೃವಿನ ಲೀಲಾಮೃತನ್ನು (ಪುರಾಣ) ಬರೆಸಿದವರು, ಇವರ ಜನ್ಮಸ್ಥಾನವು ಸಸಿವಾಳ ಗ್ರಾಮವು, ಚನ್ನಮ್ಮ ಮರುಳಾರ್ಯರು ಇವರ ಜನ್ಮದಾತರು ಇವರ ಜನ್ಮಕ್ಕೆ ವರವನ್ನು ಕೊಟ್ಟವರು ಶ್ರೀ ಮ. ನಿ. ಪ್ರ. ಹಾನಗಲ್ಲು ಕುಮಾರ ಮಹಾಸ್ವಾಮಿಗಳವರು, ಇವರ ಮೊದಲಿನ ಹೆಸರು ಮಹಾಂತದೇವರು, ಇವರನ್ನು ಮೊದಲು ವಿಜಯ ಮಹಾಂತೇಶ್ವರ ಸಂಸ್ಥಾನಕ್ಕೆ ನೇಮಿಸಲಾಗಿತ್ತು ಆದರೆ ಕರ್ತೃ ಗುರುಸಿದ್ಧೇಶ್ವರನ ಯೋಗ ಶಕ್ತಿಯು ಇವರನ್ನು ಎಳೆದುಕೊಂಡಿತು, ಇವರು ಮೊದಲು ಶ್ರೀ ಶಿವಯೋಗ ಮಂದಿರದಲ್ಲಿ ಯೋಗಭ್ಯಾಸವನ್ನು ಮಾಡಿ ನಂತರ ಕಾಶೀ ಕ್ಷೇತ್ರಕ್ಕೆ ದಯಮಾಡಿಸಿ, ಅಲ್ಲಿ ಸಾಹಿತ್ಯ ವೇದಾಂತಾಚಾರ್ಯ ಪದವಿಯನ್ನು ಪಡೆದು, ನಿಜವಾದ ಶಿವಯೋಗ ಸಾಹಿತ್ಯವನ್ನು ಅಭ್ಯಾಸ ಮಾಡಿ, ಶ್ರೀ ಮಠದ ಪೀಠವನ್ನು ಅಲಂಕರಿಸಿ ಹನ್ನೆರಡು ವರ್ಷವಾಗಲು, ಪೀಠದ ದ್ವಾದಶ ಪೀಠಾರೋಹಣದ ಉತ್ಸವವನ್ನು ಭಕ್ತರು ಆ ಸಮಯಕ್ಕೆ ಚಿತ್‌ಪ್ರಭೆಯೆಂಬ ಬೃಹದ್ ಗ್ರಂಥವು ಬಿಡುಗಡೆಯಾಯಿತು, ಮತ್ತು ದಿಲ್ಲಿಯ ವಿಶ್ವ ಸಮ್ಮೇಲನಕ್ಕೆ ದಯಮಾಡಿಸಿ, ಅಲ್ಲಿಯೂ ಕೀರ್ತಿಶಾಲಿಗಳಾಗಿ, ಗುರು ಕುಮಾರೇಶನ ಕೀರ್ತಿಧ್ವಜವನ್ನು ಎತ್ತಿ ಹಿಡಿದರು; ತಮಿಳುನಾಡಲ್ಲಿ ಸಂಚರಿಸಿ, ಅಲ್ಲಿಯೂ ಶಾಖಾ ಮಠವನ್ನು ಸ್ಥಾಪಿಸಿದರು ಅನಂತ ರೀತಿಯಾಗಿ ಜನ ಜಾಗೃತಿಯನ್ನು ಮಾಡುತ್ತಲಿರುವರು, ಇವರಿಗೆ ಗುರು ಕುಮಾರೇಶರ ಮೇಲೆ ಅಪಾರವಾದ ಶ್ರದ್ಧೆಯು, ಆದ್ದರಿಂದ ಪಾದ ಯಾತ್ರೆಯನ್ನು ಕೈಕೊಂಡು ಹುಬ್ಬಳ್ಳಿ ಮೂರುಸಾವಿರಮಠದಿಂದ, ೨೭-೧೧-೭೦ಕ್ಕೆ

ಹೊರಟು ಶಿವಯೋಗ ಮಂದಿರಕ್ಕೆ ೭-೧೨-೭೪ಕ್ಕೆ ತಲುಪಿದರು. ಕೂಡಿದ ಧನವನ್ನೆಲ್ಲ ಶಿವಯೋಗ ಮಂದಿರದಲ್ಲಿ ಕುಮಾರೇಶ್ವರ ಅತಿಥಿ ಗೃಹಕ್ಕಾಗಿ ಕೊಟ್ಟರು, ಕೊನೆಯದಾಗಿ ಹೇಳುವದೇನಂದರೆ ಶ್ರೀಗಳವರು ಮಾಡಿದ ಧರ್ಮ ಜಾಗೃತಿ ಕಾರ್ಯ ಗಳನ್ನು ಇಪ್ಪತ್ತನೆಯ ಶತಮಾನದಲ್ಲಿ ಸುವರ್ಣಾಕ್ಷರದಿಂದ ಬರೆಯುವಂಥಹುದು.

"ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ" ಪುರಾಣವನ್ನು ೧೯೭೭ನೆಯ ಪಿಂಗಳನಾಮ ಸಂವತ್ಸರದ ವೈಶಾಖ ಶುಕ್ಲದ ತೃತಿಯೆಯೋಳ್ ಗುರುವಾರದಂದು ಶ್ರೀ ಮಠದಲ್ಲಿ ಪ್ರಾರಂಭಿಸಿ ೧೯೭೮ನೇ ಕಾಳಯುಕ್ತಿನಾಮ ಸಂವತ್ಸರದ ಮಾರ್ಗಶಿರ ಶುಕ್ಲಪಕ್ಷದ ದ್ವಾದಶಿಯ ಸೋಮವಾರ ದಿವಸ ಎಡೆಯೂರ ಸುಕ್ಷೇತ್ರದಲ್ಲಿ ಮುಗಿಸಿದರು;

ಜಗದ್ಗುರು ಗುರುಸಿದ್ಧೇಶ್ವರನು ಸರ್ವರಿಗೂ ಶಾಂತಿಯನ್ನು ನೀಡಲಿ,

ಸತ್ಯಂ ಶಿವಂ ಸುಂದರಂ

ಸರ್ವಂ ಭದ್ರಂ ಭೂಯಾತ್

ಮಂಗಲಂ



|| ಶ್ರೀ ಗುರುಬಸವಲಿಂಗಾಯನಮಃ ||



ನಿರ್ವಿಕಲ್ಪ ಸಮಾಧಿಸ್ಥರಾದ ಹುಬ್ಬಳ್ಳಿ ಮೂರುಸಾವಿರ ಮಠದ
ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಶಿವಯೋಗಿಗಳು.

॥ ಶ್ರೀ ಗುರುಬಸವ ಲಿಂಗಾಯ ನಮಃ ॥

# ಹುಬ್ಬಳ್ಳಿ ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪುರಾಣ



## ಮಂಗಲಾಚರಣ ಸಂಧಿ

॥ ಗುರು ಸ್ತುತಿ ॥

ಶ್ರೀ ಗುರೂತ್ತಮ ಸಾರ್ವಭೌಮ ಸುಹೃದಯಧಾಮ ।
ರಾಗರಹಿತಲಲಾಮ ಚಿದ್‌ವ್ಯೋಮ ಸದ್‌ರಾಮ ।
ಭೋಗಿ ಭೂಷಣ ಸದ್ಮ ಸತ್‌ಪ್ರೇಮ ಪದಪದ್ಮ ರಾಮಣೀಯಕ ಸುಪ್ರಮ ।
ಯೋಗ ಕರ್ಮವಿರಾಮ ಧರ್ಮನೇಮಗಸೀಮ ।
ಭೋಗಕಾಮ ವಿಕಾಮ ಮೋಕ್ಷಭೂಮ ಸುಮಹಿಮ ।
ನೀಗಿಸೀ ಭವವಸಮ ವೇದ್ಯ ವಿದ್ಯಾಗರಿಮ ಗುರುಸಿದ್ಧನಾಮ ನಮಿಪೇಂ ॥ ೧ ॥

॥ ಶಿವ ಸ್ತುತಿ ॥

ಕೈಲಾಸವಾಸಮಂ ಗೌರೀವಿಲಾಸಮಂ ।
ಲೀಲಾಪ್ರಯಾಸಮಂ ಪಂಚಮುಖಭಾಸಮಂ ।
ಫಾಲಾಕ್ಷ ನೀಂ ತೊರೆದು ಮೇದಿನಿಗಿಳಿದು ಬಂದು ಪೂಬಳ್ಳಿಪುರದ ನೆಲವ ।
ಆಲಿಂಗಮಂ ಪಿಡಿದನುಷ್ಠಾನಮಂ ಗೈದು
ಕಾಲಾರಿಯದನೆ ನಿಜಪುರಿಯ ನೆಗಳ್ದುರೆ ತಣಿದು
ಕಾಲಕ್ಕೆ ಮನುಜಾಕೃತಿಯ ತಳೆದು ಜನಕೊಲಿದೆ ಗುರುಸಿದ್ಧ ಶಿವನೆ ಶರಣು ॥ ೨ ॥

॥ ಶಕ್ತಿ ಸ್ತುತಿ ॥

ಗಿರಿಜಾತೆ ಗೌರಿಯುಮೆ ಮೊದಲಹ ಪೆಸರನಸಮೆ ।
ತೊರೆದಾದಿ ಶಕ್ತಿಯೆನಿಸಿರ್ದು ಲಿಂಗವ ಸಾರ್ದು
ಪರಮ ತಚ್ಚೇತನಕೆ ಗುರುಸಿದ್ಧನಾಮಮುಂ ದೇವಿ ನೀಂ ಸಲಿಸಿ ನಲಿದು ।
ಚರನಾಕೃತಿಯ ಕರುಣಿಸುತ್ತ ಲವನೊಳಗಿರುತೆ ।
ನೆರೆ ಭಕ್ತರಿಂ ಪೂಜೆಗೊಳುತಿಹ ಮಹಾದೇವಿ ।
ಪೊರೆಯೆನ್ನನೀಗಳೀ ಮೂರುಸಾವಿರಮಠದ ಗುರುಪುರಾಣವ ಬರೆಯಿಸಿ ॥ ೩ ॥

॥ ಲಿಂಗ ಸ್ತುತಿ ॥

ಜಗಮಿದಾವುದರಿಂದ ಜನಿಸುತ್ತೆ ತೊಳಗುವದೊ
ಜಗಮಿದಾವುದರಿಂ ಸದ್ಯೆವ ಪೋಷಿತಮಹುದೊ ।
ಜಗಮಿದಾವುದರಲ್ಲಿ ಲಯವ ಪೊಂದುತಲಿಹುದೊ ಬ್ರಹ್ಮಮದು ಲಿಂಗಮದುವೆ ।
ಸೊಗಯಿಪುರ್ವಿಯೊಳೆ ಜ್ಯೋತಿರ್ಲಿಂಗಮೆನಿಪುದಿದು ।
ಸೊಗಯಿಸುತೆ ಸ್ತ್ರೀಪುಂನ್ನಪುಂಸಕಮಿದೆನಿಸುವದು ।
ಸೊಗಯಿಸಿಷ್ಟ ಪ್ರಾಣ ಭಾವ ಮೆಂದೆನಿಸಿಹುದು ಶಿವಮತಕೆ ಪೊರೆಯಲೆನ್ನಂ ॥ ೪ ॥

॥ ಜಂಗಮ ಸ್ತುತಿ ॥

ಸಪ್ತಜನ್ಮಂಗಳಾ ಜಂಗಮಕ್ಕೊಡಲಹವು ।
ಸುಪ್ತ ಬ್ರಹ್ಮಾಂಡಗಳ್ ಜಂಗಮಕ್ಕೆಡೆಯಹವು ।
ಪ್ರಾಪ್ತ ಚಿಚ್ಛಕ್ತಿಗಳ್ ಜಂಗಮಕ್ಕೊಳಗಹವು ಜಂಗಮದ ಸ್ಥಿತಿಯನಿಂತು ।
ದೀಪ್ತ ವೇದಂಗಳಿಂತರಿದು ವರ್ಣಿಸುತಿಹವು ।
ತೃಪ್ತತದ್ರೂಪಿಯಾದಲ್ಲಮ ಪ್ರಭು ಗತಿಯು ।
ಗುಪ್ತಮಾಗಿಯೆ ತಿಳಿದು ಸಂಶ್ರಯವನಿತ್ತ ಗುರುಸಿದ್ಧ ಶರಣಾರ್ಥಿ ನಿನಗೆ ॥ ೫ ॥

## ॥ ಶರಣರ ಸ್ತುತಿ ॥

ಆರ್ಯರಿಂ ಸತ್‌ಪ್ರಮಥವರ್ಯರಿಂ ಗುರುಶಿವಾ-।
ಚಾರ್ಯರಿಂ ಶರಣಪಥಧುರ್ಯರಿಂ ಶಿವಧರ್ಮ ।
ಕಾರ್ಯರಿಂ ಸದ್‌ವೃತ್ತಿ ಚರ್ಯರಿಂ ಸುಗುಣಮಣಿಧಾರ್ಯರಿಂ ನಿತ್ಯವೊಲಿದು ॥
ವೀರ್ಯರಿಂ ಭವಜಲಧಿ ತಾರ್ಯರಿಂ ಹೃತ್‌ಕಮಲ ।
ಸೂರ್ಯರಿಂ ಸಮತೀತ ತೂರ್ಯರಿಂ ರಿಪುಗಣವಿ-।
ದಾರ್ಯರಿಂ ಬಲವಂದನಾರ್ಯರಿಂ ದರ್ಶಿಸದೆ ಕಾಯಲೆಂದೆರಗಿ ನುತಿಪೇಂ ॥ ೬ ॥

## ॥ ಪ್ರಸ್ತುತ ಜಗದ್ಗುರು ಸ್ತೋತ್ರ ॥

ಜಗದ ಗುರು ಗುರುಸಿದ್ಧರಾಜನ ಪುರಾಣಮಂ
ಮಿಗೆ ಬರೆಯಲೆನಗೆ ಸೇವೆಯನೊಪ್ಪಿಸಿಟ ಜಗತ್
ಸುಗುಣಿ ಗುರುವರ್ಯ ಗಂಗಾಧರ ಮಹಾತ್ಮರಿಗೆ ಹುಬ್ಬಳ್ಳಿವಾಸಿಗಳಿಗೆ ।
ಬಗೆಯೊಪ್ಪಿ ಮೂರುಸಾವಿರ ಮಠಾಧೀಶರಿಗೆ ।
ಸೊಗಸಿಂ ಪ್ರಣಾಮಮಂ ಸಲ್ಲಿಸುವೆನಿವರೀಗ-
ಳಗಲದಿಹ ಕರ್ತೃ ವಿಭುರಾಜನವತಾರಿಗಳ್ ಜ್ಞಾನಸಿಧಿಗಳ್ ಪ್ರಭುಗಳು ॥ ೭ ॥

## ॥ ಪರಮ ಗುರುಗಳ ಸ್ತೋತ್ರ ॥

ಹಾನಗಲ್ಲ ವಿರಕ್ತಮಠದ ಸ್ವಾಮಿಗಳ ಪರ-।
ಮಾನುಭಾವಿಗಳ ಶ್ರೀಗುರು ಕುಮಾರೇಶ್ವರರ ।
ಜ್ಞಾನನಿಧಿ ವೀರಶೈವ ಮಹಾಸಭಾಸ್ಥಾಪಕರ ಶಿವಸುಶೀಲಾತ್ಮರ ।
ಮಾನಿಗಳ ಶಿವಯೋಗಮಂದಿರ ಸ್ಥಾಪನಾ-।
ನೂನ ಕರ್ತೃಗಳ ದೀನಾಂಧ ಪೋಷಣರತರ ॥
ದಾನಿಗಳ ಸತ್ಯಾನುರಾಗಿಗಳ ಪಾದಕ್ಕೆ ವಂದಿಪೇಂ ಗುರುವರ್ಯರ ॥ ೮ ॥

## ॥ ಗುರುಗಳ ಸ್ತೋತ್ರ ॥

ಶ್ರೀಗುರು ಕುಮಾರೇಶರುರು ಶಿಷ್ಯನಾಗುತ್ತೆ ।
ಲೋಗರಿಂ ಜನ್ಮಾಂಧನೆಂದೆನಿಸಿ ಕೊಳ್ಳುತ್ತೆ ।
ರಾಗದಿಂದುಭಯಸಂಗೀತಮಂ ಕಲಿಯುತ್ತೆ ವಿದ್ಯಾರ್ಥಿಗಳಿಗೆ ಕಲಿಸಿ ।
ಭೋಗಿಭೂಷಣ ಸದವತಾರಿಯಾಗೆಸೆಯುತ್ತೆ ।
ಶ್ರೀಗೆ ವೀರೇಶ ಪುಣ್ಯಾಶ್ರಮವ ರಚಿಸುತ್ತೆ ।
ಯೋಗಿವರನಾದ ಪಂಚಾಕ್ಷರಾರ್ಯಂ ಪೊರೆಯಲೆನ್ನ ಗುರು ಗದಗವಾಸಂ ॥ ೯ ॥

॥ ಬಸವೇಶ್ವರ ಸ್ತೋತ್ರ ॥

ವೀರಶೈವ ಮತಾಬ್ಧಿಚಂದ್ರ ಕಾಯಕಕೇಂದ್ರ
ಸಾರಸುಖ ಸಾಂದ್ರ ಸತ್‌ಪ್ರಮಥ ಶಿವ ಶರಣೇಂದ್ರ ।
ವೀರಭಕ್ತಿ ವಧೂಸುಮಾಂಗಲ್ಯ ಮಣಿರುಂದ್ರ ಶಿವಮಹಾಮಂತ್ರಮೂರ್ತೆ ।
ಧೀರ ಬಸವೇಶ ಸತ್‌ಕೋಶ ಕೃತಭವನಾಶ ।
ಶೂರ ಬಿಜ್ಜಳ ಸುದಂಡಾಧೀಶ ಚಿತ್‌ಕಾಶ ।
ಘೋರ-ದುರಿತ ಹರಪ್ರಕಾಶ ನುತಿಪರಕ್ಲೇಶಮಂ ಕಳೆದು ಪರಸಿ ಪೊರೆಯೈ ॥ ೧೦ ॥

॥ ಚನ್ನಬಸವೇಶ್ವರ ಸ್ತೋತ್ರ ॥

ಅಕ್ಕನಾಗಲೆಯಣುಗನೆನಿಸಿ ಲೀಲೆಯ ಧರಿಸಿ ।
ಮಿಕ್ಕಿಷಟ್‌ಸ್ಥಲ ಪದದೆ ನೆಲಿಸಿ ಶರಣರ ಪರಸಿ ।
ಸಿಕ್ಕಿದರಿಷಡ್‌ವರ್ಗಮಂ ಜಯಿಸಿ ಶ್ರುತಿಪೆರಸಿದಾ ಯಜ್ಞಕೃತಿಯ ಬಿಡಿಸಿ ।
ಅಕ್ಕರದ ಸಿದ್ಧರಾಮಂ ಬಯಸಿದುದನಿರಿಸಿ ।
ಚಿಕ್ಕದಣ್ಣಾಯಕಂ ಧರೆಗುದಿಸಿ ಶುಭಕರಿಸಿ ।
ಮಿಕ್ಕಿರುವ ಚನ್ನಬಸವೇಶ್ವರಂ ಸೊಗಕೆಳಸಿಡೆನ್ನ ಪೊರೆಯಲಿ ಕರುಣಿಸಿ ॥ ೧೧ ॥

॥ ಪ್ರಭು ಸ್ತೋತ್ರ ॥

ಶ್ರೀಮನ್ನಿರಂಜನ ಕಲಾತ್ಮಕನಾಗಿಹ ಪ್ರಭುವು ।
ಧೀಮತ್ ಪ್ರಶಸ್ತನಾದಲ್ಲಮಾಹ್ವಯ ವಿಭುವು ।
ಸಾಮಾಭಿನುತ ನಾಮರೂಪರಹಿತ ಸ್ವಭೂವು ಭಕ್ತಸಾಕೃತಿಶಂಭುವು ॥
ಕಾಮಾಂತಕಂ ಸಕಲನಾಯಕಂ ಸತ್‌ಸುಖಂ ।
ಧಾಮೋತ್ಸುಕಂ ಸುಕೃತಿದಾಯಕಂ ಚಿತ್‌ಸಖಂ ।
ಕ್ಷೇಮಾಧಿಕಂ ನತ-ಸಹಾಯಕಂ ಶ್ರುತಿಮುಖಂ ಕೃಪೆಯನೆಸಗಲಿ ಕೃತಿಗಿವಂ । ೧೨ ॥

॥ ಆತ್ಮಗರ್ವ ನಿರಸನಂ ॥

ಹುಟ್ಟುಗುರುಡಂ ಕವಿಯು ನಿಜವಲ್ಲಮನುಭವಿಯು ।
ದಿಟ್ಟತನಮೆನಿತಿವಂಗೀ ಪುರಾಣವ ಬರೆವ ।
ಕಟ್ಟನ ಪ್ರತಿಜ್ಞೆಯಂ ಗೈದು ತೊಡಗಿದನೇತಕೆಂದು ನಗದಿರಲಿ ಜನರು ।
ತಟ್ಟನುತ್ತರವ ಕೊಡುತಿಹೆನಾನವರ್ಗಿಂತು ।
ಪಟ್ಟದವತಾರಿ ಯಿಂದಿನ ಜಗದ್ಗುರುವರಂ ।
ಮುಟ್ಟ ಕರುಣೆಯೊಳಾಶಿಷವ ಗೈದ ಬಳಿಕೆಂತುಮುಸಮರ್ಥನಪ್ಪೆನಿದಕೆ ॥ ೧೩ ॥

ಉರಿಯು ಮುಟ್ಟದ ಕಪ್ಪುರಂ ಜೋತಿಯಪ್ಪಂತೆ |
ಯುರಿಯು ಮುಟ್ಟದ ಕಟ್ಟಿಗೆಯುಮಗ್ನಿಯಪ್ಪಂತೆ |
ಯುರಿಯು ಮುಟ್ಟರುವರಳೆ ದೀಪಮಪ್ಪಂತೆ ಗುರುಸಿದ್ಧನಪರಾವತಾರಿ
ಪರಮ ಕವಿ ಗುರುಸಿದ್ಧಲಿಂಗನ ಕೃಪೆಯು ಮುಟ್ಟಿ |
ಸರಸ ಕವಿಯಾನಾಗಿ ಕರ್ತೃ ಕಾವ್ಯಮನೀಗ |
ಬರೆಯ ತೊಡಗಿದೆನಿಂದು ಕಾಳಿಯ ದಯೆಯ ಪಡೆದ ಕುರುಬನಂತಚ್ಚರಿಯದೇಂ
|| ೧೪ ||

॥ ಕವಿ ಚರಿತ್ರೆ ||

ಪುಟ್ಟ ಕವಿಯಾದೆನಗೆ ಪುಟ್ಟರಾಜಾಹ್ವಯಂ |
ಕೊಟ್ಟಹರ್ ಜನ್ಮಮಂ ಸಿದ್ಧಾಂಬೆ-ರೇವಣರ್ |
ಪುಟ್ಟದೂರ್ ಹಾನ್ಗಲ್ಲ ಪ್ರಾಂತದಾ ಹೊಸಪೇಟೆ; ಬೆಳೆದೂರು ದೇವಗಿರಿಯು
ನೆಟ್ಟನೀಗಿರ್ಪೂರು ಗದಗು ನಗರಂ ತಿಳಿಯೆ |
ಮುಟ್ಟಸಿದನೀ ಸ್ಥಲಕೆ ಚಂದ್ರಶೇಖರನೆಂಬ |
ದಿಟ್ಟನಹ ಮಾತುಲಂ ತನಗೆ ಸಂಗೀತಮಂ ಕಲಿಸಿದಾ ಗುರುವಿನಡಿಗೆ || ೧೫ ||

ಗುರುವಿನಭಿಧಾನವಿದೆ ಪಂಚಾಕ್ಷರಾರ್ಯನೆಂ-|
ದರಿಯಲ್ಕುಭಯಗೀತವಿದ್ಯೆಯಂ ಕಲಿಸಿದಂ |
ಮೆರೆವಿವಂ ತಾನೆ ಸಂಸ್ಕೃತ ಹಿಂದಿ ಕನ್ನಡ ಸುಭಾಷೆಗಳ ಸಾಹಿತ್ಯಮಂ |
ಬರೆದೆನೀತನ ಕೃಪಾಬಲದಿಂ ತ್ರಿಭಾಷೆಗಳೊ-|
ಳುರೆ ಪುಸ್ತಕಂಗಳಂ ಗದ್ಯಪದ್ಯಂಗಳೊಳ್ |
ಹರ-ದೀಕ್ಷೆಯಂ ಪಡೆದೆನಾನೆ ಬಿದರೀಪ್ರಭುಕುಮಾರ ದೇವರೊಳರಿಯುತೆ || ೧೬ ||

|| ಕಾವ್ಯ ವರ್ಣನೆ ||

ಸುಧೆಯಂತೆಯಮೃತಾಖ್ಯಮೀಶನೊಲಹೀನಗಂ |
ನಿಧಿಯಂತೆ ನವಯುತಂ ಹರಿಯಂತೆ ಸವಿರಮಂ |
ವಿಧಿಯಂತೆ ಸತ್ಯಲೋಕಾಶ್ರಯಂ ಕವಿಯಂತೆ ವಾಗರ್ಥಕೋಶಮಿದವೆ ||
ವಿಧುವಿನಂತೆ ಸಕಲಂ ದಿವದಂತೆ ಬುಧ-ರತಂ |
ವಧುವಿನಂತಾಶಾಶ್ರುತಂ ಕಟಿಯವೋಲ್ ಸುಗುಣ |
ಮಧುರದಂತುರು ರಸವೃತಂ ವದನದಂತೆ ವೃತ್ತೋತ್ತಮಂ ಸತ್ಪುರಾಣಂ || ೧೭ ||

## ||ಕಾವ್ಯ ಅರ್ಪಣೆ ||

ಮೂರುಸಾವಿರಮಠದ ಕರ್ತೃ ಗುರುಸಿದ್ಧನೀ |
ಮೀರಿದ ಪುರಾಣಾಮೃತವ ಸಮರ್ಪಿಸುವೆ ನಾಂ |
ಪೀರಿ ಸಂತೃಪ್ತನಾಗೆಡೆಯೂರ ಗುರುಸಿದ್ಧ ನೀನೊಲಿದುಕೊಂಡು |
ಸಾರಸಾಹಿತ್ಯಮಿದಕೇನು ಜೊತೆಯಾಗಿಲ್ಲ |
ಭೂರಿ ಚಾರಿತ್ರ್ಯಮಿದಕಾವುದುಂ ಸಮವುಲ್ಲ |
ಸಾರವಿದ ನೀನಿದಂ ಸಲಿಸಿದಾ ಮೇಲಲ್ಲವೇ ತಿಳಿಯುವದು ಕೊಳ್ಳಿದಂ || ೧೮ ||

## || ಕಾವ್ಯದ ಅಧಿಕಾರಿಗಳು ||

ಪೂವಳ್ಳಿ ಮೂರುಸಾವಿರ ಮಠದ ಗುರುಸಿದ್ಧ-|
ನಾ ವೊಳ್ಪಿಯೀ ಚರಿತ್ರಕ್ಕೆ ನಾಯಕನವನೆ |
ಭಾವಕ್ಕೆ ನಲಿವೀವ ಗುರುವು ಶಿವನಾಗಿಹಂ ಲಿಂಗಂ ಮಹಾದೈವತಂ
ಓವುತ್ತಲೋದುವರ್ ಕೇಳುವರ್ ಸದ್ಭಕ್ತ-|
ರಾವಾಗಳುಂ ಪೇಳುವರ್ ಶರಣರಾಗಿಹರ್ |
ಜೀವತ್ವಮಂ ಕಳೆದುಕೊಳುವರಧಿಕಾರಿಗಳ್ ಪೇಳಿಸುವವರ್ ಸುಖಿಪರು || ೧೯ ||

## || ಪುರಾಣದ ಮುದ್ರಿಕೆ

ವೀರೇಶಪುಣ್ಯಾಶ್ರಮಂ ಗದುಗಿನೊಳ್ ಮೆರೆವು-|
ದೋರಂತೆ ಶೋಭಿಸುವದಲ್ಲಿ ಪಂಚಾಕ್ಷರನು-|
ದಾರಸ್ವಗುರುವರನ ಯೋಗದ ಸಮಾಧಿಯದು ಕುಳಿತಿಲ್ಲಿ ಗುರುಕರುಣೆಯೋಳ್ ।
ಸಾರಜ್ಞ ಗುರುಲಿಂಗ ಚರಭಕ್ತಕಿಂಕರಂ |
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ |
ಮೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ ಪೌರಾಣ ಮಂಗಲ ಸಂಧಿಯು || ೨೦ ||

ಅಂತು ಸಂಧಿ ಮಂಗಲಾಚರಣಕ್ಕಂ ಪದಂಗಳು ೨೦ಕ್ಕಂ

卐 ಮಂಗಲಂ 卐

ಶ್ರೀ ಗುರುಬಸವಲಿಂಗಾಯ ನಮಃ



# ಒಂದನೆಯ ಸಂಧಿ





|| ಸೂಚನೆ ||

ಕೈಲಾಸದಿಂದೆ ಶಿವನವತರಿಸಿ ಬಂದಭವ ।
ನೋಲಾಡಿ ಹೂಬಳ್ಳಿಪುರದ ಕಂದರದ ನವ ।
ಲೀಲಾತ್ಮನಾಗಿ ಮಂಡಿಸಿದಂ ಸ್ವಲಿಂಗಮಂ ನಿರುಕಿಸುತೆ ಜಂಗಮಾಂಗಂ ||

[ಸಂಧಿ ಪ್ರಾರ್ಥನಾ—ಪದ್ಯ]

ಗೌರೀವರಂ ಪರಮಗಂಗಾಧರಂ ನಿಗಮ |
ಸೂರೀಶ್ವರಂ ಮಹಿಮ ತುಂಗೈಶ್ವರಂ ವಿಷಮ |
ಭೂರಿಪ್ರಪಂಚರಮ ಮಂಗಲಾಂಗಾಪ್ರತಿಮ ತನು-ಭಸ್ಮ-ನಿಟಿಲ-ನೇತ್ರ |
ಶಾರೀರ-ಸದನುಪಮ ನಿರವಸ್ಥ ಚಿತ್ಸುಗಮ |
ಚಾರಿತ್ರ್ಯಪೂತತಮ ಭವ್ಯ ನವ್ಯ ಮುದಣಿಮ ।
ಶೌರಿಪ್ರಮುಖಧರ್ಮ ತೇಜೋ ಮಹದ್ಗರಿಮ ಗುರುಸಿದ್ಧ ಪೊರೆ ವಿಶ್ವವ ||೧||

ಮೋದದೊಳ್ ನಾದದೊಳ್ ಜ್ಞಾನದೊಳ್ ಸುಗುಣದೊಳ್ ।
ಭೇದವಿಲ್ಲದೆ ಬೆರೆದು ಕು-ಭವದೊಳ್ ಕ್ಷೀರದೊಳ್ ।
ವಾದಕಿದತೀತಮೆನಲೀ ಸಮುದ್ರಾಹ್ವಯಂ ಮೆರೆಯುತ್ತೆ ವ್ಯಾಪಿಸುತ್ತೆ ।
ಮೇದಿನಿಯೊಳೆಸೆಯುವದು ಕಣ್ಗೆ ಜಲವಮಂ ಪೊಂದು-।
ತಾದರದೊಳಾಶ್ರಯವನಿತ್ತು ಸರ್ವಕ್ಕಂದು ।
ವೇದ ವರ್ಣನೆಯಾಂತು ಲವಣ ಮೌಕ್ತಿಕ ರತ್ನ ಸತ್ತ್ವವಾಳಮನೀಯುತೆ ||೨||

ಸೂರ್ಯಂ ಸ್ವಕಿರಣದಿಂ ಜಲವ ಸಿಹಿಗೊಳಿಸುತ್ತೆ ।
ಪೂರ್ಯ ಮೇಘಕೆ ತುಂಬಿ ಭುವನಕ್ಕೆ ಸುರಿಸುತ್ತೆ ।
ಕಾರ್ಯಮನವಂ ಬಿಡದೆ ಮಾಡುತಿರಲುಂ ಮತ್ತೆ ತಜ್ಜಲಂ ಪೊಳೆಯಾಗುತೆ ।
ಶೌರ್ಯದಿಂ ಪ್ರವಹಿಸುತೆ ಒಂದಿಲ್ಲಿ ಕೂಡುತ್ತೆ ।
ಭೂರ್ಯಸಾಧ್ಯ ಪ್ರಯತ್ನವ ಮಾಡಲುಂ ನಿತ್ಯ ।
ಧೈರ್ಯದಿಂ ಕಡಲದಕೆ ಸ್ವತ್ವಮಂ ನೀಡುತ್ತೆ ಕಾಯ್ದುಕೊಂಡಿತು ಸತ್ತ್ವವ ||೩||

ಸಾಗರಂ-ಜಲಜಂತು-ಭೀಕರಂ-ಸಕಲಜಲ-।
ದಾಗರಂ-ಶುಕ್ತಿ: ಶಂಖಾಕರಂ, ವಿಷದಮೃತ-।
ದೋಗರಂ, ಶ್ರೀಂದು-ಜನಿಮಂದಿರಂ, ವಿಧಿಸೃಷ್ಟಿಸುಂದರಂ ಗಿರಿ-ಕಂದರಂ ||
ಲೋಗರಕ್ಷಿ-ಗಭೀರ ಭೂದೇವಿಯಂಬರಂ ।
ವಾಗತೀತ-ಸುಮಹಿಮೆ ಗರಿಮೆ ತನಗಿಹುದೆನುತ-
ಲಾಗಳುಂನುಡಿದು ಗರ್ಜಿಪುದುಯೆನೆ ಗಾಳ್ಗದಿಪ ತೆರೆಗಳುಲಿ ಕೇಳ್ವದಿಂತು ||೪||

ಇಂತೆಸೆವ ಕಡಲಿದುವೆ ದಿಕ್‌ತ್ರಯಕೆ ಮೂರ್ಪೆಸರ ।
ಕಾಂತಮೆನೆ ತಳೆಯುತ್ತೆ, ವ್ಯಾಪಿಸುತಲತಿದೂರ-
ಕಾಂತು ಬೇರ್ಬೇರಾಗಿ ತೋರ್ಪುದಿದರುತ್ತರಕೆ ಗಿರಿ ಹಿಮಾಲಯ ಮೆಸೆವುದು ।
ಅಂತು ಪಶ್ಚಿಮ ಪೂರ್ವದಿಕ್ಕುಗಳನಾವರಿಸಿ ।
ಶಾಂತ- ರಸದೆಡೆಯಾಗಿ, ಧರೆಯಳೆದ ಕೋಲಂತೆ ।
ಸಂತತಂ ಗಂಗಾದಿ-ನದಿಗಳ [illegible] ಕಣ್ಗೆ ಮಂಗಳವಾಗುತೆ ||೫||

ಕುಲಪರ್ವತಂ ಶ್ರೇಷ್ಠಮಾಗಿಹುದರಿಂ |
ಕಲಧೌತ ಮಣಿ–ರಜತ ಖನಿಗಳಿಲ್ಲಿಹುದರಿಂ |
ಮಲೆತಲೆವ ಖಗ–ಮೃಗಕೆ ನೆಲೆಯ—ಸಲಿಸಿಹುದರಿಂ ಸು–ವನಸ್ಪತಿಯಬನಕಿದೆ ||
ನೆಲೆಯಾಗಿ ಸುತಪಸ್ವಿಕಲೆಯಾಗಿರುವದರಿಂ |
ಸಲೆ–ರಾಜನೆಂಬ ಪೆಸರಿದಕೆ ಸಲುತಿಹುದರಿಂ |
ಬಲೆದು ಮೆರೆದಿಹುದು; ಗಿರಿಯಿದು ತನಗೆ ಸಮರಿಲ್ಲಮೆಂಬಂತೆ ಕೀರ್ತಿಯಾಂತು ||೬||

ಶಿವನೀ ಹಿಮಾಲಯದ ಭೂಪತಿಯಾದ |
ಧವ ಪರ್ವತಾಖ್ಯ ಭೂಪಾಲನಾ ಮಗಳಾದ |
ನವ ವಧೂಟಿಗೆ ಮೆಚ್ಚಿ ಪರಿಣೀತನಂದಾದನೀ ಗೌರವದ ಗಿರಿಯಿದು |
ಸವೆಯದಂತೆಸಗುತಿತ್ತಿಹುದೆಮ್ಮ ಭಾರತಕೆ |
ಶಿವೆಗಿರ್ಪ 'ಹೈಮವತಿ' ಯೆಂಬ ನಾಮಮೆಯಿದಕೆ |
ಸವಿ ನೆನಹ ಸಾಕ್ಷಿಯಿದೆ; ಸದನ ಮಾಗಿಹುದಂತೆ ಸರ್ವ ದೇವತೆಗಳಿಗಿದೆ ||೭||

ಇದರ ಶಿಖರಕ್ಕೆ ಗೌರೀಶಂಕರಾಹ್ವಯಂ |
ಪದುಳ್ದೆಸೆವ್ರುದಿಲ್ಲಿ ಕೈಲಾಸ ಪರಮಾಲಯಂ |
ಪದೆದೆಲ್ಲ ಪದವಿಗಳನೀವುದದರಾಶ್ರಯಂ ಮಣ್ಕಲ್ಲು =ಪೊನ್ನುಪರುಷಂ ||
ಪುದಿದ ಖಗಮೃಗಗಳಿಗುಮೆಲ್ಲಿ ತಾಪತ್ರಯಂ! |
ಬದಿಯ ಗಿಡಬಳ್ಳಿಗಳಿಗೆಂತು ಶೋಷಣಭಯಂ! |
ವಿದಿತಮೆನಲುದಿಸುವದದೆಂದೊಡಿಲ್ಲಿಯ ಮಹಿಮೆಯಾರ್ಗೆ ಬಣ್ಣಿಸಲಪ್ಪುದು ||೮||

ಎತ್ತಿದಾ ಸುಜ್ಞಾನಿ ವಿಧಿಗೆ ಪಕ್ಕಾಗಿಹಂ; |
ಹತ್ತಿದಾ ವಿಜ್ಞಾನಿ ನಾಸ್ತಿಕಂ ತಾನಹಂ; |
ಸುತ್ತಿದಾ ಅಜ್ಞಾನಿ ಸಿದ್ಧಿಗಳ ಪಡೆದಿಹಂ ತಿಳಿಯದೀ ಶಿಖರ–ಮಹಿಮೆ ||
ಒತ್ತಿದಾ ಪರಶಿವಂ ಮಾದೇವನಾಗಿಹಂ |
ಚಿತ್ತಯಿಸಿದಂ ನುತಿಪನಖಿಲ ಪದವೈದಿಹಂ |
ತೆತ್ತಿಗಂ ಧನಪತಿಯು ಶಂಕರನೆನಿಸಿಹಂ ತಿಳಿಯಲಿದಕಿದು ಸಾಕ್ಷಿಯು ||೯||

ಕೈಲಾಸನಾಮ ಪುರಮುಂಟಲ್ಲಿ ಸುತ್ತಿದನು –|
ಕೂಲೇಷ್ಟಮಾದ ಕಂದಕಮುಂಟದಕ್ಕಲ್ಲಿ ।
ಕೂಲ-ಪ್ರಪೂರ್ಣ ಜಲಮುಂಟದಕ್ಕದಂ ಕುಡಿದವರ್ ಸುರರಾದರು ||
ಮೇಲಾಪ ಸುಧೆಯೆಂಬ ಪೆಸರಾಯಿತಿದನವರ್ |
ಮೇಲಾಗಿ ಕೊಂಡಾಡಿ ನಿಜಲೋಕ ಕುಂಡಗಳೊ- |
ಳೋಲಾಡಿ ತುಂಬಿಕೊಂಡರ್ ಕೋಟಿಯುರು ಶಿಲೆಯು ಚಿಂತಾಮಣಿಯದವರಿಗೆ
||೧೦||

ಕೊತ್ತಲಂಗಳೊಳೆಸೆದ ಕಲ್ಲು ಪರುಷದ ಮಣಿಯು |
ಮತ್ತೆ ದ್ವಾರದೆ ಪೊಳೆದ ಕಲ್ಲು ಕೌಸ್ತುಭ ಮಣಿಯು |
ಪತ್ತಿದ ಕದದ ಕಲ್ಲು ಶ್ರೀ ಶಮಂತಕ ಮಣಿಯು ಮಣಿಯು ಮುಖ್ಯರೀ ಶಿಲೆಗಳಣುವ||
ಚಿತ್ತಯಿಸಿತೊಯ್ದೊಂದು ಸಿರಿವಂತರಾಗಿಹರ್ |
ಸುತ್ತಣೊಳ ತೋಂಟದಾ ಗಿಡದ ಕೊಲ್ಲೆಯ ಕೊಂಡು,
ಪತ್ತಿಸುತಲವುಗಳಿಂ ಕಲ್ಪಿತವ ಪಡೆದರವೆ ಕಲ್ಪವೃಕ್ಷಂಗಳಹವು ||೧೧||

ಅಲ್ಲಿಹಂ ಗಣಿಮಾದಿ ಸಿದ್ಧಿಗಳ್ ವಶಮಿಹವು ।
ಸಲ್ಲೀಸೆಶವ ಧೇನುಗಳ್ ಕಾಮಧೇನುಗಳಹವು |
ಚಲ್ಲಿರುವ ಪುಷ್ಪಗಳ್ ತಾರಿಕೆಗಳಾಗಿಹವು, ಕಿಂಕರರ್ ದೇವತೆಗಳು ।
ಸಲ್ಲುತಿಹ ಸರ್ವ ಋತುಗಳ್ ಸೌಮ್ಯಮಾಗಿಹವು |
ಮೆಲ್ಲನುರೆ ಪವನಂಗಳುಲಿದು ಪ್ರಿಯಮಾಗಿಹವು |
ಸಲ್ಲಲಿತರಾಗಿಹರ್ ಸೂರ್ಯಚಂದ್ರರ್ ಬೆಳಗಿ ಶಿವನಿಗಾರ್ ಬೆದರದವರು ||೧೨||

ಶಿವನ ಸಂಕಲ್ಪದಂತರಮನೆಯು ಶೋಭಿಪುದು |
ಭುವನಂಗಳೊಳ್ ತೋರುವರಮನೆಗಳರೆಮನೆಯೆ |
ಪವಮಾನನೀ ಮನೆಯು ಪೂರ್ಣಮಾಗಿಹುದಾದಡವನಿಗಹುದರಮನೆಯಿದು ||
ಕವಿಗಳುರೆ ಬಣ್ಣಿಪರ್ ನೃಪರದರಮನೆಯೆಂದು |
ತವೆ-ಯರಸು-ಮನೆಯುಂಬುವರ್ಥಮುಂ ಪೇಳುವರ-|
ಭವನ ಮನೆಯಿದುವೆ ಬಲ್ಲವರಿಗರಸು-ಮನೆ ತಿಳಿ ಯಿವನಿಗಿಂದರಸರಾರು ||೧೩||

ಧರ್ಮವೆಂಬುವದೊಂದು ಹೆಬ್ಬಾಗಿಲೀ ಗೃಹಕೆ |
ಕೂರ್ಮೆಯ ಕ್ಷಮೆಯು-ಶ್ರದ್ಧೆ-ದಾನವೆಂಬೀ ಮೂರು |
ಪೇರ್ಮೆಯುರೆ ದ್ವಾರಂಗಳಿರ್ಪವರಿಯಲ್ ಪೊರಗೆ ಸಮತೆ ಶಾಂತಿಯೆನಿಪ್ಪಿವೆ ||
ನಿರ್ಮಿಸಿದ ಜಗುಲಿಗಳ್ ಶಮೆ-ದಮೆಯ ಕಲಶಗಳ್ |
ಶರ್ಮ ಸುಧೆಯಿಂ ಪೂರ್ಣಮಾಗಿಹವು ಬಾಗಿಲಕೆ |
ನಿರ್ಮಿತ ಸುಧೈರ್ಯ ಪ್ರತಾಪ ನಿಗ್ರಹ ಸತ್ಯಗಳೆನಿಪ್ಪ ತೋರಣಗಳು ||೧೪||

ಸ್ಥೈರ್ಯ ವೈರಾಗ್ಯ ಭಕ್ತಿ ಜ್ಞಾನಗಳ್ ತಿಳಿದ-|
ಚೌರ್ಯ ಪರಹಿತ ಸುಕೃತಿ ಸೌಮ್ಯ ದಾಕ್ಷಿಣ್ಯಗಳ್ |
ವೀರ್ಯದಿಂ ನಿರ್ಮಿಸಿದ ಬೋದುಗೆಗಳಾಗಿಹವು ದಕ್ಷತೆಯು ಮಾಳಿಗೆಯಧಃ ||
ಆರ್ಯತೆಯು ನೆಲೆಗಟ್ಟು, ನಿರ್ಮಲತೆ ಭಿತ್ತಿ-ಸತ್ |
ಕಾರ್ಯತೆಯು ಸಿಂಹಾಸನಂ, ಶಿವನದರ ಮೇಲ-|
ನಾರ್ಯತೆಯ ಕಳೆಯಲ್ಕೆ ಪಂಚಮುಖ ದಶಭುಜ ಸದಿಂದುಗಳ ಧರಿಸಿಮೆರೆವಂ||೧೫||

ಎಡದ ತಾಣದೆ ಪಾರ್ವತೀದೇವಿ ಮಾದೇವಿ |
ಮೃಡನ ನಿರುಕಿಸುತೆ ಗಿರಿಜಾತೆ ವರದಾ ಖ್ಯಾತೆ |
ಸಡಗರದೆ ಕುಳ್ಳಿರ್ದು ಮೆರೆದಿಹಳ್ ದಾಕ್ಷಾಯಣೆಯು ಮಂತ್ರ-ರೂಪೆ ವಿಮಲೆ ||
ಕಡುಬಿನದದಿಂ ಗಣ-ಪತಿಯು ಷಣ್ಮುಖಂ ಮುಬದೆ |
ಬಿಡದೆ ದಕ್ಷಿಣ-ವಾಮ-ಭಾಗಂಗಳಂ ಪೊಂದು-|
ತಡಿಗಡಿಗೆ ಪಿತೃಗಳಾನಂದಮಂ ಪೆರ್ಚಿಸುತೆ ಕುಳ್ಳಿರ್ದರನುನಯದೊಳೆ | ||೧೬||

ಸರಸತಿಯು ಭಕ್ತಿಯಿಂ ನುಡಿಸುವಳ್ ವೀಣೆಯಂ |
ಸರಸದಿಂ ನಂದಿಯು ಮೃದಂಗಮಂ ನುಡಿಸುವಂ |
ಸರನಿಯಂತೊಪ್ಪುತಿಹ ಸಭೆಯಲ್ಲಿ ಭೃಂಗೆಯುರು ತಾಂಡವವ ಗೈಯ್ಯುತಿಹನು ||
ಹರುಷದಿಂ ' ಗಂಧರರ್ " ನೆಗಳ್ದಪರ್ ಗಾನಮಂ |
ಪರುಷ ಹಸ್ತ್ಮದ ಗಣರ್ ವೌನಿಪರ್ ಸಭಿಕರಂ |
ನೆರೆ ಮುದದೆ ಋಷಿ ಕನ್ನಿಕೆಯರ್ ಸುಶೋಭನಂಗಳ ಪೇಳುತಿಹರಾಲಿಯುತೆ ||೧೭||

ಇಂತು ಸಾಗರದಂತೆ ಶೋಭಿಸುವ ಸಭೆಯಲ್ಲಿ |
ಶಾಂತನಹ ನಾರದಂ ಶಿವನ ನೆನೆಯುತಲಲ್ಲಿ |
ಸಂತಸವ ಕಂದಿಸುವ ಮುಖಮುದ್ರೆಯೆಸೆದಿರಲ್ ದೃಶ್ಯನಾದಂ ಶಿವಂಗೆ ||
ಕಾಂತಕರುಣಾ–ಕಟಾಕ್ಷ ಕೆಡಹುತವನಲ್ಲಿ |
ಸ್ವಾಂತಮೊಪ್ಪಲ್ ಸ್ವಸೇವೆಯ ಬಿಡಿಸಿ ಬಳಿಯಲ್ಲಿ ।
ಸಂತನಂ ಕೈಸನ್ನೆಯಿಂ ಕರೆದು ಕೇಳಿದಂ ಸರ್ವಲೋಕದ ಕುಶಲವ ||೧೮||

ನಾರದಂ ವಂದಿಸುತೆ ಶಿವಗೆ ಕೈಮುಗಿಯುತ್ತೆ |
ಸಾರವಾಣಿಯೊಳಿಂತು ನುಡಿದನೀಕ್ಷಿಸಿ ದೇವ |
ಭೂರಿ ಕರಣೆಯ ಬೀರಿ ತಾವೆ ರಕ್ಷಿಸುತ್ತಿರಲ್ ಕಾವ ಲೋಕಕ್ಕೆ ಶೋಕಂ |
ಸಾರುತಿಹುದೆಂತು ಶಿವ ಭೂಲೋಕದತ್ತಲೇ |
ಕೊರೇಣದ ಕಾರುಣಿಕ ದೃಷ್ಟಿ ವಿರಳತೆಯಹುದು |
ಚಾರು ಚರಣವ ಪಿಡಿದು ಬೇಡಿ ಕೊಳ್ವೆಂ ಪೇಳದೇ ಮೂಲಮೀ ಲೋಕಕೆ ||೧೯||

ನಾಸ್ತಿಕರ್ ಪೆರ್ಚಿಹರ್, ಕರ್ಮಿಗಳ್ ನಲಿಯುವರ್ |
ವಾಸ್ತವಿಕ ಭಾವಿಕರ್ ನೆರೆ ವಿಷಯಲಂಪಟರ್ |
ನ್ಯಸ್ತ ವೈದಿಕರಲ್ಲಿ ಚಾರ್ವಾಕರಾಗಿಹರ್ ದುರ್ವ್ಯಸನಿಗಳು ಮೆರೆವರು |
ಅಸ್ತರಪ್ಪರ್ ಗುಣಯುತರ್, ಧರೆಯೊಳುತ್ತಮರ್ ।
ವ್ಯಸ್ತ ಮತಿಗಳನೊಲಿಸಿ ಕೆಲರಮಳರುಳಿದಿಹರ್ |
ಸ್ವಸ್ತಿ ಮೋಕ್ಷಂ ವಿಷಯ ಸುಖಮಹುದು ಸುಮಹಿಮರ್ ತಿಳಿಯೆ ನಗೆಗೀಡಪ್ಪರು ||೨೦||

ಇದುನಾಲಿಸುತ್ತೆ ಪರಮೇಶನಿಂತೊರೆದನೆಲೆ |
ಸದಮಲನೆ, ನಾರದನೆ ಯೀ ಕಥೆಯನರಿದಿಹೆವು |
ಮೊದಲೆ ನಂದೀಶಾದಿ ಗಣರಿಗಪ್ಪಣೆಯನಾವಿತ್ತಿಹೆವು; ಚಿಂತಿಸದಿರು |
ಇದಕಾ ಮುನೀಶ್ವರಂ ಮಾತನಾಡಿದನಿಂತು :-।
ಸದಯ ದೇವನೆ, ನಾನದಂ ಬಲ್ಲೆನಲ್ಲಿ ತಾ– |
ವುದಿಸದಿರ್ದೊಡೆ ಧರೆಯು ಕೈಲಾಸಮೆಂತಹುದನಂತರದ ಸ್ಥಿತಿಯರಿಯಿರಿ ||೨೧||

ಎಂದೊರೆದು ನಮಿಸುತಲ್ಲಿಂದೆ ತೆರಳ್ದಂ ಮುನಿಯು
ಸಂದೆಗವ ಕಳೆದುಕೊಳ್ಳಲ್ಕೆ ಶಂಭುವು ತಾನೆ ।
ಸುಂದರದ ಸುಜ್ಞಾನ ನಿಜ ದೃಷ್ಟಿಯಿಂ ತಿಳಿದು ಪೊರಟನಾಗಳೆ ಭುವನಕೆ
ಚಂದಿರನ ಗಂಗೆಯಂ ಪಂಚವದನಂಗಳಂ ।
ಸಂದಿದಾ ವಿಷಕಂಠಮಂ ತನ್ನೊಳಡಗಿಸುತೆ ।
ಕುಂದಿರದ ಚರ-ರೂಪಮಂ ಧರಿಸಿಕೊಳ್ಳುತ್ತೆ ಶಂಕರಂ ನಡೆದನೊಲಿದು ॥ ೨೨ ॥

ಉರಿಯುತಿಹ ಸೂರ್ಯಮಂಡಲ ನಿರುಕಿಸುತೆ ಶಿವ- ।
ನುರಿಯಭಯಮಂ ಕೊಟ್ಟದಕ್ಕೆ ತಾರಾಪತಿಗೆ ।
ಸರಸ ಶಾಂತಿಯ ನೀಡಿ ನಕ್ಷತ್ರಮಂಡಲಕೆ ಮಿಸುಪ ಬೆಳಕಂ ನೀಡುತೆ ।
ಕರಗದಿಹ ಸತ್ತ್ವಮಂ ಗ್ರಹಮಂಡಲಕ್ಕಿತ್ತು ।
ಚರಿಸುತಿಹ ಶಕ್ತಿಯಿಂ ವಾಯುಮಂಡಲಕಿರಿಸಿ ।
ನೆರೆ ವೃಷ್ಟಿ-ಬಲಮನಾ ಮೇಘಮಂಡಲಕೀಯ್ಯುತಾ ಶಿವ ನಡೆದಿರ್ದನು । ॥ ೨೩ ॥

ಭೂಮಿಯಂ ಶುಭ-ಫಲದ ಸೀಮೆಯಂ ದೇವತಾ-।
ಧಾಮೆಯಂ ಜೀವತತಿಗಾಮಿಯಂ ಪರಲೋಕ-।
ನೇಮಿಯಂ ಸುಚರಿತ-ಪ್ರೇಮಿಯಂ ನಿರುಕಿಸುತೆ ಶಿವನಿಳಿದನತಿಮುದದೊಳೆ ।
ಸೋಮನಿಂ ಸ್ಥಿರಚರಲಲಾಮನಿಂ ಶ್ರುತಿ-ತತೀವಿ-।
ರಾಮನಿಂ ಬಂಧ-ಹರ ಧಾಮನಿಂ ನಿತ್ಯನುತ ।
ಸಾಮನಿಂ ಸುಗುಣಹಿತ-ಭೂಮನಿಂ ಪಾವನಮಿದಾಯಿತಿಳೆಯುಚ್ಚಕಳೆಯು ॥ ೨೪ ॥

ಈ ಭೂಮಿಸಾರಮೆನಿಸಿಹುದು ಭಾರತ ಧರೆಯು ।
ಶೋಭಾತಿಶಯದೊಳಿಲ್ಲೆಸೆವುದಖಿಲದ ಸಿರಿಯು ।
ಸೌಭಾಗ್ಯಮೀ ಕನಕ-ರಜತ ರತ್ನಗಳುಗಮದಾಗರಗಳುದಯಮಮಿತಂ ।
ಶ್ರೀಭಾರತೀಯರೆಂದೆಸೆವರಿಲ್ಲಿಯ ಜನರ್ ।
ಶ್ರೀಭಾರತೀ ಪಾರ್ವತಿಯರುದದ, ಮಾಶ್ರಿತರ್ ।
ಶೋಭಿಪ್ಪ ಸಾರ್ವಭೌಮರ್ ಶೋಭಕರ್ ತಿಳಿಯಲವರಿಗಧಿಪಂ ಭರತನು ॥ ೨೫ ॥

ಇವನನಪೆಸರಿದಕಿಹುದು ಭರತಭೂಮಿಯೆನಿಪುದು |
ಭುವನಮಿದು ಭರತಖಂಡಮೆನಿಪ್ಪುದಾವಗಂ |
ತವಮೇಣ್ ಭರತರಾಷ್ಟ್ರವೆಂದೆನಿಕ್ಕುಂ ಸಂತತ ಮಿದುವೆ ಭಾರತ ದೇಶವು ||
ಅವನಿಯೋಳ್ ದ್ವೀಪಂಗಳೊಂಭತ್ತು ಮವುಗಳೋಳ್ ।
ನವಮ ಜಂಬೂದ್ವೀಪದೊಳಗಿಹುದು ಸ್ಥಾನಮಿದು |
ಪವಮಾನಮಿಹುದಿಡುವೆ ವಿಷ್ಣು ಜನನದಸ್ಥಲಂ ಶಂಕರನ ಲೀಲಾಪದಂ ||೨೬||

ಇದರೊಳೈವತ್ತಾರು ಪ್ರಾಂತಗಳಿರ್ದವಾ- |
ಗುಹದಿತ ವೈಭವವ ಸಂಚರಿಸುತ್ತೆ ನಿರುಕಿಸುತೆ |
ಮುದಿತ ಮಾನಸನಾಗಿ ಚರರೂಪಿ ಯಹ ಶಿವಂ ಕರ್ನಾಟಕಕ್ಕೈದಿದಂ ||
ಮುದದೋಳೀ ನಾಡಿನೋಳ್ ಸಂಚರಿಸತೊಡಗಿದಂ |
ಪದುಳ್ದು ಕರಿನಾಡ ಬೆಳವಲನಾಡ ಮಲೆನಾಡ |
ಸದಮಲಂ ನೋಡುತ್ತೆ ಸುಳಿದಾಡುತಿರ್ದಪಂ ವಿಭವಮಂ ಕಂಡುನಲಿದಂ ||೨೭||

ಭರತ ಭೂದೇವಿಯ ಮುಖಂ ಸ್ವರ್ಗಸಮ ಸುಖಂ |
ಪರಿವನೇಕ ನದೀಯುತಂ ಸುಕೃತಿ ಜನಹಿತಂ ।
ನೆರೆಪಳ್ಳಕೊಳ್ಳದುದಕಂ ಚಿತ್ತಕಿದಧಿಕಂ ನಲವೀವ ಸೀಮೆಯಹುದು ||
ಕರಮೆಶವ ಕ್ಷೇತ್ರ ಪಾತ್ರಂ ನಯನ ಸುಂದರಂ |
ಸರಸಖಗಮೃಗವನಂ ರಮ್ಯಸದನಂ ಚಿರಂ |
ಪರಮ ವಿವಿಧತರ ಭಾಷಾ ಭಾಷಿಜನ ವೃತಂ ಕನ್ನಡದ ಜನ ಬಂಧುರಂ ||೨೮||

ಪೂವಳ್ಳಿ ಹೂಬ್ಬಳ್ಳಿ ಹುಬ್ಬಳ್ಳಿಯೆಂಬ ಮೂರ್ !
ತಾವಾಗಿ ನಾಮಂಗಳಾವಾವ ಕಾಲಕ್ಕೆ |
ಶೀವಿರ್ಪ ಜನತೆಯಿಂದಾವೂರಿ ಗೈದಿರುವವಾವೂರ ಕಣ್ಗೆಸೆವುದು ||
ಭಾವಕ್ಕ ಶೀತವಹ ಚರರೂಪಿ ಶಿವನಲ್ಲಿ |
ಗಾವಾಗಳೈದಿರ್ಪನಾಗ ಮೊದಲಿನ ಪೆಸರ |
ಕಾವುತಿತ್ತಿಹುದೈದಿ ಸುಜನರಾವಾಸಕ್ಕೆ ನೆಲೆಯಾಗುತೀಗ್ರಾಮವು ||೨೯||

ಗುಡಿಗಡಣವಿದು ಸಿರಂಗಹನವನ ಮದು ಜಡೆಯು ।
ನಿಡುಮನೆಯ ಸಾಲ್ಪಣೆಯು ಗಿಡಬಳ್ಳಿ ಪೂ ಮೊಗಂ ।
ಕಡುಕೆರೆಯು ಚಲ್ವಾಯಿ ನೊರೆತುಟಿಯು ತೆರೆಪಲ್ಲು ನೀರ್ಜೊಲ್ಲು ಕಣ್ಣೈದಿಲೆ ॥
ಸಡಗರದ ಕಮಲಂಗಳೆ ಕಿವಿಗಳಂಜಿಗೆಳ್ ।
ಮಿಡುಗೊರಲ್ ಪ್ರಾಣಿಗಳ ಶಬ್ದಮೇತಧ್ವನಿಯು ।
ಪಡೆಕೊಳ್ಳಗಳ್ ಮೊಲೆಗಳೊಡಲು ನದಿ ಪೊಲಗದ್ದೆ ಕೈಕಾಲಿವಾಗಿಯೆಸೆಯೆ ॥೩೦॥

ಮೆರೆವ ಪೂವಳ್ಳಿಯೆಂಬುವಕನ್ಯಯೆಸೆದಿರಲ್ ।
ಪರಮ ಶಿವನಲ್ಲಿ ಬಂದು ಕನ್ಯಾಸಂಗ ।
ಮರಿಯೆ ತನಗುಚಿತಮಲ್ಲೆಂದು ನೋಡದೆ ನಡೆದ ನಾನಂದದೊಳ್ ಮುಂದಕೆ ॥
ನೆರೆಭ್ರಮರ ದಿಂಚರದೆ ಪಿಕದಿನಿ ದನಿಯಗಾನ ।
ಮರಿಯಲ್ ಮಯೂರ ನೃತ್ಯಂ ಮನವಸೆಳೆಯುತ್ತಿರೆ ।
ಪರಶಿವನ ಮುಂದೈದದಂತೆ ನಿಲ್ಲಿಸಿತಾಗ ಗೀತಕ್ಕದಾರೊಲೆಯರು ॥೩೧॥

ಶುಕಸಾರಿಕೆಗಳೈದೆ ತಮ್ಮವಾಣಿಯ ಬೆರಸಿ ।
ಶುಕರ ಸಾಹಿತ್ಯಂ ಸತಿಯೊದಗಿಸಿದವೊಯೆನ-।
ಲಕಳಂಕವಹ ತಧ್ವನಿಯು ಮಂಜುಳಮಾಗಿ ಬನಸಿರಿಯ ಗಾನದಂತೆ ॥
ಸಕಲ ಚಿದ್‌ರೂಪಿ ಶಿವಗದು ಕೇಳಿಸುತ್ತಿಹುದು ।
ಬಕುಲ ಚಂಪಕಮೆ ಮೊದಲಾದ ಪೂಗಿಡಮೆಸೆಯೆ ।
ಸ್ವಕರದಿಂ ಸನ್ನೆಯೆಸಗುತ್ತೆ ತಿಳಿಪಿದಳೊಯೆನೆಗಾಳಿಸುಳಿದುದು ಮೆಲ್ಲಗೆ ॥೩೨॥

ಆ ಶಿವಂ ಜಂಗಮಂ ಸೋದ್ಧೃತಿಗೆ ।
ಪಾಶಹರನಿಲ್ಲಿ ದಯಮಾಡಿಸಿಹನೆಂದರಿದು ।
ಲೇಶ ಮಾದಡುಮಿವಂಗಾಯಾಸಮಾಗದಂತೀಗಳಲಿಯುವದೆನ್ನುತೆ ॥
ಸ್ವಾಶಯವ ತಿಳುಪಿ ಭೂರಮೆಯು ಸತ್‌ಕೃತಿಗೆ ಸುಮ ।
ಲೇಶ ಪರಿಮಳವಿತ್ತು ಪವನ ದೂತನ ಕಳುಪಿ ।
ಕ್ಲೇಶಮಂ ಪರಿಹರಿಸಿಪಳೊಯೆನಲ್ ವಾಯುಪೂಗಂಧಮಂ ಪೊತ್ತಲಿದುದು ॥೩೩॥

ಕಂದರದ ನಿರ್ಜರಂ ನಿರ್ಜರರನಾಗಳುಂ |
ಪೊಂದಿದಮೃತವ ತೊರೆದು ತನ್ನ ಮಧುರೋದಕವ |
ಬಂದು ಪಾನಂ ಗೈಯ್ಯಲಾಗ ಕೆರೆಯುವದೊಯೆನೆ ಜುಳುಜುಳಯೆನಿಪ್ಪ ಧ್ವನಿಯಂ||
ಸಂದು ಗೈಯ್ಯುತಿಹುದು ಗಾಳಿಗಲೆಯುವಬಿದಿರ |
ಸಂದಪೆಳೆಗಳ ದನಿಯದಕ್ಕೆ ಸೂತ್ತರ ಮಾಗಿ ।
ಕುಂದದೆಲೆ ದೇವದೇವನ ಬರವ ಸೂಚಿಪುದೊಯೆನಲಾಗ ಕೇಳುತಿಹುದು ||೩೪||

ಈ ಕೊಳ್ಳಮಂ ನೋಡಿ ಹರ್ಷಿತಂ ತಾನಾಗು–|
ತಾಕಾಲದೋಳ್ ಶಿವಂ ದಿಟ್ಟಿಸುತೆ ಸುತ್ತಲುಂ |
ಲೋಕೇಶ್ವರಂ ಕಂಡನೊಂದು ಗವಿಯಂ ನಲೆದು ವನಧೇನುಗಳ್ ಮಾರ್ಗಮಂ ||
ಶ್ರೀಕಾಂತನೊಡೆಯಂಗೆ ತೋರುತಿರೆ ಮುನ್ನಡೆಯು ।
ತೇಕಾಂತ ದಾಶೆಯಿಂ ಚರಮೂರ್ತಿಗಳಿಗೆ ನಿಜ |
ಸಾಕಾರನಾಗಿ ಮಂತ್ರದ ಮಹಿಮೆಯಂ ಲೋರಲಂದು ಗವಿಯೋಳ್ ಪೊಕ್ಕನು

ಅನಿತರಲ್ಲಲ್ಲೈದಿ ಗಣರಿದಂ ಭಕ್ತಿಯಿಂ ।
ಘನಮಾಗಿ ನಿರ್ಮಲಂಗೊಳಿಸಿರ್ದರೆಂಬಂತೆ |
ಜನಕೆ ದುರ್ಗಮುಮಾದತದ್ ಗಹ್ವರಂ ತೋರ್ದಪುದನುಷ್ಕಿತಿ ಪ್ರಿಯಕರಂ ||
ಅನಘನದನೀಕ್ಷಿಸುತೆ ಪ್ರಮಥೆಚ್ಛೆಯಿಂದರಿದು |
ಸನಕಾದಿ ನುತನಲ್ಲಿ ಕುಳಿತಿರ್ದನಾಗೊಲೆದು ।
ತನುವಿನೋಳ್ ಶೋಭಿಸುವ ತನ್ನಿಷ್ಟಲಿಂಗಮುಂ ಸ್ವಕರ ಪೀಠದೊಳಿರುಸುತೆ ||೩೬||

ನಿಟ್ಟಿಸುತೆ ತಲ್ಲಿಂಗಮಂ ಸ್ವಾತ್ಮ ಚಿತ್ಕಲೆಯ |
ದಿಟ್ಟಯಿಡುತಲ್ಲಿ ಕಂಡಂ ಜಗದ ಭಿನ್ನತೆಯ |
ದಿಟ್ಟತನದೊಳ ವಿದ್ಯೆಯೀ ಪ್ರಪಂಚದಬಲೆಯ ಕಿತ್ತೊಗೆವ ರೀತಿಯ ||
ತಟ್ಟನಖಿಲ ತಪಸ್ವಿ ಗಣಕೆ ತೋರ್ಪನೊಯೆನಲ್ ಶಿವಂ |
ಕಿಟ್ಟುಪರಿಯುವ ಮನವ ತನ್ಮೂಲ ಭಾವದ ।
ಲ್ಲೆಟ್ಟ ಹಾಸದೆ ತೋರ್ಪ ಕಾಲಕರ್ಮಂಗಳಂ ಸಸಿಹಕ್ಕೆ ಒರಗುಡನವಂ ||೩೭||

ವೀರೇಶ-ಪುಣ್ಯಾಶ್ರಮಂ ಗದುಗಿನೋಳ್ ಮೆರೆವು-
ದೋರಂತೆ ಶೋಭಿಸುವುದಲ್ಲಿ ಪಂಚಾಕ್ಷರನು- |
ದಾರ ಸ್ವ ಗುರುವರನ ಯೋಗದ ಸಮಾಧಿಯಿದೆ; ಕುಳಿತಿಲ್ಲಿ ಗುರು-ಕರುಣೆಯೋಳ್ ||
ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ |
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ |
ವಿೂರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣದೋಳ್ ಸಂಧಿಯೊಂದು ||೩೮||

ಅಂತು ಸಂಧಿ ೧ಕ್ಕಂ, ಪದಂಗಳು ಮೂವತ್ತೆಂಟಕ್ಕಂ
ಇಂತು, ಒಟ್ಟು ಪದಂಗಳು ೫೮ ಕ್ಕಂ;
—ಮಂಗಲಂ—



॥ ಶ್ರೀ ಗುರು ಬಸವಲಿಂಗಾಯ ನಮಃ ॥



# ಎರಡನೆಯ ಸಂಧಿ





॥ ಸೂಚನೆ ॥

ಪ್ರಭುವಲ್ಲಮನ ಸಮಾಗಮವ ಪಡೆಯುತೆ ಶಿವಂ
ವಿಭು ಚರೋತ್ತಮ ದೇಶಿಕನ ರೂಪನಾಗಿವಂ ।
ಸ್ವಭುವು ಪಡೆದಂ ತಪದ ಪೂವಳ್ಳಿ ಬನದಲ್ಲಿ ಗುರುಸಿದ್ಧನಾಮಮನವಂ ॥

[ಸಂಧಿ ಪ್ರಾರ್ಥನಾ-ಪದ್ಯ]

ಶುಭಕರ, ಪರಾತ್ಪರ, ನಿರಂಜನ, ನಿರಾಧಾರ, ।
ವಿಭು, ವರ, ಸದುದ್ಧಾರ, ಚಿದ್ಭರ, ನಿರಾಭಾರ, ।
ವಿಭವ-ಧರ, ಭಕ್ತ-ಸಾಕಾರ, ಗರ್ಭೀಕೃತ-ಬ್ರಹ್ಮಾಂಡ, ಸಢಖಿಲ ಗುರೋ ॥
ಅಭಯ-ಕರ, ವರದ, ಪರ, ಪೂವಳ್ಳಿಪುರ-ಕರ್ತೃ, ।
ಶುಭಗ, ಗುರುಸಿದ್ಧ, ಪರಮಾತ್ಮ-ವಿದವಸ್ಥಾತ್ರ-।
ಯಭಯುದ, ಪರಾತೀತ, ವಿಶ್ವ-ಗುರುವರ್ಯ ಸಲಹಯ್ಯ ನೀನೆನ್ನನಭವ ॥೧॥

ಶಿವಮಂತ್ರಜಪದನುಷ್ಠಾನಮಂ ಲಿಂಗಮಂ |
ಶಿವ ಜಂಗಮಂ ಪಿಡಿದು ಪೂವಳ್ಳಿಯೂರ್ಬನದ |
ಗವಿಯಲ್ಲಿ ನಡೆಯಿಸಿರೆ ಶಾಂತಿಯದು ನೆಲೆಸಿರ್ಪುದಲ್ಲಿ ನಿಶ್ಶಬ್ದತೆಯೊಳೆ ||
ತವೆ ತಿಳಿಯುತಿರ್ದಪುದು ಘನ ತಪೋವನನಮೆಂದು; |
ಸವಸಿಸಿರ್ಪುದು ಖಗ-ಮೃಗಂಗಳೋಳ್ ಮೌನತೆಯು |
ಪವನದುರು ಮಂದತೆಯಿನೆಲ್ಲ ಕುರುಹಾಗಿಹವು ತಿಳಿದಿಲ್ಲಿಗಮರರೈದಿ ||೨||

ಪೊರಗೊಂದು ಪರ್ಣಶಾಲೆಯ ನಿರ್ಮಿಸಿಹರದುವೆ |
ಪರಶಿವ-ಮಹಾ-ಯೋಗಮಂದಿರಮದಾಗಿದುವೆ |
ಪರಮ ಮೋದಮನೀಯುತಿರ್ದಪುದು ಕಣ್ಗೆ ಮಂಗಲಮಾಗಿ ಶೋಭಿಸುತ್ತೆ ||
ಕರಮದು ಸ್ವತಸ್ಸಿದ್ಧವೆಂಬಂತೆ ತೋರ್ದಪುದು |
ನೆರೆ ಪಾಪಿಗಳ ಪಾಪ ಬುದ್ಧಿಯಂ ಕಳೆವಪುದು |
ಚಿರ ಸುಕೃತಿಗಳಿಗೆ ಸಿದ್ಧಿಗಳನೀಯುತಲಿಹುದು ವಿಸ್ಮಯಕೆ ನೆಲೆಯಾದುದು ||೩||

ಸುಮ-ಲತೆಗಳಿಂದಾದ ಮಂಟಪಗಳಲ್ಲಲ್ಲಿ |
ಸಮತೆಯಿಂ ಸುತ್ತಲುಂ ತೋರ್ದಪುವು ಸಲೆ ಅಲ್ಲಿ |
ಭ್ರಮ-ರಹಿತರಾಗಿ ಕುಳ್ಳಿರ್ದು ತಪಮಂ ಮಾಳ್ಪ ಮತಿಯನೆಲ್ಲರಿಗೀವವು ||
ಸುಮನನಮಂ ಪುಟ್ಟಿಪವು ಬಳಿಯ ಬಿಲ್ವಂಗಳುಂ; |
ಶಮೆಯ ಕಲಿಸುವವು ಸನಿಹದ ಶಮೀವೃಕ್ಷಗಳು; |
ಶ್ರಮಮನಪಹರಿಸುವವು ತತ್ ಪಲ್ಲವಂಗಳುರೆ, ತಣಿಸುವವು ಪಣ್ ಗಿಡಗಳು ||೪||

ಪೊರಗೈದುತಾ ಲತಾ-ಮಂಟಪದೆ ಕುಳ್ಳಿರುವ- |
ನರಿದು ಶಿವ ಜಂಗಮಂ ಶಾಂತಿಯಿಂದಾಗಾಗ- |
ಉರೆ ನೋಳ್ಪ ಜನತೆಗೆ ಭ್ರಮಿಷ್ಠನಂದದೆ ತೋರ್ಪನಾತಂ ಮಹಾಮತಿವರಂ ||
ನರರ ಕಂಡೊಡೆ ನಗುವನವರ ಮರವೆಯ ತಿಳಿದು |
ಸರಸ ಭಾಷಣಮಿವಗೆ ಜನರೊಡನೆ ಬೇಕಿಲ್ಲ |
ತೊರೆದವರನೊಳಗೋಡುವಂ; ಭಕ್ತರಂ ಕಂಡೊಡವರೊಡನೆ ಮಾತಾಡುವಂ ||೫||

ಇದನೆಲ್ಲಮಂ ತಿಳಿದು ದನಗಾಯ್ವ ಬಾಲಕರ್ |
ಸದಮಳಿನ ಶಿವಯೋಗಿಯಂ ಹುಚ್ಚನೆಂದರಿದು |
ಪದುಳ್ದಿವನ ವಾರ್ತೆಯಂ ಪೇಳುತಿರ್ದರ್ ನಲಿದು ಕಂಡಕಂಡವರಿದಿರೊಳೆ ||
ಪದಪಿನೀ ಸುದ್ದಿಯುರೆ ಪಸರಿಸುವ ಕಾಲದೋಳ್ |
ಮುದದೆ ಪ್ರಭುವಲ್ಲಮಂ ಬಂದನಾ ಪೂವಳ್ಳಿ- |
ಗಿದಿರೊಳಿರ್ಪೊಂದು ದೇವಾಲಯಮನೈದುತ್ತೆ ಕುಳಿತಿರ್ದನಲ್ಲಿ ಸದಯಂ ||೬||

ಇವನ ಶಿವತೇಜಮಂ ಕಂಡು ಜನರೈದುತ್ತೆ |
ತವೆ ಭಕ್ತಿಯಿಂದೆ ತಜ್ಜಂಗಮಂಗೆರಗುತ್ತೆ |
ಸುವಿನಯದಿನವರವನ ನಾಮಮಂ ಗ್ರಾಮಮಂ ಕೇಳಿದರ್ ಕೈಮುಗಿಯುತೆ |
ಶಿವ-ಸಮಂ ಪೇಳ್ದನೆಂತೆನಲವರ ನೋಡುತ್ತೆ |
ಶಿವಭಕ್ತರೇ, ಕೇಳಿರೆನ್ನ ಕರೆವುದು ಜನತೆ |
ಭುವನದೊಳಗಲ್ಲಮಪ್ರಭುವೆಂಬ ಪೆಸರಿಂದೆ; ನಿಜ-ಗ್ರಾಮಮೀ ಲೋಕಮೆ ||೭||

ಎಮಗೆ ನಿಮ್ಮಿಂದೊಂದು ಕಾರ್ಯಮಾಗಲ್‌ವೇಳ್ಕು |
ಸುಮನರೆ, ಯದೇನೆನಲ್ಕಿಲ್ಲಿ ಶಿವಯೋಗಿಯಿಹ- |
ನಮಳ, ತತ್ತ್ವಜ್ಞಾನಿಯವನ ನಾವ್ ಕಾಣಲ್ಕೆ ಬಂದಿಹೆವು ತೋರಿರೀಗ |
ಸಮತೆಯಿಂ ಮಾತನಿದನಾಲಿಸುತೆ ಭಕ್ತಜನ-|
ರಮಿತ ವಿಸ್ಮಯದಿ ನಿಂತೆಂದರೈ "ಗುರು ದೇವ, |
ಕಮನೀಯ ಶಿವಯೋಗಿ ಈವೂರೊಳಿಲ್ಲವೈ ಹುಚ್ಚನೋರ್ವಂ ನೆಲೆಸಿಹಂ ||೮||

ಅವಗೆ "ಹುಚ್ಚಯಸ್ವಾಮಿ"ಯೆಂಬ ಪೆಸರಿಂ ಕರೆವು- |
ದವನಂ ಜನತೆಯೀಗ ಹುಚ್ಚನಂದದೊಳಿಲ್ಲಿ |
ವ್ಯವಹರಿಪ ಕತದಿಂದೆ ತೋರ್ಪವಾತನೆ ಬನ್ನಿ ರಿಚ್ಛೆಯಿರ್ದೊಡೆ ಸದ್ಯದೆ ||
ಇವರೀ ಲಲಿತಮಾದ ಭಾಷಣಮನಾಲಿಸುತೆ |
ಶಿವಯೋಗಿ ಯೀತನೆಂದರಿಯುತ್ತೆ ಪ್ರಭುವಾಗ- |
ಳವರೊಡನೆ ತೆರಳ್ದಂ ಮಹಾ ವಿಭುವು ತದ್ವನವ ದೂರದಿಂ ನಿರುಕಿಸುತಲೆ ||೯||



ಹುಬ್ಬಳ್ಳಿಯ ಬಿಲ್ವವನದಲ್ಲಿ ಅಲ್ಲಮ ಪ್ರಭುದೇವರ ಹಾಗೂ ಶ್ರೀ ಗುರುಸಿದ್ಧೇಶ್ವರರ ಸಮಾಗಮ

ಗವಿಯ ಕಂಡಂ ಪ್ರಭುವದಂ ಕಾಯ್ದು ಪುಲಿಯ ಕಂ- |
ಡವನೆ ಮರಳುತ್ತೆ ನಿರುಕಿಸಿದನೋಡುವ ಜನವ |
ಜವದೆ ಗಹ್ವರದ ಸನಿಹಕ್ಕೆ ಪೋಗುತಿರಲ್ಕೆ ವ್ಯಾಘ್ರಮುಂ ಪೋದುದೆರಗಿ ||
ತವೆ ಕಾಮಧೇನು ಲಕ್ಷಣವ ಪಡೆದೆಸೆದಿರ್ಪ- |
ನವ ಗೋವದೊಂದಲ್ಲಿ ಮಲಗಿರ್ಪುದಂ ನೋಡಿ |
ಶಿವಯೋಗಿಯಿಲ್ಲಿಯುಹನೆಂದು ನಿಶ್ಚೈಸಿದಂ ಪ್ರಭುವಲ್ಲಮಾಖ್ಯನಾಗ ||೧೦||

ಆಗಳಾ ಗುಹೆಯಿಂದೆ ಶಿವ-ರೂಪಿ ಜಂಗಮಂ |
ರಾಗದಿಂ ಬಂದು ವಂದಿಸುತಿರಲ್ ಪ್ರಭುವವಂ- |
ಗಾಗವೇಡ್ಯಂಗೆ ಮರಳೆರಗಿದ್ದ ಚರನೆತ್ತುತಾಲಂಗಿಸಿದನಳ್ತಿಯಿಂ ||
ಯೋಗಿ-ವಂದ್ಯರ್ಕಳೀರ್ವರ್ ಲತಾ-ಮಂಟಪದೆ |
ವಾಗತೀತ ಮನೋಜ್ಞ ಶೋಭೆಯುಣ್ಮುತಿರೆ ಶಿವ-
ಯೋಗಿಗಳ್ ಕುಳಿತು ಕೊಂಡರ್ ಭಾಸ್ಕರಾತರ್ಕ್ಯ ತೇಜಸ್ಕರನುನಯದೊಳೆ ||೧೧||

ಬನಸಿರಿಯು ತಪಗೈದು ಶಿವಶಿವ ಮಹಾ ನಿರಂ- |
ಜನ-ಕಲೆಗಳಂ ಜಂಗಮ ಸ್ವರೂಪರನೆಸಗಿ |
ತನು-ಮನೋ-ಭಾವ-ಶುದ್ಧತೆಗಾಗಿ ಪಡೆದಳೆನೆ ಶೋಭಿಸಿದರವರೀರ್ವರು ||
ಘನ ಧರಾದೇವಿ ತನ್ನಾತ್ಮದ ವಿಶುದ್ಧಿಗಾ- |
ಗಿಸಿಯರಿಬ್ಬರನೊಲಿಸಿ ಪಡೆದಿರ್ಪಳೆಂಬಂತೆ |
ವಿನುತ ಸಮವೇಷ-ಸಮಶೀಲರಲ್ಲೆಸೆದಿಹರ್ ಶಂಕರಾಲ್ಲನು ನಾಮರು ||೧೨||

ಆಗ ಪ್ರಭುವಿಂತೆಂದನೈ "ದೇವ ನಿಮ್ಮ ನಾ- |
ನಾಗವೋದಯನೆ ನಿರುಕಿಸುತೆ ಬದುಕಿದೆನಯ್ಯ |
ಯೊಗಲುರುತರ ಶಿವಾನುಭವ ಸುಧೆಯಿಂ ತಣಿಪಿ ಪೊರೆಯಿರಿ ಮಹಾದೇವ ಭೋ ||
ಸಾಗಿ ಬಂದಿಲ್ಲಿಗಾಂ ತಮ್ಮ ಕರುಣಾ-ಬಲದೆ |
ಲೋಗರಚ್ಚರಿಪಂತೆ ದುರ್ಮಾಯೆಯಂ ಗೆಲಿಯು- |
ತಾ ಗುರುಪರೇಣ್ಯರನಿಮಿಷ-ದೇವರುರೆ ಕೃಪೆಯೊಳುರು ಲಿಂಗಮಂ ಪಡೆದನು" ||

ಈ ಮಾತಿಗುತ್ತರಿಸಿದಂ ಶಂಭುವೆಂತೆನಲ್ |
"ಸಾಮಾದಿ-ಸುತರ್ಕೆ ನೀವ್ ಮಮ ನಿರಂಜನ ರೂಪ- |
ರಾ ಮಾನಮಿದು ತಮಗೆ ಸ್ಥಿರಮಾಗಿರಲ್‌ವೇಳ್ಕು, ಭವದೀಯ ಸಂಪ್ರದಾಯಂ ||
ಸಾಮಾನ್ಯಮಾಗೆಮ್ಮ ಮತದಲ್ಲುಳಿಯ ವೇಳ್ಕು |
ಪ್ರೇಮಾತಿಶಯದಿಂ ಸುಸಂಸ್ಕಾರಮಂ ಗೈಯ್ಸಿ-|
ರೇ ಮತ್ತೆ ತತ್ತ್ವಮಂ ಬೋಧಿಸುವದಾನೆ ಶಿವನಾದೊಡೇನಾಯಿತೆನಗೆ" ||೧೪||

ಇದನಾಲಿಸುತೆ ಪ್ರಭುವು ನುಡಿದನೆಂತೆನೆ "ದೇವ, |
ಸದಮಲ ಮಹಾಂತ ಶಿವ, ನಿಮ್ಮಾಜ್ಞೆಯಂತೀಗ |
ಮುದದಿನೊಪ್ಪಿಸುವೆನಾಂ ನಿಮ್ಮ ಕೃಪೆಯಿಂ ದೊರೆತ ಸ್ವಾನುಭವಸಿದ್ಧಾಂತಮಂ ||
ವಿದಿತವಹ ನಿನ್ನಾತ್ಮ ಚೇತನಮೆ ಭಾವಲಿಂ- |
ಗದ ಪ್ರಾಣಲಿಂಗದೀ ಯಿಷ್ಟಲಿಂಗದ ಸ್ಥಿತಿಯ- |
ನದು ತಳೆದು ಪಶ್ಚಿಮ-ಶಿಖಾ-ಬ್ರಹ್ಮಚಕ್ರಗಳ ತುಂಬ ವ್ಯಾಪಿಸುತಲಿಹುದು ||೧೫||

ಈ ಪರಮ ಲಿಂಗಮಂ ಪೂಜಿಸಲ್ ಬಯಸುವಾ |
ಪಾಪ-ವಿರಹಿತ ಶಿಷ್ಯನುರೆ ಪ್ರಾರ್ಥನೆಗೆ ಮೆಚ್ಚಿ |
ತಾಪಮಂ ಕಳೆವ ಗುರು-ರೂಪಮಂ ತಳೆಯುತ್ತೆ ಮತ ಸಂಪ್ರದಾಯ-ಗತಿಯೊಳ್ ||
ದೀಪಿಸುವ ಶಿವಯೋಗ ಸಿದ್ಧಿಯಿಂದಾಹ್ವಯಿಸಿ |
ಕೋಪ-ರಹಿತಂ ಶಿಲಾ-ಲಿಂಗದೊಳಗಾ-ಕಲೆಯ |
ಸ್ಥಾಪಿಸುತೆ ಛಾತ್ರನುರು ವಾಮಹಸ್ತದೊಳಿಟ್ಟು ಪೂಜಿಸುವ ಕ್ರಮುವ ನೀನೆ ||೧೬||

ಪೂಜಿಸುವ ಧರಿಸುವಾ ಕ್ರಮುವ ತೋರಿದೆ ಶಿವನೆ, |
ನೈಜಮಿದು ಕೈಲಾಸದಾ ಪ್ರಮಥರೊಳ್ ನಡೆದ |
ತೇಜದುರು ಸಂಪ್ರದಾಯಂ ಭೂಮಿಯೊಳಗಂದೆ ಸ್ಥಾಪಿತಮುದವರಿಂದಲೆ ||
ಓಜದುರು ನಿನ್ನಾತ್ಮ ಕಳೆ ನಿರಂಜನ ಕಲೆಯು |
ಮೋಜಿನಿಂ ಜಂಗಮಾಕೃತಿಯೊಡೆದು ನಿನ್ನಿಂದೆ |
ರಾಜಿಸುವ ತದ್‌ಗಣರ ರಕ್ಷಣೆಗೆ ಬಂದಿಹುದು ನಿನ್ನಾತ್ಮ-ಶಕ್ತಿಯೆನಿಸೆಲೊ ||೧೭||

ಅದುವೆ ಪಶ್ಚಿಮ-ಶಿಖಾ-ಚಕ್ರಸ್ಥ ಚಿತ್‌ಕಳೆಯುಃ |
ಸದಮಳಿನ ಜಂಗಮವದೇ ನಿನ್ನ ಕಾಂಕ್ಷೆಯಿಂ |
ಪಡೆಳ್ದು ನಿಜ ಸಂಪ್ರದಾಯವ ಬೆಳೆಸಿಕೊಂಡಿಹುದು ಜಂಗಮದ ಮಹಿಮೆ ಘನವು ||
ಇದುವೆ ಚರವರ ನಿರಾಭಾರಿ ಮುಖ್ಯಾಹ್ವಯವ |
ಪದಪಿಂ ತಳೆದು ಮೆರೆವುದೀ ಸಂಸ್ಕೃತಿಯ ಪಡೆದ |
ವಿದುಗಳಿಗೆ ನಾಮಂಗಳಿವು ಬರ್ಪವರಿಯಲ್ಕಿದೆಲ್ಲಮಾರೆ ನಿನ್ನ ಲೀಲೆ ||೧೮||

ಗುರು-ಜಂಗಮರ ಪದಕೆ ಮುಟ್ಟಿಸಿದ ಜಲಬಿಂದು |
ವರ ತೀರ್ಥಮೆನಿಸುತಿಹುದನ್ನಂ ಪ್ರಸಾದಮಹು- |
ದರಿಯಲವರಿಲ್ಲದಿರೆ, ಲಿಂಗಕೆ ನಿವೇದಿಸಿದೊಡಪ್ಪುದಿದು ಸಾಮಾನ್ಯವು ||
ಗುರು-ಲಿಂಗ-ಜಂಗಮರೆ ಪೂಜ್ಯರೆನಿಪರ್ ತಿಳಿಯ- |
ಲುರು ತೀರ್ಥ-ಸುಪ್ರಸಾದಂಗಳ್ ಫಲಂಗಳವು |
ಪರಮ ಭಸಿತಂ ಶಿವಾಕ್ಷವು ಮಂತ್ರಮಿವು ಪೂಜೆಯುಪಕರಣಂಗಳು ಮೂರು ||

ಮೂರರಿಂ ಮಾಡಿದಾ ತೀರ್ಥ-ಪ್ರಸಾದಗಳ್ |
ಸಾರುತೆ ವಿಶೇಷಮೆನಿಸುವವು ಮೂರಿವುಗಳುಂ |
ಸಾರಿದವು ನಿನ್ನಿಂದಲುದಯಿಸುತೆ ಶಂಕರನೆ, ನಿನ್ನ ನಾಮವೆ ಮಂತ್ರವು ||
ಧಾರುಣಿಗೆ ನಿನ್ನಕ್ಷಿ-ಜಲಮೆ ರುದ್ರಾಕ್ಷಗಳ್ |
ಮಾರಹರ, ತವ ಮುಖಜ ಗೋ-ಪುರೀಷಮೆ ಭಸಿತ- |
ಮೀರಿತಾಷ್ಟಾವರಣಗಳಿವೆ ತವ ರೂಪಗಳ್; ನೀನೆ ಮಮ ಗುರು ಗುಹೇಶಂ ||

ಲಿಂಗಮಾದಡುಮರಿಯೆ ನೀನೆ ಕಲಿಗಣನಿಂದೆ |
ಲಿಂಗಮಂ ಪಡೆದೆಯ್ಕೆ; ನೀನೆ ಗುರುವಾದಡುಂ |
ತುಂಗ ಶಿಷ್ಯನೆಯಾದೆ; ನೀನೆ ಚರನಾದಡುಂ ಮಿರುಮಿಂಡ ದೇವಂಗೆ ನೀಂ ||
ಭಂಗ-ವಿರಹಿತ ಭಕ್ತನಾದೆಯ್ಕೆ; ಪರಶಿವನೆ, |
ಮಂಗಲ ವಿಭೂತಿ ವರನಿರ್ದಡುಂ ನೀನೆ ಸ- |
ನ್ಮಂಗಲದ ಭೂತಿಯಂ ಧರಿಸಿಕೊಳ್ಳುವೆ ನಲಿದು; ನಿನ್ನ ಮಹಿಮೆಯಗೋಚರಂ ||

ನಿನ್ನಕ್ಷಿ ರುದ್ರಾಕ್ಷ; ನಿನ್ನಂಗವಮಾ ಮನುವು |
ನಿನ್ನಂಘ್ರಿತೀರ್ಥಮದು; ನಿನ್ನ ದಯೆ ಪ್ರಸಾದಂ |
ನಿನ್ನಿಂದೆ ನೀನೆಯಷ್ಟಾವರಣಮಾಗಿಲ್ಲಿ ಭಕ್ತನಂಗಮದಾಗಿಹೆ ||
ನನ್ನಿಂದಲುದಿಸಿದಾಚಾರಗಳ್ ಭಕ್ತಂಗೆ |
ನಿನ್ನಲ್ಲಿ ನೀನರಿಯೆ ಪ್ರಾಣಂಗಳೆನಿಸಿಹವು |
ನಿನ್ನಂ ಮಹಾದೇವ ತೊರೆದಿಲ್ಲವವದರಿಂ ನೀನೆಯಾಚಾರಂಗಳು ||೨೨||

ಎಸೆವ ಭೃತ್ಯಾಚಾರವೊಪ್ಪುವ ಸದಾಚಾರ- |
ಮೆಸೆಯುವ ಶಿವಾಚಾರವೊಪ್ಪಿಹ ಗಣಾಚಾರ- |
ಮೆಸೆದ ಲಿಂಗಾಚಾರಮೈದಿರುವವಿವು ತವಾಕಾರಮಂ ಪೊಂದಿರ್ಪವು ||
ಎಸೆದೆ ಸೇವಕನಾಗುತಮುಗಿ-ದೇವಯ್ಯಗಂ- |
ದೆಸೆದಿಹೆ ಸದಾಚಾರಿಯಾಗಿ ಗಿರಿಜೆಯ ಪಡೆಯು- |
ತೆಸೆದಿರ್ಪೆ ನೀಂ ಶಿವಾಚಾರಿಯೆನಿಸುತೆ ದಕ್ಷಿಣಾಮೂರ್ತಿ ಲೀಲೆಯಿಂದೆ ||೨೩||

ಬಿಡಿಸಿದೆ ಗಣಾಚಾರಿಯಾಗಿ ಸೌಂದರನಘವ; |
ಪಡೆದೆ ಲಿಂಗಾಚಾರಿಯಾಗಿ ಬಿಜ್ಜಾಂಬೆಯಿಂ-|
ದಡಿಗಡಿಗೆ ನಿನ್ನ ಗಣರಾಚರಿಪ ವ್ರತ-ತತಿಯು ಪಂಚ ಮಹಿತಾಚಾರತೆ ||
ಮೃಡನೆ, ನಿನ್ನಾತ್ಮಮಾ ಷಟ್‌ಸ್ಥಲ ಸುತತ್ತ್ವಮರಿ; |
ಬಿಡದೆ ಸದ್‌ಭಕ್ತ-ಮಾಹೇಶ-ಪ್ರಸಾದಿಗಳ್ |
ಸಡಗರದ ಸುಪ್ರಾಣಲಿಂಗಿ-ಶರಣೈಕ್ಯಗಳ್ ಷಟ್‌ಸ್ಥಲಗಳಿವೆ ನೀನಹೆ ||೨೪||

ಅಂಗ-ಸ್ಥಲಂಗಳಿವೆ ಯಂಗದಿಂ ಜನಿಸಿವೆ; ತ-|
ದಂಗಂ ತ್ರಿವಿಧಮಹುದು; ನೆರೆ ತ್ಯಾಗ-ಭೋಗ-ಯೋ- |
ಗಾಂಗಂಗಳಾಖ್ಯೆಯಿಂ ಲಿಂಗದಿಂದಂಗಮಹುದಾ ಲಿಂಗಮೇ ನೀನಹೆ ||
ಲಿಂಗಂ ಶಿವನೆ ಮೂರುಮಿಷ್ಟಲಿಂಗಂ ಪ್ರಾಣ- |
ಲಿಂಗಂ ಮಗುಳ್ದು ಭಾವಲಿಂಗವೆನಿಸುವುದಿದುವೆ |
ಲಿಂಗ-ಸ್ಥಲಂ ತಿಳಿಯಲುದರೊಳಾರಾಗಿಹವು ಕೇಳವುಗಳಭಿಧಾನವ ||೨೫||

ಆಚಾರ-ಗುರು-ಶಿವ-ಚರ-ಪ್ರಸಾದ-ಮಹ್ಯಾಖ್ಯೆ-।
ಯೊಚಾರು ಲಿಂಗಗಳ್ ಷಟ್-ತತ್ತ್ವಗಳ ತುಂಬಿ, ।
ವೈಚಿತ್ರ್ಯಮೆನೆ ಶೋಭಿಸುವವು, ಸಿಜ್ಜಳಮಾಗಿ ಬ್ರಂಹ್ಮಾಂಡ-ಪಿಂಡಾಂಡದೊಳ್; ॥
ವೈಚಾರ್ಯದಿಂ ಜ್ಞಾನ-ಕರ್ಮೇಂದ್ರಿಯಂಗಳೊಳ-।
ಗಾಚಾರ್ಯವರನೆ, ತಿಳಿಯಲ್ ವೇಳ್ಕು ತತ್ ಸ್ಥಿತಿಯ-।
ನಾಚಾರ-ರಹಿತರ್ಗೆ ತಿಳಿಯದಿದು; ಭಕ್ತಿ-ಶಕ್ತಿಗಳು ಷಟ್ ಷಡ್ ವಿಧಮಿವೆ ॥೨೬॥

ಬಿಡದಂಗ-ಲಿಂಗಂಗಳಂ ವ್ಯಾಪಿಸಿರುವವೈ ।
ವೃಡನೆ, ಶ್ರದ್ಧೆಯು ನಿಷ್ಠೆ ಸಾವಧಾನಂ ತಿಳಿಯೆ ।
ಪಡೆದನುಭವಂ ಸುಪರಿಣಾಮುಮುರು ಸಮರಸಮಿವಾರು ಭಕ್ತಿಗಳುಮಿವನೆ ॥
ಪಡೆವ ಭಕ್ತಿಗಳೆ ಮೂರನುಪಮಿತಮವಿರಳಂ ।
ಸಡಗರದಗಮ್ಯಮಿವೆ ಯಂಗ-ಸ್ಥಲಂಗಳೊಳ-।
ಗೊಡವೆರೆದಿಹವು; ಲಿಂಗದೋಳ್ ಬೆರೆಸುವವು ಶಕ್ತಿಯಂ ಸಲಿಸಿ ಮೆರೆವಂಗನಂ ॥

ಆರು ಶಕ್ತಿಗಳ ನಾಮಂಗಳಿವು ಪರಶಿವನೆ, ।
ಮೀರಿದ ಕ್ರಿಯಾ-ಶಕ್ತಿ ಪರತರೇಚ್ಛಾ-ಶಕ್ತಿ ।
ಸಾರಿರುವ ಚಿಚ್ಛಕ್ತಿಯುರೆ ಜ್ಞಾನಶಕ್ತಿಯು ಪರಾಶಕ್ತಿಯಪರಶಕ್ತಿ ॥
ಭೂರಿ ಷಟ್ ಶಕ್ತಿಗಳಿವಕ್ಕೆ ಮೂರ್ ಮುಖ್ಯಮಿವು; ।
ಮೀರಿದ ತದಾದಿಶಕ್ತಿ ಯನಾದಿಶಕ್ತಿ ಯದ-।
ಪಾರಶಕ್ತಿಯು ಮಹಿತ ಲಿಂಗ-ಸ್ಥಲದೊಳಿರ್ಪ ಶಕ್ತಿಯುರು ಭೇದಗಳಿವೆ ॥೨೮॥

ಐದೆ ದೇಹದೊಳಿರುವ ನವ ಚಕ್ರಗಳೊಳರಿಯ-।
ಲಾದಿಯಿಂ ಮಂಡಿಸಿಹ ನವ ಲಿಂಗಗಳಿಗರಿದ ।
ಭೇದದಿಂದಾಯಾ ಸುವಸ್ತುಗಳನರ್ಪಿಸುತೆ ನವ ಹಸ್ತದಿಂ ನಿರುತದೆ ॥
ಖೇದಮಿಲ್ಲದೆ ಬಾಳ್ವನೆಲ್ಲಮಂ ಲಿಂಗಮೆಂ-।
ದಾದರದೊಳರಿಯುತ್ತೆ, ತಾನೆ ಲಿಂಗಮದಾಗಿ ।
ಮೇದಿನಿಯೊಳಾ ಲಿಂಗಮೇ ಮತ್ತೆ ತಾನಾಗುತೀ ಲೀಲೆ ನಿನ್ನದಲ್ತೆ ? ॥೨೯॥

ಇದು ಶಿವಾನುಭವಂ; ಗುಹೇಶ್ವರನೆ ನೀನಿರ್ಪೆ; |
ಯಿದನೆ ಸತ್ಯಂಗೊಳಿಸಲೀ ಭೂಮಿಗೈದಿರುವೆ; ।
ಸದಮಲ ಮಹೇಶ್ವರನೆ, ನಿನ್ನಾಜ್ಞೆಯಂತೀಗಳೊಪ್ಪಿಸಿದೆನೀ ಪಾಠವ; ||
ವಿದಿತಮಾಗಲ್ಕೆಂದು ಗುರುಸಿದ್ಧ-ನಾಮಮಂ |
ಪದುಳ್ದು ನಿನಗಿಟ್ಟಾಂ ಪ್ರಸಿದ್ಧಿಸುವೆನಪ್ಪಣೆಯ ।
ಪದಪಿಂ ಕೊಡೆಂ"ದೆರಗಿ ಪ್ರಸ್ಥಾನಕಲ್ಲಮಪ್ರಭುವಾಗ ಸಿದ್ಧನಾಗೆ ||೩೦||

ಎರಗಿ ಶಿವನೆಂದನಿಂತೋ "ಪ್ರಭುವೆ, ಯೆನಗೇಕೆ ।
ಗುರುಸಿದ್ಧನಾಮಮಿದು ? ಬೇಡವೈ ಕೊಡುವ ಮನ-।
ಮಿರೆ ನಿರಾಭಾರಿ ಗುರು ಸಂಸ್ಕಾರಮಂ ಮುದದೆ ಕರುಣಿಸುತೆ ನೀಂ ತೆರಳ್ವುದು" ||
ಹರನೀ ನುಡಿಗನಿರ್ವಾಹದಿಂದಾಗೊಪ್ಪಿ, |
ಪರಮ್ಯಾಲ್ಲಮಂ ತದ್‌ಗುಹಾ-ವನದೊಳುಳಿದಿಹಂ; ।
ಪರಶಿವಂ ಸಂಸ್ಕೃತಿಯ ಪಡೆದು ರಾಜಿಸಿದನೀ ಜಗನ ಪೊರೆಯಲ್ ಮಹೇಶಂ ||೩೧||

ವೀರೇಶ-ಪುಣ್ಯಾಶ್ರಮಂ ಗದುಗಿನೊಳ್ ಮೆರೆವು-|
ದೋರಂತೆ ಶೋಭಿಸುವದಲ್ಲಿ ಪಂಚಾಕ್ಷರನು-|
ದಾರ ಸ್ವ ಗುರುವರನ ಯೋಗದ ಸಮಾಧಿಯಿದೆ; ಕುಳಿತಿಲ್ಲಿ ಗುರು-ಕರುಣೆಯೊಳ್।
ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ |
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ |
ಮೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣದೊಳ್ ಸಂಧಿ ಯೆರಡು || ೩೨ ||

ಅಂತು ಸಂಧಿ ೨ಕ್ಕಂ, ಪದಂಗಳು ಮೂವತ್ತೆರಡಕ್ಕಂ;

ಇಂತು, ಒಟ್ಟು ಪದಂಗಳು ೯೦ ಕ್ಕಂ,

卐 ಮಂಗಲಂ 卐

॥ ಶ್ರೀ ಗುರುಬಸವ ಲಿಂಗಾಯ ನಮಃ ॥



# ಮೂರನೆಯ ಸಂಧಿ





॥ ಸೂಚನೆ ॥

ಕರ್ತೃ ಗುರುಸಿದ್ಧೇಶ್ವರಂ ಮಹಾರೋಗಮಂ |
ಭರ್ತೃವಾದಂ ನಿವಾರಿಸುತಲ್ಲಿ ಮತ್ತೆ ವ್ಯವ-|
ಹರ್ತೃವಾದಂ; ಹುಚ್ಚನಂತೆ ಲೀಲೆಯೊಳಿಹಂ ಕಲ್ಲ ಮಲ್ಲಿಗೆಯ ಗೈದು ||

[ಸಂಧಿ ಪ್ರಾರ್ಥನಾ-ಪದ್ಯ]

ಮಾವಿನುರು ತರುವಿನೊಳ್ ಕೋಗಿಲೆಗಳಂ ಕರೆವ ।
ಭಾವಕೊಪ್ಪುವ ತಳಿರು; ಭ್ರಮರಂಗಳಂ ಸೆಳೆವ |
ಪೂವಿಹುದು; ಜನತೆಯಂ ತಣಿಪ ಪಣ್ಣೆಸೆದಿರಲ್ ಪ್ರಿಯಮಾಗಿಹುದು ನಿತ್ಯದೆ ||
ಓವುವುಪಕಾರಮಂ ಗೈಯ್ಯುತಿರ್ದಡುಮದ-|
ಕ್ಕೋವದಲೆ ಬಡಿಯುವರ್; ಪಳಿದಾಗೆ ಕಡಿವೆರೀ |
ಸಾವಧಾನತೆಯಿಲ್ಲಮೆನಗಿದಂ ಕೊಡು; ಶಿವನೆ, ಮರದಿಂದೆ ಕಡೆಯಾಗೆನು ||೧||

ಅಲ್ಲಮಪ್ರಭುವು ನಿರ್ಗಮಿಸಲಾ ಗುರುಸಿದ್ಧ-|
ನುಲ್ಲಸವ ಕುಂದಿಪ ವಿಯೋಗ-ದುಃಖವ ಸಹಿಸ-|
ದಲ್ಲಿಯೆ ನಿಜೇಷ್ಟಲಿಂಗವ ನಿರೀಕ್ಷಿಸುತದರೊಳಾ ನಿರಂಜನ ರೂಪವ ||
ಸಲ್ಲುವಾನಂದಮಂ ಪಡೆಯುತಿರ್ದಂ ನಿಖಿಲ-|
ವಲ್ಲಭಂ ಶಿವರೂಪಿಯೆಂದವನೊಳೀ ಜಗಮು-|
ನೆಲ್ಲಮಂ ಕಾಣುತದರಲ್ಲಿ ತನ್ನಂ ನೋಡಿ, ಕಾಲಮಂ ಕಳೆಯುತಿರ್ದಂ ||೨||

ತನ್ನೊಳೀ ಜಗಮನುಂ ಕಾಣುತ್ತೆ, ಹರ್ಷಿಸುತೆ, |
ಚಿನ್ನಿಧಿಯು ಹೊರಗೆ ಬರಲಿಚ್ಛಿಸದಲಾ ಗವಿಯೊ-|
ಳುನ್ನತಂ ಕುಳಿತಿರ್ದಡುಂ, ತದ್ಘನೌಜಮದು ಪೊರಗುಮೊಳಗುಂ ವ್ಯಾಪಿಸಿ ||
ಚನ್ನಮೆನೆ ಬೆಳಗುತಿರ್ದತ್ತದೀ ಕಣ್ಗೆಸೆಯು-|
ದಿನ್ನಘಟಿತಂಗಳಂ ತೋರ್ದು ಮೆರೆಯುತ್ತಿಹುದು; |
ಬನ್ನಮಂ ಕಳೆಯುತ್ತಲಿಹುದಗೋಚರಮಾಗಿ ಪೂವಳ್ಳಿ ಗವಿಯ ಬನದೆ ||೩||

ಹೊಂಡದೊಳ್ ನಿಂದ ಜಲಮಮೃತದಂತೆಸೆಯುತಿಹು-|
ದೊಂಡೆನಿಸದಂತಾರು ಬಳಸದಿರ್ದಡುಮದುವೆ |
ಕಂಡವರ್ಗಿಂಟ ವೇಳ್ಕೆಂಬಿಚ್ಛೆ ತಾನಾಗಿ ಜನಿಸುತಿಹುದಚ್ಚರಿಯಿದು |'
ಚಂಡಕರ-ಕಿರಣದಿಂದೊರ್ಮೆಯಲ್ಲಿಯ ಕೊಳ್ಳ-|
ಮಂಡಲಿವ ಜನತೆ ಬತ್ತುವದೆಂದು ತಿಳಿದೊಡುಂ |
ಪೊಂಡಮಿದು ಬತ್ತುವದಸಾಧ್ಯಮೆಂದರಿಪಂತೆ ಶೋಭಿಪುದು ಗವಿಯ ಬಳಿಯೋಳ್||

ಪುಲಿಯು ಗವಿಯಂ ಕಾಯುತಿರ್ದತ್ತದಲ್ಲೆಸೆಯು-|
ತುಲಿಯುತಿಹ ಪುಲ್ಲೆ ಮೊದಲಾದ ಪ್ರಾಣಿಗಳನಂ-|
ಡಲೆದು ಹಿಂಸಿಸಲಿಲ್ಲ; ಮೇಲ್ವಾಯ್ದಡುಂ ನಯದೆ ಕರೆದು ಕೊಂಡವುಗಳೊಡನೆ ||
ಒಲಿದು ಪುಲ್ ತಪ್ಪಲವ ಗಡ್ಡೆ ಪಣ್ಕಾಯ್ಗಳಂ |
ಮೆಲುತಿಹುದು; ಚಿರ್ಚೆ ಮುಂತಾದ ಜೀವಿಗಳನದು |
ಸಲುಗೆಯಿಂ ಕ್ರೂರತನಮಂ ಬಿಡಿಸುತಾ ಒನದೆ ಶಿಕ್ಷಕನ ತೆರದೆ ಬಾಳ್ಗುಂ ||೫||

ಶಿವನೇ ಜಗದ್ಗುರುವವಸ್ಥಾತ್ರಯವ ಗೆಲಿದು, |
ಭುವನ-ಮಾನವ-ತತಿಗಿದಂ ಕಲಿಸಲ್ಕೈದಿಹಂ; |
ಲವಲೇಶಮಾದಡುಮಿವಂಗೆ ತೊಂದರೆಯಾಗೆ ತತ್ತಪೋಹಾನಿಯದು ||
ತವೆ ಯಿಂತು ನೆನೆದು ನಿಶ್ಯಬ್ದತೆಯ ಕಲ್ಪಿಸುತೆ, |
ಕವಿದ ಮೋಹವ ತೊರೆಯುತಲ್ಲಿರ್ಪ ಪ್ರಾಣಿಗಳ್ |
ಸುವಿನಯದೆ ಬಾಳುತಿರ್ದಪುವೆನಲ್ ತಪದ ಮಹಿಮೆಯ ಬಣ್ಣಿಸುವರಾರಿದಂ?! ||೬||

ಈತನೆ ಶಿವಂ; ತಾಪಸರ್ಗೆ ಗುರುವಾಗಿಲ್ಲಿ |
ಖ್ಯಾತ ಸಿದ್ಧಿಗಳನಡಗಿಸಿಕೊಂಡು ತನ್ನಲ್ಲಿ |
ಪೂತ ಮಾನವ-ರೂಪಮಂ ತಳೆಯುತೆನ್ನಲ್ಲಿ ಕೈಲಾಸ ಪದಮನಿತ್ತು ||
ಪ್ರೀತಿಯಿಂ ಮಂಡಿಸಿಹನೀ ಭಾಗ್ಯಮಿಹುದೆಲ್ಲಿ? |
ಖ್ಯಾತಿಯಿಂ ತನ್ನ ಸುಕೃತವ ನೆನೆಯುತಲ್ಲಲ್ಲಿ |
ಪ್ರೀತನೀ ಗುರುಸಿದ್ಧನಾಮಮಂ ಭೂದೇವಿ ಜಪಿಸುವಳೋ ಯೆನೆ ತೋರ್ದುದು||೭||

ಇಂತೆಸೆಯುವೀ ತಾಣದಲ್ಲಿ ಬಂದಂ ಭರದೆ |
ಸಂತತಂ ತನಗೊದಗಿದಾ ಮಗನ ರೋಗದುರು |
ಚಿಂತೆಯಿಂ ಬಳಲುತ್ತಲವನ ದುಃಖವ ತನಗೆ ನೋಡುವುದಸಾಧ್ಯಮಾಗಿ ||
ಸ್ವಾಂತದೋಳ್ ಪ್ರಾಣಮಂ ಕಳೆದುಕೊಳಲೆಳಸಿ ಸಿರಿ-|
ವಂತನೋರ್ವಂ ತಾನೆ ಯಾ ವಿಪಿನಕೈದುತ್ತ-|
ಲಂತದೋಳ್ ಶಿವನ ನೆನೆಯುತ್ತಳಳುತಿರ್ದನುರೆ ಯೊಂದು ಗಿಡದಡಿಗೆ ಕುಳಿತು||೮||

ಏರುತ್ತೆ ಹಗ್ಗಮಂ ಮರದ ಕೊಲ್ಲೆಗೆ ಕಟ್ಟಿ, |
ಮೀರಿರ್ಪ ದುಃಖದಿಂ ಗಂಟಲಕೆ ಜೋಡಿಸುತೆ, |
ಹಾರುತಿರುವ ಸಮಯಕ್ಕೈದುತಾ ಶಿವಯೋಗಿಯೈದೆ ಪಿಡಿಯುತಲಿಳಿಸುತೆ ||
ತೋರುತ್ತೆ ಕರುಣೆಯಂ ಗುರುಸಿದ್ಧನಾಮಕಂ |
ಸಾರಿರ್ಪ ಮನುಜನಂ ನೋಡಿ ಪ್ರಶ್ನಿಸಿದನಿಂ-|
ತೋರಂತಿದೇನಿದೈ "ಪ್ರಾಣಮಂ ಕಳೆದುಕೊಳ್ಳುವ ಯೋಚನೆತ್ತು ಮಾತೇಕೆ?" ||೯||

ಎಂಬ ಗುರುವಿನ ಮಾತನಾಲಿಸುತಲಾ ನರಂ ।
ಸಾಂಬನಿವನೆಂದರಿದು ನುಡಿದನೆರಗುತಲಿಂತು ।
"ಸಾಂಬರೂಪನೆ, ಯೆನ್ನ ಸುತ-ಮಹಾರೋಗಮಂ ನೋಡಲಾಗದೆ ದುಃಖಿಸಿ ॥
ನಂಬಿ ಪುತ್ರನ ಮೃತಿಯ, ವ್ಯಥೆಯ ನೀಗಲ್ ಮೊದಲೆ ।
ನಂಬುತಂ ಶಾಂತಿಯಂ ಪಡೆಯವೇಳ್ಕೆಂದರಿಯು-।
ತಂಬಿಕಾ-ಧವ-ಸಮನೆ, ಸಾಯವೇಳ್ಕೆಂದೆಳೆಸುತಿಲ್ಲಿಗೈದಿರುವೆನಯ್ಯಾ" ॥೧೦॥

ಇದನಾಲಿಸುತಲವನ ನೋಡಿ ಗುರುಸಿದ್ಧಗುರು-।
ವೊದವಿದಾ ಖೇದದಿಂ ನುಡಿದನೆಂತೆನಲೆಲವೊ ।
"ಸದಮಲನೆ, ನಿನ್ನ ಮಗನಿನ್ನು ಸಾಯುವದಿಲ್ಲಮೀ ಯೌಷಧವ ಕುಡಿಸೈ ॥
ಬದುಕುವಂ ತನ್ಮಹಾರೋಗದ ನಿವಾರಣೆಯ ।
ಪುದಿದ ಚಿಂತೆಯ ಬಿಡೈ"ಯೆಂದು ಭಸಿತವನಿತ್ತು, ।
ಸದಯನಾಗಳ್ ಪರಸಿ ಕಳುಪಿದಂ; ಭಕ್ತಂ ನಿಜಾಲಯಕೆ ಬಂದನೆರಗಿ ॥೧೧॥

ಶಿವಯೋಗಿಯಂ ನೆನೆದು ಜಲದೊಳಾ ಭಸಿತಮಂ ।
ತವೆ ಕೂಡಿಸುತೆ ಕುಡಿಸಿದಂ; ತತ್ಸುತನ ಪೀಡಿ-।
ಸುವ ಮಹಾರೋಗಮದು ತೊಲಗಿಹುದು; ತದ್ ಬಂಧುಜನಕೆ ಮುದಮುಹುದಾಗಳೆ॥
ಇವರ ಮನೆ ಪೂವಳ್ಳಿಯೂರೊಳಿರುತಿಹುದಿದಂ ।
ತವೆ ಕೇಳಿ ನೋಡಿದಾ ಜನರೆಲ್ಲರಚ್ಚರಿಸಿ, ।
ಸುವಿನಯದೆ ಪಣ್-ಕಾಯಿ-ಕಪ್ಪುರಂಗಳ ಪಿಡಿದು ಬಂದರಾ ಗುರುವಿನೆಡೆಗೆ ॥೧೨॥

ಜನತೆಯೊಡನಿರ್ದರಾ ರೋಗಿಯಾತನ ತಂದೆ; ।
ಜನರರಿದರವರಿಂದಲಾ ಮಹಾಯೋಗಿಯಂ; ।
ವಿನುತನಂಘ್ರಿಗೆ ಸರ್ವರೆರಗಿದರ್ ಸಾಷ್ಟಾಂಗಮಾಗಿ ಕಾಣಿಕೆಯರ್ಪಿಸಿ ॥
ಘನ ರೋಗಿಯಿಂದವನ ಪಿತನಾದಡುಮುಪಾ-।
ಯನಮನರ್ಪಿಸುತೆ ವಂದನವ ಗೈಸುತಲಾಗ ।
ವಿನತನಾಗುತಲವಂ ನುಡಿದನೆಂತೆನೆ "ಗುರುವೆ, ತವ ಕೃಪೆಯು ರುಜೆಯಳಿಸಿತು ॥

ಇವನೆ ಯೆನ್ನಯ ಮಗಂ; ಘನರೋಗಮಡಿಸಿರ್ದು- |
ದಿವಸಿಗದು ಪೂರ್ಣಮೆನಲಳಿದಿಹುದು; ಕೈ ಕಾಲ್ಗ-|
ಳವನಿ-ಜನರಹುದೆನಲ್ ಚಿಗಿತವೈ; ತವ ಮಹಿಮೆಯಾರ್ಗೆ ಸಾಧ್ಯ"ಮಿದೆಂದನು ||
ಅವನ ಸುತನಾ ಗುರುವಿನಡಿಗೆರಗುತಿಂತೆಂದ-|
ನವತಾರಿಯಹುದು ನೀಂ; ನಿನ್ನ ಕೃಪೆಯಿಂ ಬದುಕಿ-|
ದವನಾನಿಹೇಂ; ಮಹಾರೋಗಮಿದು ವೈದ್ಯರ್ಗೆ ಮೀರಿರ್ದುಧನಘ ಮಹಿಮನ್ ||

ಎನಗಾಗಿ ಯೆನ್ನ ಪಿತನಳಿಯುತಿರ್ದಂ; ಗುರುವೆ, |
ಘನ ಮಹಾತ್ಮನೆ, ಯಿವನನುಳುಹುತಾಪ್ತರನೆಲ್ಲ-|
ರನಘ ನೀಂ ರಕ್ಷಿಸಿದೆ; ಕುರುಬರಾವೆನ್ನ ಪೆಸರುಳಿವೆಪ್ಪನಿವನ ನಾಮಂ ||
ಮುನಿಯಪ್ಪನೈ; ನಿನಗೆ ಚಿರ-ಋಣಿಗಳಾವೆಮ್ಮ |
ಧನದಲ್ಪ ಕಾಣಿಕೆಯ ನೀನೊಲಿದು ಸ್ವೀಕರಿಸು-|
ತನವರತಮೆಮ್ಮ ವಂಶವ ರಕ್ಷಿಪುದು, ಶಿವನೆ ಯೆಂದರಿದೆವಾವ್ ನಿನ್ನನೆ ||೧೫||

ಇದನಾಲಿಸುತ್ತೆ ಗುರುಸಿದ್ಧ ಶಿವಯೋಗಿವರ-|
ನದರಾಶೆಯಿಲ್ಲದಲೆ ಹುಚ್ಚನಂದದೆ ನಗುತ-|
ಲದನೆಸೆದನೋರ್ವ ಬಡವಂ ಕೊಂಡನಾಗೊಲಿದು ಮತ್ತನಿತು ನಗಲಾದನು ||
ಇದರಿಂದಲಾ ಯೋಗಿಯಂ ಹುಚ್ಚನೆಂದೆನುತೆ |
ಪದುಳ್ವಾ ಜನತೆಯಲ್ಲಿ ಕೆಲರರಿದರೊಲ್ಬು ಕೆಲ-|
ರೊದವಿದಾನಂದದಿಂ ಶಿವಯೋಗಿಯೆಂದವನ ತೆಗಳುವರ್ ಪೊಗಳ್ವರಲ್ಲಿ ||೧೬||

ನಗುವದಂ ಕೇಳುತೋರ್ವಂ ಹುಚ್ಚನಂದೆನುತೆ |
ಮಿಗೆ ಕಲ್ಲನೊಂದನೆಸೆದಂ ಖಲಂ; ಗುರುಸಿದ್ಧ-|
ನಗಣಿತನ ಪಾದಕ್ಕೆ ತಾಗಿತದು; ಬಂದಾಗ ಮಲ್ಲಿಗೆಯ ಗುಚ್ಛಮಾಯ್ತು ||
ಸೊಗಸಿನಾ ದೃಶ್ಯಮಂ ಕಂಡಖಿಲ ಜನರಾಗ-|
ಳೊಗುಮಿಗೆಯೊಳಾ ದುರುಳನಂ ಪಿಡಿದು ಬಡಿಯುತಿಹ-|
ರಗದವಂ ರೋಧಿಸಲ್ ಗುರುವು ಬಿಡಿಸುತೆ ಜನರ ಕಳುಪಿದಂ ಬೆವರಿಸುತ್ತೆ ||೧೭||

ಅವನಾಗಳಲ್ಲಿಂದೆ ಚೇತರಿಸಿ ಕೊಳ್ಳುತ್ತೆ, |
ಜವದೊಳೋಡಿದನು ಬೆದರುತ್ತಲಾ ಗುರುವಿಂಗೆ, |
ತವೆ ಜನರ ಸ್ಥಿತಿ-ಗತಿಯ ಕಾಣುತ್ತೆ ಗುರುಸಿದ್ಧನೋಡಿದಂ ನಗುತೆ ಗವಿಯೋಳ್ ||
ಸವಿನಯದೆ ಸಜ್ಜನರ್ ನೆರೆದು ಪೂವಳ್ಳಿಯೋಳ್ ।
ಶಿವಯೋಗಿಯೀ ಲೀಲೆಗಳ ಬೆರೆಯುತಿಂತವರ್ |
ಸುವಿವೇಕದಿಂ ಬಣ್ಣಿಸಿದರಾಗಳೋರ್ವೋರ್ವರೊಂದೊಂದುದಾಹರಣೆಯಿಂ ||೧೮||

ಓರ್ವನೆಂದಂ ಹುಚ್ಚನಲ್ಲಂ ಶಿವಯೋಗಿ |
ಯುರ್ವಿಯೊ ಜನತೆಗಿವನುರೆ ಭ್ರಮಿಷ್ಠನ ತೆರದೆ !
ನಿರ್ವಹಿಸಿ ತೋರ್ದಡುಂ ಲೀಲೆಯಿದು ಶಿವನೆಯವನಂತಲ್ಲದಿರಲವಂಗೆ ||
ಗರ್ವಿಯೆಸೆದಾ ಕಲ್ಲು ಮಲ್ಲಿಗೆಯ ಗುಚ್ಛಮೆಂ-|
ತುರ್ವರೆಯೊಳಾಗೆಸೆಯುತಿರ್ದತ್ತು? ದುರುಳರಿದ- |
ಕುರ್ವಿ ಗುರುವಿಗೆ ಮಾತನಾಡುವರ್ ತಿಳಿಯದಲೆ ಮಾಟದವನಿವನೆನ್ನುತೆ ||೧೯||

ಮತ್ತನೋರ್ವಂ ನುಡಿದನಹುದವರ್ಗೇನು |
ಸತ್ತಮನ ಜ್ಞಾನಮಹುದೆಂದಿಗುಂ ತಿಳಿಯಲ್ಕೆ |
ಸುತ್ತಲಜ್ಞಾನಿಗಳ್ ತುಂಬಿಹರ್; ಮಾಳ್ಪುದೇಂ? ಬಸವೇಶನಿರ್ದಾಗಳುಂ ||
ಉತ್ತಮರೆ ಶಂಕರಂ ಮರುಳ–ಶಂಕರನಾಗಿ |
ಬಿತ್ತರದ ಸುಪ್ರಸಾದದ ಕುಂಡದೆಡೆಯಲ್ಲಿ |
ಪತ್ತಿ ಕುಳಿತಿರ್ದಡುಂ ಪ್ರಭುವಲ್ಲದವನಾರು ತಿಳಿಯರಾಯಿತು ದಿಟಂ ||೨೦||

ಪಿರಿಯ ಬೇನೆಯೊಳಿರ್ಪ ಮುದುಕನಂದದೊಳಲೆವ |
ಚರವರನನಲ್ಲಮು ಪ್ರಭುವನಾ ಬಸವರಸ–|
ನುರು ಚಿತ್ತಮಲ್ಲದಲದಾರ ಮನಮುಂ ತಿಳಿಯಲಿಲ್ಲೇನು ಮಾಳ್ಪುದರಿಯೆ ||
ನೆರೆ ಯುತ್ತಮರ್ಗಾದಡುಂ ಮೋಹಮುಂಟುವುದು |
ಮೆರೆಯುವಾ ಕಲ್ಯಾಣ ಪುರದ ಶರಣರುಮಿದಕೆ |
ಸರಿಯಾಗಿ ಕುತ್ತದುರೆ ಫಲವ ಭೋಗಿಸಿದರೆಂದುನರಿದು ಮುಗ್ಧನಹೆನು ||೨೧||

ಈಗಳಿದು ಸ್ಫುಟಮಾಯಿತೆಂಬ ಮಾತಂ ಕೇಳು-।
ತಾಗ ಮತ್ತೋರ್ವನೊರೆದನದೆಂತೆನಲ್ಕಹುದು ।
ಶ್ರೀಗಿರಿಯ ಮಲ್ಲಿನಾಥಂ ಸಿದ್ಧರಾಮೇಶಗೊಡಲುರಿಯ ರುಜವ ನಟಿಸಿ ॥
ರಾಗದಿಂ ಪರಿಕಿಸಿದನೆಂದು ಕೇಳಿರ್ದೆನಾ-।
ನೀ ಗುರುವರನ ಲೀಲೆಯಿಂದರಿದೆನಿವನೆ ಶಿವ-।
ನೈ; ಗಹನ ವಿಷಯಮಿದು ತನ್ಮಹಿಮೆಯಿಂದಿದಂ ತಿಳಿಯವೇಳ್ಕಲ್ಲದಿಲ್ಲಂ" ॥೨೨॥

ಇಂತು ಮೂವರ್ ಪೇಳಿದೀ ಚರಿತ್ರಂಗಳಂ ।
ಸ್ವಾಂತಮಲರಲ್ಕೇಳುತಲ್ಲಿಯ ಸುಜನರೊಪ್ಪು-।
ತಾಂತು ಭಕ್ತಿಯನವನೆ ಶಿವನೆಂದು ಭಾವಿಸುತೆ, ಶಂಕಿಸುತ್ತಿರ್ದರೊಲಿದು ॥
ಸಂತಸದೆ ಹುಚ್ಚನಂದದೆ ನಟಿಸಿ, ಶಿವಯೋಗಿ-।
ಯಂತಕಾಂತನ-ಸಮ ಮಹಾ ಲೀಲೆಗಳನಾಗ-।
ಳಂತೆಸಗಿಹುದರಿಂದೆ "ಹುಚ್ಚಯ್ಯ ಸ್ವಾಮಿ"ಯೆಂದವನ ಕರೆದರ್ ಮೆಚ್ಚುತೆ ॥೨೩॥

ಆರಿಗುಂ ಪ್ರಭುವು ತನಗಿತ್ತ ಶಂಸಿತಮಾದ ।
ಸಾರ ಗುರುಸಿದ್ಧನಾಮವ ಮಹಾ ಯತಿ ರೂಪಿ ।
ಮಾರಹರನೆಂದೆಂದುಮೊರೆಯುದಿರ್ದರದರಿಂದೆ "ಹುಚ್ಚ"ನೆಂಬಭಿಧಾನಮೆ ॥
ಸಾರ ಪ್ರಥಿತಮುದಾಗಿ ಪೂವಳ್ಳಿ ಯೂರು ಜನರ್ ।
ಭೂರಿ ಭಕ್ತಿಯೊಳೆ ಕರೆಯಲ್ತೊಡಂಗಿದರ್; ।
ಸಾರಿದಾ ಸೀಮೆಯೊಳಿದೆ ಪೆಸರ್ ಮೆರೆದಿಹುದು ಪ್ರೇಮದಿಂ ಧರಿಸಿದನಿದಂ ॥೨೪॥

ವೀರೇಶ-ಪುಣ್ಯಾಶ್ರಮಂ ಗದುಗಿನೋಳ್ ಮೆರೆವು-
ದೋರಂತೆ ಶೋಭಿಸುವುದಲ್ಲಿ ಪಂಚಾಕ್ಷರನು-।
ದಾರ ಸ್ವ ಗುರುವರನ ಯೋಗದ ಸಮಾಧಿಯಿದೆ; ಕುಳಿತಿಲ್ಲಿ ಗುರು-ಕರುಣೆಯೋಳ್॥
ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ ।
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ ।
ವೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣದೋಳ್ ಸಂಧಿ ಮೂರು ॥೨೫॥

ಅಂತು ಸಂಧಿ ೩ಕ್ಕಂ, ಪದಂಗಳು ಇಪ್ಪತ್ತೈದಕ್ಕಂ;
ಇಂತು, ಒಟ್ಟು ಪದಂಗಳು ೧೧೫ಕ್ಕಂ;
— ಮಂಗಲಂ —

ಶ್ರೀ ಗುರುಬಸವಲಿಂಗಾಯ ನಮಃ



# ನಾಲ್ಕನೆಯ ಸಂಧಿ





|| ಸೂಚನೆ ||

ವ್ಯವಹಾರ-ಲಾಭವನುಂ ತೋರಿ, ತೋಳದ ಭಕ್ತಿ-|
ಯವಧಾನವನುಂ ಪಡೆದು, ನೊಮ್ಮಗನ
ಕರುಣಿಸುತೆ,|
ತವೆ ನ್ಯಾಯ-ನಿರ್ಣಯವ ನೆಗೆಳ್ದು, ಗುರುಸಿದ್ಧಯತಿಯಾ ತಪೋ-ವನದೆ
ನಿಂದಂ ||

[ ಸಂಧಿ ಪ್ರಾರ್ಥನಾ-ಪದ್ಯ ]

ಯತಿ-ತತಿ, ಗಣಾಧಿಪತಿ, ರತಿ-ಪತಿ, ಮದ್ಯಾಪಹೃತಿ, |
ಕೃತಿ-ಕರ-ಜಿತ-ಪ್ರಕೃತಿ, ಸುಕೃತಹಿತ, ದಿವಿಜ-ತತಿ, |
ನತಿ-ವಿತೃತ, ವರ, ವಿತತಿ-ಧೃತ, ಸುಧಾಕರ-ಶೇಖರ-ಪ್ರಥಿತ, ಗಂಗಾಧರ, |
ನುತಿ-ವಿಲೇಖನ-ರತ, ಸರಸ್ವತೀ-ನಿಹಿತ-ಮತಿ, |
ಪತಿತ-ಪಾವನ-ಚರಿತ, ಕಂಬಲಾಶ್ವತ-ಗೀತ, |
ಗತಿ-ಮುಗ್ಧ, ಗುರುಃಸಿದ್ಧ, ಪೂವಳ್ಳಿ-ವನಸಿದ್ಧ ಗಹ್ವರ-ನಿವಾಸ, ಸಲಹೈ ||೧||



* *

ಎಂದೆಂದಿಗುಂ ಬತ್ತದ ಪೊಂಡದೆಡೆಯಲ್ಲಿ |
ಸಂದೊಂದು ತಾನಾಗಿಯೆ ಸಿದ್ಧಮಾಗಿರ್ದು |
ಪೊಂದೆಂದಿನಿಂ ಶಂಭುವನನುಷ್ಠಿತಿಗೆ ಕರೆಯುತಿಹುದು ಯೆನೆ ಶೋಭಿಸಿರ್ಪ ||
ಮುಂದೆಂದು ಕಾಣದಿಹ ಗವಿಯೊಳ್ ಪರಂಜ್ಯೋತಿ |
ಕುಂದೇಂದು-ಶುಭ್ರಾಂಗ, ಭಸ್ಮಾಂಗನೆಸೆದಿರುವ-|
ನಂದಂದಮಾದ ಭಕ್ತೇಷ್ಟಮಂ ಸಲಿಸುತ್ತೆ ಗುರುಸಿದ್ಧನಾಗಿ ಶಿವನು ||೨||

ಈತನೆ ಸದಾ ಹುಚ್ಚನಂದದೆ ನಟಿಸುತ್ತೆ, |
ಖ್ಯಾತ ಪರಹಿತವ ಮಾಳ್ಪುದರಿಂ ಮಹೇಶನೆಂ-|
ದೋತು ಜನರರಿದು 'ಹುಚ್ಚೇಶ'ನೆಂಬುವ ನಾಮದಿಂ ಕರೆಯುತಿರ್ದರೊಲಿದು ||
ಪ್ರೀತಿಯಿಂ ತಮ್ಮ ದುಃಖವ ಕಳೆದುಕೊಳುತಿಹರ್; |
ಸಾತಿಶಯ ವಿಶ್ವಾಸಮಂ ಬೆಳೆಸಿಕೊಳುತಿಹರ್; |
ಖ್ಯಾತಿಯಿದು ಪೆರ್ಚುತಿರೆ, ಮತ್ತೊಂದು ಲೀಲೆಯದು ಜರುಗಿತದನೊರೆವೆನೊಸೆದು ||

ಹೂಬಳ್ಳಿ ಗ್ರಾಮದೊಳಗಿರ್ದನೋರ್ವಂ ಭಕ್ತ-|
ನಾ ಬಿಂಕವಿಲ್ಲದಲೆ ನಂಬುತಿವನಂ ಶಕ್ತ-|
ನೋಬುತ್ತೆ, ಸ್ವಜನರಂ ತಾನಾಗಿ ಸಲೆ ಗುಪ್ತನಾಗಿ ಬಾಳುತ್ತೆ ಸತತಂ ||
ಆಬಾಲ-ವೃದ್ಧರಿಗಿನಂ ಪ್ರಿಯಂ; ಶಿವ-ಸಕ್ತ-|
ನೀ ಬೋಧಕನ ನಂಬುತೊಂದು ದಿವದೊಳ್ ಮುಕ್ತ-|
ನಾಬಾಧ್ಯ ಪಾದಮಂ ಕಂಡು ಪೋಗಲ್ ರಕ್ತನಾಗುತಂ ಬಂದನಲ್ಲಿ; ||೪||

ಕಾಣದಲೆ ಬನದಲ್ಲಿ ಸುತ್ತಾಡುತರಸುತ್ತೆ |
ಜಾಣನಾದಾ ಶಿವಪ್ಪಾಪ್ಪಯಂ ಮರಗುತ್ತೆ, |
ಜಾಣತನದಿಂ ಮನದೆ ಯೋಗಿಯಂ ನೆನೆಯುತ್ತೆ ತೆರಳಿದಂ ವ್ಯಾಪಾರಕೆ ||
ಕಾಣಿಕೆಯನಿಂದಿನುರು ಲಾಭದೊಳ್ ಯೀಯುವಾ |
ಪೂಣೆಯಿಲ್ಲದಿಹ ಸಂಕಲ್ಪಮಂ ಧೃಢಗೊಳಿಸಿ, |
ಮಾಣದಲೆ ಮಾರ್ಗಮಂ ಪಿಡಿದಿರ್ದನಡವಿಯೊಳ್ [illegible] ತಡೆದರು ||೫||

ಆಗ ಮತ್ತಂ ಹುಚ್ಚಸ್ವಾಮಿಯಂ ನೆನೆಯುತ್ತೆ |
ಸಾಗಿ ಬಂದಾ ಕಳ್ಳರಿಗೆ ತನ್ನ ಹಣಮಿರ್ದ |
ಠಾಗದುರೆ ಹಮ್ಮಿಣಿಗೆಯಂ ಕೊಟ್ಟನವರದಂ ಶೋಧಿಸುತಲೊಗೆದು ಬಡಿದು ।
ಸಾಗಿದರ್; ಶೆಟ್ಟಿಯಾ ಬೀಳ್ದ ಚೀಲವ ಕೊಳ್ಳು-|
ತಾಗಳತಿ ಸಂಶಯದೆ ಶೋಧಿಸುತೆ ದ್ರವ್ಯಮಂ |
ಶ್ರೀಗುರುವರನ ನೆನೆದು ದುಃಖದಿಂದದನೆಸೆಯೆ, ರೂಪಾಯಿಗಳ್ ಬೀಳ್ದವು; ||೬||

ಅಚ್ಚರಿಸುತೆಲ್ಲ ಪಣಮಂ ಕೊಳ್ಳುತೆಣಿಸಲ್ಕೆ ।
ಮೆಚ್ಚಿದಂ ಲೆಕ್ಕಕ್ಕೆ ಸರಿಯಿರ್ದುದಂ ತಿಳಿದು; |
ನೆಚ್ಚುತಂ ಗುರುವರನ ಲೀಲೆಯಂ; ಚಿತ್ತದೋಳ್ ಪೊಗಳುತ್ತೆ ಪೇಟೆಗೈದಿ, ||
ಒಚ್ಚತಂ ಮೋದದಿಂ ಧಾನ್ಯಮಂ ಕೊಳ್ಳುತ್ತೆ, |
ಬಚ್ಚಿಡದೆ ಮಾರುತ್ತೆ, ಲಾಭಮಂ ಪಡೆದನವ-|
ನಿಚ್ಛೆಯಿಂ ತನ್ನೂರ್ಗೆ ಬಂದು, ಸುಖಮಾಗಿರ್ದನಾ ಯೋಗಿಯಂ ಮರೆಯುತೆ;||೭||

ಕಾಣಿಕೆಯನರ್ಪಿಸದಲಿರ್ದನಾಗ ಶಿವಪ್ಪ-|
ನೂಣೆಯಿಲ್ಲದ ಕರ್ತೃ ಗುರುಸಿದ್ಧ ಶಿವಯೋಗಿ-|
ಯಾಣತೆಯನಿತ್ತನಾತನ ಕನಸಿನೋಳ್ ಕಾಣುತರ್ಪಿಸಲುಪಾಯನಮನೆ ||
ಮಾಣದೆಚ್ಚರಮಾಗಿ ತತ್ ಕರ್ಣದೋಳ್ ಯತಿಯ |
ವಾಣಿಯಿಂದೇನಿದ್ದೈ ? "ಯಮಗೀವುದಂ ಮರೆತೆ? ।
ಕಾಣು, ಬಂದೆಮ್ಮನೆಂ"ದುದಿತ ಶಬ್ದಗಳುಲಿಯುತಿರೆ ಸಲೆ ಭೀತಿಯುದಿಸೆ ||೮||

ಆ ಕ್ಷಣದೆ ಸ್ನಾನಮಂ ಮಾಡಿ, ಪಣ್-ಕಾಯ್ಗಳಂ ।
ಶಿಕ್ಷಿತಂ ಶೆಟ್ಟಿಯಾಗಳೆ ಕೊಂಡು ಕಾಣಿಕೆಯ; |
ದಕ್ಷನಾಗಿಹ ಮಹಾ ಗುರುಸಿದ್ಧನಂಘ್ರಿಯಂ ಕಾಣಲ್ಕೆ ಚಿತ್ತದಲ್ಲಿ ||
"ರಕ್ಷಿಸೈ ಹುಚ್ಚೀಶ, ನೀನೆಂ"ದು ಪ್ರಾರ್ಥಿಸುತೆ |
ಸಕ್ಷಮನ ತತ್ತಪೋವನಕೆ ಜವದಿಂದೈದಿ |
ತ್ರ್ಯಕ್ಷ-ಸಮ ಗುರುಸಿದ್ಧ ಶಿವಯೋಗಿಯಡಿಯಗಳಿಗೆ ನಮಿಸಿ ನಿಂದಂ ಭಜಿಸುತೆ||೯||

"ಹುಚ್ಚಯ್ಯ, ತಾತ, ವಿಖ್ಯಾತ, ತ್ರಿಜಗನ್ನಾಥ, ।
ಹುಚ್ಚೀಶ, ಪೂತ, ಸುಗುಣ-ವ್ರತ, ಸದ್‌ಗಾಥ, ।
ಹುಚ್ಚೀಂದ್ರ, ಕರ್ತ, ಸುವಿನೀತ, ಭಕ್ತ-ಪ್ರೀತ, ಶಿವಯೋಗಿ, ಸುವಿರಾಗಿಯೆ, ॥
ಹುಚ್ಚಪ್ಪ, ದಾತ, ವಂದಿತ-ದೂತ, ಸತ್-ಪ್ರಮಥ, ।
ಹುಚ್ಚಾರ್ಯ, ವಿನುತ-ಮಂಗಲ-ಗೀತ, ಮಹಿತಾರ್ಥ, ।
ಹುಚ್ಚಣ್ಣ, ನಾಥ, ವಿದಿತ್ಯಾನಾಥ, ಪೊರೆಯಯ್ಯ; ಯೆನ್ನಯ್ಯ, ಮರೆದು ತಪ್ಪಂ" ॥

ಎಂದು ಪ್ರಾರ್ಥಿಸುತಿರಲ್ ಗುರುಸಿದ್ಧನೈದಿರ್ದ-।
ನಂದು ನೋಡುತೆ ಭಕ್ತಿಯಿಂದಲೆರಗಿದನವಂ ।
ತಂದ ಕಾಣಿಕೆಯ ಪಣ್-ಕಾಯ್ಗಳಂ ಕಪ್ಪುರಮನಿತ್ತುದಂ ನೋಡಿ ಗುರುವು ॥
ಎಂದನೀ ಪರಿ "ಯೆಲೆ, ಶಿವಪ್ಪ ಶೆಟ್ಟಿಯೆ, ಯೆಮಗೆ ।
ಸಂದದೀ ಕಾಣಿಕೆಯು; ಕೊಂಡಾವದೇಂ ಮಾಳ್ಪ-।
ದಂದದಿಂ ಜಂಗಮಾರಾಧನೆಯನಿದರಿಂದೆ ನಡೆಸು; ನಿನಗೊಳಿತಪ್ಪುದು;" ॥೧೧॥

ಎನುತೆ ಪಣ್-ಕಾಯ್ಗಳಂ ಮುದದೊಳವನುಡಿಗಿಡುತ-।
ಲನಘನಾಶೀರ್ವದಿಸಿ, ಗವಿಯೊಳೈದುತಿರಲ್ಕೆ ।
ಘನ ಯತಿಪನೀ ಲೀಲೆಯಂ ಶೆಟ್ಟಿಯಿಂತು ಸ್ಮರಿಸಿದನದಂ ಪೇಳ್ವೆನೊಲಿದು ॥
"ವಿನುತನೀ ಹುಚ್ಚೀಶನೆನ್ನ ನಾಮವನೆಂತು ।
ಘನತೆಯಿಂದುಸುರಿದಂ ? ವಿಸ್ಮಯಿದಿ ನಾನೆಂದು-।
ಮನುನಯದೊಳೀತನಂ ದರ್ಶಿಸಿಲ್ಲ;ತಿಳಿಯೆ ಮಹಿಮೆಯಿದು ನೋಡೆ ಘನವು" ॥೧೨॥

ಇಂತು ಬೆರಗುಗೊಳುತ್ತೆ ಭಕ್ತಿಯದು ಪೆರ್ಚುತಿರೆ, ।
ಸಂತನಾ ಗುಹೆಗೆ ಮಣಿಯುತ್ತಲರಿವುದಿಸುತಿರೆ ।
ಸಂತತಂ ನೆನೆಯುತ್ತೆ ಸದ್ಭಾವ ಮೊರೆಯುತಿರೆ, ಗೈಸಿದಂ ಚರ-ತೃಪ್ತಿಯ ॥
ಅಂತು ಜನರೋಳ್ ಮತ್ತೆ ಲೀಲೆಯಿದು ತಿಳಿಯುತಿರೆ ।
ಕಾಂತ ಶಂಭುವೆನುತೆ ಹುಚ್ಚನಂ ತಿಳಿಯುತಿರೆ, ।
ಪ್ರಾಂತದೊಳ್ ಬೆಳೆಯುತ್ತೆ ಕೀರ್ತಿ-ಲತೆ ಪಬ್ಬುತಿರೆ, ಭಕ್ತ-ವರ್ಗಂ ಪೆರ್ಚಿತು; ॥

ಮತ್ತೆ ಘನ ಲೀಲೆಯೊಂದಾ ತಪೋ-ವನದಲ್ಲಿ ।
ಚಿತ್ತಮಚ್ಚರಿಪಂತೆ ಜರುಗಿದುದು; ಪೇಳ್ವೆ ನಾಂ ।
ಸತ್ತಮರ್ ಕೇಳುವಡದೆಂತೆನಲ್ಲೊಂದು ದಿನದೋಳ್ ಮೋದದಿಂ ಬಾಲರು ॥
ಉತ್ತಮರ್ ದನಗಳಂ ಕಾಯುತಿರೆ ಗೋವೊಂದು ।
ಕುತ್ತಮಿರಲೀಯುತಿರಲಾ ಕರುವನಾಗಳುರೆ ।
ಹತ್ತಿರಕೆ ಬಂದೊಂದು ತೋಳಮದನೊಯ್ಯುತಿರೆ, ದನಗಾಯ್ವ ಬಾಲರರಿದು ॥೧೪॥

ದಿಕ್ಕು ತಿಳಿಯದಲೆ ನೋಡುತ್ತೆ, ಹೌಹಾರಿ ನಿಲ್ಲೆ, ।
ಕಕ್ಕಸಂ ಬಡುತಲರಚುತಿರೆ, ಗೋವದನರಿದು ।
ಮುಕ್ಕಣ್ಣನವತಾರಿ ಗುರುವು ಗವಿಯಿಂದೈದಿ ನೋಡುತ್ತಲಾ ಘಟನೆಯ ॥
ಗಕ್ಕನೆಲವೋ ! "ವೃಕವೆ, ಬಾ"ಯೆಂದು ಕರೆಯುತಿರೆ ।
ಪಕ್ಕನೇ ಕರುವಿನೊಡನೈದುತ್ತೆ, ತೋಳಮುದು ।
ಮಿಕ್ಕಿದುರು ಜಂಗಮಗೆ ನಮಿಸುತ್ತೆ ತೊರೆದದಂ, ಕಜ್ಜರವ ಪಡೆದೋಡಿತು;॥೧೫॥

ಕರುವಿಗಾಗಲೆ ಭಸಿತಮಂ ಪೂಸಿ. ಗಾಯಮಂ ।
ನೆರೆ ಮಾಯಿಸುತೆ, ತೊಲಂಗಿಸಿ ಭಯವ; ವೈದಡವಿ ।
ಪರಮನನುರಾಗಮಂ ತೋರುತಿರೆ, ಮಾತೆಯಹ ಗೋವೈದಿ ನೆಕ್ಕುತಿರಲು ।
ಗುರುಸಿದ್ಧ-ಶಿವಯೋಗಿಯುದರ ಪ್ರೇಮವ ಕಂಡು, ।
ಕರುಣೆಯಾನಂದಿಸುತೆ, ದನಗಾಯ್ವ ಬಾಲರ್ಗೆ ।
ಕರೆಯುತೊಪ್ಪಿಸುತೆ, ಗವಿಯಲ್ಲಿ ಪೋಗುತ್ತೆ, ಶಿವಪೂಜೆಯೋಳ್ ಬೆರೆದಿರ್ದನು;॥

ಮುದದಿಂದೆ ಕರುವನಾಕಳುವನದರೊಡೆಯನಾ ।
ಸದಮಲನ ಸನ್ನಿಧಿಗೆ ತಂದರ್ಪಿಸುತ್ತೆ ಸಲೆ ।
ಪದುಳ್ದು "ನಿನ್ನಯ ಲೀಲೆಯಿಂ ಗುರುವೆ, ಯೆನ್ನಯೀ ವತ್ಸ-ಧೇನುಗಳುಳಿದವು; ॥
ಪದದಿಂ ತವಾರ್ಚನೆಗೆ ಸಲ್ಲಲಿವು; ಮಮ ವಂಶ-।
ಮಿದರಿಂದ ಸೊಗವ ಪಡೆಯುತ್ತೆ ವರ್ಧಿಸಲಯ್ಯ; ।
ಸದಯನೆ, ಯೆನುತ್ತೆ ಬೇಡುತ್ತೆ, ನಮಿಸುತೆ, ಶುಭಾಶಿಷವ ಪಡೆಯುತೆ, ತೆರಳ್ದನು ॥೧೭॥



ಕರ್ತೃ ಶ್ರೀ ಗುರುಸಿದ್ಧೇಶ್ವರರು ತೋಳದಿಂದ ಆಕಳ ಕರುವನ್ನು ಬಿಡಿಸಿ ಸಲುಹಿದ ಲೀಲೆ

ಈ ಲೀಲೆಯಂ ಜನಕೆ ಪೇಳುತಾಕಳದೊಡೆಯ-|
ನೋಲಾಡಿ ವರ್ಣಿಸುತಿರಲ್, ಕೇಳ್ದ ಜನತೆಯೋಳ್ |
ಮೇಲಾದ ಕಲ್ಯಾಣ ಬಸವೇಶ-ಮಹಿಮೆಯಂ ಬಣ್ಣಿಸಿದನೋರ್ವನಿಂತು-|
"ಶೀಲಾತ್ಮನಾದಾಂಧ್ರ ಬೊಮ್ಮಯ್ಯನೆಂಬೋರ್ವ ।
ಕಾಲಾರಿ-ಭಕ್ತನೊಂದಡವಿಯೋಳ್ ಪೂಜೆಯಂ |
ಕಾಲಕ್ಕೆ ಮಾಡಲೋಸುಗವಲ್ಲಿ ಬಿಲ್ವಮಂ ತರುವಾಗ ಮೃಗಗಳೆಲ್ಲಂ ॥೧೮॥

ಅವನ ಸುತ್ತಲ್ ನಿಲ್ಲುತಿರೆ ಬಸವನಂ ನೆನೆದು |
ತವೆ ಮಾತನಾಡಿಸಿದನೆಂದೋರ್ವನಿಂದಲಾಂ ।
ಶ್ರವಣ ಮಾಡಿರ್ದೆನದುಮೆಮ್ಮ ಹುಚ್ಚೇಶನಿಂ ದಿಟಮಾದುದೆ"ನುತಿರಲ್ಕೆ ॥
ಸುವಿನಯದೆ ಮತ್ತೊಬ್ಬನೆಂದನೆಂತೆನಲಹುದು |
"ಸುವಿವೇಕಿಯಿಂದಲಾಂ ಕಿನ್ನರಂ ಲಿಂಗದಿಂ-।
ದವನಿಯ ಜನಂ ಚೋದ್ಯಮೆನೆ ಸಾಕ್ಷಿಯಂ ನುಡಿಸಿ ಮೆರೆವನೆಂದಾಲಿಸಿರ್ದೆಂ ॥

ಇದು ಹುಚ್ಚಸ್ವಾಮಿಯಿಂ ನಿಜಮಾದು"ದೆನುತಿರಲ್ |
ಸದಮಲಂ ಮತ್ತೋರ್ವನೆಂದನೆಂತೆನೆ ದಿಟಂ |
"ಸದಯೆ ಯೋಜಕ್ಕನೆಂಬುವ ಶರಣೆ ಬಸ್ತಿಯೋಳ್ ಲಿಂಗಮಂ ತೋರುತೆ ॥
ಪದುಳ್ದು ಮೆರೆದಿಹಳೆಂದು ಕೇಳ್ದ ಸಚ್ಚರಿತಮಿದು ।
ಪದಪಿಂ ವಿಚಾರಿಸಲ್ ಹುಚ್ಚ ಶಿವಯೋಗಿಯಿಂ |
ಪದೆದಹುದು ಸತ್ಯಮೆಂ"ದೆನುತಿರಲ್ ಭಕ್ತರೆಲ್ಲರ್ ನಲಿದರಾನಂದದೆ ॥೨೦॥

* *

ಪರಮುನಿನ್ನೊಂದು ಲೀಲೆಯನೊರೆವೆನರಿಯುವುದು |
ಮೆರೆವ ಪೂವಳ್ಳಿ ಗ್ರಾಮದೊಳಿರ್ಪಳೋರ್ವಳುರು-।
ತರ ಲಿಂಗಿ-ಮತದಲ್ಲಿ ಜನ್ಮಿಸಿದವಳ್ ಸುಗುಣವತಿಯು ಛಲವತಿಯು ತಿಳಿಯೆ ॥
ನೆರೆ ಕೃಪಣೆ ಬಸವಮ್ಮನೆಂಬುದೀಕೆಯ ಪೆಸರ್ |
ವರ ತನಯನಿರ್ದನೋರ್ವಂ; ಸುಶೀಲೆಯು : ವಿಧವೆ ।
ಮೆರೆಯುತಿಹುದಿವರ ಮನೆ ದೊಡ್ಡಮನೆಯೆಂದಿದರಿಂದ ದೊಡ್ಡಮನೆಯುಪನಾಮವು ॥

ಈ ಮನೆತನಕ್ಕಿಹುದು; ಬಸವಮ್ಮನಾ ಸೊಸೆಯು |
ಧೀಮತಿಯು ಗುಣವತಿಯು ಶುಚಿಮತಿಯು ಪತಿರತೆಯು |
ಭಾಮಿನಿಯು ಶೀಲವಂತೆಯುಯೆಂಬ ನಾಮಮಂ ಪಡೆದು, ಸುಖಮಾಗಿರ್ದಳು ।
ಶ್ರೀಮತಿಯು ಗುರುಲಿಂಗ-ಜಂಗಮಾರ್ಚನ-ವತಿಯು ।
ಸೋಮ-ಭಕ್ತೆಯು ಪುತ್ರವತಿಯಲ್ಲ, ಘನವತಿಯು ।
ಕಾಮಿನಿಯು ಬಹಳಮಾಗಿಯೆ ವ್ಯಥೆಯ ಪಡುತಿಹಳು ಪುತ್ರನಂ ಪಡೆವಾಶೆಯೋಳ್||

ಸನ್ನುತಳನೇಕ ವ್ರತಗಳ ಮಾಡಿ ಬೇಸತ್ತು |
ನನ್ನಿಯಿಂ ನಂಬಿದಳ್ ತನಗೆ ಸುತರುದಿಸರೆಂ-|
ದುನ್ನತಳಿಗತ್ತೆಯಾಗಿರ್ದ ಬಸವಾಂಬೆ ನಿಜ ಸುತಗೆ ಮತ್ತಂ ಮದುವೆಯ ||
ಚನ್ನಮೆನೆ ಮಾಡಲುರೆ ನಿಶ್ಚಯಿಸಿದಳ್; ಸೊಸೆಯು |
ತನ್ನ ಯತ್ತೆಯ ಪಾದದೋಳ್ ಬೀಳ್ದು ಬೇಡಿದಳ್ |
ಮನ್ನಣೆಯ ಸ್ವೀಯ ಭಗಿನಿಯ ಕೊಂಡು ವಂಶದುನ್ನತಿಯ ಸಾಧಿಪುದೆನ್ನುತೆ ॥೨೩||

ಒಪ್ಪದಲೆ ಬಸವಾಂಬೆ ಮಾತನಾಡಿದಳಿಂತು:—|
ಬೆಪ್ಪಳೆ, ಯೆಮಗೆ ನಿಮ್ಮ ವಂಶಮದೆ ಬೇಕಿಲ್ಲ; |
ತಪ್ಪದಲೆ ನಿನ್ನಂತೆಯುವಳುಂ ಬಂಜೆಯಾಗೆ, ಹಾನಿಯಂ ಭೋಗಿಪರವಾರ್ ? ||
ಬಪ್ಪ ದುಃಖವ ತಡೆದು, ಶೀಲಾಂಬೆ ಮುದದೆ ತ-|
ನ್ನಪ್ಪನಿಗೆ ಸರ್ವಮಂ ತಿಳುಹಿಸಲ್ಕಂಡವಂ |
ತಪ್ಪದಾ ಬೀಗಿತಿಯ ಬೇಡಿ ನಿಷ್ಫಲನಾಗಿ, ಕಂಡವಂ ಸ್ವಕೀಯ ಸಖನಂ ||೨೪||

ಗುರುಸಿದ್ಧ ಶಿವಯೋಗಿ ಪದ-ಭಕ್ತನಾಗಿರ್ಪ |
ಶರಣಂ ಶಿವಪ್ಪ ಶೆಟ್ಟಿಯೆ ಯೊತನಾ ಸಖಂ, |
ನೆರೆ ತನ್ನ ಬೀಗಿತಿಯ ಬಯಕೆಯಂ ತಿಳಿಸುತ್ತೆ, ದುಃಖಿಸಲೊಡರ್ಚಿದನವಂ ||
ಉರು ದುಃಖಮಂ ಕಂಡು ಪೇಳ್ದನೆಂತೆನೆ "ಮಿತ್ರ |
ಗುರುಭಕ್ತಿಯೊಂದಿದಕೆ ತಾರಕೋಪಾಯಮಿಹು-|
ದರಿದುರೆ ವ್ಯಸನಮಂ ನೀ ಬಿಡ್ಡೆ; ಸ್ವಾಮಿಯಡಿಯಂ ದರ್ಶಿಸುತೆ ತಿಳುಹಿಸು"; ||೨೫||

ಈ ಸಖನ ವಾಕ್ಯವಂ ಕೇಳ್ದು ಹರ್ಷಿತನಾಗಿ, ।
ದಾಸ-ಭಾವವ ತಳೆದು, ಗೆಳೆಯನೊಂದಿಗೆ ಬಂದು ।
ಭಾಸಿಸುವ ತತ್ತಪೋವನದೆ ಕಂಡಾ ಯತಿಯ ಚರಣಕ್ಕೆ ನಮಿಸಿದನವಂ; ॥
ಭಾಸುರ ಮಹಾ ಯತಿಗೆ ನಮಿಸುತೆ ಶಿವಪ್ಪನಾ ।
ಲೇಸಿಗಾಶಿಪ ಮಿತ್ರ-ದುಃಖಮಂ ತಿಳುಹಿಸ- ।
ಲೋಸರಿಸದಲೆ ನಿಮ್ಮ ಬೇಗಿತಿಯ ಕರೆತರುವದೆಂದನಾ ಗುರುವರ್ಯನು ॥೨೬॥

ಶಿವಯೋಗಿಯಾಜ್ಞೆಯಂತಾ ಸಖನ ಸಂಗಡಂ ।
ಶಿವಶೆಟ್ಟಿಯುಂ ಪೋಗಿ, ಬಸವಮ್ಮನಂ ಕರೆಯೆ ।
ಸುವಿನಯುವ ತ್ಯಜಿಸುತ್ತಲವರೀರ್ವರಂ ನೋಡಿ ಸುದತಿಯಿಂತುಲಿದಳಾಗ ॥
"ಅವಿಚಾರಿಗಳೆ, ಪೋಗಿರಾ ಯತಿಯ ಬಳಿಯಲ್ಲಿ ।
ತವೆ ಯೆಮ್ಮ ಕಾರ್ಯಮೇನಾರುಮೊರೆದಡುಮೆನ್ನ ।
ತವಿಪ ಛಲಮಂ ಬಿಡೆನು, ಸ್ತ್ರೀಯು ಸನ್ಯಾಸಿ-ಮುಖಮಂ ನೋಡಲಾರದೆಂದುಂ॥೨೭॥

ಈ ನುಡಿಯನಾಲಿಸುತೆ ಮರು ಮಾತನಾಡದಲೆ ।
ಮಾನ-ನಿಧಿಗಳ್ ಸ್ವಗುರು-ನಿಂದೆಯಂ ಕೇಳ್ದುದಕೆ ।
ಮಾನಸದೆ ಕಡು ನೊಂದು, ಪಾಪಮಂ ಹರಿಸೆಂದು ಬೇಡಲ್ಕೈದಿದರನಘನಂ ॥
ದೀನ-ಪಾಲಂಗಖಿಲ ವಾರ್ತೆಯಂ ಬಿನ್ನವಿಸು- ।
ತೂನಮಿಲ್ಲದ ಭಕ್ತಿಯಿಂದೆ ನಿಂದ್ಯಾಘಮು- ।
ಜ್ಞಾನಮಂ ಕಳೆಯೆಂದು ಬೇಡುತಿರಲಾ ಸುದತಿಯಂಥಳಾಗುತೆ ಬಂದಳು; ॥೨೮॥

ಸ್ತುತಿಸುತ್ತೆ ಸೊಸೆಯೊಡನೆ ಶಿವಯೋಗಿ ಪಾದದೋಳ್ ।
ಮತಿವಂತಳಾಗಿ ನಿನ್ನಾಜ್ಞೆಯ ಮೀರೆನೆಂ- ।
ದತಿ ಭಕ್ತಿಯಿಂ ಬೀಳುತಿರಲಾಗ ಬಸವಮ್ಮನಕ್ಷಿಗಳ್ ಕಂಡವರಿಯೆ ॥
ಮಿತಿಯಿಲ್ಲದಾನಂದದಿಂ ನುಡಿದಳೆಂತೆನಲ್- ।
"ಯತಿವರ್ಯ ನಿನ್ನ ಲೀಲೆಯನರಿಯದೇನೇನೊ ।
ಹಿತವ ತಿಳಿಯದೆ ಮಾತನಾಡಿದೆಂ ಕ್ಷಮಿಸೆನಗೆ ಮೊಮ್ಮಗನ ನೀಡು ನಲಿದು ॥೨೯॥

ನೀನೆ ಮತಿವಂತನಿಹೆ; ನೀನೆ ಭಗವಂತನಹೆ; ।
ನೀನೆ ಘನವಂತನಿಹೆ; ನೀನೆ ಗುಣವಂತನಹೆ; ।
ನೀನೆ ಶ್ರೀಮಂತನಿಹೆ; ನೀನೆ ಧೀಮಂತನಹೆ; ನೀನೆ ಶಿವನಿಹೆ, ಗುರುವರ, ॥
ನೀನೆ ಸುಜ್ಞಾನಿಯಿಹೆ; ನೀನೆ ವಿಜ್ಞಾನಿಯಹೆ; ।
ನೀನೆ ಶ್ರುತಿಮಾನಿಯಿಹೆ; ನೀನೆ ಹಿತ-ದಾನಿಯಹೆ; ।
ನೀನೆಯವಧಾನಿಯಿಹೆ; ನೀನೆ ಸುವಿಧಾನಿಯಹೆ; ಹುಚ್ಚೀಶ ನೀನೆ ಸರ್ವಂ;" ॥೩೦॥

ಇಂತು ನುತಿಸುತ್ತೆ ಮತ್ತಂ ಪಾದದೋಳ್ ಬೀಳ್ದ ।
ಕಾಂತೆಯಾ-ಭಕ್ತಿಯಂ ನೋಡಿ, ಗುರುಸಿದ್ಧಯತಿ ।
ಶಾಂತನೊರೆದನದೆಂತೆನಲ್ "ಮಾತೆ, ನಿನ್ನಿದೇ ಸೊಸೆಯು ಸುತನಂ ಪಡೆಯುತೆ ॥
ಶಾಂತಿಯಂ ನಿಮ್ಮ ವಂಶಕೆ ನೀಡುವಳ್ ತಿಳಿ; ನಿ- ।
ತಾಂತ ಹರ್ಷದೆ ಬಾಳು; ಬೇರೊಬ್ಬ ಸೊಸೆಯ ಪಡೆ- ।
ವಂತರಂಗದ ಬಯಕೆಯಂ ಬಿಟ್ಟು, ಜಂಗಮಾರಾಧನೆಯ ಮಾಡು, ನಯದೆ ॥೩೧॥

ಎಮ್ಮ ನಿಂದೆಯ ಗೈದಘಂ ತೊಲಂಗುವದೆನು- ।
ತ್ತೊಮ್ಮೆಗಂ ಕೃಪೆಯಿಂ ಶಿವಪ್ಪನಂ ತತ್ಸಖನ-!
ನೊಮ್ಮನದೆ ನೋಡುತಿರಲೀರ್ವರುಂ ನಮಿಸುತ್ತಲೊಪ್ಪಿ ಜಂಗಮ-ತೃಪ್ತಿಯಂ ॥
ನೆಮ್ಮಿ ಸಂಕಲ್ಪಿಸುತಿರಲ್ ಬಸವಮ್ಮನುಂ ।
ಸಮ್ಮತಿಸಿ ನಮಿಸುತ್ತಲಾಶಿಷವ ಪಡೆಯುತ್ತೆ, ।
ಬಿಮ್ಮಳಿದು ನುತಿಸುತ್ತೆ, ಸೊಸೆಯೊಡನೆ ಪೋಗುತಿರೆ ನಮಿಸುತಿಬ್ಬರು ತೆರಳ್ದರು; ॥

ಜಂಗಮಾರಾಧನೆಯದವರವರ ಮನೆಯಲ್ಲಿ ।
ತುಂಗ ವೈಭವದಿಂದ ಜರುಗುತಿರಲಾ ಜಸಂ ।
ಭಂಗವಿಲ್ಲದೆ ಪರ್ಬುತಿರೆ, ಗಣಾರಾಧನೆಗಳಲ್ಲಲ್ಲಿ ನಿತ್ಯಮಾಗಿ ॥
ಮಂಗಲಮನೀಯುಲಾದವು ಜರುಗುತರಿಯುತ್ತೆ ।
ಪಿಂಗದಲೆ ನೆರೆಯಲಾದರ್; ಭಕ್ತಿ-ಲತೆ ಭಕ್ತ ।
ಮಂಗಲದ ಹೃದ್ ಭೂಮಿಯೋಳ್ ಪರ್ಬಿ, ಕಲ್ಪಲತೆಯಾಗಿ, ಬಯಕೆಯ ಸಲಿಸಿತು ॥೩೩॥

ಈ ಪರಿಯೊಳಾ ಜಗದ್ಗುರುವರ್ಯ ಗುರುಸಿದ್ಧ- ।
ನೀ ಪವಿತ್ರ ಸುಲೀಲೆಗಳ್ ಜರುಗಿ ಪೂವಳ್ಳಿ- ।
ಯೀ ಪವಿತ್ರತೆಯನಾಂತಿರಲವುಗಳನುಭವದೆ ಶಾಂತಿಯುಂ ನೆಲಸಿರಲ್ಕೆ ॥
ಪಾಪಮಂ ಕಳೆಯುವಿನ್ನೊಂದು ಮಹಿಮೆಯುಮಲ್ಲಿ ।
ದೀಪಿಸಿದುದನೊರೆವೆನೆಂತೆನಲ್ ಕುಲಕರಣಿ ।
ಶ್ರೀಪತಿ-ಸಮಾಹ್ವಯಂ, ಮೋಸಗೊಳಿಸುವ ಸ್ವಾರ್ಥಿ, ನೆಲೆಸಿಹಂ ದುರಭಿಮಾನಿ ॥

ಅಲ್ಲಿಯ ಜನಂಗಳ್ಗೆ ಪ್ರಿಯನಾಗಿ ನಟಿಸುತ್ತೆ, ।
ಬಲ್ಲವರ ಮನಮನಾದಡುಮಿವಂ ಸೆಳೆದಿರ್ದ- ।
ನುಲ್ಲಸದೆ ವಿದ್ಯೆಯಿಲ್ಲದ ಬಡವರಂ ಬಿಡದೆ, ಕಪಟೆಯುರೆ ಮೋಸಗೊಳಿಪಂ ॥
ಕ್ಷುಲ್ಲಕತ್ವವ ತಿಳಿಯಗುಡದಂತೆ ಬಾಳ್ವ; ಕಾ- ।
ಲೋಲ್ಲಸಿತ ಚಾತುರ್ಯ್ಯಮದಿವಂಗೆ ಜನ್ಮದಿಂ ।
ಸಲ್ಲಿಹುದು; ಸಿದ್ಧಮಾಗಿಯದಕೊರ್ವ್ವಿದಿರುವದಳಿಗಾಲಮೆಂತೆಂದೊಡೆ ॥೩೫॥

ರಾಮಪ್ಪನೆಂಬೋರ್ವ ಬಡವನಿರ್ದಂ ತಿಳಿಯೆ ।
ಧೀಮಂತನೀತಂ; ಮಹಾಸುಜನನೆನಿಸುತ್ತೆ ।
ಪ್ರೇಮಾಳುವಾಗಿ ಸರ್ವರಿಗುಮಲ್ಲಿರುತಿರ್ದನೊರ್ಮೆ ಶ್ರೀಪತಿ-ಗೃಹಕಿವಂ ॥
ಕಾಮಾರಿಯುಂ ಸ್ಮರಿಸಿ, ಪೋಗಿ ಶತರೌಪ್ಯಕವ ।
ಶ್ರೀಮಂತನಲ್ಲೆ ಕೆರೆ ಪೊಲಮನಡವಿಟ್ಟಾಗ, ।
ನಾಮಾಂಕಿತವ ಹಾಕಿ, ಬಿಳಿ ಕಾಗದದ ಮೇಲೆ ತಂದನವನಿಚ್ಛೆಯಂತೆ; ॥೩೬॥

ಬಡವನೀ ರಾಮಪ್ಪನಲೆಯುತ್ತೆ, ಕಷ್ಟದಿಂ ।
ದುಡಿಯುತ್ತೆ, ನೂರು ರೂಪಾಯಿಗಳ ಸಾಹಸದೆ ।
ಪಡೆಯುತ್ತೆ, ತೆಗೆದುಕೊಂಡೈದುತ್ತೆ, ಸಿರಿವಂತಗೀಯುತಿರಲೆಣಿಸುತಾಗ ॥
ಕಡುಹಿನಿಂ ಶ್ರೀಪತಿ ಯೆನುವ ಧನಿಕನಿಂತೆಂದ- ।
ನೊಡನಾತನಂ ನೋಡುತೆಲವೊ ಯಿನ್ನೊಂದು ನೂರ್ ।
ಕೊಡುವೆಯಾವಾಗ ಪೇಳೆನಲು ಬಡವಂ ಕೇಳಿ ವಿಭ್ರಾಂತನಾಗಿ ನುಡಿದಂ ॥೩೭॥

ಎಂತೆನಲ್ಕೇನಿರ್ದೈ "ಧನಿಯೆ, ನಿನ್ನಿಂದಲಾಂ |
ಸಂತಸದೆ ನಿನ್ನಿಚ್ಛೆಯಂತೆ ಕಾಗದದ ಮೇ-|
ಲಂತು ಮಮ ನಾಮಾಂಕಿತಮನನಿತೆ ಬರೆಯುತ್ತೆ ಶತರೌಪ್ಯಕಂಗಳನೊಯ್ದಿಹೇಂ||
ಅಂತೆ ನೀಂ ಮರೆದೆರಡು ನೂರುರೂಪಾಯಿಗಳ |
ಚಿಂತಿಸದೆ ಬರೆದು ಕೊಂಡಿರಲಹುದಿದಕ್ಕೇನು? |
ಮುಂತೆ ಮಾಳ್ಪುದು ಪೇಳ್ವುದೈ, ಬಡವನಾದೆನ್ನ ವಂಚಿಸಲ್ ಬೇಡವಯ್ಯ: ||೩೮||

ಎನಲದಂ ಕೇಳಿ ಶ್ರೀಪತಿಧನಿಯು ಕಾಗದಮ-|
ನನುನಯದೊಳಿತ್ತಿಂತು ನುಡಿದನೈ "ರಾಮಪ್ಪ, |
ನಿನಗೇತಕಾವ್ ಸಟೆಯನಾಡುವೆವು ? ನೋಡಿವು ತವಾಕ್ಷರಗಳಹುದಲ್ಲವೊ ? ||
ಎನೆ ನೋಡಿ ತನ್ನಕ್ಕರಂಗಳಂತಿರ್ಪ ಲಿಪಿ-|
ಯನೆ ತಿಳಿದು, ಪರಿಕಿಸುತೆ ಮಂದನಾದಂ ಬಡವ-|
ಗನವರತಮಖಿಲ ಜನರರಿದು, ಬಯ್ಯಲ್ ತೊಡಗಿ, ಸುವಿವೇಕಮಂ ತಿಳಿಸುತೆ

ಶ್ರೀಪತಿಯೊಳೊಂದು ಕಲೆಯಿತ್ತದೇನೆನಲ್ |
ಲೋಪಮಿಲ್ಲದೆ ಬರೆಯುತಿರ್ದನಕ್ಷರದಂತೆ |
ರೂಪಿಸುತಲಕ್ಷರಮನೊರ್ಮೆ ನೋಡುತಿರಲ್ಕೆ ರಾಮಪನ ಬರಹದಂತೆ ||
ಲೋಪಿಸದೆ ಬರೆದಿರ್ದನೀ ಕೃತಿಯದಾರಿಗುಂ |
ಪಾಪಿಯುರೆ ತಿಳಿಯ ಗೊಟ್ಟಿರ್ದಿಲ್ಲಮದರಿಂದೆ |
ಕೋಪಿಸುತ್ತಿರ್ದಪರ್ ರಾಮಣ್ಣನಾ ಮರವೆಯಂ ನೆನೆದು ನೋಡಿದವರು ||೪೦||

ರಾಮಪ್ಪನಾದಡುಂ ಘಟ್ಟಿಗಂ ತಾನಾಗಿ, |
ಶ್ರೀಮಂತನೆಡೆಗೆ ತನ್ನಭಿಮಾನಿಗಳ ಜೊತೆಗೆ, |
ಸೋಮಾರಿಯಾಗದಲೆ ಪೋಗಿ, ಪೇಳಿದನಿಂತು "ಸ್ವಾಮಿ ಹುಚ್ಚಯ್ಯನಡಿಯೋಳ್ ||
ಧೀಮಂತನೆ, ಯೊರ್ವರಾವ್ ಪ್ರತಿಜ್ಞೆಯ ಮಾಡಿ |
ಪ್ರೇಮಾತಿಶಯುವ ನೆರೆ ಕಾಯ್ದು ಕೊಳ್ಳೋಣ ನಡೆ;" |
ಯೊ ಮಾತನಾ ಕಪಟಿಯೆಲ್ಲರಾಗ್ರಹಕೊಪ್ಪಿ, ಬಂದು, ಯತಿಯಂ ಕಂಡನು ||೪೧||

ಆ ತಪೋವನದಲ್ಲಿ ಗುರುಸಿದ್ಧಯತಿವರಗೆ |
ಖ್ಯಾತ ರಾಮಪ್ಪನುರು ನಿಜ ಮಿತ್ರರೊಡನವಗೆ ।
ಪೂತ ಭಕ್ತಿಯೊಳೆ ವಂದಿಸಿ ತದಾಜ್ಞೆಯಿಂ ಕುಳ್ಳಿರ್ದರನುನಯದೊಳೆ ||
ಪ್ರೀತಿಯಂ ನಟಿಸುತ್ತೆ, ಶ್ರೀಪತಿಯು ವಂದಿಸದೆ |
ಭೀತಿಯಿಲ್ಲದೆ ಸನಿಹದೊಳೆ ಕುಳಿತು, ತದ್ಯತಿಗೆ |
ಮಾತನಾಡಿದನಿಂತು ಕಾಗದವ ತೋರುತ್ತೆ, ತಾನೆ ಸತ್ಪುರುಷನಂತೆ; ||೪೨||

ಅಪ್ಪಣೆಯ ಪಡೆಯುತ್ತೆ, ತಾನೆ ಯೋದಲೊಡರ್ಚೆ, ।
ಬೆಪ್ಪನಾದಂ ನೂರು ರೂಪಾಯಿಗಳೆ ಯೆಂದು ।
ತಪ್ಪದಲೆ ಕಾಗದದ ಲಿಪಿಯು ಪರಿವರ್ತಿಸಿರೆ, ಧ್ವನಿಯು ಕಂಪಿಸಲಾಯಿತು ||
ಒಪ್ಪುವ ಶರೀರದೋಳ್ ಬೆವರು ಕಾಣಿಸುತಿಹುದು; |
ತಪ್ಪೆನುತೆ, ಯತಿಗೆ ನಮಿಸಲ್ ಮನಂ ಸೂಚಿಸಲ್ |
ಧೊಪ್ಪನುರು ತತ್ಪಾದದೋಳ್ ಬೀಳ್ದು, ಶ್ರೀಪತಿಯು ತಪ್ಪನಾಗೊಪ್ಪಿಕೊಂಡಂ; ||

ಕಾಗದವ ಹರಿದು ಹಾಕುತ್ತಲೇಳುತ್ತಲುರೆ |
ನೀಗುತಂ ಕುಗುಣಂಗಳಂ ಕೈಯ ಮುಗಿಯುತಂ ।
ಬಾಗುತಿಂತಾ ಯತಿಯ ನುತಿಸಲಾದಂ ವಿಪ್ರನಾ ಲೋಗರಚ್ಚರಿಸಲು ||
"ಆಗಮಜ್ಞ, ತ್ರಿಕಾಲಜ್ಞ, ಸರ್ವಜ್ಞ, ಶುಭ-|
ರಾಗಿ-ಸಂಜ್ಞಾಭಿಜ್ಞ, ಸದವಜ್ಞ, ಶಿಕ್ಷಾಜ್ಞ, ।
ಯೋಗಿ-ರಾಜನೆ, ನೀ ಸು-ತೇಜನೆ, ಸಲಹು, ನಿನಗಿಂತಲಧಿಕರಿಲ್ಲೀ ಭೂಮಿಯೋಳ್ ||"

ಎಂದು ನುತಿಸುತ್ತೆ, ನಮಿಸುತ್ತೆ, ಗುರುಸನ್ನಿಧಿಯೊ-
ಳಿಂದಿನಿಂದಾ ಭೂಮಿಯಂ ಬಿಟ್ಟೆನೆಂದೊರೆಯು-|
ತಂದು ಪಾದವ ಮುಟ್ಟಿ ಕುಳ್ಳಿರಲ್, ಕರುಣೆಯುದೆ ರಾಮಪ್ಪನೇಳ್ದು ನಮಿಸಿ ||
ಪೊಂದುತಾನಂದಮಂ ನುತಿಸಲಾಗಿಹನಿಂತು-|
"ತಂದೆ, ನೀನಿಂದು-ಧರನಿಳಿದಿರುವೆ, ಕೈಲಾಸ-।
ದಿಂದಲೆಮಗಾಗಿ; ಯಿದುವೆ ಸತ್ಯವಿದು ನಿಜವಾಗಿ ಸಂದೇಹವಿಲ್ಲಿದುದೀಗ" ||೪೫||;

ಇಂತು ನುತಿಸುತ್ತೆ ಗುರುಸಿದ್ಧ–ಶಿವಯೋಗಿಯುಂ ।
ಸಂತರಿದಿರಲ್ಲಿ ಶತರೌಪ್ಯಕಮನಿತ್ತು ಶ್ರೀ–।
ಕಾಂತಧನಿಕನ ಹಸ್ತದೋಳ್, ಯತಿಗೆ ವಂದಿಸುತೆ ಕುಳ್ಳಿರ್ದನತಿ ಭಕ್ತಿಯೋಳ್ ॥
ಸಂತಸದೊಳಾ ಧನಿಕನಿತ್ತ ರೂಪಾಯಿಗಳ ।
ಶಾಂತ ಯತಿವರನಡಿಯೊಳರ್ಪಿಸುತಿರ–।
ಲಂತವಂ ನೋಡುತ್ತೆ ಗುರುವೊರೆದನೀ ಪರಿಯೊಳುರೆ ನಗುತೆ ತಳ್ಳುತವನೆ; ॥೪೬॥

"ಏನಿದೈ ಶಿರಿವಂತ, ನಿನ್ನೊಳಧಿಕಂ ಧನಂ ।
ಮಾನಿತನೆ, ಯಿರುತಿರಲ್ ತಪ್ಪಲಿಲ್ಲಾಶೆಯದು-।
ಮೇನುಮಿರದೆಮ್ಮಲ್ಲಿದೆನಿತು ಕಾಮನೆಯ ಪುಟ್ಟಸಲಹುದು? ತಿಳಿದು ನೋಡು ॥
ಮಾನವಂ ಬಿಡುವದೊಳಿತಂ, ಬಿಡುವ್ರದಾಗದಿರೆ ।
ಜ್ಞಾನದೆ ಮಿತಂಗೊಳಿಸವೇಳ್ಕು ಮತ್ತಾಶೆಯೇ ।
ನ್ಯೂನಮೆನೆ ಗತಿಗೆಡಿಸುತಿಹುದುರೆ ದುರಾಶೆಯಿದು; ದುರ್ಜನ್ಮಗಳನೀವುದು; ॥೪೭॥

ಧನಿಕನೆ, ದುರಾಶೆಯಂ ತೊರೆಯುತೆ ಸದಾಶೆಯಂ ।
ಮನದೆ ಪಿಡಿಯಲ್ವೇಳ್ಕು; ಸದ್ಗತಿಯ ಪಡೆಯಲ್ಕೆ ।
ಘನತೆಯಿಂ ಸತ್ಫಲಂ ದೊರೆವುದೀ ಲೋಕದೊಳಗಿದರ ಬಲದಿಂ ನಿರಾಶೆ ॥
ಜನಿಸುವದು, ಸುಕೃತದಿಂ ಮೋಕ್ಷಮೊದಗುವುದಾಗ
ಘನವಂತರೆಲ್ಲರಿದರಂತೆ ನಡೆದಿರುವರೈ ।
ಧನವ ದೇವಂ ನಿನಗೆ ಕೊಟ್ಟಹಂ; ಸುಕೃತಿಯಂ ಮಾಡು; ಸುಖಮುಪ್ಪುದರಿದು ॥

ಎಮಗಿತ್ತ ಧನವ ವಿದ್ಯಾರ್ಥಿಗಳಿಗೀವುದೈ; ।
ಕ್ರಮದಿಂ ಸುಗುಣಿಯಾಗಿ ನಡೆದಡುರು ಸುಖಮಹುದು: ।
ಸುಮನದಿಂ ಹಿತಮಹುದು; ದುರ್ಮನದಿನಹಿತಮಹುದೈ; ಮನಂ ಕೆಡಲಾಗದು ॥
ಸಮತೆಯಿಂ ಪೇಳ್ದಿಂತು ಮೌನಮಂ ಧರಿಸುತಿರೆ ।
ವಿಮಲ–ಮನನಾಗಿ ಶ್ರೀಪತಿಯು ಬೋಧವ ಕೇಳ್ದು, ।
ಭ್ರಮವ ತೊರೆಯುತ್ತೆ, ಮನೆಗೈದುತ್ತಲಂದಿನಿಂ ಸದ್ಭಕ್ತನಾಗಿ ಬಾಳ್ದಂ; ॥೪೯॥

ರಾಮಪ್ಪನಾದಡುಂ ನಮಿಸಿ ಗುರುಸಿದ್ಧಂಗೆ |
ಕಾಮಾರಿ-ರೂಪನಂ ಪ್ರಾರ್ಥಿಸಿದನೆಂತೆನಲ್; ।
"ಸೋಮೇಶ-ಸಮನೆ, ಕರುಣಾಕರನೆ, ಗುರುವರನೆ, ಯೋಗೀಂದ್ರ-ಹುಚ್ಚೇಶನೆ, ॥
ಸಾಮಾದಿ-ಸುತನಿದಂ ಕೇಳುತ್ತೆ ಪ್ರಾರ್ಥನೆಯ |
ಪ್ರೇಮಾತಿಶಯದಿಂದೆ ನುಡಿದನೆಂತೆನಲೆಲವೊ |
"ಶ್ರೀಮಂತನಾಗುವೆ ಸದಾಶಿವನನುತಿಸಯ್ಯ ಶಿವ-ನಾಮವುದು ಸೌಖ್ಯದಂ" ||೫೦||

ಇಂತೊರೆಯುತೆಲ್ಲರಂ ನೋಡುತವರವರ ಪೆಸ-|
ರಾಂತು ಕೊಳ್ಳುತೆ, ಕರೆದು ಸಮ್ಮುದದೊಳಾಶಿಷವ |
ಶಾಂತಿಯಂ ಪುಟ್ಟಿಸುತಲಿತ್ತು, ಕಳುಪಿದನಾಗಳವರವರನಾ ಗುರುವರಂ; ||
ಶಾಂತನಾ ಗವಿಯಲ್ಲಿ ಪೋಗುತ್ತೆ ಲಿಂಗಾರ್ಚೆ-।
ಯಂ ತವಿಸಿ ಮಾಡುತ್ತಲಿರ್ದಪಂ, ಶಿವನ ನಿ-|
ಶ್ಚಿಂತನಾಗಿಯೇ ಬೇಡುತಿರ್ದಪಂ ಸ್ವಾತ್ಮರೂಪನ ಲೋಕಮಂ ಪೊರೆಯಲು ||೫೧||

ಗುರುಸಿದ್ಧ-ಶಿವಯೋಗಿ ಯೊ ಮಹಿಮೆಯಂ ಭಕ್ತ |
ರರಿದು ಬಣ್ಣಿಸಿ ತಮ್ಮ ತಮ್ಮ ಪೆಸರಂ ಕೊಂಡು ।
ಕರೆವ ಪೊಸ ರೀತಿಯಂ ವಿಸ್ಮಯಿಸುತಿಂತು ಮಾತಾಡುತಿರ್ದರ್ ಮೆಚ್ಚುತೆ ||
"ಪರಶಿವನಿಗಿಂದಧಿಕನೀ ಹುಚ್ಚಯ್ಯ; ತಿಳಿಯೆ ।
ಹರಗಾದಡುಂ ಧರೆಯ ಸ್ಪರ್ಶದಿಂ ಮೂಢತೆಯು ।
ಬರುವದೆಂದರಿದಿರ್ದೆವಿದಸತ್ಯಮಾಯಿತ್ತೆ" ನುತ್ತೆ ಭಕ್ತಿಯ ತಾಳ್ದರು; ||೫೨||

ವೀರೇಶ-ಪುಣ್ಯಾಶ್ರಮಂ ಗದುಗಿನೋಳ್ ಮೆರೆವು-|
ದೋರಂತೆ ಶೋಭಿಸುವುದಲ್ಲಿ ಪಂಚಾಕ್ಷರನು- |
ದಾರಸ್ವ ಗುರುವರನ ಯೋಗದ ಸಮಾಧಿಯಿದೆ; ಕುಳಿತಿಲ್ಲಿ ಗುರು-ಕರುಣೆಯೋಳ್||
ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ |
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ |
ಮೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣದೋಳ್ ಸಂಧಿ ನಾಲ್ಕು ||೫೩||

**ಅಂತು ಸಂಧಿ ೪ಕ್ಕಂ, ಪದಂಗಳು ಐವತ್ತೂರಕ್ಕಂ;**
**ಇಂತು, ಒಟ್ಟು ಪದಂಗಳು ೧೬೪ ಕ್ಕಂ;**

**—ಮಂಗಲಂ—**

। ಶ್ರೀ ಗುರುಬಸವ ಲಿಂಗಾಯ ನಮಃ ।

❀❀

# ಐದನೆಯ ಸಂಧಿ





॥ ಸೂಚನೆ ॥

ಕಲ್ಯಾಣಶೆಟ್ಟಿಯಂ, ಬಸವಪ್ಪ ಶೆಟ್ಟಿಯಂ, ।
ಕಲ್ಯಾಣಕರ ಯತಿಯು ಕಾಡಪ್ಪ ಶೆಟ್ಟಿಯಂ,।
ಕಲ್ಯಾಣವಲ್ಲೀಲೆಯಿಂ ಕೆಂಚಗೌಡನಂ, ಮಲ್ಲಗೌಡನ ಪೊರೆದನು ॥

[ಸಂಧಿ ಪ್ರಾರ್ಥನಾ-ಪದ್ಯ]

ಶ್ರುತಿತತಿ-ಶಿರಃ-ಸ್ತುತನೆ, ರತಿಪತಿ-ಜಯಶ್ರಿತನೆ, ।
ಹಿತಮತಿ-ಜನಾಸ್ಥಿತನೆ, ನತ-ಯತಿ-ವರಾಂಚಿತನೆ, ।
ಮತಿ-ಗತಿ-ಮಹೋನ್ನತನೆ, ಜಿತಮೃತಿ-ಮದೋದ್ಧತನೆ, ಜನಿ-ಜರಾ-ಮದ-ದೂರನೆ
ಧೃತ-ಸುರ-ಸರಿಜ್ಜಟನೆ, ಮಿತಪರತರಾವ್ಯಾಪ್ತದನೆ, ।
ಹತ-ಯಮ-ತಮಃ-ಸುರನೆ, ರತಮನುಮಯಾಲಯನೆ, ।
ಗತ-ಮಲ-ಬಲಾಶ್ರಯನೆ, ಸತತಮುಳಿಯೆನ್ನ ಮನ-ಮನೆಯಲ್ಲಿ ಗುರುಸಿದ್ಧನೆ ॥

*     *

ಶಿವಲಿಂಗ ಪೂಜೆಯೊಳ್, ಶಿವತತ್ತ್ವ ಭಜನೆಯೊಳ್ |
ಶಿವಪಥ-ಜ್ಞಾನದೊಳ್ ಶಿವಮಹಾ-ಧ್ಯಾನದೊಳ್ |
ಶಿವರೂಪ-ಚಿಂತೆಯೊಳ್ ಶಿವಧರ್ಮ-ರಾಗದೊಳ್ ಗುರುಸಿದ್ಧ-ಶಿವಯೋಗಿಯು ||
ಶಿವಲೀಲೆಯರುವಿನೊಳ್ ಶಿವಭಕ್ತಿಯಾಶೆಯೊಳ್ |
ಶಿವ-ಸರ್ವ-ಭಾವದೊಳ್ ಶಿವತ್ವಾನುಭಾವದೊಳ್ |
ಶಿವ-ಶರಣ-ಸಖ್ಯದೊಳ್ ಶಿವ-ಜೀವರೈಕ್ಯದೊಳ್ ಬೆರೆದಿರ್ದನಾ ಗುರುವರಂ; ||೨||

ಪರಮ ಲಿಂಗಾಯತ್ತ-ಚಿತ್ತನಾದಾ ಯತಿಯು |
ಕರುಣೆಯಿಂ ನಲಿದೊರ್ಮೆ ಗವಿಯ ಹೊರಬಾಗಿಲೊಳ್ |
ಗುರುಸಿದ್ಧ ವಿಶ್ವ-ಗುರುವೊಲಿದು ತದ್ ಬಿಲ್ವ-ವನಮಂ ನಿಂದು ನೋಡುತಿರ್ದಂ; ||
ಸ್ಥಿರಮಾದ ಲಿಂಗಾಕೃತಿಯು ಚರನ ಕಂಗಳ್ಗೆ |
ಕರಮೆಸೆಯುತಿರಲಲ್ಲಿ ಸುಳಿವ ಖಗ-ಮೃಗಗಳಿಂ |
ಚರಲಿಂಗದಾಕಾರದೊಳ್ ತೋರೆ, ನಲಿಯುವಂ ಶಿವಭಾವಿಯನುಭಾವಿಯು ||೩||

ಆ ಸಮಯದಲ್ಲೋರ್ವ ಕಲ್ಯಾಣ-ಶೆಟ್ಟಿಯಂ-|
ಬೋಸರಿಸದುರು ಭಕ್ತಿಗುರು ಭಕ್ತನೈದಿದಂ; |
ಲೇಸೆನಿಪ ಹೊಂಡದೊಳಗಿಳಿದು, ಕೈಕಾಲ್ಮೊಗವ ತೊಳೆದು, ಗುರುವಿಗೆ ನಮಿಸಿದಂ||
ಭಾಸುರ ಮಹಾ ಭಕ್ತನಂ ನೋಡಿ, ಕರುಣೆಯಿಂ |
ನೇಸರನ ಪಳಿವ ಮುಖದಾ ತೇಜಮೊಪ್ಪುತಿರೆ |
ಸೂಸುವ ಕೃಪಾದೃಷ್ಟಿ-ಚಂದ್ರಿಕೆಯು ಪರ್ಬಿರಲ್ ನೋಡುತಚ್ಚರಿಸುತವನಂ ||೪||

ಆ ಗುರುವಿನಾಜ್ಞೆಯಿಂ ಕುಳ್ಳಿರ್ದು ಧೈರ್ಯದಿಂ |
ಈಗುತಂ, ಮಾತನಾಡಿದನಿಂತು ಶೆಟ್ಟಿಯರಿ-|
"ದಾಗಮಜ್ಞನೆ, ನಿನ್ನ ಕರುಣೆಯಿಂದೆನಗಾವ ಸಂಪದಕುಮಿಲ್ಲ ಕೊರತೆ; ||
ಯೋಗಿವರ, ಕರುಣಿಸೈ ಪುತ್ರನಂ; ಸರ್ವಸುಖ-|
ಮೊಗಳದು ವ್ಯರ್ಥಮೆನಿಸುತ್ತಿಹುದು; ವಿಭವಮುಂ |
ಲೋಗರಚ್ಚರಿಸಲಾಧಾರಯುತಮೆಂದೆನಿಸು; ನೀಂ ಸದಾಶಿವ-ರೂಪನೆ, ||೫||

ಸರ್ವ ದೇವರ್ಕಳಿಗೆ ಹರಕೆಯಂ ಮುಟ್ಟಿಸಿದೆ; |
ಯುರ್ವಿಯೊಳಗಿಹ ಜನತೆ ಪೇಳ್ದ ವ್ರತಮಂ ಗೈದೆ-|
ನುರ್ವರೇಶ್ವರ-ನುತನೆ, ಫಲಮಾವುದುಂ ದೊರೆಯದಿಲ್ಲಿ ಬಂದಿಹೆನೀಗಳೆ; ||
ಶರ್ವ-ಸಮ, ಮನ್ನಿಸೈ; ನಿನ್ನ ಮರೆದಿಹ ತಪ್ಪ-|
ನೋರ್ವನುಂ ದುರುಳನಿಲ್ಲೆನಗಿಂತಲರಿದು ಪೊರೆ; |
ಪೂರ್ವಜರ ಸದ್ಧತಿಯ ಮರೆದಿರ್ದೆನಯ್ಯ, ಗುರು-ಲಿಂಗ-ಜಂಗಮರ ತೊರೆದು; ||೬||

ಈ ನುತಿಯನಾಲಿಸುತೆ ಗುರುಸಿದ್ಧನುಲಿದನಿಂ-|
"ತೇನಿದೈ ? ಯೆನ್ನನೇತಕೆ ನುತಿಪೆ ? ಶಿವನ ನುತಿ- |
ಸೂನಮಿಲ್ಲದೆ, ದೊರೆವುದೈ ನಿನ್ನಕಾಂಕ್ಷಿತಂ; ನಂಬೆನ್ನ ಮಾತನೆ"ನುತೆ ||
ಮಾನನಿಧಿಯೊಂದು ಕಲ್ಲಂ ತೋರ್ದವಂಗೆ ಸಲೆ |
ಜ್ಞಾನಿಯವನಂ ನೋಡಿ ನುಡಿದನೆಂತೆನಲೆಲವೊ |
"ಮಾನಿತನೆ, ತವ ಸತಿಗೆ ಪೇಳ್ವುದಿದನೆತ್ತಲ್ಕೆ, ಕಲ್ಲೆಂದು ಹಗುರಪ್ಪುದೊ, ||೭||

ಆ ದಿನವೆ ಗರ್ಭವತಿಯಾಗುವಳು. ತವ ಸತಿಯು; |
ಸಾದರದೆ ನಂಬೆನ್ನ ಮಾತನೆಂ"ದೊರೆಯುತ್ತೆ |
ಮೋದದಿಂ ಗುರುವರಂ ಗವಿಯಲ್ಲಿ ಪೋಗುತಿರೆ, ಕಲ್ಯಾಣ ಶೆಟ್ಟಿಯಾಗ ||
ಮೇದಿನಿಗೆ ಬಂದ ಶಿವನಿವನೆಂದು ಮನದಲ್ಲಿ |
ಭೇದಮಿಲ್ಲದೆ ಬಣ್ಣಿಸುತ್ತೆ, ಗವಿಗೆರಗುತ್ತೆ |
ವೇದನುತನಂ ನೆನೆಯುತಂ ಮನೆಗೆ ಬಂದವಂ ಪತ್ನಿಗೆಲ್ಲವ ಪೇಳ್ದನು; ||೮||

ಗಂಡನಪ್ಪಣೆಯಂತೆ ತತ್ಸತಿಯು ಪ್ರತಿದಿನದೆ |
ಕಂಡು ತಚ್ಛಿಲೆಯನೆತ್ತುತಲಿರ್ದಳಾ ಮಹಿಳೆ-|
ಯಂಡಲೆಯುತೀ ವ್ರತವ ಸಲೆ ನಿಷ್ಠೆಯಿಂ ಮಾಳ್ಪ ಸಾಧ್ವಿಗಾ ಕಲ್ಲದೊರ್ವೆ ||
ಕಂಡುದುದು ಹಗುರಾಗಿ, ಮೋದಮಂ ಕೊಟ್ಟುದು-|
ದ್ದಂಡ ಮುದಮಂ ಬೆಳೆಯಿಸುತ್ತೆ, ಗರ್ಭಂ ಬೆಳೆದ-|
ಖಂಡ ಲಕ್ಷಣಗಳಂ ತೋರುತ್ತೆ, ನವ ಮಾಸಮಾಗೆ, ಪಡೆದಳ್ ಪುತ್ರನಂ; ||೯||

ಮೆರೆವ ಪುತ್ರಂಗೆ ಕಲ್ಯಾಣ ಶೆಟ್ಟಿಯು ಮೊದಲು |
ಪರಮ ಲಿಂಗದ ಸಂಸ್ಕೃತಿಯ ಗೈಸಿ, ನಲಿದಾಗ-|
ಳುರು ಭಕ್ತಿಯಿಂ ಮಗುವಿಗಿಡಿಸಿದಂ "ಹುಚ್ಚಪ್ಪ" ನೆಂಬ ಗುರುವರ-ನಾಮವ; ||
ಸರಸದಿಂ ಪೂಬಳ್ಳಿಯೊಳ್ ಪ್ರಸಿದ್ಧಮದಾಗಿ |
ನೆರೆ ಬಿಲ್ವ-ವನಕೆ ಪೋಗುತ್ತಲಾ ಕಲ್ಲನರಿ-|
ದುರೆ ಯೆತ್ತಿ, ಸಂತತಿಯ ಪಡೆವ ಜನತೆಯು ಪೆರ್ಚಿಹುದು ಪ್ರಾಂತಕುಂ ತಿಳಿಯುತೆ||

ಪೊಸ ಲೀಲೆಯಿದು; ಮೊದಲೊಳಾವ ಪೌರಾಣದೊಳ್ |
ಸಸಿನದಿಂ ಕೇಳಿಲ್ಲವೆಂದು ಜನರೆಲ್ಲರರಿ-|
ದೊಸುಗೆಯಿಂ ಮಾತನಾಡುತಲಿರ್ದರಲ್ಲಲ್ಲಿ ತಮ್ಮ-ತಮ್ಮೊಳಗೆ ನಲಿದು ||
ಜಸಮಿದುಂ ಪರ್ಬುತಿರೆ ನಡೆದುದಿನ್ನೊಂದು ಘನ |
ಲಸಿತ ಮಹಿಮೆಯು ಜರುಗಿಹುದು ಪೇಳ್ವೆನೇನೆನ-|
ಲ್ಕುಸಿರಿರುವ ಪರಿಯಂತಮಿಲ್ಲಿ ಸ್ಮರಣೀಯಮಾಗಿಹುದು ತಿಳಿವುದು ಸರ್ವರು ||೧೧||

* *

ಆವುದೆನೆ "ಕೇಳಿರೈ ಸುಜನರೆ, ಸದ್ಭಾವಮಲಂ |
ಭಾವುಕಂ ಬಸವಪ್ಪ ಶೆಟ್ಟಿಯೆಂಬುವ ಭಕ್ತ-|
ನೋವಿ ಸುಗುಣಂಗಳಂ; ಬಾಳಿರ್ದನತಿಮುದದೆ ತೊಡರೆಡರುಗಳಿಗಗಿಯದೆ; ||
ಭಾವಿಸಲ್ ಪೂವಳ್ಳಿಯಲ್ಲಿರ್ದನಾ ಸುಗುಣಿ |
ಯಾವ ಉದ್ಯೋಗಮುಂ ಗೈದಡುಂ ಫಲಿಸದಲೆ |
ಸಾವಧಾನಂ ತಪ್ಪಿ ಚಿಂತೆಗೊಳಗಾಗುತವನೊರ್ವ ಗುರುವಂ ಕಂಡನು; ||೧೨||

ಸಮಿಸಿ ನಿಂದಿರೆ, ನೋಡಿ ಗುರುಸಿದ್ಧ ಶಿವಯೋಗಿ-|
ಯಮಿತ ಹರುಷಾಕರಂ ಕರೆದು ಭಕ್ತಂಗಿಂತು |
ಸಮತೆಯಿಂ ಪೇಳ್ದನವಗಯ್ಯ "ಚಿಂತಿಪುದೇಕೆ ? ನಿನಗೆ ಶಿವನೊಳಿತೆಸಗುವಂ; ||
ಶ್ರಮಮಿಲ್ಲದಲೆ ಸಿದ್ಧಿಸುವದು ವ್ಯಾಪಾರಮರಿ; |
ಕ್ರಮಿಸದಿರು ಬೇರುದ್ಯಮವ; ನೀನು ಸುಖಿಯಪ್ಪೆ; |
ಭ್ರಮಿಸದಿರು; ನಾಳೆ ನಿನ್ನಯ ಪೊಲದೆ ದೊರೆದು ಸಿರಿಯಳಿಯದುಳಿಯುತೆ ಬೆಳೆವುದು; ||೧೩||

ಬಡವರಿಗೆ ವಿತ್ತಾನ್ನ-ವಸ್ತ್ರ ದಾನವ ಮಾಡು; |
ಕಡೆತನಕಮಿವು ಮೂರು ಸ್ಥಿರಮಾಗಿ ಬೆಳೆಯುವವು; |
ಪೃಡನೊಳ್ಪಿತೆಸಗುವಂ ನಿನಗೆ ಪೋಗೆ"ನೆ ಗುರುವು; ಬಂದಂ ನಿಜಾಲಯಕ್ಕೆ |
ಅಡಿಗಡಿಗೆ ಶಿವನ ನೆನೆಯುತೆ; ಮರುದಿನದೆ ಪೊಲದೆ |
ಕಡು ಚಿಂತೆಯಳಿದುದು; ಧನಂ ದೊರೆತು, ಬಸವಪ್ಪ-|
"ನುಡಃಪ-ಶೇಖರ-ಸಮನೆ,ಹುಚ್ಚಯ್ಯ ಸ್ವಾಮಿ"ಯೆಂದರಿದನಾ ಗುರುಸಿದ್ಧನಂ; ||

ಗುರುವಿನಪ್ಪಣೆಯಂತೆ ವ್ಯಾಪಾರಮಂ ಬಿಡದೆ, |
ಹರನ ನೆನೆಯುತ್ತೆ, ಕೈಕೊಂಡು ಸುಖಿಯಾಗಿಹಂ; |
ನೆರೆ ಬಡವರಿಗೆ ದಾನಮಂ ಮಾಡಿ, ಬಸವಪ್ಪ ಶೆಟ್ಟಿಯುರೆ ಭಕ್ತನಾದಂ; |
ಪರಮ ಗುರು-ದರ್ಶನಕೆ ಪ್ರತಿದಿನಂ ಪೋಗುತ್ತೆ; |
ಕರುಣೆಯಪ್ಪಣೆಯಂತೆ ಸ್ಥಿರ ಗಣಾರಾಧನೆಯ |
ಹರುಷದಿಂ ನಡೆಯಿಸುತೆ, "ಶರಣನೆಂ"ದೆನಿಸುತ್ತೆ ಮನ್ನಣೆಯ ಪಡೆದೆಸೆದನು;||೧೫||

* *

ಇನ್ನೊಂದು ಲೀಲೆಯಂ ಭಕ್ತರಾಲಿಪುದೊಲಿದು |
ಚೆನ್ನಾಗಿಹಂ ಸುಖದೆ ಕಾಡಪ್ಪ ಶೆಟ್ಟಿಯುರೆ |
ತನ್ನಾಪ್ತ-ಮಿತ್ರರೊಂದಿಗೆ ಸರ್ವಜನರಿಷ್ಟಮಂ ನಲಿದು ಸಲಿಸುತ್ತಲೆ ||
ಚನ್ನಪ್ಪನೆಂಬೋರ್ವ ಪುತ್ರನಹನೀತಂಗೆ |
ಚಿನ್ನಮ್ಮನೆಂಬ ಸತಿಯಾತಂಗೆ ಜೋಡಾಗಿ |
ಸನ್ನೀತಿಯಿಂ ಬಾಳಿದಳ್ ಸುಜನ-ನುತೆಯಾಗಿ ದುರ್ಜನ-ವಿದೂರಳಾಗಿ ||೧೬||

ಕೆಲ ದಿನಂಗಳ್ ಕಳೆಯೆ, ರೋಗಮೊಂದಡಸುತ್ತ-|
ಲಲಘುವಹ ಚನ್ನಪ್ಪನಳಿದನಾ ಕ್ಷಣದಲ್ಲಿ; |
ಬಲು ದುಃಖಮಾದುದಾತನ ಬಂಧು-ವರ್ಗಕ್ಕೆ; ಪಿತನಾದ ಕಾಡಪ್ಪಗೆ ||
ತಲೆಯ ಮೇಲಾಕಾಶಮದು ಬೀಳ್ದ ತೆರನಾಗೆ, |
ಸಲೆ ದಿಕ್ಕು ತೋಚದಂತಾಗಿ, ಬಾಂಧವರಾಗ |
ಮಿಲಿತರಾಗುತೆ, ಪೆಣವನೆತ್ತುತೆ, ಸ್ಮಶಾನಕ್ಕೆ ಕೊಂಡೊಯ್ದರತಿಶೋಕದೆ ||೧೭||

ಗಂಡನಾ ಶವದ ಬೆಂಬಿಡದೆ ದುಃಖಿಸುತಾಗ |
ಕಂಡವರನಳಸುತ್ತೆ, ಸಾಧ್ವಿಯಹ ಚಿನ್ನಮ್ಮ-|
ನುಂಡು ತೀರಿಸವೇಳ್ಕು ಕರ್ಮ ಫಲಗಳನೆಂಬ ಜನರುಕ್ತಿಯಂ ಕೇಳುತೆ ||
ಕೆಂಡಗಣ್ಣನ ಮನದೆ ನೆನೆಯುತ್ತೆ ನಡೆದಿಹಳ್ ।
ಕಂಡಳಂತಳುತಾಗ; ಬಿಲ್ವವನಮಂ ಸತಿಯು; |
ಕಂಡು ಪೊರಟಳ್, ಮಹಾಶಿವಯೋಗಿ-ದರ್ಶನಕೆ; 'ಹುಚ್ಚಯ್ಯ'ಯೆಂದು ಚೀರಿ; ||

ಆ ದನಿಯು ಗಗನವಂ ವ್ಯಾಪಿಸಲ್ ಶವದಲ್ಲಿ ।
ಮೋದವೀಯುವ ಜೀವಕಳೆಯು ಸುಳಿಯುತ್ತಾಗ |
ಮೋದದಿಂ ಹಗ್ಗವಂ ಬಿಚ್ಚುತ್ತೆ, ಪಾರುತ್ತೆ, ನಿಲು; ಚಿನ್ನೆ ಯೆನುತೆ ಬಂದು ||
ಆದರದೆ ಹೆಂಡತಿಯ ಕೈವಿಡಿದು ನುಡಿದನಿಂ-|
ತಾದರಿಸಿ, ಗುರುನಾಮವಂ ನುಡಿದು ಬದುಕಿಸಿದೆ; |
ಮೇದಿನಿಯೊಳಿದು ಪೊಸತು; ಗುರುದರ್ಶನಕ್ಕೆ ನಡೆ; ಪೋಗೋಣ ಯೆನುತೆ ಪೊರಟಂ; ||೧೯||

ಚೆನ್ನನೀ ಪರಿಯಲ್ಲಿ ನುಡಿಯುತ್ತೆ, ಸತಿಯೊಡನೆ |
ಬನ್ನವಿಲ್ಲದೆ ಪೋಗುತಿರೆ, ಕೂಡಿದಾ ಜನರೊ-|
ಳಿನ್ನುತಿರ್ದರ್, ಕೆಲರ್ ಭೂತವಿದುವಲ್ಲ, ಬದುಕಿದನೆಂದು ಮತ್ತೆ ಪಲರು ||
ಮುನ್ನವೋಡುತಲಿಹರ್ ಬೆದರುತ್ತಲಂಜಿವರ್; |
ಸನ್ನಿಧಿಗೆ ಸ್ವಾಮಿಯಂ ನೆನೆಯುತ್ತೆ ಬಂದಿಹರ್; ।
ತನ್ನ ಸುತನುರೆ ಬದುಕಿಹುದನರಿದು ಕಾಡಪ್ಪ ಶೆಟ್ಟಿಯುಂ ಬಂದನಲ್ಲಿ; ||೨೦||

ಎಲ್ಲರಾ ಬಿಲ್ವವೃಕ್ಷಂಗಳ್ಗೆ ನಮಿಸುತ್ತೆ, |
ಸಲ್ಲಲಿತವಾದ ಕೊಂಡಕೆ ನಮಿಸುತಿಳಿಯುತ್ತೆ, |
ಮೆಲ್ಲನಾ ತೀರ್ಥದೋಳ್ ಕಾಲ್ಮೊಗವ ತೊಳೆಯುತ್ತೆ, ಬಂದರಾ ಗವಿಯ ಬಳಿಗೆ; ||
ಸೊಲ್ಲಿಸದೆ ಗುರುದರ್ಶನವ ಪಡೆಯಲೆಳಸುತ್ತೆ, |
ತಲ್ಲಣಿಸಿ ಬಾಗಿಲಂ ಮುಚ್ಚಿಹುದನರಿಯುತ್ತೆ, ।
ಬಲ್ಲ ಗುರುಸಿದ್ಧನಂ ನುತಿಸಲಾಗಿಹರಿಂತು, ನಿತ್ಯಸುಖ-ಸತ್ಯ-ನೂತನಂ ||೨೧||

"ಶಂಕರ, ಶಿವಂಕರ, ಶುಭಂಕರ, ಸುಖಂಕರನೆ, ।
ಕಿಂಕರ-ವರಪ್ರದ, ಜಯಪ್ರದ, ಹಿತಪ್ರದನೆ, ।
ಸಂಕಟ-ಹರ, ಪ್ರಿಯ, ಶ್ರುತ-ಜಯ, ಹೃತ್ಪ್ರಾವಮಯನೆ, ಭ್ರಾಂತಿಲಯ,
ಶಾಂತಿಮಯನೆ ॥
ಶಂಕಿತ-ಮತಿ-ಕ್ಷರ-ತತ್ವಾಕ್ಷರ, ಸುಚಕ್ಷುಷನೆ, ।
ಸ್ವಾಂಕಿತ-ಶುಭಾಶುಭ, ಮಹಾಪ್ರಭ, ಸುಚಿನ್ನಭನೆ, ।
ಭೋಂಕನೆ ಮಹಾಂತನೆ, ನಿರಂತನೆ, ಮುದ್ವಾಸ್ಪದನೆ, ದರ್ಶನವ ನೀಡಭವನೆ ।೨೨।

ಅನುನಯದೆ ನುತಿಪ ಜನರಾ ನುತಿಗೆ ಗುರುಪಾದ-।
ಘನ ದರ್ಶನಂ ದೊರೆಯದಿರೆ ದುಃಖದಿಂ ತಾನೆ-।
ಯನುನಯಂ ಮಿಗಿಲಾಗೆ ಕಾಡಪ್ಪ ಶೆಟ್ಟಿಯುಂ ಬೇಡಲಾದನದೆಂತೆನೆಃ- ॥
"ಅನುಪಮನೆ ಯಾಂ ಬೇಡಿ ಕೊಳ್ಳದಿರ್ದಡುಮೊಲಿದು ।
ತನಯನೀ ಕಂಟಕವ ಪರಿಹರಿಸಿದ್ದೈ, ನೀನೆ; ।
ಯನುರಾಗಮೆನಿತಿರ್ದಡುಮದೇತಕಿಂದೆಮಗೆ ಪ್ರತ್ಯಕ್ಷನಾಗಲೊಲ್ಲೆ? ॥೨೩॥

ಇಂತು ಬೇಡುತೆ ಪಿತಂ ಕಂಬನಿಯನುದಿರಿಸ-।
ಲ್ಕಂತರಂಗಂ ಬಳಲುತಿರೆ, ಚನ್ನಪಂ ಕಂಡು, ।
"ಕಾಂತ ಬಾರೈ, ಕೃಪಾವಂತ ಬಾರೈ, ಯನಾದ್ಯಂತ ಬಾರೈ; ಬರದಿರೆ, ॥
ಶಾಂತನೆ, ಮಹಾಂತನೆ, ಲಸಂತನೆ, ಮಮಾಸುವಂ ।
ಶಾಂತಿ ಬೆಳೆಯಲ್, ಭ್ರಾಂತಿ ಯಳಿಯಲ್, ಸಮರ್ಪಿಸುವೆ-।
ನಂತಕಾಂತಕರೂಪ, ನೋಡೆ"ನಲ್ ಚಿನ್ನಮ್ಮನಾ ಗವಿಯ ಬಾಗಿಲಕ್ಕೆ ॥೨೪॥

ತನ್ನ ಶಿರಮಂ ನಿಲ್ಲುತಪ್ಪಳಿಸುತಿರೆ, ಬಂದು ।
ಸನ್ನುತಂ ಗುರುಸಿದ್ಧನುನ್ನತಂ ಪಿಡಿಯುತ್ತಿ ।
ಮನ್ನಣೆಯೊಳಿಂತು ಮಾತಾಡಿದಂ, ನೋಡುತಂ ಭಕ್ತಿ-ಯುಕ್ತರ ಬಳಗವ; ॥
ಚಿನ್ನಿಧಿಗಳರಸನಾದೆನ್ನನೆಳೆತಂದುದೀ ।
ಚಿನ್ನದಂದದೆ ಸಲುವ ಚಿನ್ನಮ್ಮನೀ ಭಕ್ತಿ-।
ಯುನ್ನತಿಯದಿದನಾರು ಬಣ್ಣಿಪರ್? ಶೀಘ್ರಂಗಿದರಿದು ಶಂಭುವಿಗಾದಡುಂ ॥೨೫॥

ಈ ಭಕ್ತಿಯಂ ಸದಾ ನೀವೆಲ್ಲರಾಚರಿಸಿ ।
ಶೋಭಾಯಮಾನವಹ ವೈಭವವ ಪಡೆಯಿರೈ; ।
ಯಾ ಭಕ್ತರೆಸಿಸಿಹರ್ ಪೂರ್ವಜರ್ ಸಾಧಿಸುತೆ ಸರ್ವ-ವಿಭವವ ಪಡೆದರು; ॥
ಶೋಭಾಸ್ಪದಂ ಮುಕ್ತಿಯೊದಗುವದು ಸಟೆಯಲ್ಲ-।
ವೈ; ಭಾಕ್ತಿಕರ್ಗೆ ಸಮರಿಲ್ಲವೈ ಜಗದಲ್ಲಿ; ।
ಭೂ-ಭಾಗವಿದು ಮಹಾ ಕೈಲಾಸಮಪ್ಪುದೈ; ಗುರುಭಕ್ತಿಯಧಿಕಮಿದರೊಳ್ ॥

ಇದು ನವ ವಿಧಂ ಶ್ರವಣ-ಕೀರ್ತನ-ಸ್ಮರಣಮುಂ ।
ಪದ-ಸೇವೆ-ಯರ್ಚನ-ಪ್ರಣತಿ-ದಾಸ್ಯ-ಸ್ನೇಹ-।
ವಿದಿತಾತ್ಮವಿನಿವೇದನಂ ತಿಳಿಯಲಿದರಲ್ಲಿ ಸ್ಮರಣ-ಭಕ್ತಿಯ ಮಹತ್ತ್ವಂ ॥
ಅದು ಪ್ರಥಿತಮಾಯಿತ್ತೈ; ಯಿಂದಿನಿಂ ನೀವೆಲ್ಲ-।
ರದನೆ ಸಾಧಿಸಿರಿ, ನಿಮಗಹುದು ಜೀವನ್ಮುಕ್ತಿ; ।
ಯೊದವಿದಾನಂದದಿಂ ಕಾಡಪ್ಪನುರು ಭಾಗ್ಯಮಂ ಪೊಗಳುತಂ ಪರಸಿದಂ; ॥೨೭॥

ಎಲ್ಲರಂ ಪರಸುತ್ತೆ ಕಳುಹುತ್ತೆ, ನಲಿಯುತ್ತೆ ।
ಲಲ್ಲೆಯಿಂ ನಡೆಯುತ್ತೆ, ನುಡಿಯುತ್ತೆ, ಶಿವಯೆನುತೆ ।
ಬಲ್ಲಿಹಂ ಶಿವಪೂಜೆಗಾಗಿ ಗವಿಯಲ್ಲಿಳಿಯುತಲ್ಲಿ ತಲ್ಲೀನನಾದಂ; ।
ಸೊಲ್ಲಿಸಿದ ನುಡಿಯಂತೆ ಚರಿಸುತ್ತೆ, ಪಡೆಯುತ್ತೆ ।
ಸಲ್ಲಿದರ್ ಮುಕ್ತಿಯಂ; ಭುಕ್ತಿಯಂ; ಶಕ್ತಿಯಂ; ।
ಕಲ್ಲೆದೆಯ ನಾಸ್ತಿಕರ್ ಸ್ವಾಸ್ತಿಕರ್ ತಾವಾಗಿ ವಾಸ್ತವಿಕತೆಯೊಳಾಳ್ದರು; ॥೨೮॥

* *

ಮತ್ತೊಂದು ವಿಸ್ಮಯಾವಹ ಲೀಲೆ ಜರುಗಿಹುದು; ।
ಮತ್ತಾತ್ಮರಾಗದಲೆ ಸರ್ವರುಂ ಕೇಳುವದು ।
ಚಿತ್ತ-ಪ್ರಮೋದಕರಮಾಗಿಹುದದೇ ಊರೊಳಿರ್ದರೀರ್ವರ್ ಭಕ್ತರು ॥
ವಿತ್ತಾರ್ಥ್ಯ ಕೆಂಚಪ್ಪ-ಮಲ್ಲಪ್ಪಗೌಡರುರೆ ।
ವೆತ್ತಿರ್ಪ ಶಾಂತರವರ್ಗಣುಗೆಯರ್ ಜನಿಸಿರ್ಪ-।
ರುತ್ತುಂಗ ಸುಂದರಿಯರವರ ನಾಮಂಗಳಿರ್ಪವು ಗಿರಿಜೆ-ಗೌರಿಯೆಂದು ॥೨೯॥

ಗಿರಿಜೆ ನಾಸ್ತಿಕಳಾಗಿ, ಗೌರಿ ಯಾಸ್ತಿಕಳಾಗಿ ।
ಯುರು ದುಃಖ-ಮೋದಂಗಳಂ ಪಿತೃಗಳಿಗೆ ನೀಡ-।
ಲರಿಯುತಾನಂದಮಂ ಪಡೆವುದಕ್ಕೀ ಗಿರಿಜೆಯಾ ಪಿತಂ ಕೆಂಚಗೌಡಂ ॥
ಪರಿಪರಿಯ ಯತ್ನಂಗಳಿಂ ಮಗಳನ್ನಾಸ್ತಿಕಳ-।
ನುರೆ ಮಾಡಲೋಸುಗಂ ಶ್ರಮಿಸಿ ನಿಷ್ಫಲನಾಗಿ ।
ನೆರೆ ಚಿಂತಿಸುತ್ತಿರ್ದನೊರ್ಮೆಯೊಂದು ಸುಘಟನೆ ಜರುಗಿತದನಾಂ ಪೇಳ್ವೆನು ॥

ಮಲ್ಲಗೌಡನ ಮುದ್ದು ಸುತೆಯು ಗೌರಮ್ಮನುರೆ ।
ಸಲ್ಲುವಾಸ್ತಿಕಳಾಗಿ, ಪಿತಗೆ ಮೋದವನೀಯೆ ।
ವುಲ್ಲಸಿತ ತತ್ಕೃಪೆಯ ಪಡೆದಿರ್ದಳೊಂದು ದಿನದೋಳ್ ತನ್ನ ಗೆಳತಿಯಾದ ॥
ಸಲ್ಲಲಿತ ಗಿರಿಜೆಯೊಡಗೂಡಿ ಬಿಲ್ವ-ವನಕ್ಕೆ ।
ಮೆಲ್ಲಗುಲ್ಲಾಸದಿಂ ಬಂದು ತೋಂಟದ ಸೊಬಗ-।
ನುಲ್ಲಸದೊಳೀಕ್ಷಿಸುತ ಪುಷ್ಪವಾಟಕೆಯೊಳ ಪೊಕ್ಕಳಾ ಸುದತಿಯೊಲಿದು ॥೩೧॥

ಲಲನೆಯರ್ ಶಶಿಮುಖ್ಯಾಕಲನೆಯರ್ ಫಣಿವೇಣಿ-
ಯೊಲವೆಯರ್ ಪೆರೆಪಣೆಯ ನಲುಮೆಯರ್, ಭ್ರೂಲತಾ-।
ಕಲನೆಯರ್ ನೇತ್ರಾಬ್ಜ-ಲಲಿತೆಯರ್ ನಾಸಿಕ-ಚಂಪಿಕೆಯರೊಲಿದು ನಿಂದು ।
ಚಲುವೆಯರ್ ಪವಳದುಟಿಯೊಲುಮೆಯರ್ ಚದುರಗಿಳಿ-।
ಯುಲಿಯುವರ್ ಮುಗುರ ಕದಪಲುಮೆಪುರ್ ಕೇಬೊಗರ ।
ಸಲುಗೆಯರ್, ವನರಮೆಯರಂತೆ ಸುಳಿಯುವರಲ್ಲಿ ತರುಣಿಯರ್ ಸ್ವಚ್ಛಂದದೆ ॥೩೨॥

ಸಂಜೀವಿನೀ-ಲತೆಗಳೋ ಯೆನಲ್ ತೋರ್ದೆಸೆವ ।
ಕಂಜಾಂಗಿಯರ್ ತಮ್ಮ ತಮ್ಮೊಳಗೆ ನಲಿದಿಂತು ।
ಕಂಜೋಪವನದಲ್ಲಿ ಮಾತನಾಡುತಲಿರ್ದರದನೀಗಳೊರೆವೆನೊಲಿದು ।
ಮಂಜು ಸ್ವರದ ಗೌರಿಯಾತ್ಮ-ಸಖಿಯಂ ನೋಡಿ ।
ನಂಜುಂಡನಿಂದಧಿಕ ಲೀಲೆಯೆಸಗುವಾ ಕೃಪಾ-।
ಪುಂಜಸ್ವರೂಪನಂ ಹುಚ್ಚೇಶನಂ ನೆನೆದು, ಗಿರಿಜೆಯಂ ಪ್ರಶ್ನಿಸಿದಳು; ॥೩೩॥

"ಗೆಳತಿಯೆ, ಯೀ ವನದ ಶೋಭೆಗಾ ಗವಿಯಲ್ಲಿ ।
ಕುಳಿತು ತಪನುಂ ಗೈವ ಹುಚ್ಚೀಶ ಶಿವಯೋಗಿ-|
ಯೊಳಿಹಾ ಪ್ರಭಾವವುುರು ಮೂಲ-ಕಾರಣವೆಂದು ತಿಳಿದಿರುವೆ ನಾನೇಕೆನೆ ॥
ಬೆಳೆದಿಃುದಿದಾರ ಪೋಷಣೆಯಿಲ್ಲದೀ ಪರಿಯೊ |
ಳೆಳೆಯ ಜನರಚ್ಚಃಸೆ ನಿನ್ನ ಮತಮೇನೆ"ನಲ್ ||
ಕೆಳದಿಯಹ ಗಿರಿಜೆಯೊರೆದಳ್, ಕೇಳಿ ನಸುನಗುತೆ ನಾಸ್ತಿಕರ್ ಮೆಚ್ಚುವಂತೆ;||೩೪||

"ಇದು ನಿನ್ನ ಮೂಢತೆಯುುಮೆಂದಾದಡುಂ ಜಸತ-।
ಪದೆ ಬನಂ ಕೊನರುವುದೆ? ನೈಸರ್ಗಿಕಂ ವಿಭವ-|
ಮದು ಶೋಭಿಸುವುದಿಲ್ಲಿ "ಬೆನ್ನ ಮೇಲುರೆ ಪೊಯ್ಯೆ, ಪಲ್ಗಳೆಂತುದುರುತಿಹವು"?
ಪದೆದು ನೀರ್ಗೊಬ್ಬರದೆ ಬೆಳಸಿರ್ಪುದಲ್ಲಮೆನೆ ।
ಸದಮಲಳೆ, ತಂಪಾದ ಭೂಮಿಯಿಪ್ಪುದರಿಂದೆ |
ಪದಿಪಿಂ ಲತಾ-ತರುಗಳರಿಯೆ ವಿಕಸಿತಮುಹವು ಬೇಳ್ದಿಲೆಯ ಸತ್ತ್ವದಿಂದೆ;" ||೩೫||

ಆಲಿಸುತೆ ಗೌರಿಯಿಂತೊರೆದಳವಳಂ ನೋಡಿ, |
"ಲೀಲೆಗಳನೇಕಮಾಗಿರ್ಪವೀ ಮಹಿಮನಿಂ-|
ದಾಲಿಸಿರ್ದಡುಮುವುಗಳಂ ನೀಂ ತಿರಸ್ಕರಿಸಿ, ಮಾತನಾಡುವುದುಚಿತಮೆ ?||
ಬಾಲಕರ್ ಸಹಮಾಗಿ ನೋಡಿರ್ಪ ಮಹಿಮೆಯುದು |
ಮೇಲೆನಿಸಿ, ಶವಕೆ ಪ್ರಾಣಮನಿತ್ತು ಮೆರೆದಿಹುದು; ।
ಬಾಲೆ ಬಾ, ಸುಳ್ಳಲ್ಲ; ಬದುಕಿದವನಂ ತೋರ್ಪೆನೆನೆ, ಗಿರಿಜೆಯುುತ್ತರಿಸಿದಳ್ ||೩೬||

"ಕಂಡುದಂ ಮಾತನಾಡಿದೊಡೇತಕೌ ಗೌರಿ ।
ಕೆಂಡದಂತಪ್ಪುದು ಮನಂ ? ಬೇಡಮೆಮ್ಮೂರ್ವರ-||
ದ್ದಂಡ ನೇಹಂ ಕೆಡುವದೆಂದಿಗುಂ ಬೇಡಮೀತಂ ಸಲೆಮಹಿಮನಾದೊಡೆ ||
ಕೆಂಡಗಣ್ಣಿವನಾದೊಡೆನ್ನ ಪ್ರಾಣವ ಕಳೆಯ |
ಪಂಡಿತರ್ ಮೆಚ್ಚುವಂದದೆ ಬದುಕಿಸಲೆನುತ್ತೆ |
ಚಂಡಿ ನಾಸ್ತಿಕ-ಗಿರಿಜೆ ಯಲೆಯುುತ್ತೆ ಪುಷ್ಪಗಳ ನೋಡಿ ತಿರಿಯುತಲಿರ್ದಳು; ||೩೭||

ಆನಿತರೊಳು ನಾಗರದ ಪಾವೊಂದು ಗಿರಿಜೆಯಂ |
ಘನ ರಭಸದಿಂ ಬಂದು ಕಾಲ್ಬೆರಳಿಗುರೆ ಕರ್ಚಿ, |
ಸನಿಹದೋಳ್ ನಿಲ್ಲದಲೆ ಪೊಡಮರಳೆ, ವಿಷಮೇರುತಿರೆ ಗಿರಿಜೆಯು |
ನೆನೆಯುತಂ ತಾಯ್ತಂದೆಗಳ; ಮೃತಿಯನಪ್ಪುತಿಹ
ಳಿನಿತನೀಕ್ಷಿಸಿದ ಗೌರಿ ಕ್ಷಣದೆ ಬೀಳುತ್ತೆ ।
ವನಿತೆ ಮೂರ್ಛಿತಳಾದಳಾ ಗುರುವರನ ನೆನೆದು ತತ್ಕಾಲದೊಳಗೀರ್ವರ ॥೩೮॥

ಪಿತರಾದ ಕೆಂಚಪ್ಪಗೌಡ-ಮಲ್ಲನಗೌಡ-।
ರತಿ ಜವದೆ ಮಕ್ಕಳಂ ಶೋಧಿಸುತಲೀ ಬನಕೆ |
ಸುತೆಯರಾ ದುರ್ದಶೆಯ ನೋಡಿ ಧೈರ್ಯಂ ಗುಂದಿ ದುಃಖಿಸುತಿರಲ್ ಗೌರಿಯು ॥
ಪ್ರತಿಪನ್ನನಾದಿಸಮ ಗುರುವಂ ನೆನೆದ ಫಲದೆ|
ಮತಿ-ವಿಭ್ರಮಂ ಪೋಗಿ, ಮೂರ್ಛೆ ತಿಳಿದೆಚ್ಚತ್ತು, |
ಪತಿತ-ಪಾವನ ಪರಮಗುರುಸಿದ್ಧ-ಕರುಣೆಯಿಂದೇಳ್ದಳಿನೆ ಕಣ್ದೆರೆದಳು; ॥೩೯॥

ನೋಡುತೀರ್ವರಿಗೆರಗಿ ಗೌರಮ್ಮನೆಲ್ಲವಂ |
ಪಾಡಿ, ಹುಚ್ಚೇಶನಂ; ದುಃಖವಂ ಬಿಡಿಸುತ್ತೆ ।
ಮಾಡಲುರೆ ಸಂತಸವ ತಿಳುಪಿ, ಗವಿಯ ಬಾಗಿಲಕ್ಕೆರಗುತ್ತಲಿಬ್ಬರೊಡನೆ ॥
ನಾಡೆ ನುತಿಸಿದಳಿಂತು "ಹುಚ್ಚಯ್ಯ, ನೆಚ್ಚಯ್ಯ, ।
ಕಾಡದಿರು ದುರ್ಗುಣಿಯ; ಭೋಸದಯ, ಗುಣನಿಲಯ, |
ಮಾಡು ಮಮ ಸಖಿಯಳಿಗೆ ಪ್ರಾಣದಾನವ; ಗುಣವ ನೋಡದಲೆ
ಸದ್ಗುರುವರಾ" ॥೪೦॥

ಎಂದು ನುತಿಸುತೆ ಮತ್ತೆ ನಮಿಸುತ್ತೆ, ಪೋಗುತ್ತೆ, |
ದಂದುಗವ ಪರಿಹರಿಪ ಪೊಂಡದೊಳಗಿಳಿಯುತ್ತೆ, |
ತಂದು ತೀರ್ಥವ; ಗುರುವೆ, ಹುಚ್ಚಯ್ಯಯೆನ್ನುತ್ತೆ, ಹಾಕಿದಳ್ ಶವದ ಮುಖದೆ ॥
"ತಂದೆ, ಪೊರೆವು"ದೆನುತ್ತೆ ಗೌರಮ್ಮನತಿ ಶಾಂತೆ ।
ವಂದಿಸುತಿರಲ್ ಜೀವಕಳೆಯೊದಗಿ ಶಿವ ಯೆನುತೆ |
ಚಂದದಿಂದೇಳುತೆ, ಗಿರಿಜೆಯುಲ್ಲಸಂ ನೋಡಿ, ನಮಿಸಿದಳ್ ನವಿಗೆ ಪಾಡಿ ॥೪೧॥

"ಶ್ರೀಗುರುವೆ, ಸದ್ಗುರುವೆ, ಮುದ್ಗುರುವೆ, ಬಾರಯ್ಯ; |
ಧೀಗುರುವೆ, ಚಿದ್ಗುರುವೆ, ಮದ್ಗುರುವೆ, ಬಾರಯ್ಯ; |
ಭೋ ಗುರುವೆ, ಮಿದ್ಗುರುವೆ, ಹೃದ್ಗುರುವೆ, ಬಾರಯ್ಯ, ಯೆನ್ನೊಳಿಹ ನಾಸ್ತಿಕ್ಯವ ||
ಭೋ ಗುರುವೆ, ನಿಗ್ರಹಿಸಿ ಪೊರೆದಯ್ಯ; ನೀ ಕರುಣಿ, |
ಭೂ-ಗುರುವೆ, ಸಂತೈಸಿ ನೀಂ ತಿಳಿಸಿ, ಕಾಯಯ್ಯ; |
ಹೇ ಗುರುವೆ, ಯಾಸ್ತಿಕತೆಯಂ ನಿಲಿಸಿ, ಪರಿಸಯ್ಯ, ಬಾರದಿರೆ, ಮತ್ತಳಿಯುವೇಂ" ||

ಎಂದು ನುತಿಸುತ್ತೆ, ಸಾಷ್ಟಾಂಗಮಾಗೆರಗುತಿರೆ, |
ಬಂದು ಪಿಡಿದೆತ್ತಿದಂ ಗುರುವರಂ ಮುದವೇರೆ, |
ಚಂದದಿಂ ನಲಿಯುತ್ತೆ, ಮಾತಾಡಿದಂ "ಮಗಳೆ, ನಿನ್ನ ಭಕ್ತಿಗೆ ಮೆಚ್ಚಿದೇಂ ||
ಇಂದಿನಿಂ ನಿನ್ನೊಳಾऽऽಸ್ತಿಕ್ಯಮದು ನೆಲಿಸುವುದು;
ಕಂದು-ಗೊರಲನ ಕೃಪೆಯಿದೆಮ್ಮ ಸದ್ಭಕ್ತಳಾ-|
ದಂದ ವರ ಗೌರಮ್ಮನಾ ಸ್ನೇಹವೊದಗಿಹುದು; ನಿನಗಾಗಿ ತಿಳಿ; ಗಿರಿಜೆಯೆ ||೬೩||

ಅನಿತರೊಳ್ ಗೌಡರೀರ್ವರ್ ಮತ್ತೆ ಗೌರಮ್ಮ-|
ಅನಘ-ಪದಕೆರಗುತಿರಲೆರಗಿದವರಂ ನೋಡಿ, |
ಘನ ಮಹಿಮರವರೆಲ್ಲರುರೆ ಮುಸ್ತಕವ ಮುಟ್ಟಿ, ಪರಸುತ್ತಲಿಂತೆನ್ನಲು ||
ಎನಗೆ ನಿಮ್ಮಯ ಚಿಂತೆಯರಿಕೆಯಿದೆ; |
ಘನತೆಯುರು ಪುತ್ರರಂ ಪಡೆದು ರಾರಾಜಿಸುವಿ-|
ರನವರತಮಿನ್ನು ಸುಖಮುಪ್ಪುದೈ; ನೀವರಿಯುತನ್ನ-ದಾನಮನೆಸಗಿರಿ ||೬೬||

ತಿಳಿಯಿರೈ ಸತ್‌ಪಾತ್ರದಾನದಿಂ ಸಿರಿಯೈದೆ, |
ಬೆಳೆಯುವುದು; ಧನಬಲದಿನುರು ಧರ್ಮ ಕೃತಿಗಳುಂ |
ಕಳಕಳೆಯುವೆಸಗುವುದು. ತತ್ ಪುಣ್ಯದಿಂ ಪರಮ ಸದ್ಗತಿಯ ಪಡೆಯುತ್ತಲೆ ||
ಬಳಿಕ ಮೇಣ್ ಸಿರಿವಂತರಾಗಿ ಪುಟ್ಟುವಿರಿದಂ |
ತಿಳಿಯೆ ನಿರಪೇಕ್ಷೆಯಿಂ ಸದ್ಧರ್ಮ-ಕಾರ್ಯಮಂ |
ತಿಳಿದೆಸಗೆ ಮೋಕ್ಷಮಂ ಪಡೆಯುವಿರಿ; ನೀವೆಂ"ದು ಗುರುವುಗವಿಯೊಳ್ ಪೊಕ್ಕನು ||

ಈತನೀ ಲೀಲೆಯಂ ಪೊಗಳುತ್ತೆ, ಭಕ್ತಿಯಿಂ |
ಪೂತರಾಗುತೆ, ಗವಿಗೆ ನಮಿಸುತ್ತೆ ನಾಲ್ವರುರೆ |
ಪ್ರೀತಿಯಿಂ ಮನೆಗೈದಿ, ಸರ್ವರಿಗುಮೊರೆಯುತ್ತೆ ಸುಖಮಾಗಿ ಬಾಳ್ದರವರು; ||
ಖ್ಯಾತರೇ, ತನ್ಮಹಿಮೆಯಂ ಕೇಳ್ದು ಬಣ್ಣಿಸುತ-|
ಲೋತು ಪೌರಾಣಂಗಳೋಳ್ ಶ್ರದ್ಧೆಯಂ ತಾಳ್ದು, |
ಸಾತಿಶಯ ನಾಸ್ತಿಕರ್ ತಾವಾಗಿ ಭಕ್ತರಾಗಿಹರಂದಿನಿಂ ಸರ್ವರು; ||೪೯||

ಈ ರೀತಿ ಸದ್ಭಕ್ತಿಯಾಚಾರವೆರಸುತ್ತ-|
ಲೋರಂತದಾವನ ತಪಶ್ಶಕ್ತಿಯಿಂ ಬೆಳೆದ-|
ಪಾರೋತ್ತರ ಶ್ರದ್ಧೆಯಂ ಪುಟ್ಟಿಸುತೆ, ಜನರ ಮನವ ಸೆಳೆಯುತ್ತಲಾಗ ||
ಸಾರುತ್ತೆ ತಿಳಿಸುವಂತೆಸಗಿ, ಪೂವಳ್ಳಿಯಂ |
ಸಾರೋರು ತಮಗಾಗಿ ಗುರುಸಿದ್ಧನತಿಪೂರ |
ಧೀರಾತ್ಮನಾಗಿ ಪೊರೆಯಲಿ ಸದಾ ನೆಲಿಸುತ್ತೆ,ಮನ್ಮನೋ-ಬಿಲ್ವ-ಬನದೆ ||೫೭||

ವೀರೇಶ-ಪುಣ್ಯಾಶ್ರಮಂ ಗದುಗಿನೋಳ್ ಮೆರೆವು-|
ದೋರಂತೆ ಶೋಭಿಸುವುದಲ್ಲಿ ಪಂಚಾಕ್ಷರನು-|
ದಾರ ಸ್ವ ಗುರುವರನ ಯೋಗದ ಸಮಾಧಿಯಿದೆ; ಕುಳಿತಿಲ್ಲಿ ಗುರು-ಕರುಣೆಯೋಳ್||
ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ |
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ |
ಮೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣದೋಳ್ ಸಂಧಿ ಐದು ||೫೮||

**ಅಂತು ಸಂಧಿ ೫ಕ್ಕಂ, ಪದಂಗಳು ನಾಲ್ವತ್ತೆಂಟಕ್ಕಂ;**
**ಇಂತು, ಒಟ್ಟು ಪದಂಗಳು ೨೧೬ ಕ್ಕಂ;**
**—ಮಂಗಲಂ—**

॥ ಶ್ರೀ ಗುರುಬಸವ ಲಿಂಗಾಯ ನಮಃ ॥



# ಆರನೆಯ ಸಂಧಿ





॥ ಸೂಚನೆ ॥

ಮಾಡಳ್ಳಿ ಭಕ್ತನಾ ಪಿರಿಯ ಬೇನೆಯ ಕಳೆದು,।
ಮೂಡಿಪ್ಪ ಕರುಣೆಯಿಂ ಮುಂಬೈ ಜನವ
ಪೊರೆದು,
ಮಾಡಿರ್ಪ ತಪದಿಂದೆ ಬೀಡ್ನಾಳ ಪ್ಲೇಗಮಂ ಬಿಡಿಸಿ ಮೆರೆದಂ ಗುರುವರಂ ॥

[ಸಂಧಿ ಪ್ರಾರ್ಥನಾ-ಪದ್ಯ]

ದೋಸೆಗಾಗಿಯೆ ಮಣ್ಣನುರು ಪೊತ್ತು ಮೌನದಿಂ।
ಲೇಸಿಗಿಚ್ಛಿಪ ಸುರಸತೀ ಜನವ ಭಂಗಿಸುತ-।
ಲೀಸರಂ ನೀನೆನಿಸುತೆಂತು ಮೆರೆಯುತ್ತಿರುವೆ ನಾನೆಂತು ಜೀವನಾದೇಂ? ॥
ಭಾಸುರತೆ ನಿನಗೇಕೆ ? ಕರೆಯದೆನಗೇತಕ್ಕೆ ?
ಭೂಸುರತೆ ನಿನಗೇತಕಸುರತೆಯದೆನಗೇಕೆ ?
ಘಾಸಿಗೊಳಿಸದೆ ತಿಳಿಸದಾಗದಿರೆ ನಿನ್ನಂತೆ ಮಾಡಿಕೊಳ್ಳೆನ್ನನಭವ ॥೧॥

ಒಂದು ದಿನದೋಳ್ ಶಿವಾರ್ಚನೆಯ ಮುಗಿಸುತೆ ಗುರುವು |
ಹೊಂದಿಸೆವ ಪುಷ್ಪವಾಟಿಕೆಯಲ್ಲಿ ಸಂಚರಿಸು-|
ತಂದವಹ ಜಗುಲಿಯೋಳ್ ಕುಳಿತಿರ್ದನಾ ಸಮಯಕಲ್ಲಿ ಬಂದಿರ್ದನೋರ್ವಂ; ||
ಇಂದುಧರ-ಸಮನಾದ ಗುರುಸಿದ್ಧನಡಿಗಳಿಗೆ |
ಪೊಂದೆರಗಿ ದುಃಖಿಸುತೆ ನಿಂದನವನಂ ಕಂಡು |
ಸಂದ ಕೃಪೆಯಿಂ ಕೇಳ್ದ "ನಾರು ನೀನಿಲ್ಲೇಕೆ ಬಂದೆ ಪೇಳಿ" ನಲಾತನು ||೨||

"ಗುರುವೆ, ಯನ್ನಯ ಪೆಸರ್ ರಾಮನೆಂದಿರ್ಪುದೈ |
ಕರುಣಿ, ಮಾಡಳ್ಳಿ ಕೇಳೆನ್ನೂರದಿರುವುದೈ |
ಪಿರಿಯ ಬೇನೆಯ ಬೇಗೆಯೋಳ್ ಬೆಂದು ಬಂದಿಹೇಂ ಬಂಧುವೆಂದರಿದು ನಿನ್ನಂ; ||
ಕರುಣಾಕರನೆ, ಯಾಪ್ತರಂಟು ರೋಗವಿದೆನುತೆ |
ಹೊರಹಾಕಿದರ್; ನಿನ್ನ ಪಾದಮಂ ಶೋಧಿಸುತೆ |
ಪರತರನೆ, ಕಂಡೆನಿಲ್ಲಿಗೆ ಬಂದು ಚರಣಮಂ; ಕಾಯಯ್ಯ ರುಜೆಯ ಬಿಡಿಸಿ;" ||೩||

ಎಂದು ದೂರದೆ ನಿಂತು ಕಣ್ಣೀರ ಸುರಿಸುತಿರೆ |
"ಕಂದ ನೀನಳಬೇಡ;" ಯೆನುತ ಗುರುವಾದರದೆ |
ಸಂದ ಕೃಪೆಯಿಂ ಬಿಲ್ವದಳಗಳಂ ಕೊಂಡು, ಮಣ್ಣೊಳುರುಳಾಡೆನ್ನುತೆ ||
ಛಂದದಿಂ ಗವಿಯಲ್ಲಿ ಪೋದಂ ಮರಳರಲ್ಲು, |
ಸಂದೆಗವ ತೊರೆಯುತ್ತೆ ವಸ್ತ್ರಗಳ ತೆಗೆಯುತ್ತೆ |
ವಂದಿಸುತಲಾ ಗುಹೆಗೆ ಮಣ್ಣೊಳುರುಳಾಡುತ್ತೆ ಸೇವಿಸಿದನಾ ಬಿಲ್ವವ; ||೪||

ಆ ಕ್ಷಣದೆ ತದ್ರೋಗದುಪಟಳಂ ತೊಲಗಿಹುದು; |
ಶಿಕ್ಷಕನ ನೆನೆಯುತ್ತೆ ಕೊಂಡದೊಳಗಿಳಿಯುತ್ತೆ, |
ರಕ್ಷಿಸೆನ್ನುತೆ ಜಲಮನೀಂಟುತ್ತೆ ನಲಿಯುತ್ತೆ ಬಂದು ಮಲಗಿದನಾಗಲೆ ||
ವಕ್ಷಿಪುದದೇನಾತನೇಳುವನಿತರೊಳವನ |
ಕುಕ್ಷಿಯೊಳಗಿರ್ದ ಕ್ರಿಮಿಗಳ್ ತೊಲಂಗಿದವಾಗ-|
ಳಕ್ಷಿ ಗೋಚರಮಾಗಳುದಿರದಂಗಂಗಳವು ಚಿಗಿತು ಚೆಲ್ವಿಕೆ ಯೆಸೆದುದು; ||೫||

ತನ್ನ ಗ್ರಾಮಕೆ ರಾಮರಾಯನೈದುತಿರಲ್ಕೆ |
ನನ್ನಿಯಿಂ ಸರ್ವ ಜನರವನ ಮನೆಯವರೆಲ್ಲ- |
ರುನ್ನತ ಮಹಾತ್ಮ ಹುಚ್ಚೇಶ ಶಿವಯೋಗಿಯಾ ಲೀಲೆಯಂ ತದ್ವಾಣಿಯಿಂ ||
ಮನ್ನಣೆಯೊಳರಿಯುತ್ತೆ ನುತಿಸುತಿರೆ ತದ್ದ್ವಿಜರ್ |
ಚನ್ನವೆನೆ ವೈಷ್ಣವರ್ ರಾಮನಂ ಬೈದರಿಂ- |
ತೆನ್ನುತೇನಿದು ಖಳನೆ ವೈಷ್ಣವಂ ನೀನಾಗಿ ಕ್ಷುದ್ರ ಶಿವಭಕ್ತರಡಿಯ ||೬||

ಹುಡಿಯೊಳುರುಳಾಡಿಯೆಮಗೇಕೆ ಮುಖಮಂ ತೋರ್ದೆ? |
ಸಡಗರದೊಳೆಮ್ಮ ಮತಗುರುಗಳಾರುಂ ನಿನಗೆ |
ಪೊಡವಿಯೊಳ್ ದೊರೆಯಲಿಲ್ಲವೆ? ಪೋಗಿರದದೆ ನೀಂ; ನಿನ್ನ ಮೊಗಮಂ ನೋಡಿದ ||
ಕಡುಹೀನಪರಾಧಕ್ಕೆ ಪ್ರಾಯಶ್ಚಿತವ ಹೊಂದಿ, |
ಪಡೆಯವೇಳ್ಕಾಗುವುದು ನೀನಿಲ್ಲಿಯೇ ನಿನ್ನ |
ಪಡೆದ ಮನೆಗಾವುಂ ಬಹಿಷ್ಕೃತಿಯ ಘೋಷಿಸುತೆ ನೀರು ಸಿಗದಂತೆಸೆಪೆವು;" ||೭||

ಎಂಬ ಮಾತಂ ಕೇಳ್ದು "ಹುಚ್ಚೇಶ ಹುಚ್ಚೇಶ |
"ಸಾಂಬಶಿವ"ಯೆನ್ನುತ್ತೆ ನಿಂತನಾ ಬೀದಿಯೊಳ್ |
ನಂಬಿದೀ ಪ್ರಾರ್ಥನೆಗೆ ವಿಷ್ಣು ಒಲಿಯುತೆ ದ್ವಿಜರ ಕಂಡು ಕನಸಿನೊಳಿಂತುರೆ ||
ತುಂಬಿದಾನಂದದಿಂ ಪೇಳ್ದ"ನೆಲೆ ಬ್ರಾಹ್ಮಣರೆ, |
ನಂಬಿರೆನ್ನಯ ನುಡಿಯ ಶಿವನೆ ರಾಮನ ರೋಗ |
ಮಂ ಬಲದೆ ಕಳೆದಿಹಂ ನೀವವನ ಕಾಡಿದೊಡೆ, ನಿಮಗಾ ರುಜಂ ಬರ್ಪುದು; ||೮||

ದಿಟವಿ"ದೆಂದೊರೆಯುತ್ತ ದೃಶ್ಯತೆಯನೈದುತಿರೆ |
ಚಟವಟಿಕೆಯಿಂದೇಳ್ದು ಸರ್ವ ವಿಪ್ರರ್ ನೆನೆದು |
ಘಟಿಸಿದಾ ಸ್ವಪ್ನ ವಿಷಯವ ಪರಸ್ಪರರರಿದು ನಿರ್ಧರಿಸಿ ಶೋಧಿಸುತ್ತೆ ||
ನಿಟಿಲಾಕ್ಷಸಮ ಗುರು ಪ್ರಾರ್ಥನೆಯೊಳುರೆ ಬೆರೆದ |
ನಟನೆಯಿಲ್ಲದ ರಾಮರಾಯನಂ ಕಂಡರಿದು |
ಕುಟಿಲರಹಿತನ ಪಾದಕವರಾಗಳುರೆ ಮಣಿದು ಬೇಡಿಕೊಂಡರದೆಂತೆನೆ ||೯||

ಸಟೆಯೆನ್ನ ರಾಮರಾಯನೆ, ತಮ್ಮ ಚರಣಕ್ಕೆ |
ಸ್ಫಟಿಕಸಮಮನರಾಗಿ ಶರಣು ಬಂದಿಹೆವಯ್ಯ |
ಘಟಿಸಿತ್ತೈ ನಿಮ್ಮ ಪ್ರಾರ್ಥನೆಯ ಬಲದಿಂದೆಮಗೆ ಹರಿದರ್ಶನಂ ಕನಸಿನೊಳ್; ||
ಘಟಿಸಿರ್ಪ ನಿಮ್ಮ ರೋಗವ ಕಳೆದವಂ ಶಿವಂ |
ಸ್ಫುಟವೆಂದು ತದ್ ವಿಷ್ಣುವೊರೆದಿಹಂ ಕ್ಷಮಿಸಿರೈ |
ಜಟಿಲವಾಗಿರುವೆಮ್ಮ ದುರಭಿಮಾನವ ಕಳೆದುದೀ ನಿಮ್ಮ ಗುರುಭಕ್ತಿಯು ||೧೦||

ಬನ್ನಿರೈ ಯೆಮಗೆ ಗುರುದರ್ಶನವ ಮಾಡಿಸಿರಿ |
ಸನ್ನುತನ ಕಾಣುತೀ ಪಾಪಮಂ ನೀಗುವೆವು; |
ಮನ್ನಣೆಯ ಪಡೆಯುವೆವು;' ನಿಂದೆ ದೋಷಾಕರಮ"ದೆಂಬ ಸ್ಮೃತಿಯಿರ್ಪುದೆನಲು||
ಚಿನ್ನಿಧಿಯ ಸ್ಮರಿಸುತ್ತಲೊಪ್ಪಿ ಬಂದಿಹನವಂ |
ತನ್ನ ಮನೆಯವರೊಡನೆ ಸರ್ವರಂ ಬೆರೆಸುತ್ತೆ |
ಸನ್ನಿಧಿಯ ದರ್ಶನಕೆ ಸಮ್ಮುದದೆ ನಲಿಯುತ್ತೆ ಬಿಲ್ವವನದೆಡೆಯ ಗವಿಗೆ ||೧೧||

ಅನಿತರೊಳ್ ಗುರುಸಿದ್ಧಶಿವಸಮ ಜಗದ್ಗುರುವು |
ಘನ ಯತೀಶಂ ತನ್ನ ತಪದ ನೆಲೆಯಹ ಗವಿಯ |
ಮನೆಯಿಂದೆ ಹೊರಗೈದು ನಿಂದಿರ್ದನಾಗರಿದು ನಮಿಸಿದರ್ ಬಂದೆಲ್ಲರು ||
ಘನ ಗುರುವು ನೋಡುತವರಂ ನುಡಿದನೆಂತೆನಲ್ |
"ಘನತೆಯಿಂ ಶ್ರೀಪತಿಯ ದರ್ಶನವ ಪಡೆದ ನೀ- |
ವನಘರೈಯೆನ್ನೊಳೇನುಂಟು ರಾಮನ ರುಜೆ ನಿವಾರಣಂ ಹರಕರುಣೆಯು;"||೧೨||

ಇದನರಿದು ದ್ವಿಜರೊಳೋರ್ವಂ ನುಡಿದನೆಂತೆನಲ್ |
ಪದಳ್ದಾ ಹರಂ ತಾವೆ ಯೆಮ್ಮವಾರ್ತೆಯ ತಮಗೆ |
ಪದೆದು ತಿಳಿದುದೆ ಸಾಕ್ಷಿ ಹರಿಯ ನುಡಿಯಂತು ಸಟೆಯಪ್ಪುದು ವಿಚಾರಿಸಿದೊಡೆ ||
ಪದಪಿನಾವರಿಯದಲೆ ತಮ್ಮ ನಿಂದಿಸಿದೆವೈ; |
ಸದಮಲನೆ ತಮ್ಮ ದರ್ಶನದಿಂದ ದೋಷಮಂ |
ವಿದಿತಮಾಗಲ್ ಕಳೆದುಕೊಳ್ಳಲೈದಿದೆವಿಲ್ಲಿ ಪರಿಹರಿಸಿ ರಕ್ಷಿಸಭವ;" ||೧೩||

ಗುರುಸಿದ್ಧ ಶಿವಯೋಗಿಯಿದನಾಲಿಸಿಂತೊರೆದ-|
ನುರು ಭಕ್ತಿಯಿಂ ಬಿಡದೆ ನಿಮ್ಮರ್ಗೆ ಪೋಗುತ್ತೆ,
ಹರುಷದಿಂ ಜಂಗಮಾರಾಧನೆಯನೆಸಗಿರ್ಪ ತೊಲಗುವದು ನಿಮ್ಮ ಪಾಪಂ;,
ನೆರೆ ಲಿಂಗವಂತರಿಂ ಶುದ್ಧ ಪಾಕವ ಗೈಸಿ
ಚರರ ತಣಿಪುದು ಬಳಿಕವೂ-ಪ್ರಸಾದವ ಸರ್ವ-|
ರುರೆ ನೋಂಪದಿಂ ಸೇವಿಸುವುದು ಜೀವ-ಸಮೂಹ ಮಹುದು ಜಂಗಮ ವರ್ಗವು; ||

ಚೇತನಕೆ ಜಂಗಮಂ ಲಿಂಗಮೆಂದೆರಡು ಪೆಸ-|
ರೋತು ಬಂದಿಹುದು ಕಲ್ಮಣ್ಣು ಕಟ್ಟಿಗೆಗಳೊಳ- |
ಗ್ಯಾತ ಚೈತನ್ಯಮದೆ ಲಿಂಗಮೆಂದೆನಿಸುವುದು ಸ್ಥಾವರವೆನಿಪ್ಪ ನಾಮಂ- |
ಖ್ಯಾತವಾಗಿಹುದದಕೆ ತದ್ವಸ್ತುಗಳ್ ಸ್ಥಿರಮುದಂ |
ಸಾತಿಶಯದಿಂ ಪಡೆವುದಾ ಜಂಗಮಾಖ್ಯೆಯನ |
ಖ್ಯಾತಿಯಿಂ ಪಡೆಯುತಿಹುದಾ ಪ್ರಾಣಿ-ಚಯದಲ್ಲಿ ಮಾನವನೆ ಶ್ರೇಷ್ಠನಹನು ||೧೫||

ಅವರಲ್ಲಿ ಲಿಂಗಧಾರಿಯು ಮತ್ತೆ ಮಾಹೇಶ-|
ನಿವರಲ್ಲಿ ಗುರುವು ಮೇಣಲ್ಲಿ ಶಿವಯೋಗಿಯುಂ|
ತವೆ ಯತಿಕಸಿನರುಗಳ್ ದೊರೆಯದಿರ್ದೊಡನಾಥ ದೀನಾಂಗ ವಿಕಲರ್ಕಳಂ||
ಭುವನದೊಳಗನ್ನ-ವಸ್ತ್ರಂಗಳಿಂ ತಣಿಸಿದೊಡೆ, |
ಜವದೆ ನಿಮ್ಮಯ ಪಾಪಮದು ತೊಲಗುತಿಹುದರಿಯೆ, |
ಶಿವ-ಕೃಪೆಯು ನಿಮಗಪ್ಪುದೈ; ಪೋಗಿರೆಂದೊರೆದು ನಡೆದಿಹಂ ಶಿವಪೂಜೆಗೆ; ||೧೬||

ನಾಡೆ ಕೊಂಡಾಡುತ್ತೆ ಮಾಡಳ್ಕಿಯಾ ದ್ವಿಜರ್|
ಮಾಡಿದರ್ ಹರ್ಷದಿಂ ಪಾಡುತ್ತೆ ಸರ್ವರುರೆ|
ಕೂಡಿ ಸಂಕಲ್ಪವಂ ಬಂದೂರ್ಗೆ ನಡೆಯಿಸಿದರುರು ಚರಾರಾಧನೆಯನು; ||
ಮಾಡಿದಾರಾಧನೆಯು ನಾಡಲ್ಲಿ ಕೀರ್ತಿಯಂ |
ಕೂಡೆಯದು ಬೆಳೆಸಿಹುದು ಮಾಡುತ್ತಿರುವ ಕರ್ಮ- |
ದೀಡನುರೆ ಕೆಡಿಸಿಹುದು; ಮೂಡಿರ್ಪದಚ್ಚರಿಯು ನಿಂದಕರ ಸೊಲ್ಲಡಗಿಸಿ; ||೧೭||



* *

ಮತ್ತೊರೆವೆನಿನ್ನೊಂದು ಲೀಲೆಯಂ ಕೇಳಿರೈ; |
ಸತ್ತಮಂ ಮುಂಬೈಯೊಳಿರುತಿರ್ದನಾವಗಂ ।
ಚಿತ್ತಮರಿಯಲ್ಕವಂ ತೋಟಮಂ ಗೈದಿರ್ದನತ್ಯರ್ಥ ನಾಮಕಸಿವಂ ॥
ಬಿತ್ತರಮದಾಗಿರ್ಪದುಪವನಮುದಕ್ಕಾಗಿ |
ಉತ್ತಮಂ ವ್ಯಯಿಸದಲೆ ಬೆಳೆಸಿರ್ದನಲ್ಲಲ್ಲಿ |
ಸೂತ್ತಮಂ ಗಿಡಗಳಂ ಬೇಡಿ ತಂದವುಗಳಂ ಬೆಳೆಸಿದಂ ನಾಂಟಸುತ್ತೆ. ||೧೮||

ನೆರೆಹೊರೆಯ ಮನೆಗಳ ಸಕಲ ಬಾಲಕರು ಬಂದು |
ಸರಸದಿಂದಲ್ಲಿ ಯಾಡುತಲಿರ್ದರಾಗಾಗ |
ಕರಮಿಚ್ಛೆಯಾಟಂಗಳಿಂ ಗಿಡಂಗಳಿಗಾವ ತೊಂದರೆಯನೆಸಗದಂತೆ ॥
ಉರು ನಾಗರಿಕರ ಸುತರವರಾದರದರಿಂದೆ |
ನೆರೆದಿಟ್ಟರಾದಡುಂ ಶ್ರೀಮಂತಗವರಲ್ಲಿ |
ಯಿರುವದೇ ಬೇಡಮಾಗಿರ್ದುದಾದುದದರಿಂದಲುಪವನದ ಬಾಗಿಲಮನೆ ||೧೯||

ತಾನೆಯದನಿಕ್ಕುತಂ ಮುದ್ರಿಸುತೆ ಬೀಗಮಂ |
ಮಾನಿಯಾಗಳ್ ನಲಿದನತ್ಯರ್ಥನತಿಮುದದೆ |
ದೀನ ಬಾಲರ್ಗದುವೆ ದುಃಖಮಂ ನೀಡಿದುದು ತೋಂಟಮದು ಕೆಲದಿನದೊಳೆ ||
ಏನು ಪೇಳಲಿ ಸರ್ವ ತರುಲತೆಗಳೊಣಗಿಹವ ।
ನೂನಮೆನಲಾಗ ಕಳೆಗುಂದಿಹುದು ನೋಡುತ್ತೆ ।
ಜ್ಞಾನಿಯಹ ಸಿರಿವಂತನತಿ ಚಿಂತೆಗೊಳಗಾದನುಪಚಾರಮಹುದು ವ್ಯರ್ಥಂ ||೨೦||

ತೋಂಟಮದು ಪಾಳಾಗಬಾರದೆಂಬಾ ಧನಿಯು |
ಬೇಂಟದಿಂ ತನ್ನಂಗಡಿಗೆ ಬರ್ಪ ಜನತೆಯಂ ।
ನೆಂಟರಿಷ್ಟರುಪಾಯಮಂ ಕೇಳುತಿರಲವಂಗೋರ್ವ ಕನ್ನಡ ದೇಶದ ||
ಬಂಟನೊರೆದಿಹನೆಂತೆನಲ್ ಸೇಡ್ಜಿಯೇ ಕೇಳು |
ಕಂಟಕವ ಕಳೆಯುವೇಂ ಬಾಯೆನ್ನ ಸಂಗಡಂ !
ತಂಟೆಯಂ ನೀಗಿಪ ಸಮರ್ಥನಂ ತೋರ್ಪೆನೆಘುತಾತನಂ ತನ್ನೊಡನೆಯೆ ||೨೧||

ಕರೆದುಕೊಂಡೈದಿದಂ ಪೂವಳ್ಳಿ ತೋಟಕ್ಕೆ; ।
ಮೆರೆವ ತಿಳಿನೀರಿಂದೆ ಕಂಗೊಳಿಪ ಹೊಂಡಕ್ಕೆ ।
ನೆರೆ ಶೋಭಿಸುತೆ ಮನಕೆ ಮಂಗಲಮನೀವ ಬಿಲ್ವವನಕ್ಕೆ ಗನಿಯ ಸ್ಥಲಕೆ ॥
ಕರೆದೊಯ್ಯುತಲ್ಲೆಸೆಯುವಾ ಲತಾಸದನಕ್ಕೆ ।
ಸರಿಯಾಗಿ ಕುಳ್ಳಿರಿಸಿ ವೇದಿಕೆಯ ತಾಣಕ್ಕೆ ।
ಕರವೆಸೆವ ಕರ್ತನಹ ಹುಚ್ಚೇಶನುರು ಲೀಲೆಗಳ ಪೇಳಿದಂ ಸೇಡ್ಜಿಗೆ ॥೨೨॥

ಮೆರೆವ ಸುಂದರ ನಂದನದ ಶೋಭೆಯಂ ನೋಡಿ ।
ನೆರೆಯಲ್ಲಿಗಾಗಾಗ ಮೋದದಿಂ ಬಂದಾಡಿ ।
ನೆರೆದಲ್ಲಿ ಪೋಗುವಾ ಬಾಲವೃಂದವ ಮೂಡಿದಾಶ್ಚರ್ಯದಿಂ ದಿಟ್ಟಿಸಿ ॥
ಬೆರೆದ ಮಿತ್ರಂ ತನಗೆ ಗುರುಲೀಲೆಗಳ ಪಾಡಿ, ।
ಯುರೆ ಸಂತಸದೆ ಪೇಳ್ದುದಂ ಕೇಳಿ ನಲಿದಾಡಿ, ।
ಯುರು ವಿಸ್ಮಯವ ಕಳೆದುಕೊಂಡಂ ಸ್ತುತಿಯ ಮಾಡುತಂ ಗೆಳೆಯನೊಡನಿಂತವಂ;॥

"ಚಾರಯ್ಯ ಗುರುವೆ ಹುಚ್ಚಯ್ಯ ದರ್ಶನವನಿ-।
ತ್ತೊರಂತೆಯೆನ್ನ ತೋಟವ ರಕ್ಷಿಸೈ ಬಿಡದೆ ।
ಸಾರುತ್ತಲೆನ್ನ ಸಂಶಯವ ಕಳೆಯೈ ತಂದೆ ಈ ತೋಟವಮಂ ನೋಡು ತಾಂ"॥
ಸಾರಿರ್ಪುದೆನಗಧಿಕ ವಿಸ್ಮಯಂ ಬಾಲಕರ್ ।
ಸೇರುತ್ತಲಾಟವಾಡುವ ದೃಶ್ಯಮಂ ಕಂಡು, ।
ಮೀರಿರ್ಪುದೆನ್ನಚ್ಚರಿಯದೆಂದು ಗುಜರಾಥ ಭಾಷೆಯೋಳ್ ಕರೆದು ನುತಿಪಂ ॥೨೪॥

"ಸಚ್ಚಿದಾನಂದಾತ್ಮ, ಹುಚ್ಚೇಶ, ಸರ್ವೇಶ,-।
ತಚ್ಚರಾಚರರೂಪ, ಹುಚ್ಚೇಶ, ನಿಖಿಳೇಶ, ।
ವಿಚ್ಚಿರಾತ್ಮಕ, ದೇವ, ಹುಚ್ಚೇಶ, ಸಕಲೇಶ, ಭಕ್ತಭಾವುಕ-ಲೀಲ ಭೋ ॥
ಸ್ವಚ್ಛ- ಹೃದಯಾವಾಸ, ಹುಚ್ಚೇಶ, ವಿಶ್ವೇಶ, ।
ತುಚ್ಛಭವನಾಶಕರ, ಹುಚ್ಚೇಶ, ಜಗದೀಶ,।
ತಚ್ಛಿವ, ಗುಣಪ್ರಚಯ, ಹುಚ್ಚೇಶ, ಲೋಕೇಶ, ಸಲಹು; ನಿರ್ಗುಣ,
ಮಹೇಶ, ॥೨೫॥

ಇಂತು ಪ್ರಾರ್ಥಿಸಿ ನುತಿಪ ಭಕ್ತನ ಧ್ವನಿಯು ಕೇಳ್ದು ।
ಕಾಂತ ಗುರುಸಿದ್ಧೇಶನಾಗ ದಯ ಮಾಡಿಸುತ |
ಸ್ವಾಂತದೊಳ್ ಮೋದಿಸುತೆ ಗುಜರಾಥ ಭಾಷೆಯೊಳ್ ಮಾತನಾಡಿದನಂದೆನೆ
ಸಂತಸ ದೊಳದರರ್ಥಮಂ ಕನ್ನಡದೆ ಪೇಳ್ದ-|
ನಾಂತು ತತ್ಕೃಪೆಯನಾನೇನಿಪ್ಪೆ ಸೇಠ್ಜಿ ನೀಂ |
ಚಿಂತಿಸುವದೇತಕ್ಕೆ ಯೆಮ್ಮ ಮನೆಯೊಳಗಿರುವ ಬಾಲಕರ ದುಃಖದಿಂದೆ ||೨೬||

ನಿನ್ನ ತೋಟಂ ತಿಳಿಯೆ ಪಾಳಾಗುತಿಹುದಯ್ಯ |
ಬನ್ನ ಮಡಗುವುಗವರ್ಗಾಡಲನುಕೂಲತೆಯ-|
ನಿನ್ನು ನೀನೊದಗಿಸಲ್ ಮೊದಲಂತೆ ಸೊಗಯಿಪುದು ಮುಕ್ತಳಾನಂದಮರಿಯೆ; ||
ಚನ್ನಮೆನೆ ದೇವರ್ಗೆ ಪ್ರಿಯಮಹುದು ಭಾವಿಸಲ್ |
ಭಿನ್ನವಿಲ್ಲದೆ ತಿಳಿ; ಮಹಾದೇವರೊಳಗಿಹಂ, |
ಸನ್ನುತಂ ನೀನಪ್ಪೆ ಬಡವರ್ಗನಾಥರ್ಗೆ ದಾನಮಂ ಮಾಡು ನಿರುತಂ ||೨೭||

ಧನಲೋಭನಮಂ ತ್ಯಜಿಸು, ದೇವನಿತ್ತಿಹನದಂ; |
ಧನವ ಧರ್ಮಕ್ಕಾಗಿ ನಿತ್ಯಮುಪಯೋಗಿಸೈ, ।
ಘನ ಕೀರ್ತಿಯಂ ಪಡೆವೆ, ಸಿರಿವಂತನಪ್ಪೆ ನೀ ಮೊದಲಿಂದಧಿಕಮಾಗಿ, ||
ಘನ ಸುಕೃತದಿಂ ಮಿತ್ರನೊಳ್ಪಿತಂ ದೊರೆದಿಹಂ |
ನಿನಗಿಂತ ಸುಕೃತಿಗಳ್ ಲೋಕದೊಳಗಿನ್ನಾರು ।
ವಿನಯ ಸಂಪನ್ನ ಪತ್ನೀಪುತ್ರರೊಡವೆರದು ಪುಣ್ಯಮಂ ಪಡೆ ದಾನದಿಂ ||೨೮||

ಎಂದೊರೆದು ಪರಸುತ್ತೆ ತನ್ಮಿತ್ರನಂ ನೋಡಿ, |
ಕಂದ ನಿನ್ನಯಬಂಟನೆಂಬ ನಾಮಂ ನಿನಗೆ |
ಯೆಂದು ಸಾರ್ಥಕಮಾಯಿತ್ತೈ ಸದಾ ಜನತೆಗುಪಕೃತಿಯನೆಸಗುತ್ತಿರುವದು||
ಸಂದೆಗವ ಬಿಟ್ಟು ತಿಳಿ; ಬಂಟನೆಂದೊಡೆವೀರ-|
ನೆಂದಿನಿಂದಲೊ ನೈಜ ವೀರರೆಲ್ಲರ್ ಮಹದ-|
ಮಂದ ಕೀರ್ತಿಯು ಪರೋಪಕೃತಿಯಿಂ ಪಡೆದಿಹರ್ ನಿನಗೆ ಪೇಳುವದೇನಿದೆ? ||೨೯||

ಇಂತೆನುತಲವನನುಂ ಪರಸುತ್ತೆ ಗವಿಯಲ್ಲಿ |
ಸಂತಸದೆ ಪೋಗುತಿರೆ ವಂದಿಸುತಲವರೀರ್ವ- |
ರಂತರಾಂತರ-ನವನವ ಲೀಲೆಯಂ ಬಣ್ಣಿಸುತೆ ಮುಂಬೈಗೆ ಪೋದರೊಲಿದು ||
ಶಾಂತಿಯಿಂ ನೇಷ್ಟ್ರಿಯಾ ತೋಂಟಮಂ ನೋಡಲಂತೆ |
ಭ್ರಾಂತಿಯಿಲ್ಲದೆ ಬಾಲರಾಟಗನುಕೂಲಿಸಲ್ |
ಶಾಂತನಪ್ಪಣೆಯಂತೆ ರಾರಾಜಿಸಿತು ನೋಡಲಿಗಂ ಸುಂದರವಾದಾಗುತೆ; ||೩೦||

ಈ ಲೀಲೆ ಪಸರಿಸುತೆ ಮುಂಬೈಯೊಳೆಸೆಯುತಿರ |
ಲೋಲಾಡುತನುನೇಕರಾ ಗುರುಸ್ಥಾನಕ್ಕೆ |
ಶೀಲಾತ್ಮರಾಗುತಿರ್ದರ್ ಸಂಪದವ ಪಡೆದು ಭಕ್ತರಾದರ್ ಪೇಳಲೇಂ! ||
ಓಲಾಡಿ ಬಸವಪ್ಪ ಕಟ್ಟಿ ಮೊದಲಾದವರ್ |
ಕಾಲಕ್ಕೆ ಸರಿಯಾದ ತಜ್ಞ ನಸಹಾಯದಿಂ |
ಮೇಲಾಪಡರುತೆ ಬೆಳೆಸಿಕೊಳ್ಳುತ್ತ ವ್ಯಾಪಾರವುಂ ಬೆಳೆದುದಿವರೊರ್ ಜಸಂ ||೩೧||

ಪೂವಳ್ಳಿಯೆಂಬ ಪೆಸರಾಗ ಬದಲಾಗುತ್ತೆ |
ಭಾವಜ್ಞರೊಲಿದು ಹೂಬಳ್ಳಿಯೆಂದಾಪ್ರಾಗೆ |
ತಾವಾಗ ಕರೆಯಲಾಗಿಹರದೇ ಪೆಸರಿಂದಲಾನಾದುದುಂ ಕರೆವೆನು ||
ದೇವೇಡ್ಯವಹ ಹುಚ್ಚ ಪೆಸರ ಮೊದಲಕ್ಷರಂ |
ತೀವಿಪ್ರುದಿದು ಮೊದಲ್ ಹೂಬಳ್ಳಿ ಪೆಸರೊಳಾ |
ಜಾವಕ್ಕೆದೊಂದು ಗುರುಸಿದ್ಧನುದು ಲೀಲೆಯಾಗಿಯೆ ತೋರಿತದನರಿಯುತೆ; ||೩೨||

ಗುರುವಿನಾ ಪೆಸರ ಮೊದಲಕ್ಷರವುದೀಪ್ರಾಗೆ |
ದೊರೆತಾ ಕ್ಷಣದೆ ಬೆಳೆಯಲಾದುದಾಗಳ್ ತಾನೆ |
ಯುರು ಕಲಾವಿವಿಧೋದ್ಯಮಂಗಳಿಂ ಜೀವಿಸುವ ಜನರಿಗಾವಾಸವಾಗಿ ||
ಗುರುವರನ ನಿತ್ಯ ದರ್ಶನವಿಲ್ಲಿ ನಲಿವಗೆ |
ದೊರೆದುದರ ಫಲವಾಗಿ ಲಾಭವುದ್ಯೋಗದೊಳ್ |
ನೆರೆ ಲಭಿಸಿ ಶಾಂತಿಯೊದಗಿದುದಕ್ಕದಾಗಳುಂ ಮೂಲ ಕಾರಣವಾದುದು ||೩೩||

* *

ಈ ಪರಿಯೊಳಖಿಲರ್ಗೆ ಗುರುಸಿದ್ಧನಾ ಕೃಪೆಯು |
ಲೋಪಮಿಲ್ಲದ ವಿಭವಮಂ ನೀಡುತಿಹುದೆಂಬ |
ದೀಪಿಸುವ ವಿಶ್ವಾಸವದು ವರ್ಧಿಸುತ್ತಿರಲ್ ಲೀಲೆ ಮತ್ತೊಂದೆಸೆದುದು; ||
ಪಾಪ-ರಹಿತರದೇನೆನಲ್ ಪೇಳ್ವೆನಾಲಿಪುದು |
ವ್ಯಾಪಿಸುತ್ತಿಹುದೊರ್ವೆ ಬೀಡ್ವಾಳ ಗ್ರಾಮದೊಳ್ |
ರೂಪಿಸುತಲಿಲಿಯ ಸಾವಂ 'ಪ್ಲೇಗರೋಗ'ವಿದು ಜನತೆಯೊಳ್ ಪರ್ಬುತಿಹುದು ||

ಊರ ಬಿಟ್ಟನ್ಯೆಲ್ಲಿ ವಾಸಿಸಲ್ ವೇಳ್ಕು ಸಲೆ |
ಭೂರಿ ಯೋಗ್ಯ ಸ್ಥಾನಮೆಂದೊಡಾ ಬಿಲ್ವವನ- |
ಮೂರವರು ಯೋಚಿಸುತಲಿಂತು ಗುರ್ವಾಜ್ಞೆಯಂ ಪಡೆಯಲೈದಿದರಲ್ಲಿಗೆ ||
ಸಾರಪಿದಸಿದನಂದು ಲೀಲೆಯೊಳಿ ಪೊರೆಗೈದಿ- |
ತೋರುವಾ ಸುಮವನದೊಳಲೆದಾಡುತಿಹನಾಗ |
ಸೇರಿದರ್ ತಜ್ಜನರ್ ಮೂಷಕಂಗಳ್ ವಿಶೇಷತೆಯೊಳಾಯೆಡೆಯಲ್ಲಿಯೆ ||೩೫||

ತಿರುಗಾಡುತಿರ್ದ‌ವದನವಲೋಕಿಸುತ್ತವರ್ |
ಪರಮಂಗೆ ವಂದಿಸುತೆ ವಿಸ್ಮಯಿಸಿ ಸುಮ್ಮನಿರೆ |
ಹರ-ಸಮಂ ಬೀಡ್ವಾಳ ಜನರ ನೋಡುತ್ತೊರೆದನೆಂತೆನೆ "ಲೆಲೈ ಭಕ್ತರೆ ||
ಇರಲಿಲ್ಲಿ ನೀವೆನ್ನ ಕೇಳಲೈದಿಪಿರೈ |
ನೆರೆ ನಿಮ್ಮ ಠಾಣಕ್ಕೆ ನೀವೈದಲೆಮ್ಮನೇ-|
ಕರೆದು ಕೇಳುವಿರಯ್ಯೆಯೆ"ನಲೆಲ್ಲರೆರಗುತೊಯ್ಯನೆ ನುಡಿದರೆಂತೆನಲ್ಕೆ ||೩೬||

"ಭೋ ಗುರುವೆ, ಇಲಿಯ ಪತನವ ಕಂಡು ಮುಂದೆ ಬರು- |
ವಾ ಗುರುಳೆ ಬೇನೆಗಂಜುತ್ತಿಲ್ಲಿ ಬಂದಿರಲ್ |
ರಾಗದಿಂ ತಮ್ಮಂ ವಿಚಾರಿಸಲ್ ಬಂದು ನೋಡಲ್ ಕಿಲ್ಲಿಮೂಷಕಗಳು ||
ರೋಗ-ಭಯಮಂ ಪುಟ್ಟಿಸುವು ತಾವೆಯದರಿಂದ-|
ಲೀಗಳಂಜಿಕೆಯ ಪರಿಹಾರ-ಸದುಪಾಯಮಂ |
ಯೋಗಿವರ್ಯನೆ ಪೇಳಿ ಕರುಣೆಯಿಂ ರಕ್ಷಿಪುದೆನುತ್ತೆ, ಬೇಡಿದರೆರಗುತೆ; ||೩೭||

ಭಕ್ತ ಚಿಂತನೆಯನರಿದು ಪೇಳ್ದನೆಂತೆನೆ"ಲಯ್ಯ |
ಶಕ್ತನಾ ಶಿವನಿದರ ಪರಿಹಾರಕಾಗಳುಂ |
ವ್ಯಕ್ತಮಿದುಮಿದನೆ ಸೂಚಿಸುವದೀ ಬಿಲ್ವವನಮಿದರ ದರ್ಶನದಿಂದಲೆ ||
ಸಕ್ತ ರೋಗಂಗಳವಿನಾಶಮುಪ್ಪುದು ತಿಳಿಯೆ |
ಯುಕ್ತರಿದರಿಂ ಶಿವನನರ್ಚಿಸುತೆ, ಮೆಚ್ಚಿಸುತೆ |
ಸೂಕ್ತ ಸಿದ್ಧಿಯ ಪಡೆದಿಹರ್ ಪೇಳ್ವುದೇನಿಲ್ಲಿ ಯುದಕ-ಮೃತ್ತಿಕೆಗಳಿಂದೆ ||೩೮||

ಶಿವನನರ್ಚಿಸಿದಡುಂ ಬಿಲ್ವಾರ್ಪಣದ ಫಲಂ |
ಸುವಿವೇಕದಿಂ ತಿಳಿಯಲಿದರರಿವು ಸಿಮುಗಹುದು; |
ತವೆ ಒಯ್ಯುತೀ ಕೊಂಡದುರು ಜಲದೊಳೀ ಮಣ್ಣಸರಿ ಬೆರಸಿ ಮನೆಗಳಲ್ಲಿ ||
ಸ್ತವನ-ಪೂರ್ವಕಮಾಗಿ ಯೆರಚಿದೊಡೆ ಸುಖಮುಪ್ಪ- |
ದವನಿಯೊಳ್ ಶಾಸ್ತ್ರಂಗಳಲ್ಲಿ ಬಿಲ್ವದ ಮಹಿಮೆ |
ಯವಿರತಂ ಬಣ್ಣಿಸಲ್ ಪಟ್ಟಹುದು ದಿಟಮಿದಂ ಸಕಲ ಸಿದ್ಧಿಯನೀವುದು|| ೩೯||

ಮತ್ತಿದಕೆ ಶ್ರೀವೃಕ್ಷಮೆಂಬ ಪೆಸರೊಂದಿಹುದು; |
ಸತ್ತಮರೆ ಶ್ರೀ ದೇವಿಯುರು ಕುಚದೆ ಜನಿಸಿಹುದೆ |
ವಿತ್ತಮರ್ ನಂಬಿರ್ಪ ಹೇತುವದರಿಂ ಕಥೆಯಿದೆಂದಿಗುಂ ಸಟೆಯಲ್ಲವು ||
ಚಿತ್ತವಿಟ್ಟಂಬುಜ-ಸಹಸ್ರದಿಂ ಪೂಜಿಪಾ |
ವುತ್ತಮ ಮತವಿಡಿಯುಲೋರ್ಮೆಯೊಂದಬ್ಜಕೀ |
ಮೊತ್ತದೊಳ್ ಕೊರತೆಯಿರಲರ್ಪಿಸಿದಳಾಕೆ ಮೊಲೆಯಂ ತೆಗೆದು ಶಿವಲಿಂಗಕೆ ||

ಶಿವನಾಗ ಪ್ರತ್ಯಕ್ಷನಾಗುತವಳಿಚ್ಛೆಯಂ- |
ತವನಿಯೊಳ್ ತತ್ ಕುಚವ ಬಿಲ್ವವೃಕ್ಷಮನೆಸಗು- |
ತವಳಿಗಿಟ್ಟಡಗಿಸಿದ ಕಮಲಮಂ ಕುಚವೆಸಗಿ ಮಂಗಲಾಂಗಿಯನೆಸಗಿದಂ ||
ಭುವನಕ್ಕೆ ಸಿರಿಯಾಗಿ ಶ್ರೀನಾಮಮಂ ಪಡೆದ |
ಸವಿ ನೆನಹಿನೀ ಬಿಲ್ವ ತರುವು ವೈಭವದಿರವು |
ಕವಿದ ರುಜಮಂ ಕಳೆವುದೊಂದು ದಳಮಂ ಕೊಂಡು ನೀರೊಳಿದ್ದ ರಚಿರಯ್ಯ";||೪೧||

ಎಂದು ಗವಿಯೊಳ್ ಪೊಕ್ಕು ಶಿವಪೂಜೆಯೊಳ್ ತೊಡಗ- |
ಲಂದು ಜನರಾ ಬಿಲ್ವ-ಪತ್ರಂಗಳಂ ಕೊಳ್ಳ- |
ತಂದದಿಂ ನೀರೊಳಿದ್ದು ತಲೆರಚಿ, ಮನೆಗಳಂ ಶುದ್ಧಮಾಗಿಸಿ ಕೊಂಡರು; ||
ಛಂದದಿಂದಲ್ಲಿರ್ಪ ಮಣ್ಣನೊಯ್ಯುತೆ ಕೆಲರ್ |
ಸಂದಿಸುತೆ ಜಲದೊಳದನೆರಚುತ್ತೆ ಗೃಹಗಳೊಳ್ |
ಕುಂದದಲೆ ದೋಷಮಂ ಕಳೆದುಕೊಂಡರ್ ಕೆಲಬರಾ ಪೊಂಡದುದಕದಿಂದೆ; ||೪೩||

ಇಂತುಮಾಯಾಮೆ ಗುರುಳಿ-ಬೇನೆಯಂ ಕಳೆದು ಕೊಂ- |
ಡಾಂತು ಸಂತಸವ; "ಗುರುಸಿದ್ಧ"ನಂ ಸ್ಮರಿಸಿದರ್; |
"ಕಾಂತ, ಮುಕ್ತೀಶ, ಶಕ್ತೀಶ, ಸಜ್ಜನಕೋಶ, ಭಕ್ತಭವನಾಶ" ಯೆನುತೆ |
ಶಾಂತನೀ ಸ್ತುತಿಗೆ ಮೆಚ್ಚದಲಿ ಸರ್ವ ಜನರ್ಗೆ |
ಸಂತಸಂ ದೊರೆದುದವರುರು ಭಕ್ತಿಯಿಂದೆಂದು |
ಸ್ವಾಂತದೊಳ್ ಹಿಗ್ಗಿದಂ ಶ್ರೀ ಜಗದ್ಗುರುವೊಲಿದು "ಮುಚ್ಚ"
ನಾಮಕನನುದಿನಂ ||

ವೀರೇಶ-ಪುಣ್ಯಾಶ್ರಮಂ ಗದುಗಿನೊಳ್ ಮೆರೆವು- |
ದೋರಂತೆ ಶೋಭಿಸುವುದಲ್ಲಿ ಪಂಚಾಕ್ಷರನು- |
ದಾರ ಸ್ವ ಗುರುವರನ ಯೋಗದ ಸಮಾಧಿಯಿದೆ; ಕುಳಿತಲ್ಲಿ ಗುರು-ಕರುಣೆಯೊಳ್ ||
ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ |
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಒರೆದ |
ವಿಾರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣದೊಳ್ ಸಂಧಿ ಆರು ||೪೪||

ಅಂತು ಸಂಧಿ ೬ಕ್ಕಂ, ಪದಂಗಳು ನಾಲ್ವತ್ತನಾಲ್ಕಕ್ಕಂ;

ಇಂತು, ಒಟ್ಟು ಪದಂಗಳು ೨೬೧ ಕ್ಕಂ;

— ಮಂಗಲಂ —

॥ ಶ್ರೀ ಗುರುಬಸವ ಲಿಂಗಾಯ ನಮಃ ॥

# ಏಳನೆಯ ಸಂಧಿ





॥ ಸೂಚನೆ ॥

ಕೂಪಮಂ ತುಂಬಿಸಿದನತಿವೃಷ್ಟಿಯಂ ತಡೆದ; ।
ಕೋಶಮಂ ಬಿಡಿಸಿದಂ; ಗರತಿಯಂ ಸಲುಹಿದಂ; ।
ರೂಪಮಂ ಬದಲಿಸಿದನುರು ವಿವಾಹವ ಗೈದನವಿವೇಕಿಯಂ ಪೊರೆದನು; ॥

[ಸಂಧಿ ಪ್ರಾರ್ಥನಾ-ಪದ್ಯ]

ಯಾದವನ ತಂಗಿಯಾಳ್ದನ ತಪದ ಗರ್ವವ ವಿ- ।
ನೋದದಿಂ ಬಿಡಿಸಲವನಣ್ಣನೀಕ್ಷಿಸಿ, ಮೇಲೆ ।
ಮೋದದಿಂ ಗದೆಯ ತೂರುತ್ತೆ ನುತಿಸುತಿರಲ್ಕೆ ಬಂದು ಪಿಡಿದುಳುಹಿಕೊಂಡೆ ।
ಮೇದಿನಿಯೊಳಿದು ಸುಪ್ರಸಿದ್ಧಂ ಶಿವನೆ ತಿಳಿದು ।
ವಾದಿಸುವ ಯೆನ್ನನೇತಕೆ ಸಲಹಲೊಲ್ಲೆ ಪೇಳ್ ।
ವೇದನುತ, ನಿಗಮನುತ, ಮೌನಿವರ್ಯ-ಸ್ತುತನೆ ನಿನಗೇನು ಗೈದಿರುವೆನಾಂ ? ॥೧॥

ದಗದಗಿಸಿ ಮಿಗಿಮಿಗಿಸಿ ನರರ ವಸ್ತ್ರಂಗಳಂ |
ತೆಗೆ ತೆಗಿಸಿ ಜಿಗಿಜಗಿಸಿ ನೀರೊಳ್ ಮುಳುಂಗಿಸುತ |
ಜುಗುಜುಗಿಸಿ ಬಗೆಬಗಿಸಿ ತಪತಪಿಸುತ್ತೇರುತಿಹ ಬೇಸಿಗೆಯ ಬಿಸಿಲತಾಪಂ ||
ಆಗಿಯಗಿಸಿ ಲಗಲಗಿಸಿ ನೆರಳ್ಗಖಿಳ ಜೀವಿಗಳ |
ಪುಗ ಪುಗಿಸಿ ನೆಗೆನೆಗಿಸಿ ಬರ್ಪ ಬರವಂ ತಡಯೆ |
ಸೊಗ ಸೊಗಸಿ ಜಗಜಗಿಸಿ ನೆರೆಮೆರೆವ ತಾಪಸರ್ಗಾದಡುಂ ಶಕ್ಯಮಹುದೆ ? ||೨||

ಬೇಸಿಗೆಯ ಕಾಲಪುರುಷಂ ಸರ್ವ ಜೀವರಂ |
ಗಾಸಿಗೊಳಿಪಂ, ಮರಣ ಸದೃಶ ತಾಪವ ನೀಡಿ; |
ವಾಸಿಸುತೆ ಜೀವಿಗಳ್ ತಂಪಾದ ಸ್ಥಾನನೋಳ್ ನೀಗುವರ್ ಸಂತಾಪವ ||
ಲೇಸಿಗಿಚ್ಛಿಪ ಮನುಜನವರಂತೆ ಗುರುವರನ- |
ನಾಸರಿಸಿ ಭವ ದುಃಖಮಂ ಕಳೆದು ಕೊಳ್ಳುವಂ |
ಭಾಸುರ ಜ್ಞಾನಮಂ ಪಡೆಯುವಂ ಕಾಣುತ್ತೆ ಪ್ರಾಣಿಗಳ ಪರಿತಾಪವ ||೩||

ಆ ನಿದಾಘಾತ್ಯಾತಪಕೆ ಸರ್ವ ಜಲಮೊಣಗಲ್ಕೆ |
ಮಾನಿತ ತಪಸ್ಥಾನಕ್ಕೈದುತ್ತೆ ಜನರೊರ್ಮೆ |
ಜ್ಞಾನನಿಧಿ ಗುರುಸಿದ್ಧನಂಘ್ರಿಯಂ ಕಾಣುತ್ತೆ ನಮಿಸುತವನಾಜ್ಞೆಯಿಂದೆ ||
ಸ್ವಾನುರಾಗದೆ ಕುಳಿತು ಸನ್ನಿಧಿಯೊಳಿಂತವರ- |
ನೂನ ಭಕ್ತಿಯು ಫಲಿಸೆ ಪ್ರಶ್ನಿಸಿದರಾಗೊಲಿದು |
ದೀನನಾಥನೆ, ಯೆಮಗೆ ನೀರಿನುರೆ ಕೊರತೆಯಿದೆ; ಕೂಪಗಳ್ ಬತ್ತಿರುವವು ||೪||

ಮಕ್ಕಳಿಂದರಿಯುತ್ತಲೆಮ್ಮನುದ್ಧರಿಪುದೈ; |
ಸಿಕ್ಕಲಾರದೆ ಜಲಮನಿಲ್ಲಿಂದಲೊಯ್ಯುವೆವು |
ಮಿಕ್ಕಿದುದ್ಯೋಗಮಾಗಿರ್ಪುದಿದು ಬಡವರಾವ್ ಜೀವನೋದ್ಯಮಕೆ ಸಮಯಂ ||
ಸಿಕ್ಕದಾಗಿದೆ, ತಿಳಿದುಪಾಯಂಗಳಂ ಮಾಡಿ, |
ಮಿಕ್ಕಿಹುದರಿಂ ನಿನ್ನ ಸನ್ನಿಧಿಗೆ ಬಂದಿರುವೆ |
ವಕ್ಕರೆಯೊಳೆಮ್ಮನೀಗಳ್ ಸಲಹು, ಜಲವೀಯುತೆಮ್ಮ ಕೂಪಂಗಳಲ್ಲಿ; ||೫||

ಗುರುಸಿದ್ಧನೀ ಮಾತನಾಲಿಸುತೆ ನುಡಿದನಿಂ-।
ತರಿಯಿರೈ "ಲಿಂಗದೇವನ ಕ್ಷೋಭೆಯಿದು, ನಿಮ್ಮ ।
ಕೊರಳಲ್ಲಿ ಲಿಂಗವಿಲ್ಲದೆ, ಲಿಂಗವಂತರೆಂದುರೆ ಪೇಳಿಕೊಳುತಿರ್ಪಿರಿ, ॥
ನೆರೆ ನೀವು ನಿಮ್ಮಯ ಕುಟುಂಬದವರೆಲ್ಲರುಂ ।
ಸರಿಯೆನಲ್ಕೆಂದೆಂದುಮಗಲದಂತಿರೆ ಧರಿಸಿ ।
ಹರನ ಕೃಪೆಯಂ ಪಡೆಯೆ, ಕೂಪಂಗಳೊಳ್ ಜಲಂ ತಾನಾಗಿಯೇ ಬರ್ಪುದು ॥೬॥

ಸಲುವ ಗುರುವಿಂದಿಷ್ಟ ಲಿಂಗವಂ ಪಡೆದಿರ್ಪಿ-।
ರೊಲಿದಗಲದಂತೆ ಧರಿಸುವೆವೆಂದು ವಚನ ವಿ- ।
ತ್ತಲೆಯುತ್ತೆ ಕಂಡ ಕಂಡಲ್ಪ ದೇವರ್ಕಳಿಗೆ ನಡೆದುಕೊಳ್ಳುವಿರಿ ನೀವೆ ॥
ಸಲೆ ಲಿಂಗವಂ ತೊರೆದು ಗುರುವಿನಾಜ್ಞೆಯ ಮರೆದು, ।
ನಿಲಿತ ಧರ್ಮವ ಜರೆದು ಪರಮತೀಯರ ಕರೆದು ।
ಬಲಿದ ಕಾಣಿಕೆಯನೀಯುತಲಿರ್ಪಿರದಕಾಗಿ ಯೀ ಕ್ಷೋಭವರಿಯಿರಯ್ಯ" ॥೭॥

ಇದಕೊಂದು ಕಥೆಯುಂಟು; ಕೇಳಿರೊರೆಯುವೆನಯ್ಯ ।
ಸದಮಲಂ ದಕ್ಷನೆಂಬುವ ಪ್ರಜಾಪತಿಯಿರ್ದ-।
ನುದಿತ ಪೆಣ್ ಮಕ್ಕಳನವಂ ಕೊಟ್ಟು ಮಾವನಾದಂ ಸರ್ವ ದೇವ-ಕುಲಕೆ ॥
ಚದುರೆಯಾಗಿಹ ಕನ್ಯೆಯಂ ಶಿವಂಗಿತ್ತಿರ್ದ-।
ನೊದವಿದಾಕೆಯ ಪೆಸರ್ ದಾಕ್ಷಾಯಿಣಿಯು ತಿಳಿಯೆ ।
ಸದುಳ್ಳ ದೇವರ್ಕಳಿಂ ಸನ್ಮಾನಮಂ ಪಡೆದು ಶಿವಲೋಕಕುಂ ಬಂದಿಹಂ ॥೮॥

ಅರಿದ ಸರ್ವವ್ಯಾಪಿಯುವನಹಂಕಾರವಂ ।
ಕರೆದು ಸನ್ಮಾನಿಸದುದಾಸೀನನಾಗಿರಲ್ ।
ನೆರೆ ಪತಿಯ ತೆರದೆ ಮಗಳುಂ ಮಾತನಾಡಿಸದೆ ತತ್ ಕೋಪಕೀಡಾಗಲು ॥
ಭರದೆ ಬಂದಾಗ ನಿಖಿಲಾಮರರ ನೆರೆಯಿಸುತೆ ।
ಹರ-ವಿರೋಧದೆ ಚರ್ಚಿಸುತೆ ಮಹಾ ಯಜ್ಞವಂ ।
ಚರಿಸುತದರಲ್ಲಿ ವಿಷ್ಣುವಿಗಗ್ರಪದವಿಯಂ ಕೊಟ್ಟನಾ ಶಿವನ ಮರೆದು ॥೯॥

ಈ ಕಾರ್ಯಮಂ ತಿಳಿಯುತೆಚ್ಚರಿಸಲೋಸುಗಮ-|
ಹಾ ಕಾಲನಾಜ್ಞೆಯ ನಿರಾಕರಿಸಿ ಬಂದು ಪಿತ-|
ನಾ ಕಲ್ಮಷದ ಕ್ರತುವ ನೋಡುತೊರೆದಿಹಳಿಂತು ದೇವತಾ-ಸಭೆಯಲ್ಲಿಯೆ ||
ಶೋಕಕ್ಕೆ ಪಕ್ಕಾಗಬೇಡ ಕೇಳೈ ತಂದೆ, |
ಶ್ರೀಕಂಠನಂ ಕರೆಯಿಸೀಗಳಾತಂಗೆ ಕೊಡು |
ಲೋಕಾಧಿಪ ಮಹೇಶ್ವರಂಗೆ ನೀನಗ್ರ-ಪದಮಂ ಮಹಾ ಭಕ್ತಿಯಿಂದೆ; ||೧೦||

ಮೆರೆವ ಕ್ಷೀರಾಬ್ಧಿಯಂ ಕಡೆದಷ್ಟ ವಿಭವಮಂ |
ಸರಿಯೆನಲ್ ಪಡೆದಡುಂ ಮಗುಳ್ದು ಕಡೆಯುತೆ ಸುರರ್ |
ನೆರೆ ಕಾಲಕೂಟಮಂ ಪಡೆದು ಸ್ವೀಕರಿಸದಲೆ ಜಗವ ಪ್ರಳಯಕ್ಕೈದಿಸಿ ||
ಉರೆ ಗೋಳಿಡುತ್ತೆ ನುತಿಸಲ್ ಬಂದು ಶಿವನಾಗ |
ಭರದೆ ತಣ್ವಿಷವ ಕುಡಿಯುತ್ತೆ, ಕಂಠದೆ ಧರಿಸಿ |
ಹರನೆಸೆದಿಹಂ 'ನೀಲಕಂಠ'ನೆಂದೆನಿಸುತ್ತೆ ಮೃತ್ಯುಂಜಯಾಖ್ಯೆಯೊಡೆದು ||೧೧||

ಈ ಚರಿತ್ರವ ಮರೆದಿರೇಕೆ ಪೇಳಿರಿ ಸುರರೆ |
ಸೂಚಿಸುವೆ ಕೇಳಿರಿನ್ನು ನಿಮ್ಮ ನೆನಿಪಿಗಾ-|
ಗೀ, ಚತುರ್ದಶ ಭುವನಕಾನೆ ದೊಡ್ಡವನೆನ್ನುತೋರ್ವನೇ ನಿಮ್ಮೊಳೆ ||
ನೀಚತನದಿಂ ಪರಸ್ಪರಮಾಗಿ ಕಾದುತಿರ-|
ಲಾ ಚರಾಚರಮರಿಯೆ ನಿಮ್ಮ ಕಣ್ ಕುಕ್ಕಿಸುತೆ |
ಖೇಚರರೆ, ತೃಣದ ರೂಪವ ತಳೆದು ನಿಮ್ಮ ಬಲಮಂ ನಿಮಗೆ ತಿಳಿಸುತ್ತಿರೆ ||೧೨||

ಸತ್ಯಮೆನೆ ತೋರ್ದನಾತಗೆ ಮಹೇಶ್ವರನೆಂಬ |
ಸ್ತುತ್ಯನಾಮಮನಿಟ್ಟು, ಕರೆದರಾತನೆ ಶಿವಂ; |
ಶ್ರುತ್ಯತೀತೌಜಸಂ ತಿಳಿದು ತಿಳಿದುಂ ನೀವೆ ವೈರಮಂ ಗಳಿಪುದೇಕೆ? |
ನಿತ್ಯ ರೂಪನ ಹರನ ಪತ್ನಿಯೀ ವಚನಮಂ |
ಪ್ರತ್ಯಗಾತ್ಮನ ನಿಂದಿಸುತೆ ನುಡಿದನೆಂತೆನ-|
ಲ್ಕತ್ಯಗಾಧ ಕ್ರೋಧದಿಂ ನೋಡಿ ಪಲ್ಗಡಿದು ಮಗಳೆಂದು ಲಕ್ಷಿಸದಲೆ ||೧೩||

ಎಲೆ ವಿಹೀನಳೆ, ಪೋಗದೇಕಿಲ್ಲಿ ಬಂದಿರುವೆ? |
ನೆಲನಿಂದಪವಿತ್ರಮಾಪುದು ನಿನ್ನಡಿಯು ಸೋಂಕಿ, |
ಸಲಿಸಿಹುದೆ ತಪ್ಪಾಯ್ತು; ನಿನ್ನನಾ ಸುಡುಗಾಡದೊಳಗಿರುವ ತಿರುಪೆಯವಗೆ ||
ಅಲೆವ ತಿರುಕನ ನೀ ಮಹಾದೇವ ಸಭೆಯಲ್ಲಿ |
ಬಲವಾಗಿ ವರ್ಣಿಸಿದೆ ಬೂದಿ ಬಡಕನನೀಗ-|
ಲೊಲಿಸುತವನಂ ನೀನೆ ತಿರ್ದಲಹುದೆಂದರಿದು ಕೊಟ್ಟೆ ನಾಂ; ಪ್ರತಿಯಾದೆ ನೀಂ; ||

ಹೀನನಿವನೆಮ್ಮೊಳಗಿರಲ್ ಯೋಗ್ಯನಲ್ಲೆಂದು |
ಮಾನನಿಧಿ ದೇವರ್ಕಳಾ ನಿನ್ನ ಗಂಡಂಗೆ ಸಲೆ |
ಸ್ವಾನುರಾಗದೆ ವಿಷವ ಕೊಟ್ಟಿರ್ದರಾದಡುಂ ನಿನ್ನ ಯೆರದಾಳಿಯ ಬಲಂ ||
ದೀನನಂ ರಕ್ಷಿಸಿತು ಭೂತಂಗಳೊಡೆಯನನ-|
ನೂನಮೆನೆ ವರ್ಣಿಸಲದಾರ್ ಮೆಚ್ಚುವರ್ ಪೋಗು |
ಮಾನಿಯಾದೆನ್ನ ಮರ್ಯಾದೆಯುಂ ಕಳೆದೆ ನೀಂ 'ಮರುಳ ಶಂಕರ' ಸಂಗದಿಂ ||೧೫||

ರುಂಡಮಾಲೆಗಳ ಕೊರಳೊಳ್ ಧರಿಸಿ ಚರ್ಮಮಂ |
ಕೊಂಡು ಪೊದೆದುಟ್ಟು ಪಾವ್ಗಳ ಸುತ್ತುತೋರೊರ್ವೆ |
ಭಂಡತನದಿಂ ದಿಗಂಬರನಾಗಿ ಚರಿಸುವಪವಿತ್ರಂಗೆ ಮಡದಿಯಾಗಿ ||
ಚಂಡತನದಿಂ ಬಂದು ಯಜ್ಞಶಾಲೆಯನಿಂದು |
ಕಂಡವರ್ ಹೇಯಪಡುವಂತೆ ಮಲಿನಂಗೊಳಿಸಿ |
ಬಂಡುಗೊಳಿಸಿದೆಯೆನ್ನ; ಮೌನದಿಂ ಪೋಗು ನೀನೊಳಿತಾಗಲಾರ"ದೆನಲು ||೧೬||

ಪತಿಯಾಜ್ಞೆಯುಂ ನೀರುತ್ಸ್ವದಿ ಪತಿನಿಂದೆಯುಂ |
ಮತಿವಂತಳಾನೆನಸಿಯುಂ ಕೇಳ್ದಿಸಿದಳಾಗಿ |
ಸತತಮೀ ಕಥೆಯು ಸ್ತ್ರೀ-ಸಮುದಾಯಕಾದರ್ಶ ಮಾಗುಳಿಯಲೀ ಶರೀರಂ ||
ಪಿತನೆನಿಪ್ಪಭಿಮಾನದೊಡನೆ ಯಜ್ಞಾಗ್ನಿಗಾ- |
ಹುತಿಯಾಗಲೆನುತೆ ಶಿವಶಿವಯೆಂದು ಯಾಗದು- |
ನ್ನತ ಕುಂಡದೊಳ್ ಪಾರ್ದಳೆಲ್ಲರರಿಯುತಿರಲ್ಕೆ ಪಾರ್ತೆಯಂ ಹರನರಿಯುತೆ ||೧೭||

ಆ ಕ್ಷಣದೆ ಕೋಪದಿಂ ಜಡೆಯ ಝಾಡಿಸುತಿರ- |
ಲ್ಕೀಕ್ಷಿಸಲ್ಕಾಗದಿಹ ತೇಜವೊಂದುದಿಸುತ್ತ- |
ಲಕ್ಷಿಗಳ್ ಕುಕ್ಷಿಸಿ ಶರೀರಮಂ ಧರಿಸುತ್ತೆ ಶಿವನಪ್ಪಣೆಯ ಪಡೆಯುತೆ ||
ವೀಕ್ಷಕರ್ಗೆಲ್ಲರ್ಗೆ ನೆರೆ ಭಯವ ಹುಟ್ಟಿಸುತೆ |
ದಕ್ಷಯಜ್ಞಕೆ ಬಂದನುರೆ ವೀರಭದ್ರಾಖ್ಯ- |
ನುಕ್ಷ-ವಾಹನ-ಸಮಂ ಭೀಕರಂ ಶ್ರೀಕರಂ ಸುರರೋಡುತಿಹರೀಕ್ಷಿಸಿ ||೧೮||

ಆಗಳಾ ವೀರಭದ್ರಂ ನೋಡಿ ಬಾಣಮಂ |
ವೇಗದಿಂ ಬಿಡುತಿರಲ್ ತಪ್ಪಿಸಿಕೊಳುವುದಕ್ಕೆ |
ಕಾಗೆಗಳ್ ತಾವ್ ಆಗಿ ಧಾವಿಸುತಿರಲ್ ಕೆಲರ್ ಕಣ್ಣಳಿದುದೊಂದೆಯದರಿಂ |
ಲೋಗರರಿಯಲ್ ಕಾಕಜನ್ಮಕೊಂದಕ್ಷಿಯಿಹು- |
ದಾಗ ಯುಳಿದನುರರೋಳ್ ರವಿ ದಂತ-ಭಗ್ನತೆಯು |
ಮೂಗರಿದುದಾ ಸರಸತಿಯ ಹರಿಯ ಕಾಯಮದು ಕರ್ಪಾದುದಿನ್ನ ಮೊರೆವೇಂ ||

ಅಗ್ನಿ-ರಸನೆಯು ಸೀಳ್ದುದಾ ಕ್ಷಣದೆ ದಕ್ಷಂಗೆ |
ಭಗ್ನಮಾಗುತೆ ಸಿರಂ ಕುರಿದಲೆಯು ಪತ್ತಿಹುದು |
ಮಗ್ನರಾಗಿಹರೀಯಸಾಹುತವನೀಕ್ಷಿಸಿದ ಮುನಿಗಳಾ ಶಿವಭಕ್ತಿಯೋಳ್; ||
ಲಗ್ನಮಾದಳ್ ಶಿವನ ಗಿರಿಕನ್ಯೆಯಾಗಿ ಶೀವೆ |
ಮಗ್ನತೆಯ ನಾಂತರಿದ ನರಿಯುವರ್ ಶಿವ ಪದದೆ |
ಲಗ್ನಮಾನಸರಾಗಿ ಲಿಂಗಮಂ ಪೂಜಿಸುವದೀ ಕಥೆಯ ನೆನೆದೆಲ್ಲರು ||೨೦||

ಇಂತೊರೆದು ಮೌನಮಂ ತಳೆಯಲ್ಕೆ ಭಕ್ತರಾ- |
ದಂತರಿಸದಲೆ ತದಾಜ್ಞೆಗೆ ನಮಿಸಿ ಸಮ್ಮತಿಸಿ |
ಕಾಂತಸಿಂದಾಶಿಷವ ಪಡೆದು ಪೋಗುತ್ತೆ ಲಿಂಗಾಯತರ್ ಲಿಂಗವ ಸದಾ ||
ಸಂತಸದೆ ಧರಿಸಲ್ ಪ್ರತಿಜ್ಞೆಯಂ ಮಾಡುತ್ತ- |
ಲಂತೆ ಧರಿಸಿದರಾ ಕ್ಷಣದೆ ಭಾವಿಗಳ್ ಜಲ- |
ನಾಂತು ತುಂಬುತೆ ಶೋಭಿಸಿದವೆಂದುಮಾಗಳಿಂ ಕೊರತೆಯಂ ಪೊಂದದಂತೆ ||೨೧||

* *

ಈ ಲೀಲೆ ಲೋಕ ಪ್ರಸಿದ್ಧ ಮಾಗುತಿರಲ್ಕೆ |
ಮೇಲಾಗಿ ಸರ್ವರಾತ್ಮೀಯ ಧರ್ಮದೆ ಬೆಳೆಯು- |
ತೋಲಾಡಿದರ್ ಸಕಲ ವಿಭವಮಂ ಪಡೆಯುತ್ತೆ ಗುರುಮಹಿಮೆಯಂ ನೆನೆಯುತೆ ||
ಶೀಲಾಚರಣೆಗಧಿಕಮಾದ ಮತ್ತೊಂದ ನಾಂ |
ಲೋಲರ್ಕಳಪ್ಪಂತೆ ಕಥೆಯನೊರೆಯುವೆನೊಲಿದು |
ಬಾಲರ್ಕಳಾದೊಡಂ ಕೇಳ್ವೇಳ್ಕತಿಶಯಾನಂದಮಪ್ಪುದು ನಿಶ್ಚಯಂ; ||೨೨||

ಮಳೆಯಿಂದಲುರೆ ಕಳೆಯು, ಮಳೆಯಿಂದಲುರೆ ಬೆಳೆಯು |
ಮಳೆಯಿಂದಲುರೆ ಜಲಂ; ಮಳೆಯಿಂದಲುರೆ ಬಲಂ |
ಮಳೆಯಿಂದಲುರೆ ಸಿರಿಯು, ಮಳೆಯಿಂದಲುರೆ ಚರಿಯು, ಮಳೆಯಿಂದಲುರೆ ತಣಿವಿದು ||
ಮಳೆಯಿಂದಲುರೆ ಯೊಲವು, ಮಳೆಯಿಂದಲುರೆ ನಲಿವು |
ಮಳೆಯಿಂದಲುರೆ ಯಿರವು, ಮಳೆಯಿಂದಲುರೆ ಯರಿವು |
ಮಳೆಯಿಂದಲುರೆ ಧನಂ, ಮಳೆಯಿಂದಲುರೆ ಜನಂ ಮಳೆಯಿಂದ ಸರ್ವ ವಿಭವಂ ||

ಯಜ್ಞದಿಂ ಮಾನವರ್ ದೇವರ್ಕಳಂ ತಣಿಸೆ |
ಸುಜ್ಞರಾದವರಿವರನೊಲಿಸುವರ್ ಮಳೆಯಿಂದ- |
ಲಜ್ಞರಿದನಾವುದಂ ತಿಳಯದೆಲೆ ವೃಷ್ಟಿಯಂ ಕಾಲಕ್ಕೆ ಪಡೆಯುತಿಹರು ||
ತಜ್ಞರಾಗಿಹ ಜನರ್ ಸತ್ಕರ್ಮವಂ ಸದಾ |
ಸುಜ್ಞತೆಯೊಳರಿಯುತ್ತೆ ಗೈಯ್ಯುತಿಹ ಕಾರಣದಿ- |
ನಜ್ಞತೆಯೊಳಿದು ನೆಡೆದಿಹುದು ವಿಸ್ಮಯದಪೇಕ್ಷೆಯಿಲ್ಲದಲೆ ಭೂಮಿಯೊಳು ||೨೪||

ಒರ್ಮೆ ಬೆಳೆಗಳ್ ಕೈಗೆ ಬಂದು ಜನರಿರೆ ಮುದದ
ಪೆರ್ಮೆಯೊಳ್ ವೃಷ್ಟಿಯಾರಂಭಮಾಗುತೆ ಪರ್ಬು- |
ತೊರ್ಮೆಗಂ ಸುರಿಯಲಾದುದು ಭೂಮಿಗಾಕಾಶಕೇಕಮಾಗುತ ಲಾವಗಂ ||
ಪೊರ್ಮಿದುರೆ ಕ್ರೋಧದಿಂ ಪ್ರಕೃತಿ ದೇವಿಯೆ ಶಿವನ |
ನೆರ್ಮದಿಹ ಮಾನವರ ಕೊಲ್ಲಲೋಸುಗವಿಂದು |
ಕೂರ್ಮೆಯಂ ಬಿಟ್ಟು ಪ್ರಳಯದ ಮುಗಿಲ್ಗಳಿಗಾಜ್ಞೆಯಂಕೊಟ್ಟಳೆನೆ ತೋರ್ದುದು ||

ಭೂಮಿಯಂ ಲಿಂಗವೆಂದರಿಯುತಂ ದಿನ-ರಮೆಯು |
ರಾಮಣೀಯಕಮಾದ ಪೂಜೆಯಂ ಕೈಕೊಳಲ್ |
ಕಾಮಿಸುತಲಭಿಷೇಕದಿಂದೆ ಪ್ರಾರಂಭಿಸಿದಳೊ ಯೆನಲ್ ಸುರಿವ ಮಳೆಯು ||
ನೇಮದಿಂ ಶೋರ್ದತ್ತು ಭಾವುಕರ ದೃಷ್ಟಿಗಿದು ,
"ಶ್ರೀಮಹೇಶೋಭಿಷೇಕ-ಪ್ರಿಯೋ ಭವತಿ" ಯೆಂ |
ದಾ ಮಹಾಗಮಮೊರೆವುದದರಿಂದೆ ವೃಷ್ಟಿಯು ವಿಶೇಷಮಾಗಿಹುದೆನುತ್ತೆ ||೨೬||

ತಪ್ಪಿಸಲಸಾಧ್ಯಮಿದೆಂದರಿದು ಸಜ್ಜನರ್|
ತಪ್ಪದಲೆ ಬಂದರಾ ಗುರುಸಿದ್ಧಯತಿಯ ಸ್ಥಲ- |
ಕೊಪ್ಪುವತಿ ಭಕ್ತಿಯಿಂ ಪಣ್ಕಾಯ್ಗಳಂ ಕೊಂಡು ಬಂದು ಸ್ತುತಿಸಿದರೆಂತೆನೆ ||
ಅಪ್ಪ ಬಾರಯ್ಯ ಜಗದಯ್ಯ ಯಮ್ಮಯ್ಯ ನೀಂ |
ತಪ್ಪಿರಲ್ ಜೀಯ ಮರೆಯಲ್ ವೇಳ್ಕುವಯ್ಯ ನಮ- |
ನಿಪ್ಪಕೋಪದ ತಾಪವಂ ತೊರೆದು ಬಂದೆಮ್ಮ ಪೊರೆಯೆಂದು ಬೇಡಿಕೊಳಲು ||೨೭||

ಅವರ ಮೊರೆಯಂ ಕೇಳಿ ಗವಿಯಿಂದೆ ಧಾನಿಸುತ- |
ಲವಿರಳಾನಂದನೈದುತ್ತೆ ನೋಡಿದನಾಗ |
ಕವಿದು ಸುರಿಯುತ್ತಿರುವ ವೃಷ್ಟಿಯೊಳೆ ನಿಂದಿರ್ಪ ಹೂಬಳ್ಳಿ ಜನವಯತಿಯು ||
ಜವದಿನನಿತರೊಳೈದಿ ತತ್ ಪ್ರಾಂತಜನತೆಯುಂ |
ಸುವಿನಯದ ಭಕ್ತಿಯಂ ವಂದಿಸುತಿರಲ್ಕಂಡು |
ತನೆ ಮಹಾತ್ಮಂ ನುಡಿದನೆಂತೆನೆಲ್ಲೆಲವೊ ಸದ್ಭಕ್ತವರ್ಯರೆ, ತಿಳಿಯಿರಿ; ||೨೮||

ದೇವರಂ ಮುಡಿದುದೀ ಅತಿವೃಷ್ಟಿಕಾರಣಂ |
ಭಾವಿಸಲ್ ಬೇರಿಲ್ಲಮುದಕಾಗಿ ಕೇಳಿರೈ |
ನೀವೆ ನಂದಾದೀಪಗಳ ನಿಮ್ಮ ಗುರುದೇವತಾಲಯಂಗಳೊಳೊಲಿಯುತೆ ||
ಭಾವುಕರೆ ನಡೆಯಿಸಿದೊಡೀ ಮಳೆಯು ನಿಲ್ಲುವದು |
ಸಾವಧಾನಂ ಬೇಡೆ ಸಂಕಲ್ಪಮಂ ಮಾಡಿ- |
ರೀವಿನಿಂದಪುದೀಗಳಿದಕೇಕೆ ಚಿಂತಿಸುವಿರೆಂಮೊರೆದು ನಡೆದನೊಳಗೆ ||೨೯||

ಆಗಳಲ್ಲಿಯೆ ಗುರುವಿನಾಜ್ಞೆಯುಂತೆಯೆ ಗವಿಗೆ |
ರಾಗದಿಂ ನಮಿಸುತ್ತೆ ಸಂಕಲ್ಪಿಸುತ್ತಿರಲ್ |
ತಾಗದಲೆ ಸುರಿಯುತಿಹ ವೃಷ್ಟಿಯದು ಸಿಂದಿಹುದು ಪೊಗಳುತ್ತಲೈದುತವರು; ||
ಸಾಗಿಸಿದರಂದಿಸಿಂ ತಮ್ಮ-ತಮ್ಮೂರ್ಗಳಾ |
ದೇಗುಲಂಗಳೊಳಖಿಲ ಗುರು-ಮಠಂಗಳೊಳರಿದು |
ಬಾಗಿ ನಂದಾದೀಪ ಮಂಗಲದ ಕಾರ್ಯಮಂ ಸಿಂಗರದೆ ಪ್ರಥಿತಮಾಗೆ ||೩೦||

* *

ಮತ್ತೊಂದು ಲೀಲೆಯದು ಜರುಗಿತ್ತದೇನೆನಲ್ |
ಸತ್ತಾತ್ಮರಾಲಿಪುದು ಧಾರವಾಡದೊಳಿರ್ದ- |
ಪುತ್ತೀರ್ಣ ನೆನೆಸಿಹಂ ಸರ್ವ ಶಾಸ್ತ್ರಂಗಳೋಳ್ ಭೂಸುರಂ ಸುಗುಣಾಢ್ಯನು ||
ಉತ್ತುಂಗಮತಿವಂತನಾಗಿರ್ದಡುಂ ಸದಾ |
ಕುತ್ತಂಗಳಂ ಕೊಟ್ಟು ಬಡತನಂ ಕಾಡುತಿರ್ |
ದತ್ತೀನ ನಾನದಂಪೇಳ್ವೆನರಿಗಳಿಗಾದಡುಂ ಬರಲ್ ಬಾರದಿಳೆಯೋಳ್ ||೩೧||

ಸತಿಯಿರ್ದಳೀ ಮಹಾದೇವ ಭಟ್ಟಾಖ್ಯಂಗೆ |
ಮತಿಹೀನೆ ಹೆಮ್ಮಾರಿಯಿವಳಲ್ಲ ಸನ್ನಾರಿ |
ಯತಿಶಯಮೆನಲ್ ಕಾಡುತಿರ್ದಳಿವನಂ ಬಯಸಿ ಭೋಜ್ಯವಸ್ತ್ರಾಭರಣವ; ||
ಸುತರಿರ್ದರೀಕೆಗೊಂಭತ್ತು ಜನರಾದಡುಂ |
ಸ್ಥಿತಿಗತಿವಿಚಾರಮಿರ್ದಿಲ್ಲ ಗೃಹ-ಗೌರವದ |
ಕೃತಿಯ ನೆನಹಿರಲಿಲ್ಲ ಮಕ್ಕಳುಪಜೀವನದ ಸ್ಮರಣದರಿವಿಲ್ಲಿವಳಿಗೆ ||೩೨||

ಬಡತನದ ಬೇಗೆಯೋಳ್ ಸಿಲ್ಕಿ ಸತಿಯುಪಟಳದ |
ಕಡುಜಳಕೆ ಬೆಂದು ಕರ್ಪಾಗಿ ಮೃತಿಯಿಂ ಸುಖವ |
ಪಡೆಯಬೇಕೆಂದೆಳಸಿದೆಲ್ಲಮಂ ಹುಚ್ಚಯ್ಯಸ್ವಾಮಿಗರುಹಲ್ ಮನದೊಳೆ ||
ಬಿಡದೆ ನೆನಹಾಗುತಿರೆ ಬಂದಫಳುತಂ ತನ್ನ |
ಸಡಗರದ ಗುರುವೆ ಯಿವನೆಂದರಿದು ವಿಪ್ರನಾ |
ಮಡದಿ ಮಕ್ಕಳಿಗೊರೆಯದತಿ ಬಂಧು ಗಣಕೆನಿತುಮರುಹದಲೆ ಶಿವನ ನೆನೆದು ||೩೩||

6)

ಗುರುವೆ, ಬಾ ಯಿರವೆ, ಬಾರರಿವೆ, ಬಾ ಚಿರವೆ ಬಾ |
ಹರಿಯೆ, ಬಾ ಸಿರಿಯೆ, ಬಾ ದೊರೆಯೆ, ಬಾ ಪೊರೆಯ ಬಾ |
ಹರನೆ ಬಾ ಸುರನೆ, ಬಾ ವರನೆ, ಬಾ ಧರನೆ, ಬಾ ವಿಧಿಯೆ, ಬಾ ಸುಧಿಯೆ, ಬಾ, ಬಾ||
ಹರಣ, ಬಾ ಶರಣ, ಬಾ ಭರಣ, ಬಾ ತರಣ, ಬಾ |
ಸ್ಥಿರನೆ, ಬಾ ಚರನೆ, ಬಾ ಪರನೆ, ಬಾ ಧುರನೆ, ಬಾ |
ಯಿರಿಸು, ಬಾ; ನುಡಿಸು ಬಾ; ನಡಿಸು ಬಾ; ಕೊಡಿಸು ಬಾ; ತೊಡಿಸು ಬಾ;
ಯಿಡಿಸು ಬಾ; ಬಾ ||೩೪||

ಎಂದು ಕರೆಯುತ್ತಲಾ ಬ್ರಾಹ್ಮಣಂ ಗುರುವರನ |
ನಂದು ಚಿರವಾಗಿ ನಿರುಕಿಸಿದೊಡುಂ ಬಾರದಿರೆ |
ದಂದುಗಕ್ಕೀಯುತ್ತಲೆಲ್ಲಿಗಾದಡುವ್ಮೈದಿ ಮಡಿಯ ವೇಳ್ಕೆಂದೆಳೆಸುತೆ ||
ಇಂದು-ಧರನಂ ನೆನೆದು ತೆರಳಲ್ ತೊಡಂಗುತಿರೆ |
ಬಂದು ತಡೆಯುತ್ತೆ ಗುರುಸಿದ್ಧ ಶಿವಯೋಗಿಯಿಂ- |
ತೆಂದನೈ ದ್ವಿಜ-ವರನೆ ಬಿಡು ಚಿಂತೆಯಂ; ಬೇಡ ಸಂಸಾರವಮಂ ಬಿಡುವದು ||೩೫||

ಸಿರಿಬರಲಿ, ಯುರಿಬರಲಿ, ಬೇಕು-ಬೇಡೆನಲಾಗ- |
ದುರು "ಸುಖಕೆ ಹಿಗ್ಗುವದು, ದುಃಖಕ್ಕೆ ತಗ್ಗುವದು |
ಚಿರತರವಿದಜ್ಞಾನಿ ಕರ್ತವ್ಯ ಮಾಗಿಹುದು" ಜ್ಞಾನಿಗಳ ಕಾರ್ಯವಲ್ಲಂ ||
ನರಪ ನಳ ನಹುಷ ಮುಖ್ಯರ್ಗೆ ಬಂದಿಹ ಕಷ್ಟ- |
ಮರಿಯೆ ನಿನಗೈದಿಲ್ಲ ಬಿಡುವದೇತಕೆ ಮನೆಯ |
ತೆರಳುವದದೇಕೆ ಪ್ರಾಣತ್ಯಾಗಕಾಗಿ ತೆಗೆದುಕೊಳ್ಳಿ ಭೂತಿಯಂ ||೩೬||

ಎಂದು ಭಸ್ಮಮನಿತ್ತು ಪೇಳಿದಂ ಮತ್ತಿಂತು |
ಕಂದನೆ, ವಿಭೂತಿಯಿದು ಮಿದಕೆ ಕಂತಿಯನಿಡಿಸು-
ತಂದದಿಂ ವೇದಿಕೆಯ ಮೇಲಿಟ್ಟು ಪೂಜಿಸೈ ದೇವರೆಂದರಿಯುತಿದನೆ ||
ಹೊಂದುವದು ಸುಖಸಂಪದಂ ತಾನೆ ತನ ಪತ್ನಿ- |
ಯೆಂದಿನಿಂ ತಿಳಿಯಲನುಕೂಲಿಣಿಯು ನಿನಗಹಳ್ |
ದಂದುಗಂ ನಿನ್ನ ಸನಿಹಕ್ಕೆ ಬರದಿಂದಿನಿಂ ದಿನ್ನೇತರಂಜಿಕೆ ಯೆನೆ ||೩೭||

ಸದಮಲ ಮಹಾದೇವ ಭಕ್ತಂ ನುಡಿದನಿಂತು ।
ಮದಹರ ಸಮಾನ ಗುರುವರನೆ, ನಿನೆಗಾರ್ ಸಮರ್ ! ।
ಪದ–ಕರುಣೆಯಿಂದೆನಗೆ ಭಕ್ತಿಯೊಂದುರೆ ದೊರೆದಡುಂ ಸಾಲ್ಗುಮಿದರಿಂದಲೆ ॥
ಪದಪಿಂದೆ ಸರ್ವೇಚ್ಛಿತಂ ದೊರೆದು ಮುಖಿಲರ್ಗೆ ।
ವಿದಿತರೊರೆಯುವರೀ ಪರಿಯೊಳದಂ ಕೇಳಿರ್ಪೆ–।
ನದಕಾಗಿ ಬೇಡುವೇಂ ಕರುಣಿಸೈ ಯೆಂದೆರಗೆ; ಪರಿಸಿ ಗವಿಯೊಳಗೈದಿದಂ; ॥೩೮॥

ಏಳುತೆ ಪುನಃಪುನರ್ ವಂದನೆಯ ಗೈಯ್ಯುತ್ತೆ ।
ಭಾಳಲೋಚನ–ಸಮನ ನೆನೆಯುತ್ತಲವನಿಂದೆ ।
ಮೇಳವಿಸಿದಾ ಭಸಿತಮಂ ಕೊಳ್ಳುತದಕೆ ಕಂತಿಯನಿಡಿಸಿಕೊಂಡು–ಮನೆಗೆ ।
ಕೇಳಿದಾ ಗುರು-ವಾಕ್ಯಮಂ ಸ್ಮರಿಸುತಾ ದ್ವಿಜಂ ।
ಕಾಳಿಯಂದದ ಪತ್ನಿಗಗಿಯುತಂ ಬಂದಿಹಂ ।
ಬಾಳ ಮಾತೇಂ ಸರ್ವರಚ್ಚರಿಸುತಿರೆ ಕಂಡು ಪತಿಗೆ ವಂದಿಸಿದಳಾಕೆ ॥೩೯॥

ಅಚ್ಚರಿಸಿ ಪ್ರಶ್ನಿಸಿದನೇನಿದಚ್ಚರಿ, ಸತಿಯೆ ।
ನಿಚ್ಚಮೆನ್ನಂ ಬೈವ ನೀ ನಿಂದದೇಕೆರಗಿ ।
ಮುಚ್ಚಿದಾನಂದಮಂ ಪ್ರಕಟಿಸಿದೆ ಹೇಳೆನಲ್ ಕೈಮುಗಿದು ನುಡಿದಳಿಂತು ।
ಬಿಚ್ಚಿದಂ ಪತಿಯೆ; ಜ್ಞಾನಮಂ ಗುರುವು ।
ಹುಚ್ಚಯಂ ಬಂದು ನಿನ್ನಿನ ನಿಶೆಯ ಸ್ವಪ್ನದೋಳ್ ।
ಮೆಚ್ಚುವಂದದೆ ಮನಂ ಪತಿಭಕ್ತಿಯಂ ತಿಳುಪಿ ತನ್ನ ನಾಮಮನೊರೆಯುತೆ ॥೪೦॥

ಅಡಗಿದಂ ಕಣ್ಮುಂದೆ ತನ್ಮೂರ್ತಿಯೆನ್ನ ಮನ–।
ದೆಡೆಯಲ್ಲಿ ನಿಂದಿಹುದು ನೀವವನ ಸನ್ನಿಧಿಗೆ ।
ತಡಯದಲೆ ಪೇಳಿ ಪೋಗಿರ್ದಿರೇನೆನೆ ಪೇಳ್ದನಾ ಮಹಾದೇವ ಭಟ್ಟಂ ॥
ಮೃಡಸಮನ ದರ್ಶನಕ್ಕೆಂದಿನಂದದೆ ನಿನ್ನೆ ।
ಕಡೆಯ ಜಾವದೊಳೈದಿ ಮಮ ದುಸ್ಥಿತಿಯ ಪೇಳ್ದು ।
ಪಡೆಯು ತಾಶಿಷಮಾದಿ ಭಸಿತಮಂ ಮತ್ತದಕೆ ತನ್ನಿದೇಶದೆ ಕಂತಿಯ ॥೪೧॥

ಬಂದೆ ನಾನಿಡಿಸಿ ಕೊಂಡಿದನೆ ವೇದಿಕೆಯ ಮೇ-|
ಲಂದದಿಂದಿರಿಸಿ ಪೂಜಿಸಲೆಮ್ಮ ಬಡತನದ |
ದಂದುಗಂ ತಿಳಿಯಲ್ ತೊಲಂಗು ತಿಹುದಿದು ಗುರುವಿನಪ್ಪಣೆಯೆನುತ್ತಲೊರೆದು |
ಚಂದದಿಂ ಸ್ನಾನವಂ ಗೈದು ಜಗುಲಿಯ ಮೇಲೆ |
ಹೊಂದಿಸಿ ವಿಭೂತಿಯಂ ಪೂಜಿಸಲೊಡರ್ಚಿದಂ |
ಸಂದಿದ ದರಿದ್ರತೆ ತೊಲಂಗಿಹುದು ಮಹಿಮನಪ್ಪಣೆಯಂತು ಸಟೆಯಪ್ಪುದು? ||೪೨||

ಇದನರಿದ ಜನತೆ ಪೊಗಳಿದುದಿಂತು ಭಾಗವತ |
ಸದಮಲ ಪುರಾಣದೆ ಸುಧಾಮಂಗೆ ಕೃಷ್ಣನೊಲಿ-|
ದೊದವಿಸಿದನುರೆ ಸಿರಿಯನೆಂದು ಕೇಳಿರ್ದೆವಾವಿದು ಸತ್ಯಮಾದುದಿಂದು ||
ಪದಪಿನೀ ಚರಿತದಿಂ ಕಣ್ಣಪ್ಪನುದ್ಧೃತಿಯು |
ಪೊದೆದು ನೆನಹಿನೊಳ್ಗೈದಿ ಭಕ್ತಿಯುದಯಿಸಿತರಿಯ-|
ಲೊದವಿದಾನಂದದಿಂ ಭಕ್ತಿಯುಣ್ಮುತಿರಲ್ಕೆ ನಲಿದಾಡುತುಂದು ಮುಂದೆ ||೪೩||

*　　　　*

ಇಂತು ಪೆಂಡತಿಯ ಕೋಪವ ಕಳೆದ ಗುರುಸಿದ್ಧ |
ಕಾಂತನಂ ನೆನೆಯುತ್ತೆ ವಿಭವಮಂ ಬ್ರಾಹ್ಮಣಂ |
ಸಂತಸವ ಪೊಂದುತಿರೆ ಪಡೆದು ಮತ್ತೊಂದಧಿಕ ಲೀಲೆ ಜರುಗಿತ್ತೇನೆನೆ ||
ಕಾಂತೆಯಿರ್ದಳ್ ಕರೂರೆಂಬ ಗ್ರಾಮದೆ ಭಕ್ತೆ |
ಶಾಂತಲಾದೇವಿಯಂಬಾಕೆ ಅತಿ ರೂಪವತಿ-|
ಯಂತಕಾಂತಕ-ಸಮನ ಗುರುಸಿದ್ಧನಂಘ್ರಿಯಂ ನಂಬಿರ್ದಳವಳಾವಗಂ; ||೪೪||

ಇವಳ ಗಂಡಂ ಷಂಡನಧಿಕ ಸುಂದರನಿವಂ |
ತವೆ ಬಡವನಾಗಿರ್ದುಡುಂ ರೂಪಕೋಲೆಯುತ್ತ-|
ಲವಳ್ಗೆ ತಾಯಿತಂದೆಗಳ್ ಬೇಡಮೆಂದಡುಮಿವನ ಬಯಸಿ ಪರಿಣಯಿಸಿರ್ದಳು ||
ಅವಳ ರೂಪಕೆ ಮೆಚ್ಚಿ ಸಿರಿವಂತನೋರ್ವನತಿ |
ಸುವಿನಯದೆ ಕಾಂಕ್ಷಿಸಿದನುರು ಧನಾಶೆಯ ತೋರಿ |
ಲವಲೇಶಮಾದಡುಮದಕ್ಕೊಲಿಯಲಿಲ್ಲಾಕೆ ಗರತಿಯರ್ ಧನಕೊಲಿವರೆ ? ||೪೫||

ಶೀಲವತಿಯರ್ ವಿಲಾಸಕ್ಕೆ ಮನಸೋಲುವರೆ ? |
ಮೇಲಹ ಪತಿವ್ರತೆಯರಂದಕ್ಕೆ ನಲಿಯುವರೆ ?।
ಕಾಲಕೀಪ್ಸಿತಮಾದ ವೇಷಿಗಳೆ ಸತ್ ಸತಿಯರೀಡಿಪರೆ ಪರಪುರಷರಂ ?॥
ಓಲಯಿಸುವರೆ ಸಾಧ್ವಿಯರ್ ದುರಾಚಾರವಮಂ ? |
ಪಾಲಿಸುತಿಹರೆ ದುರ್ಗುಣಿಗಳಂ ಗುಣಾಢ್ಯಯರ್ ? |
ಮೇಲಿಪರೆ ಸತ್‌ಕಲಾವತಿಯರಿಸಿಯನನಘದೆ ಸುಜನರನನಾದರಿಪರೆ ? ॥೪೬॥

ಇಂತಹ ಸತೀಮಣಿಸು ಮಾಲಿಕೆಯೊಳಗ್ರಮಣಿ-|
ಯಂತಹ ಮಹಾಜ್ಞಾನಿ ಸನ್ನುತಳ್ ಸಾಧ್ವಿಯದು-|
ರಂತಕಾಖ್ಯನ ಖಲನ ನೆರೆ ಬಲತ್ಕಾರಕ್ಕೆ ಸಿಲ್ಕದಿರ್ದಳ್ ಶಾಂತಲೆ ॥
ಕಾಂತನಿಂದಗಲಿಸಲ್ಕೊಂದುಪಾಯವ ಗೈದ-|
ನೆಂತೆನಲ್ಕವಳಗಂಡನನೊರ್ವೆ ಕಾಣುತ್ತ-|
ಲಿಂತೊರೆದನೆಲೆ ಶಾಂತ, ತವ ಸತಿಯು ಪರ-ಪುರುಷನೊಡನೆ ಬೆರೆದಿರ್ಪಳರಿಯೈ ॥

ಆನಿದಂ ಪ್ರತ್ಯಕ್ಷಗೊಳಿಪೆನೆಂದೊರೆದುದಂ ।
ಮಾನಿತೆಯು ಪತಿವಾಣಿಯಿಂದರಿದು ಕರೆಯಿಸುತೆ |
ಮಾನಿಸಿಯು ತತ್ ಖಲಂಗೊರೆದಳೆಂತೆನಲೆಲವೊ ಹುಚ್ಚಯನ ಸ್ಮರಿಸಿ ಪೇಳ್ವೆಂ ॥
ಭೂನುತಂ ಗರತಿತನವೆನ್ನೊಳಿರ್ದೊಡೆ ತಿಳಿಯೆ |
ಯೆನ್ನ ಯಿಂ ನುಡಿಯು ಸತ್ಯಮಹುದೀಗಳೆ ನಿನಗೆ ।
ತಾನೆಸೆವ ಮೂಗತನವೊದಗುವದೆನಲ್ ಮೂಕನಾದಂ ಖಳಂ ಕ್ಷಣದೊಳೆ; ॥೪೮॥

ಸಿರಿವಂತನಾಪ್ತರ್ಕಳದನರಿದು ವಿಶ್ವಗುರು-|
ಗುರುಸಿದ್ಧಬುದ್ಧನಡಿಯಂ ಸಾರ್ದು ವಂದಿಸುತ-|
ಲರುಪೆ ತದ್ ವಿಷಯಮಂ ಮೂಕನಂ ಪದಕೆರಗಿಸಲ್ಕಿಂತು ಗುರುವೊರೆದನು ॥
ಗರತಿಯವಳಾಕೆಗೆರಗಿಸಿರಪ್ಪುದತಿ ಹಿತಂ |
ನೆರೆ ತೊಲಂಗುವದಿವನ ಪಾತಕಂ ಪೋಗಿರೆನೆ |
ಪರಮನಂ ನೆನೆಯುತ್ತೆ ಬಂದು ತತ್ ಪತಿರತೆಯ ಮನೆಗವಳಿಗೆರಗಿಸಿದರು ॥೪೯॥

ಆಗಳಾತನ ಮೂಗತನಮುಂದು ತೊಲಗಿಹುದು |
ಲೋಗರಚ್ಚರಿಸಲ್ಕೆ ಸ್ತುತಿಸಿದರದೆಂತೆನಲ್ |
ಶ್ರೀಗೆ ಪಾರ್ವತಿಗೆ ಸರಸತಿಗೆ ಮಿಗಿಲಾಗಿರುವೆ ನೀನೆನ್ನ ಪೊರೆದೆ ತಾಯೆ ||
ಆ ಗುರು-ಸತಿಯು, ಗೌತುಮನ ಸತಿಯು, ಸುರಸತಿಯ |
ಮಾಗ ವ್ಯಭಿಚಾರಾಗ್ನಿಗರಿಯಲ್ಕೆ ಬಲಿಯಾದ-|
ರೀಗಿನವಳಾದ ನೀಂ ತವ ಸತಿತ್ವವ ಬಿಡದೆ ಕಾಯ್ದುಕೊಂಡಿಹೆ ಮಾತೆಯೆ; ||೫೦||

ಎನ್ನ ಪಾಪಕ್ಕೆ ಪ್ರಾಯಶ್ಚಿತ್ತಮಂ ಮಾಡಿ |
ಸನ್ನುತಳೆ ಬುದ್ಧಿಗಲಿಸುತಲೆನಗೆ ನೀನಾದೆ |
ಮನ್ನಣೆಯ ಮಾತೆ; ಗುರುವರಿಯೆ ದೈವಂ ನಿನ್ನ ಹೊರತಾರುಮಿಲ್ಲಮೆನಲು; ||
ತನ್ನ ನುತಿಯಂ ಕೇಳಿ ನುಡಿದಳಿಂತಾ ಸಾಧ್ವಿ |
ಯಿನ್ನು ನುತಿಸೈ ಬಿಡದೆ ಹುಚ್ಚಾರ್ಯಗುರುವರನ-|
ನೆನ್ನನೇತಕೆ ನುತಿಪೆ ಯೆನ್ನೊಳೇನಿಹುದಯ್ಯ ಯೆಂದೊರೆದು ಕಳುಹಿಸಿದಳು ||೫೧||

ಆ ಮಹಿಮನಂ ನುತಿಸಿ ತತ್ ಪತಿ ಸಬಲನಾಗೆ, |
ಪ್ರೇಮದಿಂದಿಂತು ನುತಿಸಿಹುದು ಜಗಮರಿಯಲ್ಕೆ |
ಕಾಮಹರನಹುದು ನೀಂ, ತನ್ನ ನಂಬಿದ ಭಕ್ತರಿಂದಲುಂ ಮಹಿಮೆಯ ಸದಾ ||
ಸಾಮ-ವಿನುತಂ ನಡೆಯಿಸುವನವನ ತೆರದೆ ಸಲೆ |
ಭೂಮಿಯೊಳ್ ನಡೆಯಿಸುವೆ ನಿನಗುಮಾತಂಗು ಮೇಂ ।
ನೇಮಿಸಿದ ಭೇದಮಿಹುದೇನೇನುಮಿಲ್ಲಮೆಂದಾ ಹುಚ್ಚಯನ ನೆನೆಯುತೆ ||೫೨||

* *

ಭಕ್ತಿಯಂ ಬೆಳೆಯಿಸಿ ಕೊಡಲ್ಕೆ ಹೂಬಳ್ಳಿಯೊಳ್ |
ಶಕ್ತನುರು ಲೀಲೆ ಮತ್ತೊಂದು ಜರುಗಿಹುದಿಂತು ।
ಸಕ್ತಿಯಿಂ ಬಂದನೋರ್ವಂ ಪೆಸರನಾಲಿಸುತೆ ಮದ್ರಾಸ ನಗರದಿಂದೆ ||
ಯುಕ್ತ ಗುರುವಿನ ದರ್ಶನಕ್ಕೆ ಮನದಾತುರದೆ |
ರಕ್ತಿಯಿಂ ಬಂದು ನೆಲಿಸಿದನವಂ ತತ್ಪುರದೆ |
ಭಕ್ತನಾಗಿಯೆ ತತ್ ಸಮಾಗಮವ ಪಡೆಯುತ್ತೆ ಕಣ್ಣೀರ ಮಳೆ ಸುರಿಸುತ ||೫೩||

ಅವನ ದುಃಖವ ತಿಳಿದು ಸರ್ವಜ್ಞನೊರೆದನಿಂ-।
ತವನಿಯೊಳ್ ರೂಪಮಂ ಬದಲಾಯಿಸುವದಾರ್ಗೆ ।
ತವೆ ಸಾಧ್ಯಮಾಗುತಿಹುದಾನೇನು ಶಂಕರನೆ? ನೀನದೇ ಸತಿಯೊಡನೆಯೆ ॥
ಶಿವನ ನೆನೆಯುತೆ ಬಾಳು ಸುಖಮುಪ್ಪುದೈ ನಿನಗೆ ।
ತವ ಪತ್ನಿಯಿಹಳು ಗುಣವತಿಯು ಸೌಂದರ್ಯದೊಳು ।
ಸವಿಯದಿಲ್ಲಂ ವಿಚಾರಿಸದೆ ಮದ್ರಾಸಿನಿಂದೈದಿಹೆ ವಿವೇಕಾಖ್ಯನೆ ॥

ಎಂದೊರೆದು ಮೌನಮಂ ತಳೆಯೆ ಗುರುವರನಾಗ ।
ಮಂದನತಿ ದುಃಖದಿಂ ಬೀಳ್ದು ತತ್ ಪಾದದೊಳ-।
ಗಂದು ಪ್ರಾರ್ಥಿಸುತಿರಲ್ ಬೂದಿಯಂ ಕೊಟ್ಟು ಪೇಳಿದನಿಂತು ನಿನ್ನ ಸತಿಯ ॥
ಅಂದದಿಂ ಸ್ನಾನಮಂ ಮಾಳ್ಪ ಜಲದೊಳ್ ಬೆರಯಿ-।
ಸೆಂದ ನುಡಿಯಂ ಕೇಳ್ದು ನಮಿಸುತಾಗಳೆ ಮನೆಗೆ ।
ಬಂದೆಸಗುತಂತು ಸ್ನಾನವ ಗೈಸಿದಂ ಸತಿಯು ಸುಂದರಿಯು ತಾನಾದಳು ॥೫೫॥

ಮುಪದಿಯಾ ರೂಪಮಂ ಕಾಣುತ್ತೆ ಮನದಲ್ಲಿ ।
ಕಡು ಹಿಗ್ಗುತಂ ಬಾಳಿದಂ ಸತಿಯ ಭೋಗದೊಳ್ ।
ಮೃಡ-ಸಮನ ನೆನೆಯದಲೆ ಹೂಬಳ್ಳಿಯೂರಲ್ಲಿ ನೆಲೆಸಿದಂ ಭೋಗಿಯಾಗಿ ॥
ಬಡವನಾಗಿರ್ದಡುಂ ಬಿಟ್ಟಿರುತ್ತಿರಲಿಲ್ಲ ।
ದುಡಿಯಲ್ಕೆ ಪೋದಡಾಕೆಯ ಮನಗೆ ಬೀಗಮಂ ।
ನಡೆಯುತಿರ್ದಂ ಹಾಕುತೊಂದು ದಿನದಲ್ಲೊರ್ವ ಸಿರಿವಂತನಪಹರಿಸಿದಂ; ॥೫೬॥

ಪಲುಬಿ ಪಂಬಲಿಸುತ್ತೆ ಶೋಧಿಸುವದಾಗದಲೆ ।
ಸಲೆ ಸುಕೃತದಿಂ ಗುರುವಿನುರೆ ನೆನಹದಾಗುತಿರೆ ।
ನಿಲದೆ ಬಂದಾ ಬಿಲ್ವ-ವನಕೆ ಹುಚ್ಚಯ್ಯ ಯೆನ್ನುತ್ತೆ ಕೂಗಿದಂ ಕಾಣದೆ ॥
ತಲೆಯನಪ್ಪಳಿಸುತಿರೆ ಗವಿಯ ಬಾಗಿಲಕಾಗ-।
ಳೊಲೆದೈದಿ ಪಿಡಿಯುತ್ತೆ ಗುರುವೊರೆದನೆಂತೆನಲ್-।
ಕೆಲವೊ, ತಡೆ ನಿನಗರಿದೆ ಮೊದಲಿಗಾಂ ಪೇಳಲಿಲ್ಲವೆ ಬೇಡ ರೂಪಮೆಂದು ॥೫೭॥

ಮೊದಲ ರೂಪವ ನೀವೆನಾಕೆ ರಕ್ಷಿತಳಹಳ್ ।
ಮುದದೆ ಸಿರಿವಂತನಿಂ ಭ್ರಷ್ಟಳಾಗುವಳಾಕೆ ।
ಸದಮಲನೆ ತ್ವರದೊಳೊಪ್ಪೈಯ್ಯೈದು ನಿಮಿಷದೋಳ್ ಕೆಡುತಿಹಳು ನಿನ್ನ ಸತಿಯು ।
ಅದನಾಲಿಸುತ್ತಲಿಂತೆಂದನೈ ಗುರುದೇವ ।
ಮುದದೊಳೀಯೈ ನಿನ್ನ ಪಾದಭಕ್ತಿಯ ಮತ್ತೆ ।
ಸದಮಲನೆ ತವ ನಾಮ ಭಜನೆಯಂ ತದ್‌ರೂಪವಮಂ ಬದಲಿಸುವದೆ ಬೇಡ ||೫೮||

ಆಗಲೈ ನಿನ್ನಿಚ್ಛೆಯಿದ್ದಂತೆ ಯೆನೆ ಗುರುವು ।
ರಾಗದಿಂ ಗುರುನಾಮಮಂ ಪಠಿಸುತಾ ಸತಿಯು ।
ವಾಗತೀತನ ಸನ್ನಿಧಿಗೆ ಬಂದು ನಮಿಸಿದಳ್ ಸಿರಿವಂತನೊಡನೆ ವನಿತೆ ॥
ಯೋಗಿ-ವರ್ಯನ ನೋಡಿ ಶ್ರೀಮಂತನಿಂತೆಂದ-।
ನಾಗಮಜ್ಞನೆ, ನಿನ್ನ ಭಕ್ತಳೆಂಬುದನರಿಯ-
ದೀಗಳಾಂ ಕೆಟ್ಟೆನೈಯಿವಳಂ ಬಲಾತ್ಕರಿಸತೊಡಗಿ ತಾಪದೆ ಸಿಲ್ಕಿದೇಂ; ||೫೯||

ಇವಳನಾಲಂಗಿಸುದಕಾಗಿ ಚಾಚಿದ್ರ್ಕೈಗ-।
ಳವಿನಯದ ಸ್ಮರಣಕಾಗಿಯೆ ಹಾಗೆ ಯುಳಿದಿಹವು,
ಶಿವನೆ, ಕೊಂಚಂ ಮಣಿಸಲುಂ ಬಾರದಂತಾಗಿ ನಿನ್ನ ಸನ್ನಿಧಿಗೈದಿದೇಂ ।
ಅವನ ಮಾತಂ ಕೇಳ್ದು ಗುರುವೆಂದನೆಂತೆನಲ್ ।
ಕವನಿಯೋಳ್ ಪಾಪಕನುತಾಪಮೇ ಕೃಚ್ಛ್ರಮುದು ।
ಸುವಿನಯದೊಳೀ ಸತಿಗೆ ಬಾಗಿ ಕ್ಷಮೆಯಂ ಬೇಡು ಸುಖಮಪ್ಪುದೈ ಧನಿಕನೆ ||೬೦||

ಅದರಂತೆ ತತ್ ಸತಿಯ ಪಾದಕ್ಕಾನತನಾಗಿ ।
ಪದುಳ್ದು ಕ್ಷಮೆಯಂ ಬೇಡಲಾ ಧನಿಕ ಬಾಹುಗಳ್ ।
ಮೊದಲಂತವಾಗಿ ರಂಜಿಸಿದವಾ ಕ್ಷಣದಲ್ಲಿ ತತ್‌ಪತಿಯು ನೋಡಿ ಗುರುವಂ ॥
ಮುದದೆ ಪೊಗಳಿದನಿಂತು ಸದ್ಗುರುವೆಯಾಂ ಪೇಳ್ದ ।
ತೊದಲುಲಿಗೆ ನಿಮ್ಮ ಮಹತ್ವವನೀಯು ತೀಕೆಗಾ ।
ಪದ-ಭಕ್ತಿಯಂ ನಿನ್ನ ನಾಮ-ಸಂಸ್ಮರಣೆಯೊಳ್ ಕರುಣಿಸುತೆ ಕಾಯ್ದುದುಭವಾ ||೬೧||

ಶ್ರೀ ಜಗದ್ಗುರು ರಾಜಗುರುಸಿದ್ಧಯತಿವರಂ |
ವೋಜಿನಿಂ ಪರಸುತ್ತ ದೃಶ್ಯನಾದಂ ಕ್ಷಣದೆ |
ರಾಜ ವೌಳಿಯು ಯಿವಂ ಹುಚ್ಚಯ್ಯನಲ್ಲವೆಂದಾಡುತ್ತೆ ತಮ್ಮ ಮನೆಯಂ ||
ನೈಜ ಭಕ್ತಿಯ ಬೆಳಿಸಿಕೊಂಡರ್ ಪೊಂದುತ್ತೆ |
ಸೋಜಿಗದೊಳೀ ಲೀಲೆಯಂ ಕೇಳ್ದು ಪರನಾರಿ |
ಯೋಜಕಭಿನಯಕೆ ತಾರುಣ್ಯಕ್ಕೆ ಮನಸೋಲದಿರ್ದುದಂಜುತೆ ತಜ್ಜನಂ ||೬೨||

* *

ಲೀಲೆ ಮುಗುಳ್ದೊಂದು ಜರುಗಿಹುದು ಹೂಬಳ್ಳಿ–ನಾ–|
ಡೋಲೈಸುತಿರೆ ಬಂದನೋರ್ವನಷ್ಟಾಂಗದೋಳ್ |
ಕೀಲಿಸಿರ್ದುದು ವಿಕೃತಿಯದರಿಂದಲಷ್ಟಾಂಗ–ವಕ್ರನಾಮುಮುದವಂಗೆ |
ಮೇಲವಿಸಿ ರೂಢಮಾಗಿರ್ದುದಾತಂ ಬಂದ-|
ನಾಲಿಸುತಲೀ ಗುರೂತ್ತಮನ ತತ್ ಕೀರ್ತಿಯ ವಿ-|
ಶಾಲ ಬಿಲ್ವ–ವನಕ್ಕೆ ತತ್ಸ್ಥಾನಕ್ಕೆ ಬೀಳುತೇಳುತೆ ಭಕ್ತಿಯೊಳ್; ||೬೩||

ಬಂದು ದುಃಖಿಸುತಿರಲ್ ಗವಿಬಾಗಿಲಕೆ ನಮಿಸು–|
ತಂದು ಕರುಣಾಳು ಗುರುವೈದಿದಂ ನೋಡುತ್ತೆ |
ವಂದಿಸಿದನಾಗಲಷ್ಟಾಂಗ–ವಕ್ರಂ ಪದಕೆ ನೋಡಿ ಗುರುವೆಂದ· ನಿಂತು||
ಕಂದ, ನೀನಳಬೇಡ; ಕೊಳ್ಳೀ ಫಲಂಗಳಂ; |
ಸುಂದರಂ ಶಿವಕೃಪೆಯೊಳಪ್ಪೆ ಯಿೂ ಹೊಂಡದೋಳ್ |
ಚಂದದಿಂ ಸ್ನಾನಮಂ ಮಾಡಿ ಪಣ್ಗಳ ಸೇವಿಸುತ್ತೆ ಮಲಗೈ ಸುಖಿಯಹೆ ||೬೪||

ಇಂತೊರೆಯುತಾ ಗುರುವಡಂಗುತಿರಲಚ್ಚರಿಯು-|
ಸಂತಸಂ ಭಕ್ತಿಯುಂ ಪೊಣ್ಮುತಿರಲಾ ಕ್ಷಣದೆ |
ಚಿಂತಿಸದೆ ಬೇರೊಂದುನಾ ಪೊಂಡದೋಳ್ ಸ್ನಾನಮಂ ಮಾಡುತಂ ಯೋಗಿಯ ||
ಕಾಂತ–ಕರದಿಂದೆ ದೊರೆದಿಹ ಪಣ್ಗಳಂ ಮೆಲ್ದು |
ಸ್ವಾಂತದೊಳ್ ಹುಚ್ಚೇಶನೆಂಬ ನಾಮಮನು ನೆನೆಯು |
ತಂತರಿಸದಾಜ್ಞೆಯಂತಷ್ಟಾಂಗವಕ್ರ ನಲ್ಲಿಯೆ ಮಲಂಗಿದನಳ್ತಿಯೊಳ್ ||೬೫||

ನಿದ್ರೆಯಾವರಿಸುತಿರೆ ಮೂರು ತಾಸಿನ ಬಳಿಕ-।
ಮದ್ರಿಜಾ-ಧವ-ಸಮನ ನೆನೆಯುತ್ತಲೇಳುತಿರೆ ।
ಭದ್ರ ಸುಂದರ ಕಾಯನಾಗಿ ಕಂಗೊಳಿಸಿದಂ ಬಂದಳನಿತರೊಳಾತನ ॥
ಭದ್ರೆಯೆಂಬುವ ಜ್ಯೇಷ್ಠ ಭಗಿನಿಯವನಂ ಕಂಡು ।
ಚಿದ್ರವಿಯ ಹುಚ್ಚಯನ ವಾಸವನವಿದೆಯೇನು-।
ಪದ್ರವವ ಮಾಡಿ ವಿಕಲಾಂಗತೆಯ ನೀಗಲ್ಕೈದಿಹನವನೆ ಯೆನ್ನನುಜನು ॥೬೬॥

ಅವನ ಪೆಸರಷ್ಟಾಂಗ-ವಕ್ರನೆಂದಿಹುದಿಲ್ಲಿ-।
ಗವನನಾಂ ಶೋಧಿಸುತಲಿಲ್ಲಿಗೈದಿಹೆನೆನಲ್-।
ಕವಳ ನುಡಿಯಂ ಕೇಳ್ದು ನುಡಿದನೆಂತೆನಲಕ್ಕ ಗುರುತು ಸಿಗಲೊಲ್ಲದೇನೌ ? ॥
ತವ ಸಹೋದರ ನಾನೆ, ಗುರುಕೃಪೆಯೊಳಿಂತಾದೆ ।
ಸವಿನಯದೊಳೆನ್ನ ನಣಕಿಸುತಿರ್ದೆ ಪೇಳೀಗ-।
ಳವಿನೀತತೆಯ ತೊರೆಯುತೆನಗೆ ನಿನ್ನಯ ಮಗಳ ಕೊಡಲೊಪ್ಪುವೆಯೊ ? ಇಲ್ಲವೊ ॥

ತಪ್ಪದಾಯಿತು ನಿನ್ನನಣಕಿಸುತ ನಾಂ ಕೆಟ್ಟ-।
ನಪ್ಪ ಮಮ ಪುತ್ರಿಯಂ ನಿನ್ನ ಮೊದಲಿನ ರೂಪ-।
ಮಪ್ಪಿರುವದದಕಾಗಿ ಬಂದೆ ನಾನಿಲ್ಲಿಗೀ ನೀಂ ಬಂದ ವಾರ್ತೆಯರಿದು॥
ತಪ್ಪದಲೆ ಗುರುದರ್ಶನವ ಮಾಡಿಸೆನಗೀಗ ।
ಬಪ್ಪೆ ನಾನೆನ್ನ ಮಗಳಂ ಕರೆದುಕೊಂಡಿಲ್ಲಿ-।
ಗಪ್ಪಣೆಯ ಪಡೆಯುತ್ತೆ ಕರೆದುಕೊಂಡೈದು ತಿಹೆನೆಂದುಕರೆತಂದಳವಳಂ ॥೬೮॥

ನೋಡಿ ಮರಗುತ್ತೆ ಸ್ತುತಿಸಿದನಿಂತು; ಗುರುವರನೆ, ।
ಕಾಡದಿರು ಶುಭಕರನೆ, ಭಯಹರನೆ, ಪರತರನೆ, ।
ಮಾಡು ಕೃಪೆಯಂ ಚರನೆ, ಶ್ರೀಕರನೆ, ಗುಣಧರನೆ, ಯೆನ್ನ ಸೊಸೆಯಂ ಕರುಣೆಯೊಳ್ ॥
ನೋಡು ಪರದುಃಖಿ-ಸಂಹರನೆ, ಭಕ್ತೋದ್ಧರನೆ, ।
ನೀಡಭಯಮಂ ಸುಖಂಕರನೆ, ಮೋಕ್ಷಾಕರನೆ, ।
ಕೂಡೆ ನೀಂ ದರ್ಶನವನೀಯದಿರೆ ಹುಚ್ಚೇಶ, ಕೊಡುವೆ ಪ್ರಾಣಮನೀಗಳೆ; ॥೬೯॥

ಎಂದು ಕರೆಯುತ್ತೆ ಪ್ರಾಣಮನರ್ಪಿಸಲ್ ತೊಡಗೆ ।
ಬಂದು ನುಡಿದಂ ಗುರುವರೇಣ್ಯನೆಂತೆನಲೆಲವೊ ।
ಯಿಂದು ತವಭಗಿನಿಯೋಳ್ ದಯೆಯೆನೇತಕೆ ತೋರ್ಪೆ ನಿನಗವಳ್ ಹಿತಮನೇನಂ॥
ಚಂದದಿಂ ಗೈದಿಹಳ್ ಪೇಳೆನಲ್ ವಂದಿಸುತ-।
ಲಂದದಿಂದೇಳ್ದು ಕೈಮುಗಿದು ನುಡಿದಿಹನಿಂತು ।
ತಂದೆ; ನಿನಗರಿಯದ ವಿಚಾರವಾವುದು ಮತ್ತಮೆನ್ನಿಂದೆ ನುಡಿಪುದೇಕೆ!? ॥೨೦॥

ಆಗಳವನಕ್ಕನಹ ಶೋಭಾಖ್ಯೆಯೆರಗುತ್ತೆ ।
ಭೋಗುರುವೆ ಯೆನಗಿಂತ ನಿರ್ದಯ ಸ್ತ್ರೀಯಿಲ್ಲ;
ರಾಗಮಂ ತ್ಯಜಿಸಿವನ ಕಾಡಲಾದೇಂ ಬಹಳ ಮಾತೇಂ ವಿಷವ ಕೊಟ್ಟೆನು ॥
ಯೋಗಿವರ್ಯನೆ, "ಅಷ್ಟವಕ್ರಾಂಗ" ನಾದೀತ-।
ನಾಗಿರುವಿವಂ ಕುರೂಪಿಯು ನೋಡದಾಂ ಜನದ ।
ನೀಗಲತಿಶಯಮಾದ, ನಿಂದೆಗುಂ ಪಾತ್ರಳಾದೇಂ ದೀನ-ಕಲ್ಪದ್ರುಮ; ॥೨೧॥

ಆಸ್ತಿಯಾಶೆಯೊಳಿವನ ಕೊಲ್ಲಲಿಚ್ಛಿಸಿದೆ ನಾಂ ।
ಸ್ವಾಸ್ತಿಕತೆಯಂ ತವರು ಮನೆಯು ಧೃತಿಯ ಮರೆದು ।
ನಾಸ್ತಿಕ–ಧ್ವಾಂತ–ಹಾರಿಯೆ, ಕೆಟ್ಟೆನೈ ನಿನ್ನ ಕೃಪೆಯಿಂದಲುಳಿಯವೇಳ್ಕಾಂ ॥
ಆಸ್ತಿಕಂ ಮದನುಜಂ ನಿನ್ನ ಸ್ಮರಿಸಿದುದನರಿ-।
ದಾಸ್ತಿಕತ್ವಮನಾಗಳುಂ ತೊರೆದಿರುವಾನೆ ।
ಸ್ವಸ್ತಿಯಂ ಮರೆಯುತ್ತೆ ಮಗಳ ದುಸ್ಥಿತಿಗುಮಾಂ ಮೂಲ–ಕಾರಣಳಾದೆನು ॥೨೨॥

ಇವನಿಲ್ಲಿ ಬಂದ ಬಳಿಕೆನ್ನ ಮಗಳುಂ ಗುರುವೆ ।
ತವೆಯಾಗಳಷ್ಟಾಂಗ-ವಕ್ರೆಯಾದಳ್ ತಿಳಿದು ।
ತವ ಸನ್ನಿಧಿಗೆ ಬಂದೆನೆನ್ನ ತಪ್ಪಂ ಮರೆದು ನೀನೆ ಸಲುಹಿದೆಯಾದೊಡೆ ॥
ಸುವಿನಯದೊಳೆನ್ನ ತಮ್ಮಂಗೆ ಭದ್ರಾಂಗನೆಂ–।
ಬುವ ಪೆಸರನಿಟ್ಟೆವಂಗಿವಳನೀಯುತೆ ವಿವಾ–।
ಹವ ಮಾಡುತಾಂ ನಿನ್ನ ಧ್ಯಾನದೋಳ್ ಕಾಲಮಂ ಕಳೆವೆನೆಂದತ್ತಳೆರಗಿ ॥೨೩॥

ಆಗಲೌ ಶಿವನೊಳಿತನೆಸಗುತಿಹನೆಂದು ಶಿವ-|
ಯೋಗಿವರನಾ ಕುಮಾರಿಯ ತಲೆಯ ಮೇಲೆ ಸುವಿ-|
ರಾಗದಿಂ ಕರಮನಿಟ್ಟಡಗಿದಂ ತತ್ತನುಜೆ ಸುಂದರತೆಯಂ ಪಡೆದಳು ||
ಬಾಗುತಾ ಗವಿಯ ಬಾಗಿಲಕೆ ಸಂತೋಷದಿಂ |
ಸಾಗಿದರ್ ಸ್ತುತಿಸುತ್ತಲಾಶ್ಚರ್ಯದೀ ಕಥೆಯ |
ಲೋಗರೊಳ್ ಪೇಳುತ್ತೆ ಗುರು-ಕೀರ್ತಿಯಂ ಪಸರಿಸುತ್ತೆ ಸುಖದಿಂದಿರ್ದರು ||೭೪||

*　　*

ಗುರುವಿಗೊರೆದಂತೆ ತಮ್ಮಂಗೆ ಭದ್ರಾಂಗನೆಂ |
ಬುರುನಾಮಂ ಭರದೆ ಶೋಭಿಕ್ಕನೀಯ್ಯುತ್ತೆ |
ಪರಸಿ ಮಗಳೊಡನಾ ವಿವಾಹಮಂ ಮಾಡುತ್ತೆ ಹುಚ್ಚಯನ ನೆನೆಯುತಿಹಳು ||
ಕರಮೆಸೆಯುತೊಂದು ಮತ್ತಂ ಲೀಲೆ ಹೊಬಳ್ಳಿ |
ಪುರದಲ್ಲಿಯೇ ನೆನಲ್ ಪೇಳ್ವೆನೋರ್ವಂ ಧನಿಯು |
ಹರಿರಾಯ ನಾಮಕಂ ತತ್‌ಪುತ್ರನಚ್ಚುತಾಹ್ವಯನೆಂಟು ಬರಿಸದವನು ||೭೫||

ಆಗಿರ್ದಡುಂ ಬರೆಯಲೋದಲುಂ ಬರಲಿಲ್ಲ-|
ಮಾಗಳ್ತಿರೆದು ಬಾಲರೊಡನಾಡುತಿಹನಾತ-|
ನೇಗೈಯ್ಯುದ್ದಡುಂ ಶಾಲೆಗಂ ಪೋಗಲಿಲ್ಲವಂ ಪೋಪರಂ ಬಿಡಿಸುತಿರ್ದಂ ||
ರಾಗಾತಿಶಯದಿಂದೆ ತಿನಿಸುಣಿಸುಗಳನಿತ್ತು |
ಲೋಗರ್ಕಳುರೆ ಬೈದಡುಂ ಬಿಡದೆ ಬಾಲರಂ |
ಕೂಗುತ್ತಲಾಟಕ್ಕೆ ಕರೆದು ತೊಡಗಿಸುತಿಹಂ ತಂದೆ-ತಾಯ್ಗಳ್ ಬಡಿದಡುಂ ||೭೬||

ತಂದೆ-ತಾಯ್ಗಳ್‌ಗತಿ ವ್ಯಸನವಾದುದು ನೋಡಿ |
ವಂದಿತ ಬ್ರಾಹ್ಮಣರ್ ತಾವು ತಮ್ಮಯ ಸುತಂ |
ಮುಂದೆಯವಿವೇಕಿಯಪ್ಪಂ ಮಾಳ್ಪುದೇನೆಮ್ಮ ಕೀರ್ತಿ ಪಾಳಾಗುತಿಹುದು ||
ಸಂದ ಸಂಪದಮೆ ವಿಪ್ರಾನ್ವಯಕೆ ವಿದ್ಯೆಯಿದೆ |
ಛಂದದೆಮ್ಮೆಯ ಕುಲದ ಜಸಮಿದುಂ ಕೆಡುತಿಹುದು |
ಕುಂದಿಸುವನದನಿವಂ ಕಲಿವವರನುಂ ಬಿಡಿಸಿ ದೇವರಿಂತಹ ಪುತ್ರನಂ ||೭೭||

ಎಮಗೆತಕಿತ್ತಿಹನೊ ಪೂರ್ವ ದುಷ್ಕರ್ಮವಿದು |
ಕ್ರಮಗೆಟ್ಟು ಕಾಡುತಿಹುದಾ ದೇವನಂ ಪಳಿದೊ-|
ಡಮಿತ ಫಲವೇಂ ಬರ್ಪುದೀ ಕರ್ಮವಂ ಕೆಡಿಸಲರಿಯೆ ಸದ್ಗುರುವೆ ಯಿಷ್ಟಂ ||
ವಿಮಲನಾಡಂತಪ್ಪ ಗುರುದೇವನಾರವನ-|
ವಮಳ ಮನರಾಗಲಾವೆಲ್ಲಿ ಶೋಧಿಸವೇಳ್ಕು |
ಸಮತೆಯಿಂದಚ್ಚು ತನ ತಂದೆ-ತಾಯಿಗಳಿಂತು ನೆನೆದು ಯೋಚಿಸುತಿರ್ದರು ||೭೮||

ದಿನದಿನಕ್ಕವರ ಮಗನವಿವೇಕಿಯಾಗುತ್ತಿ |
ಘನ ದುರ್ವ್ಯಸನಗಳ್ಗೆ ಬಲಿಯಾಗುತಿರ್ದನವ-|
ನನಿತರಲ್ಲೋರ್ವನೈದುತ್ತೆ ತದ್-ಬಂಧುವರನಾದರದೆ ಹುಚ್ಚೇಶನ ||
ವಿನುತ ಮಹಿಮೆಯ ಬಣ್ಣಿಸುತ್ತೆ ತತ್-ಸನ್ನಿಧಿಗೆ |
ವಿನಯದಿಂ ಕರೆದೊಯ್ಯಲರುಹುತಿರಲಾ ಕ್ಷಣದೊ-|
ಳನಘ ಭಕ್ತಿಯ ತಳೆದು ಕರದೊಯ್ದರಾ ತಪೋವನಕೆ ಗುರುವಂ ನೆನೆಯುತೆ ||೭೯||

ತಂದೆ ತಾಯ್ಗಳ ಸಂಗಡಂ ಬಿಲ್ವವನದಲ್ಲಿ |
ದಂದುಗದೊಳಚ್ಚುತಂ ಕಾಲಿಡುವನಿತರಲ್ಲಿ |
ಸಂದಿದವಿವೇಕಮತಿಯಳಿದುದಾ ಕ್ಷಣದಲ್ಲಿ ಗುರುಭಕ್ತಿಯುದ್ಭವಿಸಿತು ||
ಹೊಂದಿದಾಸ್ತಿಕ್ಯಭಾವಂ ನೆಲೆಸಿ ಸಾಷ್ಟಾಂಗ- |
ವಂದನೆಯ ಸಲಿಸುತ್ತೆ ಗವಿಯಬಾಗಿಲಕೈದಿ |
ನಿಂದು ಸದ್ಗುರುವೆ, ಯುದ್ಧರಿಸೆಂದು ಪ್ರಾರ್ಥಿಸುತೆ ಮತ್ತೆರಗಲಾ ಕುಮಾರಂ;||೮೦||

ಪಿಡಿದೆತ್ತಿದಂ ಬಂದು ಗುರುಸಿದ್ಧನಾತನಂ |
ಮೃಡರೂಪನಂ ಕಂಡು ಹರಿರಾಯನೆರಗುತ್ತೆ |
ನುಡಿದನೆಂತೆನೆ ದೇವ, ಹರಿಹರರಿಗಿಂತ ಗುರುವಧಿಕನೆಂದೀ ಜನತೆಗೆ ||
ಸಡಗರದೆ ನೀಂ ಸತ್ಯಮಾಗಿಸಿದೆ ಹುಚ್ಚೇಶ |
ಪೊಡವಿಯೊಳ್ ಗುರುತತ್ತ್ವ ಮಹಿಮೆಯಂ ತಿಳಿದಿರ್ದು- |
ಮೊಡೆಯ ಮತ್ಸುತನಿಗಿಂದವಿವೇಕಿಯಾನಾಗಿ ಮರೆದಿರ್ದೆ ನಾಂ ನಿನ್ನನೆ ||೮೧||

ಕ್ಷಮಿಸೆಂದು ನಮಿಸುತಿರೆ ಗುರುವೊರೆದನೆಂತೆನೆಲ್ ।
ಭ್ರಮೆಯೊಳಗೆ ಸಿಲ್ಕಿರ್ದೆಯಿದು ನಿಜಂ ಹರಿರಾಯ ।
ತಮಮದೀ ತನಯಂಗೆ ಮುಸುಕಿರ್ದುದೈ ದೇವ ದೇವವಿಷಯದ ಭೇದಮೆ ॥
ಶ್ರಮವಿಲ್ಲದಲೆ ತೊಲಗಿದಾಕ್ಷಣದೆ ನಿನ್ನ ಸುತ- ।
ನಮಿತವಹ ತದವಿವೇಕಂ ತೊಲಂಗಿದುದಾಗ- ।
ಳಮಳ ಭೂಸುರನೆ ತಿಳಿ ದೇವನೋರ್ವಂ ಭಕ್ತರಾತನ ಸ್ವರೂಪರೆಂದು ॥೮೨॥

ಎಂದೊರೆಯುತವರೆ ತಂದಿರ್ದ ಫಲಗಳನವರಿ- ।
ಗಂದದಿಂದಾಶಿಷವ ಗೈದು ಕಳುಹಿದನವರ- ।
ನಂದಿನೀ ಲೀಲೆ ಲೋಕಪ್ರಸಿದ್ಧತೆಯಾಂತು ಜನದೆ ಭಕ್ತಿಯ ಬೆಳೆಸಿತು ॥
ಛಂದದಿಂ ತದ್ವಿಜಂ ಸುವಿವೇಕಿಯಾಗಿರ್ಪ; ।
ನಂದನನೊಡನೆ ಬೆರೆದು ಸುಖಿಯಾದನಾ ಗುರುವೆ ।
ಸಂದ ಸಾಕ್ಷಾನ್ಮಹಾದೇವನೆಂದರಿಯುತ್ತೆ ನುತಿಸುತಿರ್ದಂ ಶ್ರದ್ಧೆಯೊಳ್ ॥೮೩॥

॥ ಭಕ್ತಿಕಾಂಡ ಮಂಗಲ ಪದ್ಯ ॥

ನಿರ್ವಿಕಲ್ಪಕ-ಸಮಾಧಿಸ್ಥ-ಗುರುಸಿದ್ಧ ಭೋ ।
ಸರ್ವ-ಹೃದಯಸ್ಥಿತ-ತಮಸ್ಸೂರ್ಯ-ಸತ್ಪ್ರಭೋ, ।
ನಿರ್ವಿಕಾರೋತ್ತಮ-ಜಗದ್ಗುರು-ಮಹಾವಿಭೋ, ತ್ರಾಹಿವಿಶ್ವಂ ತ್ವಂ ಸದಾ ॥
ಶರ್ವರೂಪನೆ ನಿನ್ನ ಪಾದಕೃಪೆಯುಂ ಬನ್ನ- ।
ಮುರ್ವರೆಯೊಳೆನಿತುಮಿಲ್ಲದಲೆ ಬರೆದಿತ್ತೆನ್ನ- ।
ಖರ್ವಸಂಪದವ ವರ್ಧಿಸುತಿರುವ ಭಕ್ತಿಕಾಂಡಂ ಮುಗಿದುಪಾದ್ಯರ್‌ನಲಿಯಲು ॥

ವೀರೇಶ-ಪುಣ್ಯಾಶ್ರಮಂ ಗದುಗಿನೋಳ್ ಮೆರೆವು-।
ಮೋರಂತೆ ಶೋಭಿಸುವದಲ್ಲಿ ಪಂಚಾಕ್ಷರನು-।
ದಾರ ಸ್ವ ಗುರುವರನ ಯೋಗದ ಸಮಾಧಿಯಿದೆ; ಕುಳಿತಿಲ್ಲಿ ಗುರು-ಕರುಣೆಯೋಳ್॥
ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ ।
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ ।
ಮೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣದೋಳ್ ಸಂಧಿ ಯೇಳು ॥೮೪॥

ಅಂತು ಸಂಧಿ ೭ಕ್ಕಂ, ಪದಂಗಳು ಎಂಭತ್ತ್ರೈದಕ್ಕಂ;
ಇಂತು, ಒಟ್ಟು ಪದಂಗಳು ೩೪೩ ಕ್ಕಂ;
—ಮಂಗಲಂ—

॥ ಶ್ರೀ ಗುರುಬಸವ ಲಿಂಗಾಯ ನಮಃ ॥



# ಎಂಟನೆಯ ಸಂಧಿ





॥ ಸೂಚನೆ ॥

ಚನ್ನಬಸವೇಶ್ವರಂ ತ್ರಿಸಹಸ್ರ ಗಣರೊಂದಿ ।
ಗುನ್ನತಂ ಗುರುಸಿದ್ಧ-ದೇವ ಸನ್ನಿಧಿಗೈದಿ ।
ಮನ್ನಣೆಯ ಶರಣ-ಸಾಹಿತ್ಯ ಭಾಂಡಾರಮಂ ಸಲಿಸಿದಂ ರಕ್ಷಿಸೆಂದು ॥

* *

[ಸಂಧಿ ಪ್ರಾರ್ಥನಾ-ಪದ್ಯ]

ಮೆರೆವ ಜೇಡರ ಪುಳಂ ತನ್ನ ತನುವಿಂದೊಗೆವ ।
ನೆರೆ ನೂಲಿನಿಂ ಮನೆಯ ಕಟ್ಟಿ ತನ್ನಯ ನೂಲೆ ।
ಸರಸದಿಂ ತನಗೆ ಸುತ್ತುತ್ತೆ ತಾನಳಿವಂತೆ ಎನ್ನ ಮನದಿಂದುದಿಸಿದ ॥
ಬರಿಯಾಶೆ ಯೆನಗೆ ಸುತ್ತಿರುವುದಾಂ ಮಡಿಯುವೇಂ ।
ಕರಮೆನ್ನೆನಿದರಿಂದೆ ಪೊರೆವರಿಲ್ಲೈ ಯಾರು-।
ಮರಿದು ಪೊರೆಯೈ ಹರನೆ, ನೀಂ ತೊಲಂಗಿಸುತೆನ್ನನಿದರಿಂದೆ ಸತತ ಮೊಲೆದು ॥೧॥

* *

ಇಂತು ಹುಚ್ಚೇಶನೆಂಬುವ ನಾಮದಿಂ ಜಗ-।
ತ್ಕಾಂತ ಗುರುಸಿದ್ಧೇಶನೊಲಿದು ಭಕ್ತೋದ್ಧಾರ ।
ಚಿಂತನೊಳಿರುತಿರಲ್ ಹೂಬಳ್ಳಿಪುರ ಬಿಲ್ವ-ವನದ ಗವಿಯಲ್ಲಿ ಸತತಂ ॥
ಶಾಂತನ ಸುಲೀಲಾ ಪ್ರಭಾವಮಂ ಪ್ರಭುವರಂ ।
ಶಾಂತಿಯಿಂ ಬಸವಾದಿ ಶರಣರ್ಗೆ ತಿಳಿಸಲ್ಕೆ ।
ಸಂತಸದೆ ಕಲ್ಯಾಣಕ್ಕೈದುತಿಹನಲ್ಲಮಾಖ್ಯಂ ಚರಸುತಲ್ಲಲ್ಲಿಯೆ ॥೨॥

ಲೀಲೆಯಿಂ ಚರಿಸುತಿರ್ದಂ ಮಹಾಪ್ರಭುವರಂ ।
ಕಾಲಕಾಲಂಗುಮಿದು ತಿಳಿಯಲ್ಕಸಾಧ್ಯಮೆನೆ ।
ಪಾಲಕ ಚರೋತ್ತಮನ ಮಹಿಮೆಯಿದು ಜರುಗಿಹುದದೆಂತೆನಲ್ ಪೇಳ್ವೆನದನೆ ॥
ಶೀಲಮಂ ಮರೆಯುತೆ ಮಹಾರೋಗಿ ರೂಪವ ವಿ-।
ಶಾಲ ಬಸವಾದಿ ಭಕ್ತರ ಭಕ್ತಿಯಂ ತಿಳಿಯೆ ।
ಮೇಲೆ ಮೇಲಾ ಗುರುವು ನರಳುತ್ತಲಲೆಯುತಿರ್ದಂ ಬಣ್ಣಿಸುವೆ ನಾನದಂ ॥೩॥

ಬೆರಳುಗಳ್ ಕತ್ತರಿಸಿ ದೇಹಂ ವ್ರಣಂ ಬೆರಸಿ ।
ಸುರಿಯುತಿರೆ ಕೀವಂ, ನೊಣಂಗಳಲಿದೊತ್ತರಿಸಿ ।
ನೆರೆಯುತಿರೆ ಕೈಗಳಂ ಜಾಡಿಸುತಲೋಸರಿಸಿ ತೀಟೆಯಂ ಕಳೆದುಕೊಳಲು ॥
ಧರೆಯೊಳುರುಳುತ್ತಿರ್ದನೇಳುತ್ತಿರ್ದಂ ತವಿಸಿ ।
ಯುರಿಯುತಿರೆ ಗಾಯದಿಂ ನೆತ್ತರಂ ತವೆ ಸ್ರವಿಸಿ ।
ಪರಿಯುತಿರ್ದತ್ತದಂ ನಿರುಕಿಸಿ ಜನರ್ ಪೇಸಿ ಧಾವಿಸುತ್ತಿರ್ದರರಿದು ॥೪॥

ಈ ವಾರ್ತೆ ಜನರಿಂದೆ ಬಸವೇಶ್ವರಂಗರಿಕೆ-।
ಯಾವಾಗಳಾಗುತಿರೆ ಲಿಂಗಮಂ ಧ್ಯಾನಿಸುತೆ ।
ದೇವ ಪ್ರಭೂತ್ತಮನ ಲೀಲೆಯೆಂದರಿಯುತ್ತೆ ಶೋಧಿಸುತಲವನ ಕಂಡು ॥
ಓವೆನ್ನುತಾಗ ಸಾಷ್ಟಾಂಗ ಮಾಗೆರಗಲ್ಕೆ ।
ಥೇವೇಡಿತಾಲ್ಲಮಂ ನೋಡುತಿಂತೆಂದನೈ ।
"ಸಾವಂಗೆ ನಮಿಸುವದೆ ಹುಚ್ಚನಲ್ಲವೆ ನೀಂ ? ಮಹಾರೋಗಿಯಾಗಿರ್ಪೆನು; ॥೫॥

ಸರಿಯಂಟು ರೋಗವಿದು ನಿನಗಂಟಲಹುದು ನೀ-|
ನುರು ಮಹಾಮಂತ್ರಿಯಾನುರೆ ಮಹಾರೋಗಿ-|
ಯರಿವಿಲ್ಲವೇ ನಿನಗೆ ಗುರುಗಳ ಗಣಂಗಳ ನೊಣಂಗಳಿಂ ತಿಳಿದು ನೋಡು ||
ಕರವಾಲಿಸುತ್ತೆ ಬಸವೇಶನಿಂತೆಂದನೈ |
"ತ್ವರದೊಳೀ ರೋಗಮೆನಗಂಟಿ ಭವರೋಗಮಂ |
ಪರಿಹರಿಸಲೈ ಸಾಕು ಲೀಲೆಯದು ಬಾರೆನುತಲಾಗಳಂದಣವ ತರಿಸಿ ||೬||

ಸಲೆ ಕುಳ್ಳಿರಿಸುತಾಗ ವಾದ್ಯ-ವೈಭವದೊಳುರೆ |
ಬಲುಬ ಬಯ್ಯುತಿರೆ ಕಂಡವರ್ ಬಿಡದೆ ಕರೆತಂದ-|
ನೊಲಿದಲ್ಲಮಂ ರೋಗಿಲೀಲೆಯಂ ತೊರೆಯಲ್ಕೆ, ರುಜೆ ನಿಂದಕರ್ಗಂಟಿತು ||
ನಲಿದಾ ಪ್ರಭುವು ಬಸವ-ಹಸ್ತದಿಂ ಸ್ವವ್ಯಾಧಿ |
ತೊಲಗಿತೆನ್ನುತೆ ನಗುತೆ ನಮಿಪರ್ಗೆ ಕರುಣಿಸುತೆ |
ಸಲುಗೆಯಿಂ ಬಸವೇಶ ಚನ್ನಬಸವೇಶ್ವರರ ಕೈಗಳಂ ಪಿಡಿಯುತಿಳಿದಂ ||೭||

ಪಡೆದು ಸತ್ಕಾರವ ಶಿವಾನುಭವ ಮಂಟಪದೆ |
ಮೃಡ-ಸಮಂ ನೋಡುತ್ತೆ ಶೂನ್ಯ-ಸಿಂಹಾಸನವ |
ಸಡಗರದೆ ಬಣ್ಣಿಸುತ್ತಿರ್ದನಾ ಪ್ರಭುವರಂ ತತ್ಪೀಠ-ಸೌಂದರ್ಯವ ||
ನುಡಿವೆನೆಂತನಲದಂ ಸಂಕ್ಷೇಪಮಾಗಿಲ್ಲಿ |
ಮೃಡ-ಶರಣರಾಲಿಪುದು ತದ್ರಚನ-ಪದ್ಧತಿಯ-
ನೊಡನೀಯುತಿರ್ದತ್ತು ವೀಕ್ಷಕರ ಮನಕೆ ನಿಶ್ಚಲತೆಯಂ ಶಾಂತಿಯನದು ||೮||

ಶೂನ್ಯಾರ್ಥಮಿಲ್ಲೆಂದು ಸಿಂಹಾಸನಾರ್ಥಮಂ |
ಧನ್ಯಾತ್ಮರೊರೆಯುವರ್ ಪೀಠಮೆಂದೆಲ್ಲರಿದ-|
ಕನ್ಯಾರ್ಥಮಾವುದುಂ ದೊರೆಯದದ ಕಾವುದುಂ ತಾತ್ಪರ್ಯಕಿದು ಸಲ್ಲದು ||
ಶೂನ್ಯತ್ವ-ಸಹಿತಮಾದುದು ಪೀಠಮೆಂತಹುದ |
ಜನ್ಯತ್ವದಲ್ಲಿ ರಾಹಿತ್ಯಮಿಲ್ಲವೆಯಿಲ್ಲ-|
ಮನ್ಯಾಯಮೆಂದೊಡಲ್ಲಿದರಾಖ್ಯೆ ಯತ್ಯಂತ ಸಾರ್ಥಕಮದೆಂತೆಂದೊಡೆ ||೯||

7)

ಈ ಶೂನ್ಯ ಶಬ್ದಕ್ಕೆ ಕನ್ನಡದ ತದ್ಭವಂ ।
ದೇಶೀಯ ನಾಮಮಿದು ಸೊನ್ನೆಯೆಂದಿರ್ಪುದಾ ।
ದೇಶಸ್ಥ ಜನತೆಯಿಂ ಪೂಜಿಯೆಂಬುವ ಪೆಸರನಿಟ್ಟಹುದದಕ್ಕೆ ತಿಳಿಯೆ ॥
ಶ್ರೀಶಾದ್ಯರೊಪ್ಪಿಟ್ಟ ಲಿಂಗ–ಬಂಧುಗಳೆಂಬ ।
ನಾಶತ್ವಮಿಲ್ಲದಿಹ ಪರ್ಯಾಯ-ನಾಮಗಳ್ ।
ಕ್ಲೇಶತ್ವಮಂ ಕಳೆವವುರು ಬಿಂದುನೇ ಶೂನ್ಯವಿಾ ಶೂನ್ಯವೇ ಪೀಠವು ॥೧೮॥

ಬಿಂದುವಿದು ವಿಶ್ವಕ್ಕೆ ಗೋಲಕಂ ತಾನಹುದು ।
ಛಂದದಿಂದಿದು ಚಿತ್ತಿನಾಧಾರದೊಳಗಿಪುದು ।
ಸಂದಿರ್ದೀ ಚಿತ್ತೆ ಚೈತನ್ಯಮಾತ್ರಂ ಸಲೆ ನಿರಂಜನಮದೆನಿಸಿರ್ಪುದು ॥
ಅಂದದಾ ರೂಪರಾವೆಂದರಿದು ಬಸವಣ್ಣ– ।
ನಿಂಮ ಸಿಂಹಾಸನಮನಿದನೇರಲೆಮ್ಮನರಿ– ।
ವಿಂದೆ ಗುರುತಿಸುತಿಲ್ಲಿ ಕರೆತಂದಿರುವನೆಂದು ಪ್ರಭುವೂರೆಯುತಿರ್ದನಾಗ ॥೧೯॥

ಸೊನ್ನೆಯಂಕಿಗಳ ಹೆಚ್ಚಳಕಾಧಾರ ವೆಂ– ।
ತುನ್ನತಿಗೆ ಭಕ್ತನಾಧಾರನಾ ಚೇತನದ ।
ಸನ್ನುತಂ ಬಸವಣ್ಣನೆಮ್ಮ ಗೌರವ–ಮೂಲನವನಿಲ್ಲದಿರಲೆಮ್ಮನು ॥
ನನ್ನಿಯಿದು ಕೇಳ್ವರಾರೀ ಪೀಠವುಂ ರಚಿಸಿ ।
ಮುನ್ನಣೆಯೊಳಿತ್ತಿಹನೋಂಕಾರ ಸದನಮಿದೆ ।
ಚಿನ್ನದೊಂಭತ್ತು ಸೋಪಾನಂಗಳಿದಕಿಹವು ತನ್ನವ ಪ್ರಣಪಜಂಗಳ್ ॥೨೦॥

ನವ ಚಕ್ರ, ನವ ಕಮಲ, ನವ ಶಕ್ತಿ, ನವ ಭಕ್ತಿ, ।
ನವ ವರ್ಣ, ನವ ರೂಪ, ನವ ಹಸ್ತ, ನವ ಶೇಷ, ।
ನವ ದೈವ, ನವ ಲಿಂಗಗಳ್, ನವಾಂಗಂಗಳ್, ನವ ಸ್ಥಲಗಳೆಸೆಯುತಿಹವು ॥
ನವತೆಗಾಶ್ರಯಮಾಗುತೆಸೆಯುವೀ ಪೀಠವುಂ ।
ನವ ಪರಶಿವಾವತಾರಿಯೆ ಯೇರಲರ್ಹನ್ನೈ ।
ನವ ರಚನೆಯಿದನೀಕ್ಷಿಸಲ್ ಸಾಧ್ಯಮಿಲ್ಲೆನಗೆ ಗಣವರರೆ ನಿಮ್ಮೆಲ್ಲರ ॥೨೧॥

ಬಸವರಾಜನ ಶ್ರೀಪದಕೆ ನಮೋ ನಮಯೆನುತ- ।
ಲಸಮಮಾದೀ ಶೂನ್ಯ-ಸಿಂಹಾಸನವನೇರು- ।
ತೊಸೆದು ಕುಳ್ಳಿರುವೆನೆಂದಾರೋಹಿಸುತಲಕ್ಷಿಗೊಪ್ಪಿದಂ ಮಂಡಿಸುತ್ತೆ ॥
ಎಸೆಯುವ ನಿರಂಜನ ಮಹಾಲಿಂಗನಿವನೆಂಬು- ।
ದೊಸೆದು ಸರ್ವರ ಮನಕೆ ನಿಶ್ಚಿತಮದಾಗಿರುತೆ ।
ರಸನೆಯು ದಣಿಯುವನಕಮಖಿಲ ಶರಣರ್ ಪ್ರಮಥರೆರಗಿ ಶಂಸಿಸುತಿರ್ದರು ॥೧೪॥

"ಪ್ರಭುವೆ, ಸತ್‌ಪ್ರಭುವೆ, ಚಿತ್‌ಪ್ರಭುವೆ, ಮೋದಪ್ರಭುವೆ, ।
ಪ್ರಭುವೆ, ವಿತ್‌ಪ್ರಭುವೆ, ಹೃತ್‌ಪ್ರಭುವೆ, ವಿದ್ಯಾ-ಪ್ರಭುವೆ, ।
ಪ್ರಭುವೆ, ಜಿತ್‌ಪ್ರಭುವೆ, ಕೃತ್‌ಪ್ರಭುವೆ, ವಿದ್ವತ್-ಪ್ರಭುವೆ, ಸತ್ಯಪ್ರಭುವೆ, ವಿಭುವೆ, ಭೋ- ॥
ಪ್ರಭುವೆ, ಧೀಪ್ರಭುವೆ, ಭೂಪ್ರಭುವೆ, ಕೃತ್ಯ ಪ್ರಭುವೆ, ।
ಪ್ರಭುವೆ, ಶ್ರೀಪ್ರಭುವೆ, ಹ್ರೀಪ್ರಭುವೆ,ಬೃತ್ಯ-ಪ್ರಭುವೆ, ।
ಪ್ರಭುವೆ, ದೃತ್ ಪ್ರಭುವೆ, ಭೃತ್ ಪ್ರಭುವೆ, ಪೊರೆಯಲ್ಲಮ ಪ್ರಭುವೆ, ನೀಂ" ॥

ಇಂತು ನುತಿಸುತ್ತಿರಲ್ ಗಣವೃಂದಮಾಗ ಮುದ- ।
ವಾಂತು ಬಸವೇಶ್ವರಂ ನಮಿಸುತ್ತೆ ಕೈಮುಗಿದು ।
"ಕಾಂತ ಗುರುವರನೆ, ಚರವರನೆ, ವಿಶ್ವೋದ್ಧರನೆ, ಶಿಷ್ಯವೃಂದ-ಪ್ರವರನೆ ॥
ಶಾಂತಸುಖಕರನೆ, ಹಿತಕರನೆ, ಸುಗುಣಾಕರನೆ, ।
ಭ್ರಾಂತ-ಭವಹರನೆ, ಸ್ಮರಹರನೆ, ಯಘ-ಸಂಹರನೆ, ।
ಸಂತತಂ ನೀನೆನ್ನ ನುತಿಸದಲೆ ಕೃಪೆದೋರಿ ನೀಡು ಭಕ್ತಿಯ ಭಾಗ್ಯವ" ॥೧೬॥

ಎಂದು ಪ್ರಾರ್ಥಿಸುವ ಬಸವೇಶನಂ ಸಂತೈಸಿ ।
ಕುಂದದಲ್ಲಿಯನೇಕ ವರ್ಷಂಗಳನಕಮಿೞ ।
ಯಂದ ಮಾದ ಶಿವಾನುಭವದ ಮಂಟಪದಲ್ಲಿ ಯಧ್ಯಕ್ಷನಹನಲ್ಲಮಂ ॥
ಚಂದದಿಂ ಶೋಭಿಸುತಲಿರ್ಪಾಗ ವಿಧಿವಶದೊ- ।
ಳೊಂದು ಲೀಲೆಯು ಜರುಗಿತದನೆ ಬಣ್ಣಿಸುವೆ ನಾ-
ನೊಂದು ದಿನ ಭಕ್ತಿಯಿಂ ಬಸವೇಶನರಮನೆಗೆ ಶರಣ; ಹರಳಯ್ಯ ನೈದಿ ॥೧೭॥

ಶರಣಾರ್ಥಿಯೆಂದೀಕ್ಷಿಸುತ್ತೆ ಬಸವೇಶನೊಲಿ-|
ದೆರಗುತ್ತೆ, ಶರಣು ಶರಣಾರ್ಥಿಯೆನ್ನುತೆ ನಡೆಯ-|
ಲುರೆ ದುಃಖಿಸುತೆ ಶರಣ ಹರಳಯ್ಯ ನೈದಿದಂ ಸ್ವಗೃಹಕ್ಕೆ ತನ್ನ ಸತಿಯಂ ||
ನಿರುಕಿಸುತಲಿಂತೊರೆದನೆಲವೊ ಸಾಧ್ವಿಯೆ, ಕೇಳು |
"ಹರ-ಸಮರ್ ಬಸವೇಶನಗಿಂದುಮೆರಡು ಸಲ |
ಶರಣೆಂದು ಬಹು ಭಾರಮಂ ಪೊರಸಿದರ್ ತಡೆಯಲಾಗದಿಹ ದುಃಖಮಡಸಿ ||೧೮||

ಕಾಡುತಿದೆ ಮಾಳ್ಪುದೇಂ ಭವಭಾರಿಯಾದೆನಾಂ |
ನಾಡೆ ಹಿತಮಾದುಪಾಯವ ಪೇಳುತುಳಿಸೆಂದು |
ಬೇಡುತಿರಲೆರಗುತ್ತೆ ಕೈಮುಗಿದು "ಕಲ್ಯಾಣಿ"ಯಾಗ ನುಡಿದಳದಂತೆನೆ ||
ಬೇಡಿಕೊಳ್ಳುವಿರೇತಕೆನ್ನೊಡೆಯಲ್ತೆ ನೀವ್ |
ಬಾಡಿಸುವದೇಕೆ ಹೃತ್ಪದ್ಮಮಂ ಶಾಂತಿಯಿಂ |
ಮಾಡಿರಾಲೋಚನೆಯನೆನಗರಿ ಯುವೊಂದುಪಾಯಮುದೇನೆನಲ್ ಪೇಳ್ವೆನು ||೧೯||

ನಿಮ್ಮ ಬಲದೊಡೆಯ ಚರ್ಮಮನೆನ್ನ ಯೆಡದೊಡೆಯ |
ಚರ್ಮಮಂ ತೆಗೆದು ಪಾದುಕೆಗಳಂ ರಚಿಸುತ್ತೆ |
ಸಮ್ಮತಿಯೊಳರ್ಪಿಸಿ ಮನಃಶಾಂತಿಯಂ ಪಡೆವುದುಚಿತಮೆನಲೊಪ್ಪುತಿಂತು ||
ಸಮ್ಮತಿಸಿ ಪೊಗಳಿದಂ "ನೀಂ ದೇವಿಯೆನ್ನ ಸಖಿ |
ಯೆಮ್ಮ ಸಲುಹಲ್ ಬಂದೆ ಹರನಾಜ್ಞೆಯಿಂದೆನುತೆ-|
ಲೊಮ್ಮೆಗಂ ತನ್ನ ಬಲದೊಡೆಯ ತೊಗಲಂ ತೆಗೆದು ರಚಿಸಿದಂ ಪಾದುಕೆಯನೆ||೨೦||

ಪತಿಗೆ ನಮಿಸುತೆ ತನ್ನ ಪೊಗಳಿಕೆಯ ಮಾಣಿಸುತೆ |
ಸತಿಯರ್ಗೆ ಸಲ್ಲುವಾದರ್ಶಮಾದಳ್ ಸಾಧ್ವಿ |
ಯತಿ ಭಕ್ತಿಯಿಂದೆಡದ ತೊಡೆಯ ಚರ್ಮದಿನೊಲಿದು ರಚಿಸಿದಳ್ ಪಾದುಕೆಯನೆ ||
ಕ್ಷಿತಿಯಲ್ಲಿ ಪೊಸತಿದೆನ್ನುತೆ ಪೊಗಳುತಿರೆ ಶರಣ-|
ತತಿಯೇಳುತಾಗ ಹರಳಯ್ಯನಲ್ಲಿಂದೈದಿ |
ಮತಿಯಲ್ಲಿ ಹಿಗ್ಗುತ್ತೆ ಬಸವೇಶನಿದಿರೊಳಿಟ್ಟೆರಗಿದಂ ಕೊಳ್ಳೆನ್ನುತೆ ||೨೧||

ಸರ್ವ ಚರಿತಪುನರಿದು, ಪಾದುಕೆಗಳಂ ನೋಡಿ |
ಶರ್ವರೂಪಂ ಬಸವನೊರೆದನೆಂತೆನಲಯ್ಯ |
ಸರ್ವನಾಯಕ ಸಂಗಮೇಶ್ವರಂಗಿವುಗಳಂ ನೀವರ್ಪಿಸುವದುಚಿತವು ||
ಉರ್ವಿಯೊಳಿವಂ ಮೆಟ್ಟಲಸಮರ್ಥರೆಲ್ಲರುಮ–|
ಪೂರ್ವ ವಸ್ತುಗಳೆನುತೆ ಕೊಂಡು ಶೀರ್ಷದೆ ಧರಿಸಿ |
ಗರ್ವರಹಿತಂ ಶರಣ ಹರಳಾರ್ಯ ಹಸ್ತದೋಳ್ ಕೊಟ್ಟು ನಮಿಸಿದನಳ್ತಿಯೋಳ್ ||

ನಮಿಸಿಪೋದಂ ಕೊಂಡು ಹರಳಾರ್ಯ ನತಿ ಮುದದೆ |
ಕ್ರಮಗೆಟ್ಟು ಮಾರ್ಗದೋಳ್ ಮಧುವರಸನಾಮಕಂ |
ಸಮತೆಯಂ ಬಿಟ್ಟು ವಿಪ್ರಂ ಬಲಾತ್ಕಾರದಿಂ ಪಾದುಕೆಗಳಂ ಕೊಳ್ಳುತೆ ||
ಕುಮತಿಯಿಂ ಬಸವಾದಿ ಶರಣರಂ ನಿಂದಿಸುತ ।
ಲಮಿತ ಮದದಿಂ ಮೆಟ್ಟಿದಂ ಕಾಲಿನಿಂದಾಗ |
ನಿಮಿಷದೋಳ್ ಬೀಳುತುರುಳಾಡತೊಡಗಿದನವುಗಳಂ ಕೊಂಡು ಹರಳಯ್ಯನು||೨೩||

ಪೋಗುತಿರೆ ಮಧುವರಸನೇಳ್ದು ಸ್ವಗೃಹಕೆ ಶ್ರಮದಿ– ।
ನಾಗಮಿಸಿದಂ ವಿವಿಧ ಸೂಪಚಾರವ ದಾಸ– |
ಪೂಗಮುರೆ ಮಾಳ್ಪ ಸಮಯದೆ ಮರೆದು ಹರಳಯನ ಸ್ನಾನ–ಜಲಮಂ ಕುಡಿಸಲು ||
ಆಗಳಾ ಬ್ರಾಹ್ಮಣನ ವೈಯ್ಯುರಿಯು ತೊಲಗಿಹುದು |
ರಾಗದಿಂ ಕೇಳಿ ತಿಳಿಯುತೆ ಶರಣನಾಲಯಕೆ |
ಪೋಗಿ ಹರಳಯ್ಯನಾ ಚರಣದೋಳ್ ಬೀಳುತ್ತೆ ಕ್ಷಮಿಸೆಂದು ಪ್ರಾರ್ಥಿಸಿದನು ||೨೪||

ಶಿವಯೋಗ ಮಹಿಮೆಯಂ ತಿಳಿದು ಮಧ್ವರಸನಾ |
ಶಿವಸದನುಭವ–ಮಂಟಪಕ್ಕೆ ಪೋಗುತೆ ನಮಿಸಿ ।
ಶಿವಸಮ ಪ್ರಭುವರಂ ಗುರು ಶರಣ ತಿಂತಿಣಿಗೆ ಪ್ರಾರ್ಥಿಸುತೆ ಸುವಿವೇಕದಿಂ ||
ಶಿವದೀಕ್ಷೆ ಪಡೆದಿಹಂ ಚನ್ನಬಸವೇಶನಿಂ |
ಶಿವಭಕ್ತಿ ವರ್ಧಿಸಲ್ ಲೋಗರಚ್ಚರಿಸಲ್ಕೆ |
ಶಿವಕೃಪೆಯ ಪಡೆಯಲ್ಕೆ ಹರಳಾರ್ಯ ಪುತ್ರನೊಡನಾತ್ಮ ಜಾತೆಯ ಮದುವೆಯಂ ||

ವಿರಚಿಸಲ್ ನಿಶ್ಚೈಸಿದಂ ಬಸವ ಮುಖ್ಯರುಂ ।
ಹೆರಸಮ ಪ್ರಭುವರಂ ಬೇಡವೆಂದಡುಮಾಗ- ।
ಳುರು ಛಲವ ಬಿಡದವಂ ನಮಿಸಿ ಪ್ರಾರ್ಥಿಸುತೊಪ್ಪಿ ಸುತ್ತೆ ತತ್‌ಸನ್ನಿಧಿಯೊಳಿ ॥
ತ್ವರದಿಂ ವಿವಾಹ ಕಾರ್ಯಮನೆ ಪೂರೈಸಿದಂ; ।
ನರಪ ಬಿಜ್ಜಳನರಿದು ಮಧ್ವರಸನಂ ಮತ್ತೆ ।
ಹರಳಾರ್ಯನಂ ಬಸವರಾಜನಂ ಕರೆಯಿಸಿ ವಿಚಾರಿಸಲ್ ತೊಡಗಿದನದಂ ॥೨೬॥

ಅಲ್ಲಮ ಪ್ರಭುವರಂ ಚನ್ನಬಸವೇಶಂಗೆ ।
ವಲ್ಲಭಂ ಕಲ್ಯಾಣದುರ್ಭವಿಷ್ಯವನರುಪಿ ।
ಸಲ್ಲಲಿತ ಶರಣ ಸಾಹಿತ್ಯಮಂ ಪಾಳಾಗದಂತೆ ರಕ್ಷಿಸಲಾತಸಿಂ ॥
ಅಲ್ಲಿ ವಚನವ ಕೊಂಡು ಮತ್ತೊರೆದೆನೆಂತೆನಲ್ ।
“ಬಲ್ಲವನೆ ನಿನಗಿದಂ ರಕ್ಷಿಸುದು ಜಡಮೆನಿಸ- ।
ಲೆಲ್ಲಿಯುಂ ಬಿಡದೆ ಹೂಬಳ್ಳಿಗ್ರಾಮಕೆ ಪೋಗಿ ಗುರುಸಿದ್ಧಯತಿಗೊಪ್ಪಿಸೈ ॥೨೭॥

ಉಳವಿಯುರೆ ಕ್ಷೇತ್ರಕ್ಕೆ ನೀಂ ನಿರ್ಗಮಿಸುದಲ್ಲಿ ।
ಯುಳಿಮೆಯ ಸಮಾಧಿಯದು ಸಿದ್ಧಿಸುವುದೈ ನಿನಗೆ ।
ಸುಳಿವು ತೋರದ ತೆರದೊಳಲ್ಲಿಂದೆ ಮೂರುಸಾವಿರ ಗಣರ ವೃಂದದೊಡನೆ ॥
ಮಿಳಿತನಾಗುತೆ ತೆರಳು; ನಿರ್ಗಮಿಸ ಮಾರ್ಗದೊಳ್ ।
ಹೊಳೆವುನೊಂದೂರಹುದು ಹೂಬಳ್ಳಿ ಪುರಮದರ ।
ಬಳಿಯೊಳಿಹ ಬಿಲ್ವವನ, ಗಹ್ವರದೊಳಿರ್ಪನೈ ಗುರುಸಿದ್ಧನಾಮ ಯತಿಯು; ॥೨೮॥

ಆತನಂ ತದ್‌ಜನರ್ 'ಹುಚ್ಚ'ನೆಂಬುವ ಪೆಸರೊ- ।
ಳೋತು ಕರೆಯುವರವಂ ಹುಚ್ಚನಂದದೆ ತೋರ್ಪ- ।
ನಾತುರದೆ ವಚನ ಸಾಹಿತ್ಯಮಂ ರಕ್ಷಿಸಲ್ ಶಿವನೆ ಬಂದಿಹನಲ್ಲಿಗೆ ॥
ಸಾತಿಶಯ ವಾಕ್ಯಮಲ್ಲಮದು ನಿನಗಲ್ಲ ಸಲೆ ।
ಖ್ಯಾತಮೆನಲರಿಕೆಯಾಗುವುದೆಂ”ದು ಪೇಳುತ್ತೆ ।
ಪ್ರೀತಿಯಿಂದ ಶಿವಾನುಭವ ಮಂಟಪಾಧ್ಯಕ್ಷ ಪದಮಿತ್ತಂ ಪ್ರಭುವರಂ ॥೨೯॥

ಅನಿತರೊಳ್ ಬಸವೇಶನರಸನಾಲಯದಿಂದೆ |
ಘನ ಮಹಿಮನಲ್ಲಮನ ಸನ್ನಿಧಿಗೆ ಬಂದೆರಗು- |
ತನಘನಪ್ಪಣೆಯಂತೆ ಕೈಮುಗಿದು ಕುಳಿತುಕೊಂಡಂ ಮ್ಲಾನ-ವಕ್ತ್ರಾಂಬುಜಂ ||
ವಿನುತನಂ ನೋಡುತ್ತೆ ಬಿನ್ನವಿಸುತಿಹನಿಂತು |
"ಸನಕಾದಿ ವಂದಿತರೆ, ಯೆನಗಾಜ್ಞೆಯಂ ಕೊಡಿರಿ |
ವಿನತ-ವರ್ಯರೆ, ಯಿಲ್ಲಿಯಾಂ ನಿಲ್ಲಲಾರೆನ್ನೈ ಶರಣ-ವಧೆಯಾಗುತಿಹುದು; ||೩೦||

ಸಂಗಮ-ಕ್ಷೇತ್ರಕ್ಕೆ ಪೋಪೆನೆ"ನ್ನುತೆ ಮಣಿದು |
ತುಂಗ-ಗುರ್ವಾಶಿಷವ ಪಡೆಯುತ್ತೆ ತೆರಳೆ ಪ್ರಭು- |
ಲಿಂಗನಾ ಕ್ಷಣದಲ್ಲಿ ತೆರಳಿದಂ ಶ್ರೀಶೈಲಕಲ್ಲಿಂದ ಪ್ರಮಥರೊಡನೆ ||
ಭಂಗ-ರಹಿತಂ ಚನ್ನಬಸವೇಶ್ವರಂ ಶರಣ |
ಮಂಗಲದ ಸಾಹಿತ್ಯಮಂ ಕೊಂಡು ತ್ರಿಸಹಸ್ರ- |
ಜಂಗಮರೊಡನೆ ಬೆರೆದು ತೆರಳಿದಂ ಕಲ್ಯಾಣ-ನಗರದಿಂದಂ ಜ್ಞಾನಿಯು; ||೩೧||

ಹರಳಯ್ಯ-ಮಧುವರಸರಂ ಶೂಲಕೇರಿಸಿದ |
ಮರುದಿನದೆ ರೊಚ್ಚಿಗೇಳ್ದಾ ಜನತೆಯಿಂ ಬಿಜ್ಜ- |
ಳರಸನುರೆ ಕೊಲೆಯಾಗಿ ರಾಜಸೈನ್ಯಂ ಶರಣ ಮುಖ್ಯ-ಸ್ಥರಂ ಶೋಧಿಸೆ ||
ಬರುವ ವಾರ್ತೆಯು ಗುಪ್ತ ಚರರ ಮುಖದಿಂ ತಿಳಿಯೆ |
ನೆರೆ ಧಾವಿಸುತ್ತಿರ್ದನಾ ಚನ್ನಬಸವೇಶ- |
ನುರು ಶರಣ ಸಾಹಿತ್ಯ-ರಕ್ಷಣದ ಭಾರಮಂ ವಹಿಸಿರ್ಪ ಕತದಿಂದಲೆ ||೩೨||

ಅಲ್ಲಲ್ಲಿ ಶಿವಪೂಜೆಯಿಂ ತೀರ್ಚುತನುದಿನಂ |
ಒಲ್ಲಾತನಹ ಚನ್ನಬಸವೇಶನವಸರದಿ- |
ಸುಲ್ಲಾಸಮೆಸಿಸಲ್ಕೆ ಹೂಬಳ್ಳಿಪುರದಲ್ಲಿ ನಿಂದು ಭಕ್ತರ್ ನಮಿಸಲು ||
ಅಲ್ಲಿರ್ಪರಂ ಕೇಳ್ದನೆಂತೆನಲ್ "ಭಕ್ತರೇ, |
ಯಿಲ್ಲಿರ್ಪರೇಂ ಮಹಿಮರಾರಾದಡುಂ ಪೇಳಿ" |
ರಿಲ್ಲೆಂದು ಪೇಳಿವೆನ್ನೈಯೋರ್ವನಿರ್ಪಂ ಹುಚ್ಚನಂದದೊಳ್; ಜನರವಂಗೆ ||೩೩||

ಹುಚ್ಚನೆಂದುರೆ ಪೆಸರನಿಟ್ಟಹರ್ ಮಹಿಮೆಗಳ ।
ನಿಚ್ಚಮೆಸೆಯುತ್ತಿಹನೆನಲ್ ಕೇಳಿ ಹರುಷದಿಂ ।
ಸಚ್ಚಿದಾನಂದಾತ್ಮನಂ ತೋರಬನ್ನಿರೆನೆ ಭಕ್ತನಾಗೋರ್ವನೈದಿ ॥
ಮೆಚ್ಚುವಂದದೆ ಪೊಳೆವ ಬಿಲ್ವವನಮಂ ತೋರೆ ।
ನೆಚ್ಚಿನಡೆದಂ ಚಿನ್ನಬಸವನೆಲ್ಲರ್ ಶರಣ- ।
ರೊಚ್ಚತಂ ನಂಬುತಿರೆ ಕಂಡನಾಗಳನೇಕ ಸರ್ಪ-ಸುಕುಟೀರಂಗಳಂ ॥೩೪॥

ತೋರುತಂ ಮೂರುಸಾವಿರ ಜಂಗಮಾವಳಿಗೆ ।
ಮೀರಿದಾ ದಂಡನಾಯಕ ಷಟ್-ಸ್ಥಲೇಶ್ವರಂ ।
ಸೇರದಿಹ ಪಾವು-ಮುಂಗುಲಿಗಳುರೆ ಸ್ನೇಹಮಂ ವಿಸ್ಮಯದ ಲೀಲೆಯೆಂದು ॥
ಸಾರಿ ಬಣ್ಣಿಸುತಿರಲ್ ಬಸವಪ್ಪಶೆಟ್ಟಿಯ್ಯ- ।
ದೇರಿದುರು ಮೋದದಿಂ ಭಕ್ತರೊಂದಿಗೆ ನಮಿಸಿ ।
ಭೂರಿ ವೈಭವದಿಂದೆ ಕರೆದೊಯ್ದು ಭಕ್ತಿಯಿಂ ಶಿವಪೂಜೆಯಂ ಗೈಸಿದಂ ॥೩೫॥

ಸುಪ್ರಸಾದದ ತದ್ ವ್ಯವಸ್ಥೆಯಂ ಕಾಣುತ್ತೆ ।
ಸುಪ್ರಮೋದಂ ಚನ್ನಬಸವೇಶ್ವರಂ ಸಲಿಸು- ।
ತಾಪ್ರಮಥರವರೊಡನೆ ಗುರುಸಿದ್ಧಲೀಲೆಗಳ ಕೇಳುತೆ ಶಿವಾರ್ಪಣವನು ॥
ಅಪ್ರಮೇಯಂ ಮುಗಿಸುತಂ ಶಿವಾನುಭವಮಂ ।
ಕ್ಷಿಪ್ರದೋಳ್ ಮುಗಿಸುತ್ತೆ ಸರ್ವಜ್ಞನಂ ಕಾಣ- ।
ಲಪ್ರತರ್ಕ್ಯಜ್ಞಾನಿ ಪೋಗುವನಿತರೊಳೀ ಮಹಾತ್ಮನೈದುತಲಲ್ಲಿಗೆ ॥ ॥೩೬॥

ನಮಿಸುತಿರಲೆಲ್ಲರೊಡನಾ ಚನ್ನಬಸವನುಂ ।
ನಮಿಸಲ್ಕೆ ಗುರುಸಿದ್ಧನಿಂತೆಂದನೇಸಿದ್ಧೈ ।
ನಮಿಸುವದದೇತಕಾಂ ಹುಚ್ಚನೆಂದೆಲ್ಲರೆನ್ನಂ ಕರೆಯುತಿಹರರಿಯಿರಿ; ॥
ಅಮಿತ ಕರುಣೆಯೊಳಲ್ಲಮ ಪ್ರಭುವರಂ ತಾನೆ ।
ಸಮತೆಯಿಂದಿಲ್ಲಿ ಗೈತಂದು ವನವಿದನೊಲಿದು ।
ವಿಮಲ ಸಾತ್ತ್ವಿಕ ಪವಿತ್ರತೆಯನಿತ್ತಿಹನಧಿಕ ಮಹಿಮೆಗಳ ಜರುಗುತಿಹವು ॥೩೭॥

ಸೀವಾ ಪ್ರಭೂತ್ತಮ ಸುತೇಜಸ್ಕರುರು ಷಟ್‌ಸ್ಥಲ |
ಲಾವಾಸನುಂದಿರ-ಜ್ಯೋತಿರಾಕಾರ ರಘ |
ಭಾವಾಟ ವೀಜ್ವಲನರಿಲ್ಲಿಗೈ ತಂದಿರೈ ನಿಮ್ಮಡಿಯ ಸೋಂಕಿನಿಂದೆ |
ದೇವೋತ್ತಮರೆ; ಯೀ ನೆಲಕ್ಕೆ ಶಾಂತಿ ಸ್ಥಿರತೆ |
ಯಾವಾಗಳುಂ ನೆಲೆಸಿತೈ ಚನ್ನಬಸವೇಶ |
ಜೀವರ್ಕಳಂ ಪಾವನಂ ಗೊಳಿಪ ಸುಚರಿತರೆ, ಪಡೆಯಿರೀಗ ವಿರಾಮವ ||೩೮||

ಆಲಿಸುತ್ತಾ ಚನ್ನಬಸವೇಶ ಸಿಂತೆಂದ |
ನೋಲಯಿಸಿ ನಿಮ್ಮುಲಿಯ ವಿಶ್ರಾಂತಿ ಪಡೆಯುವೆವು |
ಪಾಲಕರೆ, ಹುಚ್ಚರಲ್ಲೈ ಸೀವು ನಿಮಗೇಕೆ ಹುಚ್ಚನೆಂಬುವ ನಾಮವು? ||
ಲೀಲೆಯಿದು ಸಾಕಿನ್ನು ಮಲ್ಲಮಪ್ರಭುವೆನಗೆ |
ಶೂಲಿಯೇ ಸೀವೆಂದು ಶರಣ ಸಾಹಿತ್ಯ ಪರಿ- |
ಪಾಲನೆಗಿಳಿದಿರೆನುತೆ ನಿಮ್ಮ ಪೆಸರಂ ನಲಿದು ಗುರುಸಿದ್ಧನೆಂದೊರೆದಿಹಂ ||೩೯||

ಇಂದಿನಿಂದೀ ಪೆಸರ್ ಪ್ರಭುಕರಣೆಯಿಂ ನಿಮಗೆ |
ಪೊಂದಿ ಜಯವೀಯ್ಯುವುದು ಶರಣಸಾಹಿತ್ಯಮಂ |
ಕುಂದಿಸದೆ ನೀವೆ ರಕ್ಷಿಸವೇಳ್ಕೆನುತ್ತದರ ಗ್ರಂಥ-ಭಾಂಢಾರವ ಸಲೆ ||
ಛಂದದಿಂ ತೆಗೆದು ಸಲಿಸುತ್ತೆ ನಮಿಸುತ್ತಿರಲ್ |
ವಂದಿಸುತೆ ಕೊಂಡು ನುತಿಸುತ್ತಿರ್ದನಾ ಗುರುವು |
ಸಂದಿರ್ದೀ ಕಾರ್ಯಂ ಮುಗಿದುದೆಂದರಿದು ಚನ್ನಬಸವಂ ನಲಿದಿಯುತಿರುತಿಹಂ ||೪೦||

ವೀರೇಶ-ಪುಣ್ಯಾಶ್ರಮಂ ಗದುಗಿನೋಳ್ ಮೆರೆವು-|
ಪೋರಂತೆ ಶೋಭಿಸುವದಲ್ಲಿ ಪಂಚಾಕ್ಷರನು-|
ಪಾರ ಸ್ವ ಗುರುವರನ ಯೋಗದ ಸಮಾಧಿಯಿದೆ; ಕುಳಿತಿಲ್ಲಿ ಗುರು-ಕರುಣೆಯೋಳ್||
ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ |
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ |
ಮೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣದೋಳ್ ಸಂಧಿ ಯೆಂಟು ||೪೧||

**ಅಂತು ಸಂಧಿ ೮ಕ್ಕಂ, ಪದಂಗಳು ನಾಲ್ವತ್ತೊಂದಕ್ಕಂ;**

**ಇಂತು, ಒಟ್ಟು ಪದಂಗಳು ೩೮೭ಕ್ಕಂ;**

**—ಮಂಗಲಂ—**

॥ ಶ್ರೀ ಗುರು ಬಸವಲಿಂಗಾಯ ನಮಃ ॥



# ಒಂಭತ್ತನೆಯ ಸಂಧಿ





॥ ಸೂಚನೆ ॥

ಚನ್ನಬಸವೇಶನಾ ಗುರುಸಿದ್ಧ ಗುರುವರನ ।
ಸನ್ನುತಂ ಪೊಗಳುತ್ತೆ ಬಿಲ್ವವನದಿಂದಾಗ. ।
ಉನ್ನತಂ ತೆರಳ್ದನುಳವಿಕ್ಷೇತ್ರಕೊಲವಿಂದೆ ತ್ರಿಸಹಸ್ರ ಗಣರನುಳಿದು ॥

* *

[ಸಂಧಿ ಪ್ರಾರ್ಥನಾ-ಪದ್ಯ]

ಎದ್ದು ಬಲು ಯೆತ್ತರಕೆ ಸಾಗಿ ಕೆಳಗೀಕ್ಷಿಸುತೆ ।
ಸದ್ದುಗಯ್ಯದೆ ಶೋಧಿಸುತೆ, ಪೆಣಕ್ಕೆರಗುವಂ- ।
ತಿದ್ದು ಮಾನವ-ಜನ್ಮದೊಳ್ ಭೋಗದಾಸೆಯಿಂ ಧನಕೆರಗಿದೆಂ ಶಂಕರಾ ॥
ತಿದ್ದುತೆನ್ನಂ ನಿನ್ನ ರೂಪವಹ ಗುರು-ಗಣಕೆ, ।
ಮುದ್ದು ಪಾದಕ್ಕೆರಗಲಿಚ್ಛೆಯಿಂ ನೀಡಭವ ।
ಹದ್ದು ಮೀರಿದ ಭಕ್ತಿಯೊಳಗೆನ್ನ ಮನಮಾವಗಂ ನೆಲಸಲಿ ಪ್ರಭೋ ॥೧॥

ತಮ್ಮ ಗುರುವಿನ ಪೆಸರ್ "ಗುರುಸಿದ್ಧ"ವಿಭುವೆಂಬು |
ದೊಮ್ಮೆಗಂ ಜನತೆ ಕರ್ಣಾಕರ್ಣಿಕೆಯೊಳರಿದು |
ಸಮ್ಮುದದೊಳಂತೆ ಕರೆಯಲ್ ತೊಡಂಗಿದರಾಗ 'ಹುಚ್ಚ'ನಾಮವ ತೊರೆಯುತೆ ||
ಹಮ್ಮಳಿದುದಾಗ ಸಿದ್ಧಿಯ ಪಡೆದ ದುರ್ಜನರ |
ಬಿಮ್ಮಳಿದು ಸಿದ್ಧರೆಲ್ಲರ್ ಬಂದು ಭಕ್ತಿಯಿಂ |
ಸಮ್ಮತಿಸಿ, ಶಿವಯೋಗಿ-ಚರಣ-ಕಿಂಕರರಾಗಿ ಪೊಬಳ್ಳಿ ಭಕ್ತರರಿದು ||೨||

ಬಸವಪ್ಪ ಶ್ರೇಷ್ಠಿಯೊಡನೈದುತಂ ಶ್ರೀ ಚನ್ನ- |
ಬಸವೇಶ-ಸನ್ನಿಧಿಗೆ ನಮಿಸುತೆ ತದಾಜ್ಞೆಯಿಂ |
ಸಸಿನದಿಂ ಕುಳ್ಳಿರುತಿರಲ್ ಶೆಟ್ಟಿ ಯೇಳುತ್ತೆ ಕೈಮುಗಿದು, ಕೇಳ್ದನಿಂತು ; ||
"ಪ್ರಸಿತ ಮಹಿಮರೆ, ತಮ್ಮ ಪಾದ-ದರ್ಶನದಿಂದೆ |
ವಸುಧೆಯರಿದಿಹುದೆಮ್ಮ ಗುರುಸಿದ್ಧ ಗುರುವರನ |
ಲಸಿತ ನಾಮಮನೀಗಳಿದ್ದ ಮಠಮಂ ಬೆಳೆಸಿ, ತಮ್ಮ ಸನ್ನಿಧಿಯಲ್ಲಿಯೆ, ||೩||

ಗುರುಸಿದ್ಧ-ಗುರುವರನ ತಿರ್ಯಗಾಂದೋಲಿಕೆಯೊ- |
ಳುರೆ ಮೆರೆಯಿಸುತ್ತೆ ಕರೆದೊಯ್ದು ಮುದದಿಂದಿವನ |
ಪರಮ ಸಿಂಹಾಸನಾರೋಹಣದೆ ಕಾರ್ಯಮಂ ನೆರೆವೇರಿಸುವ ಬಯಕೆಯು ||
ನೆರೆ ಜನಿಸಿಹುದು ಮನದೆ; ಮೂರು ತಿಂಗಳದೊಳಗೆ |
ಪರಿಪರಿಯ ಯತ್ನದಿಂ ಮುಗಿಸುವೆವು; ತಾವಾಗ- |
ಳಿರವೇಳ್ಕೆನುತೆ ವಂದಿಸಲ್ಕೆ, ಗಣವರ-ಸನ್ನಿಧಾನಮೊಳ್ ಭಕ್ತಿಯಿಂದೆ ||೪||

ಚನ್ನ ಬಸವೇಶನದನಾಲಿಸುತಲಿಂತೊರೆದ- |
"ನಿನ್ನುಮಿದಕಾ ಕಾಲವೊದಗಿ ಬಂದಿಲ್ಲವೈ |
ನನ್ನಿಯಿದುಮಾದಡುಂ ಮೊದಲೊಂದು ಭವ್ಯಮಾಗಿಹ ಮಠವ ನಿರ್ಮಿಸುವುದು ||
ಸನ್ನುತನನಾ ಮೇಲೆಯೊಪ್ಪಿಸುವುದುತ್ಸವಕೆ; |
ಮನ್ನಣೆಗೆ ಗುರುವೊಪ್ಪದಿರ್ದಡುಂ ಮುದದಿಂದೆ |
ತನ್ನ ಶಿಷ್ಯರೊಳೊರ್ವನಂ ನಿಯಮಿಸುವೆನದಕ್ಕಧಿಕಾರಿಯಾತನಪ್ಪಂ; ||೫||

ಸದ್ಯದೋಳ್ ನಿಮ್ಮ ಗುರುವರ್ಯಂಗೆ ಗಣವರರ-|
ನಾದ್ಯಗಾನೊಪ್ಪಿಪೇಂ ಗುರುಸಿದ್ಧರಾಜನನ-|
ವದ್ಯಂ ನಿರಂಜನ ಜಗದ್ಗುರುವೆನಿಪ್ಪ ಪೆಸರಂ ಪಡೆವನಿವರಿಂದಲೆ ||
ವೇದ್ಯನಂ ನಿಮ್ಮಿಚ್ಛೆಯಂತೊಪ್ಪಿಸುವದೆನಗೆ |
ಸೂದ್ಯತರೆ ಕಠಿಣವಹ ವಿಷಯಮಿದು ಕಾಲಮಿದು |
ಹೃದ್ಯಮಾಗೀಗಳೊದಗದು ಕಾಯವೇಳ್ಕದಂ ತಕ್ಕುದಿದಕಲ್ಲಾಗ್ರಹಂ ||೬||

ಎಂದವರಿಗಾದರದ ಸಮ್ಮತಿಯ ಪೇಳುತ್ತ-|
ಲಂದದಿಂ ತದ್ಭಕ್ತರಂ ಕಳುಪಿ ಶರಣವರ-|
ವೃಂದದಿಂ ರಚಿತವಹ ಸಾಹಿತ್ಯದುರೆ ಪಠಣದೋಳ್ ಬೆರೆದ ಗುರುಸಿದ್ಧನಂ ||
ಛಂದದಿಂ ಚನ್ನಬಸವೇಶ್ವರಂ ಕಾಣುತ್ತೆ |
ನಂದಿಸಲ್ ತಾನೇಳ್ದು ಪೊಬಳ್ಳಿ ಗುರುವರನ-|
ನಂದ ಮುದದಿಂ ನಮಿಸುತಾಸನದೆ ಕುಳ್ಳಿರಿಸುತಂ ಮಹಾಗ್ರಹದಿನವನಂ ||೭||

ಮಾತನಾಡಿದನೆಂತೆನಲ್ "ಷಟ್‌ಸ್ಥಲೇಶ್ವರನೆ, |
ಖ್ಯಾತವಹ ಶರಣ-ಸಾಹಿತ್ಯಮಂ ನೊಳ್ಪೆನಗೆ |
ಸಾತಿಶಯಮಾನಂದಮಾಗಿಹುದು ಮನ್ಮಕನುಷ್ಠಾನದಿಮ್ಮಿಗಿಲೆನೆ ||
ಪ್ರೀತಿಯನಿತಿದರಾ ಪ್ರಚಾರ-ಕಾರ್ಯದ ಸೇವೆ-|
ಯೋತು ಪ್ರಭುಗಳ ನಿಮ್ಮ ಕರುಣೆಯಿಂದೆನ್ನ ಸಲೆ |
ಖ್ಯಾತಿಯಿಂ ಸೇಳಿರೈ ಯದನೆಂತು ಸೂಜ್ವಲದೆ ಕಾಯ್ದು ಕೊಳ್ಳುವದೆಂದೆನೆ ||೮||

ಈ ನುಡಿಯನಾಲಿಸುತೆ ಚನ್ನಬಸವೇಶ್ವರಂ |
ಜ್ಞಾನಿಯಿಂತೊರೆದನೈ "ತಾವೆ ಸರ್ವಜ್ಞರೈ, |
ಯಾನೆಯಲ್ಪಜ್ಞನೈ, ಪೇಳ್ವುದೆಂತಾದಡುಂ ಪೇಳ್ವೆ ನಾಜ್ಞೆಯಃ ಮೀರದೆ||
ಜ್ಞಾನನಿಧಿಗಳೆ, ವಿಶ್ವಸಾಹಿತ್ಯ ತತ್ವಂ ಶಿ- |
ವಾನುಭವ ಶರಣಸಾಹಿತ್ಯದಲ್ಲಿಹುದರಿಂ |
ಮಾನನೀಯರೆ, ಪ್ರಭುವಿನಪ್ಪಣೆಯಿದಕ್ಕಿಹುದರಿಂ ಸದಾ ನಡೆಯುತಿಹುದು ||೯||

ಈ ಪ್ರಸಾರದ ಕೃತಿಗೆ ತಮ್ಮ ತಾಣಂ ಕೇಂದ್ರ- |
ಮಪ್ರತಿಹತ ಯಶಸ್ಸಾಂದ್ರಮೆನಿಸುವದಿನ್ನು- |
ಮಪ್ರತಿಮ ವರ ಜಗದ್ಗುರುಗಳೆನಿಸುವಿರಿ ತಾವ್ ತ್ರಿಸಹಸ್ರ ವಿರತ-ಗಣಕೆ ||
ಸುಪ್ರಥಿತ ಮಾಗಿ ತಮ್ಮಯ ಶಿಷ್ಯರಪ್ಪರಿವ- |
ರಪ್ರತರ್ಕ್ಯ ಮೆನಲ್ಕೆ ತಮ್ಮಭಿಮತವ ಪಡೆದು |
ಕ್ಷಿಪ್ರಮಾಗಿಯೆ ತತ್ತ್ವದುರೆ ಪ್ರಚಾರವ ಮಾಡಿ ಮೂರು ಸಾವಿರ ಮಠಗಳಂ ||೧೦||

ಸ್ಥಾಪಿಸುವರಲ್ಲಲ್ಲಿಗಾಗ ನೀವಿಹ ನೆಲೆಯ |
ಲೋಪವಿಲ್ಲದೆ ಮೂರುಸಾವಿರಮಠವೆನಿಸಿಪ್ಪ-|
ದೀಪಿಸುವ ನಾಮಮಂ ಪಡೆದು ರಾಜಿಸುವದೈ ಗುರುಸಿದ್ಧರಾಜಯತಿಯೆ ||
ಶ್ರೀಪತೀಡಿತರೆ, ತಮ್ಮಯ ಪರಂಪರೆಯವರ್ಗೆ |
ರೂಪಿಸುದು ಶ್ರೀ ಜಗದ್ಗುರುವೆಂಬ ಮನ್ನಣೆಯು |
ತಾಪ-ರಹಿತರೆ, ಮೂರುಸಾವಿರ ವಿರಕ್ತರಂ ತತ್‌ಪ್ರಚಾರಕೆ ಕಳಿಪುದು ||೧೧||

ನಾಳಿಗಾನುಳವಿಯ ವನಕ್ಕೆ ಪೋಗುವೆನಲ್ಲಿ |
ತಾಳಿ ಶಾಂತಿಯನನುಷ್ಠಿತಿಯ ಗೈಯಲ್ ವೇಳ್ಕು |
ಮೇಳವಿಸಿದಾನಂದದಿಂ ತಾವ್ ಘನಾಶಿಷಮನೆನಗೀಯವೇಳ್ಕೆನ್ನಲು ||
ಕೇಳುತಾ ಚನ್ನಬಸವೇಶನುಕ್ತಿಯನಿಂತು |
ಭಾಳಲೋಚನ ಸಮಂ ಗುರುಸಿದ್ಧ ಗುರುವೆಂದ-|
"ನೂಳಿಗದವಂಗೇಕೆ ಪರಕೆಯುಂ ಕೊಡುವ ಮಾತಳಿಲುಕಲ್ಲಂ ಪೊರುವುದೆ? ||೧೨||

ಅಲ್ಲಮಪ್ರಭು ನಿದೇಶವಕೊಂಡು ಶರಣರ್ಕ |
ಳಿಲ್ಲಿಗೈದುವರೊಲಿದು ಮೂರುಸಾಸಿರ ಜನರ್ |
ಬಲ್ಲಹರೆ ನಾಳೆ ತೆರಳಲ್ ಬೇಡಿರವರನುಷ್ಠಿತಿಗಾಗಿ ಯುಳವಿ-ಬನಕೆ ||
ಲಲ್ಲೆಯಿಂ ತಮ್ಮೊಡನೆ ಬರ್ಪರೆಂದೆನೆ ಕೇಳು |
ತುಲ್ಲಸದೆ ಗುರುಸಿದ್ಧಯತಿವರಂಗೆರಗುತ್ತೆ |
ಸೊಲ್ಲಿಸಿದನಿಂತು·ಪೊಗಳುತೆ ಚನ್ನಬಸವೇಶನವನ ಸರ್ವಜ್ಞತೆಯನೆ ||೧೩||

ಸಚ್ಚಿದಾನಂದ ನಿತ್ಯಪರಿಪೂರ್ಣಾಖಂಡ- ।
ರಚ್ಚುಮೆಚ್ಚಿನ ಭಕ್ತರುದ್ಧರಣಕಾಗಿ ತಾ- ।
ವಿಚ್ಛೆಯಿಂದೀ ರೂಪವಮಂ ತೊಟ್ಟು ನಿಷ್ಕಲರವಸ್ಥಾತ್ರಯವ ಗೆಲ್ದು, ॥
ಮೆಚ್ಚಿಪ ಜಗದ್ಗುರುಗಳಾಗಿ ಮೆರೆಯುವಿರಿಲ್ಲಿ ।
ಮೆಚ್ಚಿದೇಂ ತಮ್ಮಡಿಯ ದರ್ಶಿಸುತೆ ಬದುಕಿದೇಂ ।
ಪೆಚ್ಚಿನುರೆ ಪೊಗಳಿಕೆಯ ಮಾತಲ್ಲಿದೆಂ"ಬ ಶ್ರೀ ಚೆನ್ನಬಸವೇಶೋಕ್ತಿಗೆ ॥೧೪॥

ಗುರುಸಿದ್ಧ ಚರವರಂ ನುಡಿದನೆಂತೆನ"ಲಯ್ಯ ।
ಹರನಾದೊಡೇನಾನವಸ್ಥಾತ್ರಯವ ಗೆಲ್ದು ।
ಚಿರಮಹಿಮನಾದೊಡೇಂ ನೀವ್ಯೈದಿದೀ ಧರ್ಮ-ಸೇವೆಗಾಂ ಬಂದಿರುವೆನು; ॥
ಕರಮದೇಂ ವ್ಯತ್ಯಾಸಮೆಮ್ಮಿರ್ವರೊಳ್ ತಿಳಿಯೆ ।
ನೆರೆ ಪೊಗಳ್ವ ಮಾತೇಕೆ ಶಿವ-ಪೂಜೆಗಾಗೀಗ ।
ತೆರಳಿರೈ" ಯೆಂದಾಗಳಾ ಜಗದ್ಗುರುವರಂ ಷಟ್‌ಸ್ಥಲೇಶನ ಕಳುಹಿದಂ; ॥೧೫॥

ತಾನುಮಾ ಪ್ರಭುವರ-ನಿದೇಶದಿಂ ಬರ್ಪ ಜನ ।
ಮಾನನೀಯರ ಮೂರುಸಾವಿರ ಗಣೇಶ್ವರರ ।
ಜ್ಞಾನ-ನಿಧಿಗಳ ಶಿವಾರ್ಚೆಯ ವ್ಯವಸ್ಥೆಯ ಮಾಡಿ ಲಿಂಗಾರ್ಚನಗೆ ತೆರಳ್ದನು; ॥
ಜ್ಞಾನಿಗಳ್ ಬಂದರಲ್ಲಮನ ನೆನೆಯುತ್ತಲೆ ಶಿ- ।
ವಾನು-ಭವಿಗಳ್ ಬಿಲ್ವವನಕವರ ಕಾಣುತ್ತೆ ।
ಮಾನನಿಧಿ ಕೈಲಾಸದಾ ಪ್ರಮಥರಾಗ ಹೊಬಳ್ಳಿ ಸದ್‌ಭಕ್ತರಂತೆ ॥೧೬॥

ರೂಪಮಂ ಧರಿಸುತ್ತೆ ಸತ್ಕರಿಸುತಾ ಗಣರ ।
ಪಾಪ-ವಿರಹಿತರವರ ಲಿಂಗಪೂಜೆಯ ಗೈಸು- ।
ತಾ ಪವಿತ್ರಾತ್ಮರಂ ಸಂತೃಪ್ತಿಗೊಳಿಸುತ್ತೆ, ತತ್ ಪ್ರಸಾದವ ಕೊಳ್ಳುತೆ ॥
ಶ್ರೀಪತೀಡಿತನ ಪದಮಂ ನೆನೆದದೃಶ್ಯತೆಯ ।
ಲೇಪರಹಿತರ್ ಪೊಂದಿವರ್ ಸರ್ವರಚ್ಚರಿಸಿ ।
ಪಾಪ-ವಿರಹಿತನ ಗುರುಸಿದ್ಧೇಶ್ವರನ ಸಲ್ಲೀಲೆಯೆಂದುರೆ ನುತಿಸುತೆ ॥೧೭॥

ಪ್ರಭುವಿನಪ್ಪಣೆಯಂತೆ ಬಂದವರ್ ವಿಶ್ರಮಿಸಿ ।
ವಿಭು-ಗುರೂತ್ತಮನ ಗುಣ-ವರ್ಣನೆಯನೆಸಗುತ್ತ- ।
ಲಭವಸಿವನೆಂದರಿದು ಮೂರುಸಾವಿರ ಗಣರ್ ಸಮ್ಮೋದದಿಂ ಬಿನದಿಸೆ ॥
ಅಭಯುದಿಂದೊಂದು, ಬಿಲ್ವದ ಕಡ್ಡಿಯಂ ಕೊಂಡು ।
ಸ್ವಭುವಾದ ಗುರುಸಿದ್ಧನಂ ನೆನೆದಂ ನೆಲದೆ ।
ಪ್ರಭವಿಸಲಿ ಹೆಮ್ಮರಮಿದಾಗಲೆನುತಲದೇ ಮಹಾವೃಕ್ಷಮಾಗೆಸೆದುದು; ॥೧೮॥

ಆಗಳಲ್ಲಿಯ ಭಕ್ತರೀಕ್ಷಿಸುತೆ ವಿಸ್ಮಯಿಸೆ ।
ರಾಗದಿಂದಾ ಗಣಂಗಳ್ ನುಡಿದರೆಂತೆನಲ್ ।
"ಶ್ರೀಗುರೂತ್ತಮನಾದ ಗುರಸಿದ್ಧ-ಲೀಲೆಯಿದು ಕಟ್ಟಗೆಯ ಗಿಡಮನೆಸಗಿ ॥
ಈಗಳಾಶ್ಚರ್ಯಮಂ ಸಿವುಗೆ ಪುಟ್ಟಿಸುತಿಹುದು ।
ಭೋಗಿಭೂಷಣ-ಪ್ರಮಥರಿಂದೆಮಗೆ ಸತ್ ಕೃತಿಯ ।
ಲೋಗರರಿಯದ ತೆರದೆ ಗೈಸುತ್ತೆ ವಿಸ್ಮಯವ ಪುಟ್ಟಿಸಿಹುದೆಮ್ಮ ಮನಕೆ; "॥೧೯॥

ಚನ್ನಬಸವೇಶ್ವರಂ ಬರಲಲ್ಲಿಗನಿತರೋಳ್ ।
ಮನ್ನಿಸುತೆ ಪ್ರಭುಸಿದ್ದೇಶಮನವಂಗೊರೆಯುತಿರೆ ।
ಸನ್ನುತರ್ ಮೂರು ಸಾಸಿರ ಗಣಂಗಳ್ ಮಹಾಗುರುಸಿದ್ಧ-ದರ್ಶನಮನೆ ॥
ನನ್ನಿಯಿಂ ಕಾಂಕ್ಷಿಸುತ್ತಿರೆ ಬಂದನಾ ಕ್ಷಣದೆ ।
ಚೆನ್ನಿ ಧಿಗೆ ನಮಿಸುತಿರೆ ಕೈಮುಗಿದು ಗುರುವರಂ ।
ಸನ್ನುತ ಸುಭಕ್ತಿಯಂ ಸರ್ವರರಿಯುತ್ತಿರಲ್ ಜನತೆಯೆಲ್ಲರಿಗೆರಗಲು ॥೨೦॥

"ನೀನೆ ದೇವೋತ್ಕರಂ; ನೀನೆ ಭಾವೇಶ್ವರಂ; ।
ನೀನೆ ಸರ್ವಾಸ್ಪದಂ; ನೀನೆ ನಿರ್ವಾಣದಂ; ।
ನೀನೆ ತಾಪಾನಲಂ; ನೀನೆ ದೀಪಾಚಲಂ;" ಪ್ರಮಥರಿಂತೀಡಿಸುತಿರೆ ॥
"ತಾನೆಯಾದಂ ಶಿವಂ; ತಾನೆಯಾದಂ ಭವಂ ।
ತಾನೆಯಾದಂ ಹರಂ; ತಾನೆಯಾದಂ ಚರಂ; ।
ತಾನೆ ಸರ್ವಂ ಚನ್ನಬಸವೇಶನಹನೆಂ"ದು ಗುರುಸಿದ್ಧನುರೆ ಪೊಗಳಲು ॥೨೧॥

ಪರತರಂ ಚನ್ನಬಸವೇಶ್ವರಂ ನಮಿಸಿಂತು ।
ಕರುಣಾಕರಂಗೊರೆದನೆಂತೆನಲ್ಕೇನಿದ್ದೈ ।
ನೆರೆ ನುತಿಯ ಪೊನ್ನಶೂಲದೊಳೇತಕಿರಿಯುವಿಂ? ಬೇಡನುಷ್ಠಾನಕೆನಗೆ ॥
ಕರುಣೆಯಿರೆ ಕಂದನೆಂದಪ್ಪಣೆಯನೀಯಿರ್ದೈ; ।
ಹರನ ರೂಪರೆ, ಪ್ರಭುನಿದೇಶವಮಂ ಪಡೆದಿಲ್ಲಿ- ।
ಗರಿದು ಬಂದಿಹ ಪ್ರಮಥರೊಡನುಳುವಿಗೈದುತಿಹೆ"ನೆಂದು ಪೇಳುತೆ ಗುರುವಿಗೆ॥೨೨॥

ಮೂರುಸಾವಿರ ಗಣಾಧೀಶರಂ ಗುರುಸಿದ್ಧ ।
ಚಾರು ಸನ್ನಿಧಿಗೊಪ್ಪಿಸುತ್ತೆ ತತ್ ಸಾಹಿತ್ಯ ।
ಭಾರಮಂ ತಾನಿಳುಹಿ ಪ್ರಭುನಿದೇಶದೆ ಬಂದ; ಶರಣರೊಡನುಳವಿಬನಕೆ ॥
ಸಾರವಿದಿತ ಗಣರ್ಗೆ ತಜ್ಜಗದ್ಗುರುವಿಂಗೆ ।
ಬೂರಿ ಹರ್ಷದೆ ನಮಿಸಿ ಸರ್ವ ನಮನವ ಪಡೆದು ।
ವೀರಗುರು ಚನ್ನ ಬಸವೇಶ್ವರಂ ಪೋದನಲ್ಲಿಂದೆ ಭಕ್ತರ ಪರಸುತೆ ॥೨೩॥

ಪರಮ ಮಾಹೇಶ್ವರರ ಚನ್ನಬಸವೇಶನೆಂ ।
ದರಿಯುತ್ತಲವರನುಷ್ಠಾನದ ವ್ಯವಸ್ಥೆಯಂ ।
ನೆರವೇರಿಸುತೆ ಶರಣರುಚಿರ-ಸಾಹಿತ್ಯದ ಪ್ರಚಾರದಾಲೋಚನೆಯನೆ ॥
ನೆರೆ ಗೈಯ್ಯುತಿರ್ದನಾ ಶ್ರೀ ಜಗದ್ಗುರುವರ್ಯ ।
ಗುರುಸಿದ್ಧ ದೇವಂ ನಿರಾಭಾರಿದೈವಂ ಸು- ।
ವಿರತ-ಪ್ರಭಾವಂ ಸದಾನಂದ-ಭಾವಂ ಸ್ವ-ಭಕ್ತ-ಜೀವಂ ಮೆರೆದನು; ॥೨೪॥

ವೀರೇಶ-ಪುಣ್ಯಾಶ್ರಮಂ ಗದುಗಿನೋಳ್ ಮೆರೆವು- ।
ದೋರಂತೆ ಶೋಭಿಸುವುದಲ್ಲಿ ಪಂಚಾಕ್ಷರನು- ।
ದಾರ ಸ್ವ ಗುರುವರನ ಯೋಗದ ಸಮಾಧಿಯಿದೆ;ಕುಳಿತಿಲ್ಲಿ ಗುರು-ಕರುಣೆಯೋಳ್॥
ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ ।
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ ।
ಮೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣದೋಳ್ ಸಂಧಿ ನವಮಂ ॥೨೫॥

ಅಂತು ಸಂಧಿ ೯ಕ್ಕಂ, ಪದಂಗಳು ಇಪ್ಪತ್ತೈದಕ್ಕಂ;
ಇಂತು, ಒಟ್ಟು ಪದಂಗಳು ೪೧೨ಕ್ಕಂ;
— ಮಂಗಲಂ —

॥ ಶ್ರೀ ಗುರುಬಸವ ಲಿಂಗಾಯ ನಮಃ ॥



# ಹತ್ತನೆಯ ಸಂಧಿ





॥ ಸೂಚನೆ ॥

ತ್ರಿಸಹಸ್ರ ಗಣವರರನವರಿಚ್ಛೆಯಂತೆ ಗುರು |
ವಸವುನವರ್ಗೆಲ್ಲರಿಗನುಗ್ರಹಿಸಿ ಪೇಳಿದಂ |
ಸಸಿನದಿಂ ವಿರತ-ಸಂಸ್ಕಾರವಮಂ ಕರುಣಿಸುತೆ ತತ್ತ್ವಪ್ರಚಾರ ವಿಧಿಯಂ ॥

* *

[ಸಂಧಿ ಪ್ರಾರ್ಥನಾ-ಪದ್ಯ]

ಕಮಲಮಾವಾಗಳುಂ ಶ್ರೇಷ್ಠಮಾಗಿಹುದೆಂದು |
ವಿಮಲ ಮುಖನೇತ್ರ-ಪದ-ಹೃದಯಕ್ಕೆ ಕವಿಗಳುರೆ |
ಸಮತೆಯಿಂ ಪೋಲಿಪರದಂ ತಿಳಿದು ಶಿವ ನಿನಗೆ ಸತತಂ ಸಮರ್ಪಿಪ ಬಲಂ ॥
ಕ್ಷಮಿಸಯ್ಯ ಯೆನಗಿಲ್ಲಮಂಥನಾದುದರಿಂದೆ.|
ರಮಿಪ ಮುಖಮಿಲ್ಲ; ಪದಮಿಲ್ಲ ಮೇಣ್ ಸುಹೃದಯತೆ- |
ಯುಮದಿಲ್ಲ; ಮಾಳ್ಪುದೇಂ? ನೀನಿತ್ತಹೃದಯಮನೆ ತವ ಪದಾಂಬುಜಕರ್ಪಿಪೇಂ ॥೧॥



* *

ಗುರುಸಿದ್ಧ ಶಿವಯೋಗಿಯುರು ತಪಸ್ತೇಜಮಂ |
ಕರುಣಾದಿ-ಸುಗುಣಂಗಳಂ ಮತ್ತಮಾಚಾರ- |
ಪರೆ ನಿಷ್ಠೆಯಂ ಪರಮನಗಣಿತ ಸುಲೀಲೆಗಳ ಕಂಡು ಬೆರಗಾಗುತಾಗ ||
ಪರಶಿವನೆ ಯಿವನೆಂದು ಮೆಚ್ಚಿ ತ್ರಿಸಹಸ್ರಗಣ- |
ರರಿದು ಸೇವಿಸುತಿರ್ದರಾ ಬಿಲ್ವವನದಲ್ಲಿ |
ತರ-ತಮತ್ವವ ಮರೆದು ನೋಳ್ಪರಿಗೆ ವಿಸ್ಮಯಂ ಜನಿಸಂತೆ ನಿತ್ಯದಲ್ಲಿ || ||೨||

ಅವರಲ್ಲಿ ಮೂರು ಸಾವಿರದಯ್ಯನೆಂಬಾ ಗ- |
ಣವರಂ ಮಹಾಭಕ್ತಿಯಿಂ ಸನಿಹದೊಳಗಿರ್ದು |
ತವೆ ಸೇವಿಸುತ್ತಿರ್ದನೊಲವರಿಯುತೊರ್ಮೆ ಗುರುವರನವನ ಕೇಳ್ದನಿಂತು ||
" ತವ ನಾಮಮೇನೆಮ್ಮನೇತ ಸೇವಿಪುದು ! |
ಸುವಿನಯದೆ ನಿನ್ನಂತೆ ಸರ್ವ ಗಣವೃಂದಮಂ |
ತವಿಸಿ ಸೇವಿಸುವದೇಕೆಂ"ಬ ನುಡಿಯಂ ಕೇಳಿ ನಮಿಸಿ ಪೇಳ್ದನದೆಂತೆನೆ; ||೩||

"ನಿನ್ನನುಗ್ರಹದಿಂದೆ ಚರಪಟ್ಟಮಂ ಪಡೆದು ||
ಸನ್ನುತನೆ, ಶರಣ-ಸಾಹಿತ್ಯ-ಪ್ರಚಾರಕ್ಕೆ |
ನನ್ನಿಯಿಂ ಸಲೆ ತೊಡಂಗುವದದವರ ಮೇಣೆನ್ನ ವಾಂಛಿತಮದಕಾಗಿಯೆ ||
ಸನ್ನತನೆ, ನೀನದಂ ಕರುಣಿಸಲ್ ವೇಳ್ಕೆಂದು |
ಮನ್ನಣೆಯ ಸೇವೆಯಂ ಗೈಯ್ಯುತಿರ್ಪೆ" ನೆನಲ್ಕೆ |
ಮನ್ನಿಸುತೆ ಪೇಳ್ದನೆಂತೆನ ಲಯ್ಯ ನೀನೆಲ್ಲರಂ ಕರೆದು ಕೊಂಡಿಲ್ಲಿಗೆ ||೪||

ನಿಶೆಯ ಮಧ್ಯದೊಳೈದುವದೆನಲ್ಕೆ ನಮಿಸುತ್ತೆ |
ಶಶಿಧರನ ಸಮನಾಜ್ಞೆಯಂ ತಿಳಿಸುತೆಲ್ಲರ್ಗೆ |
ವಶಿಗಳಂ ಕರೆದುಕೊಂಡೈದಿದಂ ತ್ರಿಸಹಸ್ರ ತದ್‌ಗಣಂಗಳನೊಪ್ಪಿಸಿ ||
ಎಸೆಯುವ ಲತಾ-ಮಂಟಪಕ್ಕೆ ಯತಿಯಾಜ್ಞೆಯಂ- |
ತಸಮರಂ ಮೂರುಸಾವಿರದಯ್ಯನತಿಮುದದೆ |
ಸಸಿನದಿಂ ಕರೆತರಲ್ ತೋರ್ದುದೊಂದಾಶ್ಚರ್ಯ-ಕರ ವಿಷಯಮಾಗೇನೆನೆ ||೫||

ನಂದನ-ವನದ ಲತಾ-ಮಂಟಪದ ಮಾಳ್ಕೆಯಿಂ- |
ದಂದಮೆನೆ ಕಂಗೊಳಿಸುತಿರ್ದುದಲ್ಲಿಯ ಸಾಲ |
ಸುಂದರದ ದೀವ್ರುಟಿಗೆಗಳ ಗಣಂ ಸೊಬಗುಳ್ಳ ಸುವ್ಯವಸ್ಥೆಯ ವೈಭವಂ ||
ಸುಂದರೀ- ಸಮುದಾಯಮಲ್ಲಿಗೈದಿತು ಕ್ಷಣದೆ |
ವಂದಿಸಲೊಡರ್ಚಿದುದು ವನಪಿಸಿಂ ಮಾಹೇಶ- |
ವೃಂದಕತಿ-ಭಕ್ತಿಯಂ ನಟಿಸುತ್ತೆ ರಚಿಸುತ್ತೆ ಪಾಡುತ್ತೆ ಸುಪದಂಗಳಂ ||೬||

ನರ್ತಿಸುತೆ ಬೆಡಗು ಬಿನ್ನಾಣಮಂ ತೋರುತೆ; ಮು- |
ಹೂರ್ತದೋಳ್ ವಿವಿಧ-ವಾದ್ಯಂಗಳಾ ಯುವತಿಯರ |
ಧೂರ್ತೆಯರ ಪಸ್ತಂಗಳೋಳ್ ತೋರಲಾಗಿಹವು ಸ್ವೇಚ್ಛೆಯಿಂ; ಸುಳಿಯುತಿಹರು;||
ಕೀರ್ತಿಸುತೆ ನಾಟ್ಯದೋಳ್ ತೊಡಗಿರ್ಪ ಸ್ತ್ರೀಯರುರು |
ನರ್ತನ- ನಿರೀಕ್ಷಣದೆ ಮೈಮರೆದು ನಿಂದಿರ್ದ |
ಸ್ಫೂರ್ತಿ ಕರ್ತವ್ಯಮಂ ಮರೆದಿರ್ದ ಗಣವರರ ನೋಡುತವರ ಸ್ಥಿತಿಯನೆ ||೭||

ಎಚ್ಚರಿಸುತೆಲ್ಲರಂ ಸಂಜ್ಞೆಯಂ ಗೈಯ್ಯುತ್ತೆ |
ಸಚ್ಚಿದಾನಂದಾತ್ಮ ಗುರುಸಿದ್ಧ ಲೀಲೆಯಂ- |
ದೊಚ್ಚತಂ ಪೇಳುತ್ತೆ, ತದ್ಧ್ಯಾನದೋಳ್ ತೊಡಂಗಿಸುತಿರಲ್ ತನ್ಮಾಯೆಯು ||
ಅಚ್ಚರಿಯೆನಲ್ಕಡಗಿ ಮೂರು ಸಾವಿರದಯ್ಯ- |
ನಚ್ಚುಮೆಚ್ಚಿನ ಸುಲಭ ಯತ್ನದಿಂ ಗುರುವಾಗ |
ನಿಚ್ಚಳಮೆನಲ್ಕೆ ಪ್ರತ್ಯಕ್ಷನಾಗಿರ್ದನವರಿದಿರಲ್ಲಿ ಸ್ಮಿತವದನನು ||೮||

ಎಲ್ಲರಾತನ ಪಾದ-ಪದ್ಮಕ್ಕೆ ಪೊಡಮಡುತೆ |
ಸಲ್ಲುವ ಸುಭಕ್ತಿಯಿಂ ಸನ್ನುತಿಯನಿಂತು ಸಲೆ |
ಸಲ್ಲಿಸಲೊಡರ್ಚಿದರ್ ಸುರ-ನುತಾಂಘ್ರಿ-ಸರೋಜ, ಸುಗುಣ-ಸಾಂದ್ರ, ಸುಬಂಧುರ||
ಪಲ್ಲಲಿತ-ಮಾಯಾ-ಪ್ರಭಂಜನ, ಮಹಾಗಗನ, |
ಸೂಲ್ಲಸಿತ, ಸೂಜ್ಞ, ಹೃನ್ಮಂದಿರ-ನಿವಾಸ-ಘನ, |
ಕ್ಷುಲ್ಲಕರನೆಮ್ಮನುದ್ಧರಿಸಿದಿರಿ ನೀವಿದೇ ರೀತಿಯೊಳೊಲೆಯುತೆ ಪೊರೆವುದು; ||೯||

ಎಮಗಿಂದು ಚಿದ್ದೀಕ್ಷೆಯಂ ಕರುಣಿಸುತ್ತೊಲಿದು ।
ಭ್ರಮರಹಿತ ಸುವಿರಕ್ತ-ಪಟ್ಟಮಂ ಕಟ್ಟುವದು; ।
ಕ್ರಮ-ಚಿತ್-ಕ್ರಿಯಾ-ಸಂಸ್ಕೃತಿಯ ಬಲಮನಾವ್ ಪಡೆದು ತಮ್ಮ ಹಸ್ತ-ಸ್ಪರ್ಶದೆ ॥
ಸಮ ರಹಿತ-ಮುಕ್ತ್ಯಂಗನಾ-ಮುದದೊಳುರೆ ಬೆರೆದು,।
ಸಮತೆಯಿಂ ಲೌಕಿಕ ಸುಖಾಶಯಂ ಸಲೆ ತೊರೆದು ।
ಸುಮನದಿಂ ಶರಣಸಾಹಿತ್ಯ ಪ್ರಚಾರ-ಸೇವೆಯೊಳೆ ನಿರುತಂ ಬಾಳ್ವೆವು; ॥೧೦॥

ಎಂದೆನುತೆ ಮತ್ತೆ ಗುರುಸಿದ್ಧ ಸಿದ್ಧನ ಪದಕೆ ।
ಸಂದ ದುಃಖದೆ ಬೀಳ್ದು, ಬಾಷ್ಪ-ಜಲದಿಂ ತೊಳೆಯೆ ।
ಪೊಂದಿದ ದಯಾಪಾಂಗ-ಚಂದ್ರಿಕೆಯು ಪೊಣ್ಮೆಸೆಯೆ ಮುಖಪೂರ್ಣ ಚಂದ್ರನೊಲಿಯೆ ॥
ಇಂದು ಸರ್ವರ ಮುದ-ಸುಧಾಬ್ಧಿ ವರ್ಧಿಸಿ ನಲಿಯೆ ।
ಛಂದದಿಂ ಸರ್ವ ಸಿದ್ಧತೆಯು ಲೀಲೆಯೊಳೆಸೆಯೆ ।
ಸುಂದರದ ಮೂರು ಸಾವಿರದ ಗುರುಗಳ ರೂಪಮಂ ತಳೆದನುಗ್ರಹಿಸಿದಂ ॥೧೧॥

ಆಗಮೋಕ್ತ ಸುವಿಧಿಯ ಮೀರದಂತಳವಡಿಸು-।
ತಾಗಳವರ್ಗಮಲ ನವ ಲಿಂಗದ ಸಕೀಲಮಂ ।
ರಾಗದಿಂದಿಂತು ಬೋಧಿಸಲೊಡರ್ಚಿದನದಂ ಕೇಳ್ದರವರೆರಗಿ ನುತಿಸಿ; ॥
ಆ ಗುರುವು ತನ್ನಿದಿರೊಳುರು ಭಕ್ತಿಯಿಂ ಕುಳಿತ-।
ನಾಗಮಜ್ಞರ ವೀರ-ಮಾಹೇಶ್ವರರ ನೋಡಿ ।
"ಯೋಗಿವರ್ಯರೆ, ಕೇಳಿ ನಿಗಮಾಗಮಂಗಳೊಳ್ ಲಿಂಗ-ಸಾಹಿತ್ಯಮಧಿಕಂ;॥೧೨॥

ಕೇಳಿರೈ ಶಿಷ್ಯೋತ್ತಮರೆ, ಲಿಂಗಮೇ ಬ್ರಹ್ಮ; ।
ಭಾಳಲೋಚನನ ಮುಖ್ಯ ದೇವರ್ಕಳಿಗೆ ಮತ್ತೆ ।
ಮೇಳವಿಸಿತಿದು ಸರ್ವ ಜೀವರ್ಕಳಿಗುಮಾತ್ಮಮೆನಿಸುತ್ತೆ ಬ್ರಹ್ಮಾಂಡವ; ॥
ಬಾಳ ಮಾತೇನಲಘು-ಪಿಂಡಾಂಡಮಂ ಸೃಜಿಸಿ ।
ಮೇಳಯಿಪ ಶಕ್ತಿಯಿಂ ವ್ಯಾಪಿಸುತಲಂಗನೆಂ- ।
ಬೇಳಿಗೆಯ ಪೆಸರನ್ನೈದುತ್ತೆ, ಭಕ್ತಿಯ ರಚಿಸಿ ಮೊದಲ ಸ್ಥಿತಿಯ್ಯದಲೆಳಸಿ ॥೧೩॥

ವಿಂಶತಿ ಪದಾರ್ಥಂಗಳಂ ಸೃಜಿಸಿತಾಗಳದು; |
ನಾಶವಿಲ್ಲದ ಪೆಸರ್ಗಳಂ ಕೇಳಿರೀಗೊರೆವೆ- |
ನಾಶಿಸುತೆ ಚಕ್ರಮಬ್ಜಂ, ದಳಂ, ವರ್ಣಮಕ್ಷರಮಾಕೃತಿಯು, ಸ್ಥಲಮಿಹ ||
ಆಶಿಪರ ದೈವಂ, ಸುತತ್ತ್ವಂ, ಕಲೆಯು, ಮುಖಮು- |
ಧೀಶವಾಸಂ, ಪ್ರಸಾದಂ, ನಾದಮುರು ಕರಂ ।
ಪಾಶಹೃತ್ ಪ್ರಣವಮುಮುಂ, ತನುವಾತ್ಮ, ಶ್ರುತಿ ಫಲಂ ಕೂಡಲಾಗಿಂತೆಲ್ಲವು||೧೪||

ಇವನೆ ಸೃಜಿಸಿದ ಲಿಂಗಸಾಹಿತ್ಯಮಂ ಬೆರಸೆ |
ತವೆ ಚತುರ್ ವಿಂಶತಿ ಯಿವಾಗುವವು ಸಲೆ ಮತ್ತ- |
ಮಿವನೊಂಭತ್ತರಿಂ ಗುಣಿಸಲಿನ್ನೂರ ಪದಿನಾರಾಗುತಿಹವರಿಯಿರಿ; ||
ಅವುಗಳಾ ಸರ್ವನಾಮಂಗಳಂ ಕೇಳಿರೈ; |
ತವಿಪ ಲಿಂಗಂ ನವ ವಿಧಂ ಮೊದಲದಾಗಿಹುದು; |
ಕವಿನುತಾಽಽಚಾರ-ಗುರು-ಶಿವಜಂಗಮ ಪ್ರಸಾದಮಹೇಷ್ಟ ಸದಸುಭಾವಂ ||೧೫||

ಎಂಬುವೊಂಭತ್ತು ನಾಮಂಗಳಂ ಪಡೆಯುತ್ತೆ |
ತುಂಬಿಹುದು ಶಕ್ತಿ ಸಹಮಾಗೀ ಶರೀರದೊಳ್; |
ನಂಬಿದಾ ಶಕ್ತಿಯುಂ ನವ ವಿಧಮುದಾಗಿಹುದು, ಕೇಳಿರೈ ತನ್ನಾಮವ; ||
ನಂಬಿಹ ಕ್ರಿಯೆಚ್ಛಾಖ್ಯಮಲಜ್ಞಾನ ಚಿತ್ಪರಾ-।
ಲಂಬದಪರಾದ್ಯನಾದ್ಯುನ್ಮನೀ ಶಕ್ತಿಗಳ್ |
ತುಂಬಿಹವಿವೊಂದೊಂದು ನಾಮರೂಪದೆ; ತದೇಕೈಕ ಲಿಂಗಂಗಳೊಳಗೆ ||೧೬||

ಶಕ್ತಿಯುಳ್ಳಾ ಲಿಂಗಗಳ್ ನವ ವಿಧಾಂಗಗಳ ।
ವ್ಯಕ್ತಮೆನೆ ಸೃಷ್ಟಿಸಿದವವುಗಳಾಖ್ಯಗಳ ನಾಂ |
ರಕ್ತಿಯಿಂ ಪೇಳ್ವೆನೈ; ಮೂರುಸಾವಿರದಯ್ಯ ಮೊದಲಾದ ಶಿಷ್ಯರ್ಕಳಿ, ||
ಸಕ್ತ ಭೂ-ಸಲಿಲಾಽಗ್ನಿ-ವಾಯು-ಗಗನಾಽಽತ್ಮಗಳ್ |
ಯುಕ್ತ ತತ್ತ್ಯಾಗ-ಭೋಗ-ಸುಯೋಗಗಳಿವರಿಯ-|
ಲುಕ್ತಮಾಗಿಹ ನವಾಂಗಂಗಳಿವೆ ಶಕ್ತ್ಯುದಿತ ನವ ಭಕ್ತಿಗಳ ಪಡೆವವು ||೧೭||

ಶ್ರದ್ಧೆ ನಿಷ್ಠೆಯು ಸಾವಧಾನವನುಭವ ರುಚಿರ ।
ಶುದ್ಧ ಪರಿಣತೆಯು ಸಮರಸಮನುಪಮಿತಮರಿಯೆ ।
ಸಿದ್ಧಮಾದಪರಿಮಿತಮಾ ನಿರಂಜನಮಿವೊಂಭತ್ತು ಭಕ್ತಿಯ ಪೆಸರ್ಗಳು ॥
ಬದ್ಧಮಹುದೊಂದೊಂದು ಭಕ್ತಿಯೇಕೈಕವಹ ।
ವೃದ್ಧಮಹಿತಾಂಗದೋಳ್ ವ್ಯಾಪಿಸುತೆ ಬೆರೆಸುತಿಹು– ।
ದುದ್ಧರಣಕಾಗಿ ನವ ದೇಹಂಗಳಾಖ್ಯೆಗಳನರಿಯಿರೈ ಶಿಷ್ಯರ್ಕಳೆ; ॥೧೮॥

ಸ್ಥೂಲತನು ಸೂಕ್ಷ್ಮತನು ಕಾರಣತನುವು ಮೇಣ್ಸು- ।
ಶೀಲರೆ, ಮಹಾಕಾರಣ ತನುವಾನಂದ ತನುವು ।
ಲೋಲರೆ ವಿಶುದ್ಧತನು ನಿರ್ಮಲತನುವು ಚಿನ್ಮಯತನು ಚಿದ್‌ರೂಪತನುವು ॥
ಮೇಲವಿಸಿ ನವ ಚಕ್ರಗಳುಮಿಲ್ಲಿಯಿರ್ಪವೈ ।
ಮೇಲಿತಾಽಽಧಾರಮುಂ ತಿಳಿಯೆ ಸ್ವಾಧಿಷ್ಠಾನ ।
ಮೇಲಯಿಪ ಮಣಿಪೂರಕಾಽನಾಹತೋರು ಸುವಿಶುದ್ಧಿಗಳುಮಾಗ್ನೇಯಮುಂ॥೧೯॥

ಮೀರಿ ಬ್ರಹ್ಮಂ ಶಿಖೆಯು ಪಶ್ಚಿಮಂಗಳ್ ಕ್ರಮದಿ ।
ಸಾರಿಹವು ನವ ಚಕ್ರಗಳವಿಲ್ಲಿ ಕಮಲಂಗ- ।
ಳೋರೆಯಾಗದಲಿರ್ಪವೊಂಭತ್ತುಮವುಗಳೋಳ್ ನವ ಲಿಂಗಗಳ್ ನೆಲಿಪವು; ॥
ತೋರುವವು ಕಮಲಂಗಳಿಹ ತಾಣವೊಂಭತ್ತು; ।
ತೋರಿಹವವಾವೆನಲ್ ಮೂಲಮಾಲಿಂಗಮದು ।
ಚಾರುನಾಭಿಯುಮೆದೆಯು, ಕುತ್ತಿಗೆಯು ಭ್ರೂಮಧ್ಯಮೇಲ್ನೆತ್ತಿ ಗುಂಡಿಗೆಯ ಮೇಣ್ ॥೨೦॥

ತಲೆಯು, ಹಿನ್ನೆಲೆಯಿವೀ ತನುವಿನೊಳಗೆಸೆಯುವವು; ।
ಸಲುವ ನವ ಲಿಂಗಾಕೃತಿಯನಿಲ್ಲಿ ಪೇಳುವೇಂ; ।
ಸಲೆ ಕುಂಡಮಾದಂಡಮುಂ ಮಂಡಲಂ ದರ್ಪಣಂ ಶಂಖಮರ್ಧಚಂದ್ರಂ ॥
ಸಲಿಪ ಗೋಲಂ ತಾರಕಂ ಜ್ಯೋತಿ ಯಿಂತೆಸೆವ ।
ಫಲಿತಾಽಽ ಕೃತಿಗಳಿಂದೆ ಲಿಂಗಂಗಳಿಂ ತಿಳಿವು– ।
ದೊಲಿದಂಗನೆನಿಸುವೀ ಜೀವಾತ್ಮನಿಹ ಕಮಲ–ದಳದ ಸಂಖ್ಯೆಯ ಪೇಳ್ವೆನು; ॥೨೧॥

ಉರುದಳಂ ನಾಲ್ಕು, ದಳಮಾರು, ಪತ್ತು ದಳಂ, |
ನೆರೆ ದಳಂ ಹನ್ನೆರಡು, ಪದಿನಾರು, ದಳಮೆರಡು- ||
ಮಿರೆ ಸಾಸಿರಂ ದಳಂ, ಮೂರುಸ್ತಿದಳಮೊಂದು ದಳಮೊಂಭತ್ತು ಭೂಜಕೆಸೆವವು; ||
ಮೆರೆಯುವ ನವಾತ್ಮರ್ಕಳಭಿಧಾನಂಗಳಂ ಪೇಳ್ವೆ- |
ನರಿಯಿಂರೈ ಶಿಷ್ಯವರ್ಯರೆ, ಚಿತ್ತಗೊಟ್ಟೀಗ |
ಸರಸ ಜೀವಾತ್ಮಾಂತರಾತ್ಮ ಪರಮಾತ್ಮ ನಿರ್ಮಳಿನಾತ್ಮ ಶುದ್ಧಾತ್ಮರು ||೨೬||

ಜ್ಞಾನಾತ್ಮನುಂ ಮಹಾತ್ಮಂ ತೋರ್ಪ ದಿವ್ಯಾತ್ಮ- |
ನಾನಂದಮಯ ಚಿನ್ಮಯಾತ್ಮನೀ ಪರಿಯಲ್ಲಿ |
ತಾನಾಗುವಂ ಜೀವನಾ ದೈವದುರು ಸಹಾಯದೆ ಕೇಳಿ ದೈವಾಖ್ಯೆಯಂ; ||
ಮೌನೀಶ, ಗಣಪತಿಯು, ಬ್ರಹ್ಮಂ, ಹರಿಯು, ರುದ್ರ-
ನಾನಂದಕರ ಸದಾಶಿವನುಂ, ಮಹೇಶನುಂ, |
ಲೀನೇಂದ್ರ ಪರಶಿವಂ ಸರ್ವೇಶ್ವರಂ, ಮಹಾದೇವನಿಂತಧಿ-ದೇವರು ||೨೭||

ಒಂಭತ್ತಿವರ್ ನೋಡೆ ಪೂರ್ವದ ನವಾತ್ಮತೆಯೋ- |
ಳಂಬಿಟ್ಟು ನವ ವರ್ಣ ದೀಪಂಗಳುರೆ ಮೆರೆವ- |
ವಾಂ ಬಿತ್ತರಿಪೆನವುಗಳಾಖ್ಯೆಗಳನೆಂತೆನಲ್ ಕೇಳಿರೈ ಶಿಷ್ಯವರರೆ, ||
ಕಾಂಬುತ್ತೆಸೆವ ಪಳದಿ ಬೆಳ್ಪು ಕೆಂಪುಂ ಪಸಿರ- |
ದಿಂಬಾಗೆ ಕಪುರ್ ರನ್ನಂ ಜ್ಯೋತಿಯು ಮಹಾ |
ಬಿಂಬೋತ್ತಮ ಜ್ಯೋತಿಯಗಣಿತ ಜ್ಯೋತಿಯೆಸೆಯಲ್ ನವ ಕರದೊಳರ್ಚಿಪಂ;
||೨೮||

ತಿಳಿಯೆ ನಿರಹಂಕಾರಮುರು ಸುಚಿತ್ತಂ ಸುಮತಿ- |
ಯಳಿಯದ ಸುಮನಮರಿಯೆ ಸುಜ್ಞಾನಮದುಮತ್ತ- |
ಮುಳಿದ ಸದ್ಭಾವಂ ನಿರಾಳಂ ನಿರಾಮಯಂ ನಿಶ್ಚಲಮಿವೇ ಹಸ್ತಗಳ್ ||
ಪೊರೆಯಲ್‌ನವ ವಿಧ ಪ್ರಸಾದಂಗಳಂ ಪಡೆವ |
ತಿಳಿಯಿರೊರೆಯುವೆನವಂ ಗಂಧಂ ರಸಂ ರೂಪು- |
ಮುಳಿಯುವಾ ಸ್ಪರ್ಶಮುಂ ಶಬ್ದಂ ಸುತೃಪ್ತಿಯಾ ಮುದಮೆ ಪೂರ್ವಮವಿರಳಂ ||
||೨೯||

ಇವುಗಳಂ ಜೀವಾತ್ಮನೊಲವಿಂದೆ ಪಡೆಯುತ್ತೆ ।
ನವವಿಧ ಸುಲಕ್ಷಣಂಗಳ ಪಡೆವೆನಾವೆನ-।
ಲ್ಕವುಗಳಂ ಪೇಳ್ವೆನರಿಯಿರಿ; ನೀವೆ ಯೀ ಜನತೆಯುದ್ಧೃತಿಗೆ ಬಂದ ಗಣರು; ॥
ತವಿಪ ಸಲ್ಲಕ್ಷಣಂ, ಚಿಲ್ಲಕ್ಷಣಂ, ಮುದನು- ।
ಭವಲಕ್ಷಣಂ, ನಿತ್ಯ ಲಕ್ಷಣಂ, ಪರಿಪೂರ್ಣ ।
ಶಿವಲಕ್ಷಣಾಖಂಡ-ಲಕ್ಷಣಾನಾಮಯ ಸುಲಕ್ಷಣಂಗಳ್ ಮತ್ತೆಯುಂ ॥೨೬॥

ಸದಗಮ್ಯ-ಲಕ್ಷಣಮಿವಂ ತಿಳಿಯುತಿಂತಾಗಿ ।
ವಿದಿತ ನವ ನಾದಂಗಳಿಲ್ಲಿ ಕೇಳುತಲಿಹವು; ।
ಸದಮಲರೆ, ಲಕ್ಷ್ಯಗೊಟ್ಟಾಲಿಸುತೆ ಲಿಂಗಂಗಳಂ ಧ್ಯಾನಿಸಿರಿ ಸಂತತಂ; ॥
ಪದುಳ್ದವುಗಳಾಖ್ಯೆಯಂ ಪೇಳ್ವೆನರಿಯಿರಿ; ಗಣರೆ, ।
ಪುದಿದ ಭ್ರಮರಂ ವೀಣೆ ಘಂಟೆ ಭೇರಿಯು ಮೇಘ-।
ಮದು ಪ್ರಣವಮುರೆ ದಿವ್ಯಮಾ ಸಿಂಹಮುರು ಮಹಾ ತದ್ವಸ್ತುಗಳುಮಿಲ್ಲದೆ ॥೨೭॥

ಜನಿಪವಾದುದರಿಂದಿವಕ್ಕನಾಹತವೆಂಬು- ।
ದನಘನಾಮಂ ಬಂದುದೀಗಳೊರೆವೆವು; ಮಹಾ ।
ಮನುವಿನಾ ಪ್ರಣವಂಗಳೊಂಭತ್ತು ಪೆಸರ್ಗಳಂ ತಿಳಿದು ಜಪಿಸಿರಿ, ಪ್ರಮಥರೆ, ।
ಘನ ನಕಾರಂ, ಮಕಾರಂ, ಶಿಕಾರಂ, ಮತ್ತ- ।
ಮನುನಯದೊಳರಿಯೆ ವಾಕಾರಂ, ಯಕಾರಂ, ಸು- ।
ಮುನಿನುತೌಂಕಾರಮುಮಕಾರಮದುಕಾರಂ ಮಮಿವನರಿಯುತಂ ಸರ್ವಕೆ ॥೨೮॥

ಹೇತುವಹ ಮೂಲಪ್ರಣವದಿಂದೆ ಜನಿಸಿರ್ಪ ।
ಖ್ಯಾತ ಮೂಲಾಕ್ಷರಂಗಳನೊರೆವೆ ನಾನೀಗ- ।
ಲೋತವುಗಳಂ ತಿಳಿಯುತೊಂದೊಂದನುಂ ಪೇಳ್ವೆನಿವುಗಳಂ ಕಾಣಿರಯ್ಯ; ॥
ಪೂತ ವಸ್-ಲ್-ಡಫ-ಕಠಂಗಳೌಹಂ ಕ್ಷಂ ಪ್ರ- ।
ಣೀತ ಸೋಹಮುಮುಂ ಮವೋಂ ಮೆಂಬಿವಂ ಪಿಡಿದು ।
ಭೂತಲದ ಸಾಹಿತ್ಯ ಮೂಲ ವೇದಂಗಳೊಂಭತ್ತಾ ದವವನರಿಯಿರಿ; ॥೨೯॥

ಋಗ್ಯಜುಸ್ಸಾಮಗಳಥರ್ವಣಮವಂ ತಿಳಿಯೆ ।
ಯೋಗ್ಯ ಗಾಯಿತ್ರಿಯು ಧನುಸ್ಸು ಗಂಧವರ್ಮಂ ।
ಭಾಗ್ಯಕರ ನಿಶ್ಶಬ್ದಮಿವೆ ಶ್ರುತಿಗಳೊಂಭತ್ತು ಮಿವರ ಘೋಷಂ ತನುಗಳೊಳ್ ॥
ಭೋಗ್ಯ ಜೀವರ್ಗರಿಯದದು ಯೋಗಿಯಾಗಿ ವೈ- ।
ರಾಗ್ಯದಿಂ ತತ್ತ್ವ-ನವಕವ ತಿಳಿದು ಬಾಳಿರೈ ।
ಸ್ವರ್ಗ-ವೈಭವಕೆ ಮಿಗಿಲಾದ ಜೀವನ್ಮುಕ್ತಿಯಂ ಪಡೆಯುವಿರಿ, ಪ್ರಮಥರೆ, ॥೩೦॥

ಕರ್ಮಮಾ ಕರ್ತೃ ವ್ರೋಂ ಕರಣಮಾ ಮೂರ್ತಮುಂ ।
ನೆರ್ಮೆಸೆವ ಮೂರ್ತಮಾ ಜೀವಮುಂ ಮಹದೆನಿಪ- ।
ಶರ್ಮವೀವಾಗಮಮುವಿರಳಮಾ ನಿರ್ಮಲಂ ಸಾದಾಖ್ಯ ತತ್ತ್ವಗಳಿವೆ; ॥
ಕೂರ್ಮೆಯಿಂ ತಿಳಿಯಿರೈ ಸಾದಾಖ್ಯಮೆನೆ ಸದಾ ।
ಪೇರ್ಮೆಯಿಂದೆಸೆವುದೆಂಬರ್ಥಮಂ ಕೊಡುತಿಹುದು ।
ಮರ್ಮಮಿದುಮಿದನರಿಯಿರೈ ತತ್ತ್ವ ಶಬ್ದದಿಂ ಭೋಗಮೋಕ್ಷಗಳರಿಯಿರಿ; ॥೩೧॥

ಘ್ರಾಣಮದು ಜಿಹ್ವೆಯುಂ ನೇತ್ರಮದು ತ್ವಚಮರಿಯೆ ।
ಮೇಣಾರು ಶ್ರೋತ್ರಮದು ಹೃದಯಂ ಬ್ರಹ್ಮರಂಧ್ರ- ।
ಮೂಣೆಯಿರದುನ್ಮನಿಯು ಪಶ್ಚಿಮಮಿವಾಸ್ಯಂಗಳಿವುಗಳಿಂ ಗಂಧಾದಿಯ ।
ಮಾಣದಲೆ ಸೇವಿಪವು ನವಲಿಂಗಗಳ್ ಕ್ರಮದೆ ।
ಕಾಣುತಿಹನಾಗಂಗನಾ ಸ್ಥಲದ ಸಂಜ್ಞೆಯಿಂ ।
ಜಾಣರೆ ಯಿದುಂ ನವವಿಧಂ; ತಿಳಿಯಿರೊರೆಯುವೇಂ ಬ್ರಹ್ಮಾರ್ಥಮಿದಕಿರ್ಪುದು; ॥

ಭಕ್ತನುಂ; ಮಾಹೇಶನುಂ, ಪ್ರಸಾದಿಯು ಮತ್ತೆ ।
ಯುಕ್ತವಹ ಪ್ರಾಣಲಿಂಗಿಯು, ಶರಣನೈಕ್ಯನುಂ ।
ಸಕ್ತವಹ ನಿಷ್ಕಲಂ ಬ್ರಹ್ಮಂ ನಿರಂಜನಂ ಸ್ಥಲಗಳೊಂಭತ್ತುವುಗಳಂ ॥
ಶಕ್ತರೆ ತದಂಗ-ಸ್ಥಲಂಗಳಾಗಿಹವರಿಯೆ- ।
ವ್ಯಕ್ತಮಾಗಿರಲಂಗ ಲಿಂಗ-ಸ್ಥಲಂಗಳಿಂ- ।
ದುಕ್ತಮಾಗಿಹವೆರಡುಮವುಗಳೊಳಗಂಗ-ಸ್ಥಲಂಗಳಿಂತಿವನೊರೆದೆವು ॥೩೩॥

ಲಿಂಗಸ್ಥಲಂಗಳಾಚಾರ–ಲಿಂಗಾದಿಗಳ್ |
ತುಂಗಾತ್ಮಕರೆ, ಯವುಗಳು ಮೊದಲಿಗೊರೆದಿಹೆವು; |
ಶೃಂಗಾರದಿಂದಿನ್ನು ತಿಳಿಯಿರೈ; ಜೀವನಾ ವ್ಯವಹೃತಿಯವಶ್ಯಮಾದ ||
ಲಿಂಗೇಚ್ಛೆಯಿಂ ಪೊಳೆವ ದಿಕ್ಕುಗಳ ಪೇಳ್ವನಾಂ |
ಪಿಂಗಿರ್ಪ ಚಾಂಚಲ್ಯದಿಂ ತಿಳಿಯಿರವುಗಳಂ |
ಭಂಗತ್ವಮಳಿಯುವುದು ಜೀವನಿವುಗಳನರಿದು ಬೇಧಮಂ ವರ್ಜಿಸಿದೊಡೆ- ||೩೪||

ಪರಮ ಲಿಂಗೈಕ್ಯನಹನವನಾ ನಿಮಿತ್ತದಿಂ- |
ದರಿಯಿರೈ; ಪೂರ್ವದಕ್ಷಿಣ ಪಶ್ಚಿಮೋತ್ತರಗ– |
ಳರೆ ಯೂರ್ಧ್ವಪಾತಾಲ ಶುದ್ಧ ಹೃತ್ಕಮಲ ದಿವ್ಯಂಗಳಿವೆ ನವ ದಿಸೆಗಳು; ||
ಮೆರೆವಿವುಗಳಂ ಜೀವಗೊದಗುವುದು ಕಾಮಾದಿ– |
ಯರಿಬಾಧೆಯಧರಿಂದೆ ಸರ್ವತ್ರ ವ್ಯಾಪಿಸಿದ |
ಪರಮೇಶನಂ ತಿಳಿಯೆ ಹೃದಯ ಕಮಲದೆ ನಿಲಲ್ ದಿವ-ದಿಸೆ ಪ್ರಾಪ್ತಮಹುದು ||

ಹೃದಯ-ಕಮಲಮದೆವೆಯ ಗುಂಡಿಗೆಯೊಳಿರ್ಪುದೈ |
ಯದಕೆ ದ್ವಾದಶ ದಳಂಗಳ್ ಕಂಗೊಳಿಪವೆಂದು |
ಮೊದಲಿಗೊರೆದಿಹೆವಲ್ಲಿ ಯೂರ್ಧ್ವದ ಚತುಷ್ಟಯಂ ಪೂರ್ವಾದಿ ದಿಕ್ಕುಗಳನೆ ||
ಸದಮಲರೆ, ತೋರ್ಪುದೈ ಜಾಗರಾವಸ್ಥೆಯಾ- |
ಗದನರಿವುದೈ ಯದರ ಮಧ್ಯಕಿಳಿಯಲ್ ಸ್ವಪ್ನ– |
ಮೊದಗುವದು ತಚ್ಚತುರ್ದಲದಿಂದೆ ತಳಕೈದಲಾ ನಾಲ್ಕರೊಳ್ ಸುಪ್ತಿಯು;|| ೩೬||

ದೇವ-ದರ್ಶನದೆ ತುರ್ಯಾವಸ್ಥೆ ಯೊದಗುವುದು– |
ದೈವನತ ಚರಲಿಂಗಮೊಲಿಯೆ ತುರ್ಯಾತೀತ– |
ನೋವಿದೊರೆಯುವದಲ್ಲಿ ಸರ್ವ ದಿಕ್ಕುಗಳಲ್ಲಿ ಕಂಗೊಳಿಪವಾ ಸ್ಥಿತಿಗದೆ ||
ಕಾವ ಚರಲಿಂಗಮೇ ಮುಖ್ಯಮಾಗಿಹುದಯ್ಯ |
ಯೀ ವಸುಧೆಯೊಳ್ ಫಲಮದಿಷ್ಟಮಾಗಿಹುದರಿಯ- |
ಲಾವ ಕಾರ್ಯಕ್ಕಾದಡಂ ವೇಳ್ಕದಿಲ್ಲಿ ನವ ವಿಧಮಹುದು ಭಾವಿಸಲ್ಕೆ; ||೩೭||

ಫಲವೆ ಯನುಭವವಪ್ಪುದುವೆ ಯರ್ಪಣದಿನೊದಗುವುದು |
ಸುಲಲಿತಾರ್ಪಣವೆ ನವ ವಿಧವಾಗಿ ಶೋಭಿಪುದು |
ಸಲೆ ಯದು ಪ್ರಯೋಜನಂ ವೀರಶೈವಗಳ ಫಲದಾಶೆ ಯಿರದಿಹುದರಿಂದೆ ||
ಸಲುವ ಪರಮಾನುಭವಮಂ ಲಿಂಗಕರ್ಪಿಸುತೆ |
ನಲಿವ ನೇಮಂ ನಡೆಯಲರ್ಚನಂ ವೇಳ್ಕದರಿ-" |
ನೊಲಿದು ಪೇಳ್ವರ್ಚನಾ ವಿಧಿಯನರಿಯುವದೆಂದು ನುಡಿದನಾ ಗುರುಸಿದ್ಧನು ||೩೮||

ತನು ಶುಚಿಯದಭಿಷೇಕಮುರು ಮನಂ ಕುಸುಮಮದು |
ಘನಸಮತೆ ಯುರೆ ಗಂಧಮಕ್ಷತೆ ಯಭೇದಮುಂ |
ಎನುತ ಭಾವಂ ಧೂಪಮರಿವಾರತಿಯು ಮತೆ ಸುಪರಿಣತ್ತೆ ನೈವೇದ್ಯಮೇ ||
ದಿನದ ತ್ರಿಕರಣ ಶುದ್ಧಿ ತಾಂಬೂಲಮಂ ತಿಳಿಯೆ |
ವಿನುತ ಸದ್ಗುಣಮೆ ದಕ್ಷಿಣೆ ಪ್ರದಕ್ಷಿಣೆ ಪ್ರಣತಿ |
ಯನುರಾಗ ವಿಜ್ಞಪ್ತಿಗಳುಮಾಗೆ ನವ ಲಿಂಗದರ್ಚನೆಯು ನಡೆದುದನಿಶಂ; ||೩೯||

ಮೆರೆವ ಸೋಹಮೆನಿಪ್ಪ ದ್ವ್ಯಕ್ಷರ ಸುಮಂತ್ರ-ಜಪ- |
ಮರಿಯೆ ಪೂರ್ಣ ದಿನಕ್ಕೆ ಘಟಪುದಿಪ್ಪತ್ತೊಂದು |
ನೆರೆ ಸಹಸ್ರದ ಮೇಲೆ ಯಾರನೂರಂಕಿಯಹುದರಿಯಿರುಸಿರೋಳ್ ನಡೆದುದು; ||
ಮೆರೆವುದೀ ಮನುವು ಹಂಸಾಖ್ಯೆಯಂ ತಳೆಯುತ್ತ- |
ಲರಿಯಲದರೊಳಗಿಷ್ಟ ಸಹಗಳಂ ಲೋಪಿಸಲ್ |
ಮೆರೆವುದೋವೆಂಬುವೊಂದಕ್ಷರಂ ತಿಳಿಯಿರಿದೆ ಮೂಲಪ್ರಣವವೆನಿಪುದು; ||೪೦||

ಇದರಿಂದ ಪಂಚಾಕ್ಷರಂ ಮಂತ್ರಮುದಿಸಿರುವ- |
ದದರೈದು ಪ್ರಣವಂಗಳಂ ಪಿಂತೆ ಪೇಳಿಹೆವು; |
ಸದಮಲರೆ, ಯವುಗಳಿಂ ಪಂಚಭೂತಂಗಳುದಿಸಿದವು; ಪಿಂಡಾಂಡಮದರಿಂ ||
ಉದಿಸಿರ್ಪುದೈ; ತಿಳಿಯಿರೀ ಜಗಂ ಮನು-ಮಯಂ; |
ಪದುಳ್ದಾತ್ಮ ತತ್ತ್ವಕೋಂಕಾರಮದು ಬೀಜಮಹು- |
ದದಕೆ ಬೆರೆಯಲ್ ಷಡಕ್ಷರಮಂತ್ರಮಪ್ಪುದೈ; ನವ ಲಿಂಗಮಿದರ ರೂಪಂ ||೪೧||

ಶಿವಯೋಗಿಯಾದ ಗುರುವಾತ್ಮ ಶಿಷ್ಯನ ಶಿರದೆ ।
ಶಿವಕರವನಿರಿಸುತ್ತ ದೃಷ್ಟಿಯೋಳ್ ದೃಷ್ಟಿಯಂ ।
ತವೆ ಬೆರಸಿ ಮನದಲ್ಲಿ ಮನವ ಭಾವವೆ ಭಾವವಮಂ ನಿಲಿಸಿ, ನೆತ್ತಿಯೊಳಿಹ ॥
ಶಿವದೇಷ್ಟಲಿಂಗ-ಕಳೆಯಂ ತೆಗೆದು ಯೋಗದಿಂ ।
ನವ ಶಿಲಾ-ಲಿಂಗದೋಳ್ ಸ್ಥಾಪಿಸುತಲೀಯುವಂ; ।
ಪವಮಾನವಮದುವಿಷ್ಟಲಿಂಗಮರಿಯಿರಿ; ಸರ್ವ್ವಲಿಂಗಗಳರೂಪಮಿದುವೆ; ॥೪೨॥

ಇದನೆ ನಿತ್ಯದೊಳುರದೆ ಧರಿಸಿ, ನಿಜವಾಮಕರ- ।
ಮೃದು ಪೀಠದೊಳಗಿಟ್ಟು, ಪೂಜಿಸಿ ತ್ರಿಕಾಲದೊಳ್ ।
ಸದಮಲರೆ, ಯೀ ಲಿಂಗದೋಳ್ ದೃಷ್ಟಿಯಂ ನಿಲಿಸಿ, ನವ ಲಿಂಗಗಳ ಕಾಣುತೆ ॥
ಪದುಳ್ದು ನವ ವಿಧ ಮಹಾ ಸುಪ್ರಸಾದಾರ್ಪಣವ ।
ಪದಪಿಂದೆ ನೆಗಳ್ದೊಡದೆ ಯರ್ಪಣಂ ತಿಳಿಯಿರೈ ।
ಪದೆದು ಮೊದಲರುಪುವೇಂ ತ್ರಿವಿಧಾರ್ಪಣದ ವಿಧಿಯಸುಲಭ ಸಾಧನಮದಕಿದು;॥

ಇಷ್ಟ-ಲಿಂಗಕೆ ರೂಪಮಂ ಪ್ರಾಣ ಲಿಂಗಕ್ಕ- ।
ಮಿಷ್ಟ ರುಚಿಯಂ; ಭಾವಲಿಂಗಕ್ಕೆ ತೃಪ್ತಿಯಂ- ।
ದಿಷ್ಟಮಾಗಿಯೆ ಸಮರ್ಪಿಸುತಲಾಚಾರಾದಿ ಷಡ್ಲಿಂಗಗಳಿಗೆ ಕ್ರಮದೆ; ॥
ಶಿಷ್ಟಗಂಧಾದ್ಯಮಲ ಷಟ್ ಪ್ರಸಾದವ ನಲಿದು ।
ಸೃಷ್ಟಿಗರಿದೆನಲರ್ಪಿಪುದರಿಂದೆ ದುಃಖ-ಕೃತಿ ।
ಕಷ್ಟಮಂ ಕಳೆದುಕೊಂಡಿಹರರಿದು ನವ ಲಿಂಗ ವರ ಸಕೀಲಮ ನಾದ್ಯರು; ॥೪೪॥

ಈ ಪರಿಯ ನವಲಿಂಗ ವರ ಸಕೀಲದ ವಿಧಿಯ ।
ಲೋಪಮಿಲ್ಲದಲರಿಯುತಾಚರಿಸಿ ಶಾಂತಿಯಂ ।
ದೀಪಿಸುತೆ ಪಡೆದಿಹರ್; ನಿಮಗೇನಿದರಿಯದ ವಿಚಾರಮಲ್ಲಂ ತಿಳಿಯಿರಿ; ॥
ತಾಪ-ರಹಿತರ್ ಚನ್ನಬಸವಾದಿ ಶರಣರ್ಕ- ।
ಳೋಪರಾಗಿಹರಂತೆ ನೀವಾದಡುಂ ಚರಿಸಿ ।
ಪಾಪ-ವಿರಹಿತ ಸುಜೀವನ್ಮುಕ್ತಿಯಂ ಪಡೆದು ಬಾಳ್ವುದೆಂದಂ ಗುರುವರಂ ॥೬೫॥

ಮೂರುಸಾವಿರದಯ್ಯನಖಿಲಗಣರೊಡನೆರಗಿ ।
ಸಾರ ಸುಗುಣಂ ಕೇಳ್ದನೆಲ್ಲರಾಗ್ರಹದಿಂದೆ ।
ಚಾರುಗಾತ್ರನೆ, ಕಥೆಯ ನೊಂದನೊರೆಯುತಲೆಮಗೆ ದೃಢಗೊಳಿಪುದೀ ವಿಷಯವ ॥
ಧೀರ ಗುರುಸಿದ್ಧ ಗುರುವವರ ಭಕ್ತಿಗೆ ನಲಿದ- ।
ಪಾರ ಮಹಿಮಂ ಪೇಳ್ದನೆಂತೆನಲ್ ಪೇಳ್ವೆ ನಾಂ ।
ಭೂರಿ ಮೋದದೆ ಭಕ್ತರಾಲಿಸಲಿ ಸಂತತಂ ಮೋದಾಬ್ಧಿಯುಕ್ಕೇರಲು; ॥೪೬॥

* *

"ಕೇಳಿರೈ ಗಣವರರೆ, ಮಿರುಮಿಂಡದೇವಾಖ್ಯ ।
ಭಾಳಲೋಚನಯೋಗಿಯಿರ್ದನುರು ಪರಮ ಶರ- ।
ಣಾಳಿಗುರೆ ಪ್ರಿಯನಾಗುತಾಂಧ್ರ ದೇಶದೊಳೆ ತಿರುವಾರೂರ ಗ್ರಾಮದಲ್ಲಿ; ॥
ಮೇಳವಿಸಿ ಮೆರೆಯುತಿಹುದೊಂದು ಲಿಂಗಾಲಯಂ ।
ತಾಳಿ ಹರುಷಮನಲ್ಲಿ ಬಂದ ಭಕ್ತರ್ಗೆ ನಲಿ- ।
ದೇಳಿಗೆಯ ಬಯಸುತ್ತ ಲಿಂಗಾಂಗ ವರ ಸಕೀಲವ ಬೋಧಿಸುತ್ತಲಿಹನು ॥೪೭॥

ಶಿವಭಕ್ತಿಯಂ ಶಿವಜ್ಞಾನವಮಂ ಶಿವಸದ್ ವ್ರ- ।
ತವ ಶಿವಾರ್ಚನೆಯಂ ಶಿವಾನು-ಸಂಧಾನಮುಂ ।
ತವೆ ಬೋಧಿಸುತ್ತಿರ್ದನಸಮರ್ಥ ಭಕ್ತರ್ಗೆ ಲಸದಿಷ್ಟ-ಲಿಂಗದಲ್ಲಿ; ॥
ತವಿಸ ದೃಷ್ಟಿಯನಿಟ್ಟು ಸರ್ವ ಲಿಂಗಗಳರಿವ- ।
ನವಿರತಂ ಮಾಡಿ ಕೊಂಡದನುರಿ ಸ್ವ-ಭಕ್ತರ್ಗೆ ।
ಶಿವಯೋಗಿಯರುಪುತ್ತೆ ಗುರುವಾಗಿ ಮೆರೆದಿರ್ದನೊಂದು ದಿನದೊಳ್ ಮೋದದೆ ॥

ಬಂದನಾ ಈಶ್ವರಾಲಯಕೋರ್ವ ಶಿವಭಕ್ತ- ।
ನಂದು ಸೌಂದರನಂಬಿನಾಮಕಂ ಶಿವನಿವಂ- ।
ಗೊಂದು ಸಾಸಿರ ಪೊನ್ನನೀಯುತಿರ್ದಂ, ತನ್ನ ಪುತ್ರನೆಂದರಿದು ದಿನಕೆ; ॥
ಅಂದದಿಂದಲ್ಲಿರ್ಪ ಭಕ್ತರಂ ಲಕ್ಷಿಸದೆ ।
ವಂದಿಸಲ್ ಲಿಂಗಕ್ಕೆ ಗರ್ಭಾಲಯದೆ ಬಂದು ।
ನಿಂದಿರಲ್ಕೀಕ್ಷಿಸುತೆ ಮಿರುಮಿಂಡದೇವನತಿ ಕೋಪದಿಂದಾರ್ಭಟಿಸುತೆ ॥೪೯॥

ಆರವಂ ಭಕ್ತರಂ ಲಕ್ಷಿಸದೆ ನಮಿಸದಲೆ |
ಸಾರಿ ಗರ್ಭಾಲಯದೆ ಶಿವಲಿಂಗಕೆರಗಿದವ- |
ನಾರೆಯಿರಲಾತಗೆ ಬಹಿಷ್ಕಾರಮಂ ಕೊಡುವೆನುಕ್ತಿಯಿದು ಸಟೆಯಲ್ಲನೆ- ||
ಸಾರಲಾ ಗರ್ಜಕಂ ಮಿರುಮಿಂಡ ದೇವಂಗೆ |
ಭೂರಿಸಾರವಾಭಯಭಕ್ತಿಯಿಂ ನಮಿಸುತಿಂತೆಂದನೈ |
ಸಾರ ವೇದ್ಯರೆ, ಯವಂ ಶಿವಭಕ್ತನಾತಂಗೆ ಶಿವನೊಲಿದು ಪ್ರತಿದಿವಸದೆ ||೫೦||

ಸ್ವರ್ಣ-ವರಗಳ ಸಹಸ್ರವ ಕೊಡುವನಾಗಳುರು |
ವರ್ಣಿಗಳ್ ಶಿವಸುತನಾಗಿ ಮನ್ನಿಪರರಿದು; |
ವರ್ಣನೆಯ ಮಾತಲ್ಲವೈ ಸುಮ್ಮನಿರಿ ಯವಂ ಮುನಿಯೆ, ಶಿವನುರೆ ಮುನಿದಪಂ ||
ಕರ್ಣಮಂ ಮುಚ್ಚಿಕೊಳುತೀ ನುಡಿಯನಾಲಿಸುತೆ |
ನಿರ್ಣಯಿಸದುತ್ತರಿಸಿದಂ ನೋಡಿ ಶಿವಯೋಗಿ- |
ಯರ್ಣಮಂ ಬಿರುಗಾಳಿಯಿಂ ಗರ್ಜಿಸುವ ತೆರದೆ ಗರ್ಜಿಸುತ್ತೀಳುತಿಂತು:- ||೫೧||

" ಸಾಕೆಲೈ ಸುಮ್ಮನಾಗೆಲ್ಲವಂ ಬಲ್ಲೆ ನಾಂ; |
ಭೀಕರ ಬಹಿಷ್ಕಾರಮಂ ಕೊಡುವೆನೀಗಳರಿ; |
ಯಾ ಕಪರ್ದಿಗುಮಖಿಲರರಿವಂತೆ ಸೌಂದರಂಗಾದಡುಂ ತಿಳಿಯುವಂತೆ ||
ಲೌಕಿಕರೆ ಕೇಳಿರೈ ಸೌಂದರಂ ಸ್ತ್ರೀಲೋಲ- |
ನೀ ಕುಕರ್ಮಿಯು ಶಿವನ ಭಕ್ತನೆಂತಾಗುವಂ? |
ಲೋಕಮರಿಯಲ್ ಶಿವಂ ಧನಮನೀತಂಗೀಯುತಪರಾಧಿಯಾಗಿರ್ಪನು; ||೫೨||

ಅದರಿಂದಲಾ ಶಂಭುವರಿಯೆ ತಿರುವಾರೂರ |
ಸದಮಲಿನ ಭಕ್ತರಿಂಬೆ ಬಹಿಷ್ಕೃತಂ ತಿಳಿಯೆ |
ವಿದಿತ ಭಕ್ತರ ಪುರಸ್ಕರಿಸದಾ ಸೌಂದರಂ ಮೊದಲಿಗೆ ಬಹಿಷ್ಕೃತನಹಂ; ||
ಮುದದೆ ಭಕ್ತರೆ, ಯೇಳಿರೀಗ ಜಾಘಟೆಯ ಕೊಂ- |
ಡುದಿತ ಶಿವಭಕ್ತಿಯುಂ ಸೌಂದರನ ಪ್ರೇಮಮುಂ |
ಪದುಳ್ದು ತ್ಯಜಿಸಂತೆ ಸಂಗುಡವಾಗಿ ಸಾರಿದೈ, ಯೆಂದು ಮಿರುಮಿಂಡದೇವಂ ||೫೩||

ಸುಡಿಯುತಿರೆ ಲಿಂಗದಿಂದಾ ಶಂಭುವುದಯಿಸುತೆ ।
ನಡಗುತ್ತಲೀ ಸೌಂದರ ನಂಬಿಯಂ ಕೈಯ್ಯ ।
ಪಿಡಿದೆಳೆದು ಕೊಳ್ಳುತ್ತೆ, ಧಾನಿಸುತ ಭಯದಿಂದಲೊಂದು ವನಕೈದಿ ಕುಳಿತು ।
ಪೊಡವಿಗುರೆ ಶ್ರೇಷ್ಠರೆನಿಪರವತ್ತು ಮೂವರಹ ।
ಪ್ಪಡ ಪುರಾತನರ ಕಥೆಗಳ ಪೇಳ್ದು, ಸೌಂದರಂ- ।
ಗೊಡನೆ ಭಕ್ತಿಯ ಭಕ್ತರೋಳ್ ಪುಟ್ಟಿಸುತ್ತೆ ಶಿವನಾ ಶರಣಜನಕೆರಗಿಸಿ, ॥೫೫॥

ಮಿರುಮಿಂಡ ದೇವಾದಿಭಕ್ತರ್ಗೆ ಶಿವನೊಲಿದು ।
ಪರಮ ಮುಕ್ತಿಯನೀವನೆಂದು ತಾನಾಗಿ ಸಲೆ ।
ಕರೆಯುತ್ತಿರಲ್ಕೊಲ್ಲೆವೆಂದು ಲಿಂಗಾಂಗ ಸಮರಸದ ಮೋದಾಬ್ಧಿಯಲ್ಲಿ ॥
ಸರಸದೆ ಮುಳುಂಗಿರಲ್ ಕಂಡು ಸೌಂದರ ನಂಬಿ- ।
ಯರಿದವರ ಸುಗುಣಂಗಳಂ ಬಣ್ಣಿಸುತ್ತಿರಲ್ಕೆ ।
ನೆರೆ ಬಿಡಿಸುತವರವನ ಭಕ್ತಿಯಂ ಬಣ್ಣಿಸಲ್ ಶಿವನದೃಶ್ಯತೆ ಯಾಂತನು; ॥೫೫॥

ಈ ಸಕೀಲಂಗಳಂ ತಿಳಿಯದಲೆ ಸೌಂದರಂ ।
ಭಾಸುರದ ಶಿವಭಕ್ತಿಯಿಂ ಮುಕ್ತನಾಗಿಹಂ ।
ಲೇಸೆನಿಪ ಲಿಂಗಭಕ್ತಿ ಜ್ಞಾನ ಮುಖ್ಯ ಶಿವಯೋಗ ಲಕ್ಷಣವ ತಿಳಿದು ॥
ವೋಸವಿಲ್ಲದೆ ಚರಿಸಿ ಲಿಂಗಾಂಗ-ಸಮರಸ ವಿ-
ಕಾಸ ಕೈವಲ್ಯದೋಳ್ ಬೆರೆದಿಹ ಮಹಾ ಶರಣ- ।
ಗೀಸರಂ ಸಮರಾಗಸಿಂದೊರೆಯುತಿರ್ದನಾ ಮಿರುಮಿಂಡ ದೇವನಲ್ಲಿ; ॥೫೭॥

* *

ಈ ಚರಿತ್ರವನೊರೆದು ಗುರುಸಿದ್ಧಗುರುವರಂ ।
ಗೋಚರಿಪ ಸಂಶಯವ ಕಳೆಯುತ್ತೆ ಸರ್ವರ್ಗೆ ।
ಸೂಚಿಸಲ್ ತತ್ ಸಾಧನಕ್ರಮಮನಾ ಗುರುವು ಲಿಂಗದೆದೋಳ್ ದಿಟ್ಟಿಯಿಟ್ಟಂ; ॥
ವಾಚಾಮಗೋಚರಮೆನಿಪ್ಪ ನಿಬ್ಬೆರಗಿ ನಾ ।
ಸೂಚನೆಯು ತೋರುತಿರೆ ತ್ರಿಸಹಸ್ರ ಗಣವರ್ಯರ- ।
ರಾ ಚರೋತ್ತಮ ಜಗದ್ಗುರುವನಿಂತುರು ಭಕ್ತಿಯಿಂ ನುತಿಸಲಾದರಾಗ ॥೫೭॥

"ಅರಿಯೆವೈ ನಿನ್ನ ಲೀಲೆಯ ಮಹಾ ಸದ್ಗುರುವೆ, '
ಸುರ-ಗಣ ಜಗತ್ಕೋಟಿಗಸದಳಂ ತವ ಮಹಿಮೆ |
ಯರಿಯಲಾಗಿಹರಿದಂ ಹರಿ-ವಿಧಿ-ಮಹೇಶ್ವರಾಽವಾವ ಧೀಮಂತರಭವ ||
ಪರಶಿವಾತ್ಮನೆ ನಿನ್ನ ಸೇವೆಯಂ ಸಂತತಂ |
ಕರಣಿಸು ಜಗದ್ಗುರುವೆ, ಜಗದೇಕ-ಸುರತರುವೆ,"|
ನೆರೆಯಿಂತು ಪ್ರಾರ್ಥಿಸಲ್ ತದ್ ಭಕ್ತಿಗುರೆ ಮೆಚ್ಚಿ ಕಣ್ದೆರೆದು ನಗುತೊರೆದನು; ||

"ಆಗಲೈ ಯದನೆ ಪೇಳ್ವೆಂ ಶಿವನ ಸೇವೆಯದು; |
ರಾಗದಿಂದದಕಾಗಿಯೈದಿರ್ಪಿರೀ ಜಗ- |
ಕ್ಕಾಗಮಜ್ಞರೆ, ಶರಣ-ಸೇವೆಯಿದೆ ಯಿದನೆಸಗಲೆಮ್ಮ ಸೇವೆಯದಪ್ಪುದು; ||
ಸಾಗಿರೈ ಶರಣ-ಸಾಹಿತ್ಯ ಪ್ರಚಾರಕ್ಕೆ; |
ಭೋಗಿ ಭೂಷಣ-ಕರುಣೆಯಿಂ ನಿಮಗಖಿಲ ಸಿದ್ಧಿ |
ಯೊಗಳೊದಗುವದು ದಿಟಮೆನುತದೃಶ್ಯತೆಯನಾಂತನಾ ಗುರುಸಿದ್ಧನು; ||೬೦||

ವೀರೇಶ-ಪುಣ್ಯಾಶ್ರಮಂ ಗದುಗಿನೋಳ್ ಮೆರೆವು- |
ದೋರಂತೆ ಶೋಭಿಸುವುದಲ್ಲಿ ಪಂಚಾಕ್ಷರನು- |
ದಾರಪ್ಪಗುರುವರನ ಯೋಗದ ಸಮಾಧಿಯಿದೆ; ಕುಳಿತಲ್ಲಿ ಗುರುಕರುಣೆಯೊಳ್ ||
ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ |
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ |
ವೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣದೊಳ್ ಸಂಧಿ ದಶಮಂ ||೬೧||

ಅಂತು ಸಂಧಿ ೧೦ಕ್ಕಂ, ಪದಂಗಳು ಅರವತ್ತೊಕ್ಕಂ;
ಇಂತು, ಒಟ್ಟು ಪದಂಗಳು ೪೭೨ ಕ್ಕಂ;
—ಮಂಗಲಂ—

॥ ಶ್ರೀ ಗುರುಬಸವ ಲಿಂಗಾಯ ನಮಃ ।



# ಹನ್ನೊಂದನೆಯ ಸಂಧಿ





॥ ಸೂಚನೆ ॥

ಶ್ರೀಜಗದ್ಗುರು ನಿರಾಭಾರಿ ವರ ಗುರುಸಿದ್ಧ- ।
ನೋಜದಿಂ ಶರಣ-ಸಾಹಿತ್ಯ ಪ್ರಚಾರಕ್ಕೆ ।
ನೈಜರಹ ತ್ರಿಸಹಸ್ರ ಗಣವರ್ಯರಂ ಕಳುಪಿ ಮಠವೆಸಗುತಾಳೆ ಕಳೆದಂ ॥

*                    *

[ಸಂಧಿ ಪ್ರಾರ್ಥನಾ-ಪದ್ಯ]

ತಾಳದ ಮರಮನೇರಿ ಮರ್ಕಟಂ ಕೆಡಿಸುತಿದೆ; ।
ಬಾಳ ಮಾತೇಂ ಕೊಂಬೆಕೊಂಬೆಗದು ಜಿಗಿದಾಡಿ ।
ಯೇಳಿಗೆಯ ಫಲವೀವ ತಳಿರುಗಳ ಕೆಡಹುತಿದೆ ಯೆನ್ನಗತಿಯೇನಭವನೆ ॥
ಗೋಳ ತಪ್ಪಿಸು; ತನುವನಿಂದ್ರಿಯಂಗಳ ಸಲಹಿ ।
ಮೇಳಯಿಪ ಸದ್ಗುಣಂಗಳನುಳುಹಿ, ಮೋಕ್ಷಮಂ ।
ಮೇಳಯಿಸುತೆನ್ನನನಿಶಂ ಮಹಾಕೃಪೆಯಿಂದೆ ನಿನ್ನವನನೆಸಗಿ ಕೊಳ್ಳೈ ॥ ॥೧॥

ಎಂದಿನಂದದೊಳುದಯ ಪೂಜೆಯಂ ಮುಗಿಸುತ್ತ-|
ಲಂದದಿಂ ಬಿಲ್ವ-ವನದೋಳ್ ಲತಾ ಮಂಟಪವ |
ಪೊಂದಿ ಮೂರ್ತಂಗೈದು, ನಲವಾಂತ ಸಮಯದೋಳ್ ತ್ರಿಸಹಸ್ರ ಗಣವರ್ಯರು ||
ಬಂದು ನಮಿಸುತ್ತೆ ಕೈಮುಗಿಯುತ್ತೆ ನಿಂದಿರ- |
ಲ್ಕೆಂದನಿಂತಾ ಪ್ರಮಥ-ತಿಂತಿಣಿಗೆ ಗುರುಸಿದ್ಧ- |
ನಿಂದು "ಮಾಹೇಶ್ವರರೆ, ನಿಮ್ಮನೀಗಳ್ ಸುಪ್ರಸಾದವಂ ಕರುಣಿಸದಲೆ ||೨||

ಎಂತು ಶಿವಶರಣ ಸಾಹಿತ್ಯ ಪ್ರಚಾರಕ್ಕೆ |
ಸಂತಸದೆ ಕಳಿಸುವ್ರುದೆನು" ತ್ತಿರಲ್ ತೆಂಗಾಯ- |
ನಾಂತು ಬಂದಂ ಭಕ್ತನನಿತರೊಳ್; ಗುರುವೊಲಿದು ತತ್ ಫಲವ ತೆಗೆದುಕೊಳುತಂ||
ಚಿಂತೆಯಂ ಕಳೆದೆಯಾ ಪರಶಿವನೆ ನೀನೆನುತೆ |
ಸಂತರೊಪ್ಪುವ ತೆರೆದೊಳೋರೋರ್ವರಂ ಕರೆದು |
ಶಾಂತನಾಶೀರ್ವದಿಸಿ ಸರ್ವರಂ ಕಳುಪಿದಂ; ಕಾಯೊಂದರೋಳ್ ಮಹಿಮನು ||೩||

ತಂದ ಭಕ್ತನ ಕರೆಯುತವನ ತೆಂಗಾಯನವ- |
ಗಂದದಿಂ ಕರುಣಿಸಿದನದನರಿದ ತದ್ಭಕ್ತ- |
ನಂದಳಕುತಂ ಕೇಳ್ದನೆಂತೆನಲ್ "ಭೋ ದೇವ ವಂದೆ ಯಿನಿತೆಂತಾದುದು?" ||
ಸಂದೆಗವ ಕಳೆಯಲ್ಕೆ ಗುರುಸಿದ್ಧ ಗುರುವರಂ |
ಚಂದದಿಂ ಮಾತನಾಡಿದನಿಂತು "ಭಕ್ತವರ |
ಕಂದು ಗೊರಲನ ಲೀಲೆ, ಭಕ್ತನಾಗಿಹ ನಿನ್ನ ಹಸ್ತದಿಂ ನಡೆದುದರಿಯೆ; ||೪||

ಬೀಜವೆಂದೊಂದು ತೆಂಗಾಯನುರು ಭೂಮಿಯೋಳ್ |
ಸೋಜಿಗವೆನಲ್ಕೂರಿ ವೃಕ್ಷದೊಳನೇಕ ಫಲ- |
ರಾಜಿಯಂ ಕಾಣ್ಬಂತೆ ಕಂಡಿರುವೆ ತ್ರಿಸಹಸ್ರವಾಗಿ ಗೈದಿಹ ಲೀಲೆಯು; ||
ನೈಜವಿದು ನಿನ್ನ ಭಕ್ತಿಯ ವರ್ಧನಕ್ಕಾಗಿ |
ವೋಜನಿಂ ಶಿವನಿಂತು ತೋರಿದಂ ಮಹಿಮೆಯಂ; |
ತೇಜದಿಂ ನಿನ್ನ ನಿಷ್ಠೆಯು ವರ್ಧಿಸಿದುದೀಗಳಾಶ್ಚರ್ಯವೇನಿದರೊಳು? ||೫||

ಅದನಾಲಿಸುತೆ ಭಕ್ತನಿಂತೆಂದನೈ "ದೇವ '
ಯಿದರೊಳೇನಿಹುದೆನ್ನ ಭಕ್ತಿಯರಿಯಲ್ ಪೂರ್ವ |
ದಮಳಿನ ಪದ್ಧತಿಯ ಮೀರಲಾಗದೆನುತ್ತಲಾಶಿಷಕ್ಕಾಗಿ ಫಲವ ||
ಮುದದಿಂದೆ ತಂದಿರ್ದೆನೆನ್ನದೇಂ ಶ್ರದ್ಧೆ"ಯೆನ- |
ಲಿದನಾಗ ಕೇಳ್ದಿಂತು ನಗುತೆ ನುಡಿದಂ ಗುರುವು; |
ಸದಯ ನಿನ್ನಯ ನಿಷ್ಠೆ ಪರಶಿವಂಗಧಿಕವಾಗಿಯೆ ಕಂಡಿಹುದು ಪೇಳ್ವುದೇಂ? ||೬||

ನಿನ್ನ ಸುಕೃತವಿದಯ್ಯ ಭಕ್ತಿಯುದಿಸುವುದಕ್ಕೆ |
ಸನ್ನುತನೆ ಪುಣ್ಯಮಿರವೇಳ್ಕು ಪೂರ್ವಜರ ಸಂ- |
ಪನ್ನಪದ್ಧತಿಯಂತೆ ನಡೆವ ಸದ್‌ಬುದ್ಧಿಯುದಯಕ್ಕಮಾದಡುಮರಿವೊಡೆ ||
ಚನ್ನಮೆನಲದೆ ವೇಳ್ಕಿದಕ್ಕೊಂದು ಕಥೆಯುಂಟು:- |
ಮನ್ನಣೆಯೊಳಿರ್ದನೋರ್ವಂ ಚೋಳದೇಶದೊಳ್ |
ಚನ್ನನೆಂಬುವ ಸೇವಕಂ; ಬಾಳುತಿರ್ದನುರು ಧರ್ಮವತ್ಯಾಖ್ಯ ಪುರದೋಳ್: ||೭||

ಕಲಿಕಾಲ ಚೋಳನೃಪನಶ್ವ-ಶಾಲೆಯೊಳಿವಂ |
ಕಲಿಯಾಗಿ ಸದ್ಗುಣದೆ ಪರಿಚಾರಿಯಾಗಿತಾಂ |
ಕಲಿಮಲಾಂತಕನಂತೆ ತೋರುತಿರ್ದಂ; ಮಾದಿಗರ ಕುಲದೆ ಜನಿಸಿರ್ದಡುಂ; ||
ಸಲಿಸುವಂ ತುರಗಂಗಳಂ ಕಾಯ್ವ ಸೇವೆಯುಂ; |
ಸಲೆ ನೃಪಾಲಂಗೆ ಮತ್ತುಳಿದರ್ಗೆ ಪ್ರಿಯನಾಗಿ |
ನೆಲಿಸಿರ್ದನುರೆ ಬಡವನಾಗಿ ಗುಡಿಸಲದಲ್ಲಿ ಪತ್ನೀ-ಸುತರ ಬೆರೆದವಂ; ||೮||

ನರಪತಿಯ ಶಿವಭಕ್ತಿಯಪದಳಂ ಪುರಜನಕೆ |
ನೆರೆ ಶೀಲ-ಸಂಸ್ಕೃತಿಯ ಕಲಿಸಿರ್ದುದಮಳತೆಯ |
ಪರಿಣಾಮ ಮಾಗಿರ್ದುದೀ ಚನ್ನನುರೆ ಮನಕೆ ಕಲಿಕಾಲನಾಚರಣೆಯು ||
ನರಪಾಲನಾ ವ್ರತದ ಪದ್ಧತಿಯನರುಪುವೇಂ |
ಪರಶಿವನ ಕರೆಯುತ್ತೆ ಭೋಜನವ ಗೈಸುವಂ |
ಮೆರೆವ ನೃಪನೀ ನಿತ್ಯನೇಮಮುಂ ತಿಳಿಯುತ್ತೆ. ವಿಸ್ಮಯಿಸಿದಂ ಚನ್ನನು ||೯||

ತನ್ನ ಗುಡಿಸಲದಲ್ಲಿ ಶಿವನನುಣಿಸಲ್ ಬಯಿಸಿ |
ನನ್ನಿಯಿಂ ಪರಿತಪಿಸಲಾದನಾ ಚನ್ನಯ್ಯ- |
ನುನ್ನತನನಿಂತು ಕರೆಯುತಲಿರ್ದನನುದಿನದೆ ಮನದಲ್ಲಿ ಜಾನಿಸುತ್ತೆ; ||೧೦||
ಸನ್ನುತನೆ, ಬಾರಯ್ಯ, ಚಿನ್ನಿಧಿಯೆ ಬಾರಯ್ಯ |
ಸನ್ನತನೆ ಬಾರಯ್ಯ, ಯೆನ್ನವನೆ ಬಾರಯ್ಯ |
ಮನ್ನಣೆಯು ಶಿವನೆ ಯೆನ್ನಂ ಹೀನಕುಲಜನೆಂದಿನ್ನು ಮರೆಯದಿರ್ಕೈ ಪ್ರಭೋ; ||

ಕಲಿಕಾಲ-ನೃಪನಲ್ಲಿ ನಿತ್ಯದೋಳ್ ನೀಂ ಬಂದು |
ಕಲಿಮಲಾಂತಕನೆ ನಲಿಸುತ್ತೆ ಪೋಗುವೆಯಂತೆ |
ಫಲಭಕ್ಷ್ಯ-ಭೋಜ್ಯಂಗಳೇನುಮೆನ್ನಯ ಮನೆಯೊಳಿಲ್ಲವೈ ಪ್ರೇಮಮಿಹುದು ||
ನಲಿನಲ್ಕೆ ನಿನ್ನ ನಾಂ ಕರೆಯುವೇಳ್ಕೆಂಬ ನಲೆ |
ಬಲುಹಿನಾ ವಿಧಿಯ ತಿಳಿದಿಲ್ಲ ತವ ಸನ್ನಿಧಿಗೆ |
ನಲವಿಂದೆ ಬರ್ಪ ಕಲೆಯಿಲ್ಲವೆನ್ನೊಳ್; ತಿಳಿದು ಬಾರಯ್ಯ ಸರ್ವಜ್ಞನೆ, ||೧೧||

ಪರಶಿವನೆ, ಬಾ; ರುದ್ರ ಬಾ; ಭದ್ರ, ಬಾ; ನಲಿದು |
ಗಿರಿವರನೆ ಬಾ; ಹರನೆ ಬಾ; ವರನೆ ಬಾ; ವೊಲಿದು |
ಪರತರನೆ ಬಾ; ಭವನೆ ಬಾ; ಧವನೆ ಬಾ; ತಿಳಿದು ಬಂದಂಬಲಿಯ ಸವಿಸು ನೀಂ;||
ಪರಮ ಬಾರೈ; ಗಿರಿಜೆಯಾಣ್ಮ ಬಾರೈ; ದಯಾ- |
ಪರನೆ ಬಾರೈ; ಶರ್ಮಕರನೆ ಬಾರೈ; ನಯಾ-ಽಽ |
ಕರನೆ ಬಾರೈ; ಧರ್ಮಧರನೆ ಬಾರೈ; ಸ್ವಯಾಪ್ಪದನೆ ಬಾರೈ, ಶಂಕರ; ||೧೨||

ಎನಿತು ಕರೆದಡುಮೊಲಿದು ಪರಶಿವಂ ಬರದಿರ- |
ಲ್ಕನಘನಹ ಚನ್ನಯಂ ಮತ್ತಮಿಂತೆಂದನರಿ- |
ದನುಪಮನೆ ನೀಂ ಬಾರದಿಹ ಕಾರಣಮದೆನಗೆ ತಿಳಿದುದಾಂ ಜಾತಿಹೀನಂ;||
ಘನ ಕುಲಜನಲ್ಲವಾಂ ಕರಿಕಾಲ-ನೃಪನಂತೆ |
ಸನಕಾದಿಗಳ್ ಪಳಿವರೆಂದು ಮಾದಿಗನಾದ |
ಜನನಿಂದೆ ನಾದೆನ್ನ ಗುಡಿಸಲದೆ ಭೋಜನಕೆ ನೀನೆಂತು ಬರ್ಪೆ ಶಿವನೆ? ||೧೩||

ಕೀಳು ಜಾತಿಯೊಳೆನ್ನ ಬರಿಸಿದವರಾರಯ್ಯ? |
ಕೀಳೆನಿಪುಜ್ಜುಗಕೆ ನೇಮಿಸಿಹರಾರಯ್ಯ? |
ಕೀಳುಮೇಲೆಂಬುದಂ ನೇಮಿಸಿಹರಾರಯ್ಯ? ನಿನ್ನ ಲೀಲೆಯಿದಲ್ಲವೆ? ||
ಕೀಳೆನಿಪ ಜನ್ಮಮಂ ತೊರೆವೆ ನಾಂ ನಿನಗಾಗಿ; |
ಕೀಳೆನಿಸಿಕೊಂಡು ನಿನ್ನಾರಾಧನೆಯ ತೊರೆವ |
ಕೀಳು ಬಾಳಿನಗೆ ಬೇಡೈ ಯೆನುತೆ ಪ್ರಾಣದುರೆ ತ್ಯಾಗಕ್ಕೆ ಸಿದ್ಧನಾದಂ; ||೧೪||

ಹರನಾಗಳೋಡಿ ಬಂದವನ ಕೈಪಿಡಿಯುತ್ತ- |
ಲೊರೆದನೆಂತೆನೆ ಚನ್ನ ಕೇಳ್, ನಿನ್ನ ನಡೆ ಚನ್ನ- |
ಮುರಿದುಲಿವ ನುಡಿಚನ್ನ ,ಮೇಳಯಿಸಿ ಯೆಸಪ ಭಕ್ತಿಯೆ ಚನ್ನಮಿಲ್ಲಸಮರು ||
ಅರಿಯೆ ನಿನ್ನಯ ಜಾತಿಯುಜ್ಜುಗಂ ಬಲು ಚೆನ್ನ- |
ಮರಿಯುತಾಂ ಬಂದೆನೈ; ನಿನ್ನೊಡನೆ ಭೋಜನಕೆ |
ನರಪಾಲ ಚೋಳನೊಡನುಂಡಿಲ್ಲವಾಂ; ಚನ್ನ ಬೇರೆ ಕುಳಿತುಂಡಿರುವೆನೈ; ||೧೫||

ಚನ್ನಯ್ಯನೆಂದನಿಂತಾ ಶಿವಂಗೆರಗುತ್ತ- |
"ಲೆನ್ನಯ್ಯ ಬೇಡವೈ ಯೆನ್ನೊಡನೆ ಭೋಜನಂ |
ಚನ್ನಾಗಿ ನಿನ್ನ ಮಿಕ್ಕಿದ ಪ್ರಸಾದವ ಕೊಳ್ವ ಬುದ್ಧಿಯನೆ ಕರುಣಿಸಯ್ಯ; ||
ಎನ್ನುತ್ತಲೆರಗಿರ್ಪ ಚನ್ನನಂ ಪಿಡಿದೆತ್ತಿ, |
ಚಿನ್ನಾತ್ಮನಾಗಿ ಪರಶಿವನೊರೆದನೆಂತೆನ- |
ಲ್ಕಿನ್ನಿಲ್ಲಿಯಾನೊಲ್ಲೆಮೆನ್ನಮಾತಂ ನೀನೆ ನಡಿಸದಿರ್ದೊಡೆ ಪೋಪೆನು;" ||೧೬||

ಗುರುಸಿದ್ಧ ಶಿವಯೋಗಿ ಭಕ್ತನಂ ನೋಡುತ್ತೆ |
ಕರುಣೆಯಿಂದಿಂತು ಮುಂದಿನ ಕಥಾ-ಭಾಗಮಂ |
ನೆರೆ ಪೇಳ್ದನೆಂತೆನಲ್ ಚನ್ನಯ್ಯನಾಗೇಳ್ದು ತನ್ನ ಸತಿಯಂ ನಿರುಕಿಸೆ ||
ಪರಮ ಭಕ್ತಿಯೊಳೆ ಮಾಳಮ್ಮನೆಂಬಂಗನೆಯು |
ಸರಸದಿಂ ಮಣ್ಣ ಪರಿವಾಣದೊಳಗಂಬಲಿಯ- |
ನರೆದ ಪಣ್ಣಾದ ಮೆಣಸಿನಕಾಯಿ ಚಟ್ನಿಯಂ ನಮಿಸುತೆಡೆಮಾಡಿಟ್ಟಳು; ||೧೭||

ಸತಿಯ ಭಕ್ತಿಯ ಕಂಡು ಹರನೆ ಮೆಚ್ಚಲ್ಕವಳ |
ಪತಿಯಾದ ಚನ್ನಯಂ ನಮಿಸಿ ಕೈಮುಗಿಯೆ, ಪಶು |
ಪತಿಯು ನಲಿಯುತ್ತೆ, ಚನ್ನನ ಕೈಯ ಪಿಡಿಯುತ್ತಲೆಳೆದು ಕುಳ್ಳಿರಿಸಿಕೊಂಡು ||
ಅತಿಶಯದೊಳಾಗ್ರಹಿಸಲುಣಲೊಪ್ಪೆ, ಶಿವನಾಗ-|
ಳತಿಮುದದೊಳುಣ್ಣಲಾರಂಭಿಸಿದನಾ ಚನ್ನ-|
ನತಿ ವಿನಯದಿಂ ಬಾಗುತುಣಲಾದನಾ ಪ್ರಮಥವರರರಿದು ಕೊಂಡಾಡಲು ||೧೮||

ನಲಿಯುತಂ ಮತ್ತೆಮತ್ತೆಡೆಮಾಡಿ ಭಕ್ತಿಯಂ |
ಸಲೆ ತೋರ್ಪ ಮಾಳಮ್ಮನೋಳ್ವಾತು ಶಂಕರನ- |
ನೊಲಿಸೆ ಮಿತಿಯಿಲ್ಲದುಣುತಿರ್ದನಾ ಪರಶಿವಂ ಪಾರ್ವತಿಯು ಬೆರಗಾಗಲು ||
ಒಲಿಯುತ್ತೆ ಚನ್ನಯನ ಭಕ್ತಿಯಾಗ್ರಹಕೆ ಹರ- |
ನುಲಿಯದಲೆ, ಪ್ರತಿಯಾಗಿ ಭುಂಜಿಸುತಲಿರ್ದನಂ- |
ಬಲಿಯಾ ಪ್ರಸಾದಮುರೆ ಬೆಳೆಯುತ್ತಿರ್ದತ್ತೆಸೆದು ತಣಿದನಾಗಳ್ ಶಂಭುವು; ||೧೯||

ಮರೆದನಾ ಪರಶಿವಂ ಕಲಿಕಾಲನರಮನೆಯ; |
ತೊರೆದನಾ ಸುಗ್ರಾಸ ಭೋಜನದ ಚಿಂತೆಯಂ |
ಹರನೀ ಪ್ರವೃತ್ತಿಯು ನೃಪಾಲಗುರೆ ವ್ಯಸನಮಂ ಪುಟ್ಟಿಸಿದುದಾಕ್ಷಣದೊಳ್; ||
ಭರದೆ ಲಿಂಗದ ಸನ್ನಿಧಿಗೆ ಬಂದು ಕೈಮುಗಿದು, |
ನೆರೆ ನಿಂದು, ಧ್ಯಾನಸ್ಥನಾಗಲಾ ನೃಪವರಂ |
ಪರಮನಾ ಧ್ವನಿಯು ಕೇಳ್ದುದು, ವಾಕ್ಯಮಿಂತದರೊಳುರೆ ಸ್ಪಷ್ಟಮಾದುದರಿಯೆ; ||

ಚನ್ನನೀ ಗುಡಿಸಲದೆ ಭೋಜನಕೆ ಕುಳಿತಿಹೇಂ; |
ನನ್ನಿಯಿದು ನೃಪವರನೆ ಯಮೃತಮುಹುದಂಬಲಿಯು; |
ನಿನ್ನ ಮೃಷ್ಟಾನ್ನಮೀ ರುಚಿಗೆ ಸಮಮಲ್ಲವೈ ಯಾನಿನ್ನು ಬರೆನಲ್ಲಿಗೆ; ||
ಸನ್ನುತನ ನುಡಿಯನಾಲಿಸುತೆ ವಿಸ್ಮಯದಿಂದೆ |
ಬನ್ನದಿಂ ಶೋಧಿಸುತೆ ನೃಪನೈದುತುಟಜಕ್ಕೆ |
ಮನ್ನಣೆಯ ಶಿವ-ಚನ್ನರಾರೋಗಣೆಯ ನೋಡ್ವಿ, ನಮಿಸಿ ಕೊಂಡಾಡುತಿರ್ದಂ;||೨೧||

ನೋಡಿದೇಂ "ಭಕ್ತದೇಹೋ ಮಮ ಶರೀರಮೆಂ" ॥
ಬೇಡಿತಂ–ಶ್ರುತಿಯೊಳುಲಿದಾ ನಿನ್ನ ವಾಣಿಯುರೆ ।
ಕೂಡೆಸೆಯೆ ಸತ್ಯತೆಯನದರಿಂದಲೆನಗಾದನೀ ಚನ್ನಯಂ ಗುರು ಶಿವ ।
ನೋಡಿ ಮಾದಿಗನೆಂದು ತಿಳಿದಿರ್ದ ಮಮ ಮತಿಗೆ ।
ಕೂಡೆ ಮೊದಿಗನೆಂಬ ಜ್ಞಾನ ಮಾಯಿತ್ತೀಗ; ।
ಮೂಡಿದಾನಂದದಿಂ ನಿನ್ನೊಡನೆ ಭುಂಜಿಸಿದ ಕೃತ್ಯದಿಂ ಪರಿದುದಘಮೆ; ॥೨೨॥

ಆನುಣಿಸಿದೇಂ ನಿನ್ನ ಕೂಡಿಯುಣಲಿಲ್ಲವೈ; ।
ಮಾನಿತಂ ಕಲಿಸಿದನದಂ ಶಿವನೆಯಿಂದೆನಗೆ; ।
ಸ್ವಾನುರಾಗದೆ ನಿನ್ನ ಸನ್ನಿಧಿಯೊಳೀಗ ವಂದಿಸುವೆನಿವಗೆನುತೆ ನಯದೆ; ॥
ಮಾನಸಿಥಿಯಾಗ ನಮಿಸಿದನೊಲಿದು ಚನ್ನಂಗೆ; ।
ಮಾನಿವರರಭಿಮಾನಿಗಳ್ ವಿಸ್ಮಯಿಪ ತೆರದೆ ।
ಸ್ವಾನುಭವಿಗಳ್, ಸ್ವಾನುಭಾವಿಗಳ್ ಮೆಚ್ಚುವಂದದೆ ಶಾಸ್ತ್ರಮಗಿವಂದದೆ; ॥೨೩॥

ಆಗಳಾ ಶರಣ ಚನ್ನಯ್ಯನಿಂತೊರೆದನೈ ।
"ಶ್ರೀಗುರು–ಸ್ಥಾನದಲ್ಲಿರ್ಪ ನೀವೆನಗೇಕೆ ।
ಬಾಗಿದಿರಿ, ನೀವೆನ್ನ ತಂದೆ ಕಲಿಕಾಲ ನೃಪರಲ್ಲವೇನೈ? ಶಿವಶಿವಾ! ॥
ನೀಗಲರಿಯದ ಪಾಪಿಯಾಂ ಮಾದಿಗಂ; ನೇವೆ- ।
ಗಾಗಿ ಜನ್ಮಿಸಿದಾಳಿನಾಳೆಂದು ತಿಳಿದಡುಂ ।
ಲೋಗರುರು ನಿಂದೆಗೇತಕೆ ಪಕ್ಕಾದಿರೈ, ಯೆನ್ನನಘ–ಕೂಪಕೊಗೆದು?" ॥೨೪॥

ಎಂದು ಕಲಿಕಾಲ ಚೋಳನ ಚರಣದೋಳ್ ಬೀಳ್ದು ।
"ತಂದೆ ರಕ್ಷಿಸೆ"ನುತ್ತೆ ಬಾಷ್ಪಜಲದಿಂ ಪದಮ- ।
ನಂದು ತೊಳೆಯುತ್ತಿರಲ್ ಪಿಡಿದೆತ್ತಿ ನೃಪವರಂ ಮತ್ತೆ ನಮಿಸಿಂತು ಪೇಳ್ದಂ; ॥
ದಂದುಗವಿದೇಕೆ ಚನ್ನಾರ್ಯ ಗುರುವರನೆ, ನಿನ- ।
ಗಿಂದಿನಿಂದಾಂ ಶಿಷ್ಯನಾ ಭಕ್ತಿ-ಪಾಠಮಂ ।
ಛಂದದಿಂ ಕಲಿಸೆನ್ನನುದ್ಧರಿಸಿದಿರಿ ಸಟೆಯಿದಲ್ಲ; ಶಿವಸಾಕ್ಷಿಯಿದಕೆ; ॥೨೫॥

ಶಿವನೆಂದನೆಂತೆನಲ್ ನೀವೀರ್ವರೆನ್ನ ಭ- ।
ಕ್ತವರರ್ ಪ್ರಮಥಸಭೆಯೊಳಾದರ್ಶರಾಗಲಭಿ- ।
ನವಯೋಗ್ಯತೆಯ ಪಡೆದ ಭಾವುಕರ್ ನೀವಿರ್ಪಿರೈ; ಬನ್ನಿ ಕೈಲಾಸಕೆ; ॥
ಶಿವೆಯರಸನಿಂತೊರೆದು ಪುಷ್ಪಕವ ತರಿಸುತಾ ।
ಶಿವಲೋಕದವರೆಲ್ಲ ಮೆಚ್ಚುತಿರೆ ಪಾರ್ವತಿ- ।
ಧವ ನೀರ್ವರಂ ನಯದೆ ಕುಳ್ಳಿರಿಸಿಕೊಂಡೈದಿ ಗಣರೊಡೆತನಮನಿತ್ತನು ॥ ॥೨೬॥

ಇಂತು ಚರಿತಮನೊರೆಯುತಾ ಪರಮ ಭಕ್ತನಂ ॥
ಕಾಂತ ಗುರುಸಿದ್ಧಂ ಜಗದ್ಗುರುವು ಪರಸುತಿರೆ ।
ಸಂತಸದೆ ತದ್ಭಕ್ತನೆರಗಿ ಸದ್ಗುರು ಪದಕೆ ಸ್ತುತಿಸುತಿಹನಿಂತು ನಿಂದು ॥
ಶಾಂತವರ, ಹೃತ್ಸದನ, ಸಿಂಹಾಸನಾಧೀಶ, ।
ಸಂತತಸ್ತುತ, ಮಹಿತ, ಭಾಕ್ತಿಕ, ಭವ-ವಿನಾಶ, ।
ಸಂತರೊಪ್ಪಲ್ ಭಕ್ತಿಹೀನನಾದೆನ್ನನುರು ಭಕ್ತನಂ ಗೈದೆ ಗುರುವೆ, ॥೨೭॥

ನಿನ್ನಿಂದ ಲಧಿಕವಹ್ನ ಮಹಿಮರಾರೆಂದು ಸಲೆ ।
ಸನ್ನುತಂಗೆರಗುತಿರೆ ಗುರುವು ಪಿಡಿದೆತ್ತುತಲೆ, ।
ಮನ್ನಿಸುತೆ, ಮಸ್ತಕದೆ ಕರಮನಿಟ್ಟಾಗ ಕಳೆಯಾಂತ ವಚನಗಳನಿಂತು ।
ಉನ್ನತಂ ನುಡಿದನೈಯಮರಪ್ಪ ಭಕ್ತಿಯದು ।
ಚಿನ್ನಿಧಿ ಮಹಾಚರವರಂಗರಿಕೆ ಯಾಗುವುದು ।
ನಿನ್ನಯೀ ಭಕ್ತವಂಶಕ್ರಮುದಿನ್ನೈದಿಹುದು ನುಡಿದಿಂತು ಬಣ್ಣಿಸುತಲೆ ॥೨೮॥

ನಿನ್ನ ತಾತಂ ಮಹಾ ಚರಭಕ್ತನಾಗಿರ್ದ- ।
ನುನ್ನತಂ ಕಾಡಪ್ಪ ಶೆಟ್ಟನಾಮಕನವಗೆ ।
ಸನ್ನುತಂ ಪರಶಿವಂ ಜಂಗಮಂ ತಾನಾಗಿ ದರ್ಶನಮನೀಯುತಿರ್ದಂ॥
ನನ್ನಿಯಿಂ ತದ್ಭಕ್ತಿಯುರೆ ಬೆಳೆದು ಬಂದಿಹುದು ।
ಚನ್ನಮೆನಲಾತನ ಪರಂಪರೆಯುರಹ ನಿಮ್ಮೊ- ।
ಳಿನ್ನು ವರೆಗುಮದೆಂದೊಡವನ ಸುಕೃತವ ಬಣ್ಣಿಸಲ್ಕಾರ್ಗೆ ಸಾಧ್ಯಮರಿಯೈ ॥೨೯॥

ಇಂತು ನುಡಿಯುತೆ ಗವಿಯೊಳಾ ಜಗದ್ಗುರುವರ್ಯ- |
ಕಾಂತನಾಗಳ್ ಮಿಂಚು ಮಿಂಚುತಡಗುವ ತೆರದೆ |
ಚಿಂತಿಸಲ್ಕರಿದೆನಲ್ ಸ್ಸಿರ್ಗಮಿಸಿದಂ ಕಣ್ಣಮುಚ್ಚಿ ತೆರೆವನಿತರಲ್ಲಿ||
ಸಂತನಾದಮುರಪ್ಪ ನೋಡಿ ಬೆರಗಾಗುತ್ತೆ |
ಸಂತಸಂಗೊಂಡು ತಾತನ ಕಥೆಯ ಶ್ರವಣದಿಂ- |
ದಂತರಂಗದ ಪಾತ್ರೆಯೊಳ್ ಭಕ್ತಿ-ಸುಧೆಯುರ್ಕೆ, ಮಠದ ನಿರ್ಮಿತಿಗಾಗಳೆ ||೩೦||

ಸಂಕಲ್ಪಿಸುತ್ತಿರಲ್ಕಂದದೇ ರಾತ್ರಿಯೊಳ್ |
ಶಂಕಾ-ರಹಿತನೈದುತಂ ಗುರುವು ಕನಸಿನೊಳ- |
ಗೋಂಕಾರ-ರೂಪನಿಂತೊರೆದನೆಲೆ ಭಕ್ತವರ, ನಿನ್ನಿಚ್ಛೆಗಾಂ ಮೆಚ್ಚಿದೇಂ; ||
ನೀಂ ಕೇಳು; ನಿನ್ನಿಂದೆ ರಚಿತಮಾಗುವ ಮಠಕೆ |
ಕೈಂಕರ್ಯದಿಂದ ಲೋಲೆಯ ಮಠಮೆನುತ್ತಲಾ-
ತಂಕಕ್ಕೆ ನಿತ್ಯಮಾಸ್ಪದಮೀಯದಲೆ ಕರೆಯವೇಳ್ಕದುಂ ಬಿಲ್ವವನದೇ ||೩೧||

ವಿರಚಿಸಲ್ಪಡವೇಳ್ಕು; ದರ್ಶನವ ಕೊಂಡೆಮ್ಮ |
ನೆರೆ ಸಮ್ಮತಿಯ ಪಡೆಯವೇಳ್ಕೆಂದು ಪೇಳುತ್ತೆ, |
ಹರ-ಸಮಂ ಭೋಂಕನಂತರ್ಧಾನನಾದನೀಕ್ಷಿಸುತಲೆಚ್ಚತ್ತಮಂ ||
ಗುರುಸಿದ್ಧ ಶಿವಯೋಗಿಯಂ ಕಾಣುತಪ್ಪಣೆಯ |
ಸರಸಮೆನೆ ಪಡೆಯುತ್ತೆ, ನಿರ್ಮಿಸುತಲರ್ಪಿಸಿದ-|
ನರಿದೆನಲ್ ಕೀರ್ತಿಯಂ ಲಕ್ಷಿಸದಲಮರಪ್ಪನಾ ಗುರು-ಕೃಪೆಯ ಪಡೆದನು; ||೩೨||

ಶರಣ-ವಿರಚಿತಮಾದ ಸಾಹಿತ್ಯ ಭಾಂಢಾರ-|
ಮುರೆ ತಾಡವೋಲೆಯೊಳ್ ಲಿಖಿತಮಾದುದರಿಂದ |
ಕರಮೆಸೆವ ತತ್ ಪುಸ್ತಕಂಗಳಂ ತನ್ಮಠದೊಳಿರಿಸಿದಂ ಶಿವಯೋಗಿಯು; ||
ಮಿರುಗುವೋಲೆಯ ಮಠಮೆನಿಪ್ಪ ನಾಮಮದಕ್ಕೆ |
ನಿರುತ ಸಾರ್ಥಕಮೆನಿಸುತೀಗಳುಂ ಶೋಭಿಸುವ-|
ದರಿಯಲ್ ಮಹಾತ್ಮರೆಸಗಿಹ ಕಜ್ಜಮದು ಸುಸ್ಥಿರಮಿದೆಂಬ ಜಸವ ತಳೆದು; ||೩೩||

ಮೂರು ಸಾವಿರದ ಗಣರಲ್ಲಿಂದೆ ತೆರಳುತ್ತೆ, |
ಸಾರಿ ಸಂಚರಿಸುತಂ ಕನ್ನಡದ ಪ್ರಾಂತವಂ; |
ಮೀರಿದಾ ಶರಣಸಾಹಿತ್ಯ ಪ್ರಚಾರವಮಂ ಗುರುಸಿದ್ಧನಾಜ್ಞೆಯಂತೆ ||
ಭೂರಿ ಯತ್ನವಗೈದು ಲೀಲೆಗಳನಲ್ಲಲ್ಲಿ |
ತೋರಿ ಮೂರ್ ಸಾಸಿರ ಮಠಂಗಳಂ ಸ್ಥಾಪಿಸುತ-|
ಪಾರಕೀರ್ತಿಯ ತಮ್ಮ ಗುರುವಿಂಗೆ ನೀಡುತ್ತಲಾಗಾಗ ದರ್ಶಿಸಿದರು ||೩೪||

ಕೀರ್ತಿಯಂ ಲಕ್ಷಿಸದೆ ಶರಣಸಾಹಿತ್ಯದುರೆ |
ಸ್ಫೂರ್ತಿಯ ಪ್ರಚಾರಕ್ಕೆ ಸಂತೋಷಿಸುತೆ ಗುರುವು |
ಪೂರ್ತಿಗಾಗಿಯೆ ಲಿಂಗಪೂಜೆಯಂ ಮಾಡುತ್ತದಂ ಲಿಂಗದೊಳ್ ಕಾಣುತೆ |
ವಾರ್ತೆಯಂ ವರ್ಣಿಸುತಲಿರ್ದನುರು ಭಕ್ತರೋಳ್; |
ಕೂರ್ತು ಶಂಸಿಸಲಿಲ್ಲ ತನ್ಮಠ-ಸ್ಥಾಪನೆಯ |
ಮೂರ್ತಗೊಂಡೆಸೆವ ಶಿವನಂತೆ ಕಂಗೊಳಿಸಿದಂ ಗುರುಸಿದ್ಧರಾಜಯತಿಯು,; ||೩೫||

ಜಸಕಾಗಿ ಯಿಲ್ಲನೇಕರ್ ಒದುಕಿ ಮಡಿದಿಹರ್ |
ಸಸಿನದಿನನೇಕರ್ ದುರಾಶೆಗಾಗಿಯೆ ಬದುಕು-|
ತಸವಸದೊಳುಳಿದಿಹರ್ ಸತ್ಯಮಾಗಿಂತವರ್ ಜೀವರೆನಿಸುತ್ತಿರ್ಪರು; ||
ಕಸದಂತೆ ಹುಟ್ಟಿ ನಶಿಸುವ ಜೀವನಂ ನರರ-|
ದಸುವು ಗತಿಸಿದಡುಂ ಚರಿತ್ರಮಾದರ್ಶಮೆನೆ |
ವಸುಧೆಯೋಳ್ ಶೋಭಿಸುವ ಬಾಳು ಶಿವಶರಣರದು;ತದ್ಗುರುವು ಹರನಲ್ಲವೆ?||೩೬||

ಗುರುಸಿದ್ಧಶಿವಯೋಗಿಯಂತಪ್ಪ ಗುರುವಾಗಿ |
ಹರುಷದಿಂ ಹೂಬಳ್ಳಿ ಗ್ರಾಮದೆಡೆಯಲ್ಲೆಸೆವ |
ನೆರೆ ಬಿಲ್ವ-ವನದಲ್ಲಿ ಶೋಭಿಸಂ, ಬಂದ ನರರಂ ಹರನನಾಗೆಸಗುತಂ; ||
ಒರೆವೆಸಿದಕೊಂದು ದೃಷ್ಟಾಂತವಹ ಲೀಲೆಯಂ |
ತರುಣಿಯೋರ್ವಳ್ ಬಂದಳಲ್ಲಿಗುರೆ ಸ್ವರ್ಣದಾಽಽ-|
ಭರಣಗಳ ಧರಿಸಿಕೊಂಡಲೆಯುತಂ ಯತಿಯವಳನೋಡುತಿರಲೆರಗಿ ನಿಲಲು ||೩೭||

ಕುಳ್ಳಿರಿಸಿ ಜಗದ ಗುರುವವಳ ಕೇಳಿದನಿಂತು |
"ಕಳ್ಳಕಾಕರ ಭೀತಿಯಿಲ್ಲಿ ಬಹಳಂ ತಂಗಿ |
ಒಳ್ಳಿತಲ್ಲಂ ಸ್ವರ್ಣದಾಭರಣಗಳನಿನಿತು ಧರಿಸಿಕೊಂಡಲೆಯುತಿಹುದು" |
ಒಳ್ಳಿ ನುಡಿಯಂ ಕೇಳಿ ತರುಣಿಯಂದಳ್ ನಮಿಸು-|
ತೆಳ್ಳನಿತುಮಂಜದಲೆ ನಿಜವಯ್ಯ ನಿಮ್ಮ ನುಡಿ |
ಸುಳ್ಳಲ್ಲಮಾನೆನಿತೊ ದಾಗಿನಗಳಂ ಕಳೆದುಕೊಂಡಿರ್ದಡುಂ ಮತ್ತೆ ಮತ್ತೆ ||೩೮||

ಪತಿಯು ಪೀಡಿಸುತಲಂಕಾರಗಳ ಮಾಡಿಸುವೆ-|
ನತಿಯಾಗಿ ಧರಿಪಾಶೆ ಪೆರ್ಚುತಿಹುದೇಂ ಮಾಳ್ಪ-|
ದತಿಶಯಮೆನಲ್ ಚೋರರಿಂ ಬಡಿಸಿಕೊಂಡಿರ್ದಡುಂ ಬುದ್ಧಿ ಬರಲೊಲ್ಲದು;||
ಮತಿಯಿಲ್ಲದೆನ್ನಿಂದೆ ಗಂಡನಾಸ್ತಿಯು ಹೋಗಿ |
ಪಿತನನೊಲಿಸುತ್ತಿವುಗಳಂ ಗೈಸಿಕೊಂಡಿಹೇಂ;|
ಸ್ಥಿತಿಯೆನ್ನದಿದು ಸುಧಾರಿಸಲೆಂದು ಪ್ರಾರ್ಥಿಸಲ್ ಬಂದಿಹೇಂ ಪೊರೆ ಗುರುವರ"||೩೯||

ಇದನಾಲಿಸುತೆ ನುಡಿದನಿಂತು ತದ್ಗುರುವರಂ |
ಸದಮಲಳೆಯಾಸೆಯಂ ಬಿಡವೇಳ್ಕು ಬಲ್ಪಿಂದೆ |
ಪದಳ್ದು ಬಂಗಾರದಾಶೆಯದು ಸರ್ವರಿಗಿರ್ಕುಮೋರ್ವರಾದಡುಮಿದಕ್ಕೆ
ಪದೆದಾಗಳುಂ ಸಿಲ್ಕದವರಿಲ್ಲ ಯೋಚಿಸಲ್-|
ಲಿದೆ ಮಾಯೆ ಜಗವ ಸುತ್ತಿರ್ಪುದೌ ತೊರೆಯುವುದು-
ಮಿದಸಾಧ್ಯಮಾಡೊಡರಿ; ದಾನವೆಸಗಲ್ ವೇಳ್ಕು; ದಾನಮೆಂದೊಡೆ ತ್ಯಾಗವು;||೪೦||

ತ್ಯಾಗಮೆಂದೊಡೆ ತಿಳಿಯೆ ಸತ್ಪಾತ್ರ-ವಿನಿಯೋಗ-|
ಮಾಗಳುಂ ಪೂರ್ವಜ ಮಹಾಂತರಿದನಾಚರಿಸಿ. |
ರಾಗದಿಂ ತೋರಿರ್ಪರದರಂತೆ ನಡೆದ ಜನರ್ಬೈದೆ ಸುಖಮಾಗಿರ್ಪರು;||
ಈಗಳುರು ಭಾಗ್ಯವತಿಯಪ್ಪೆ ನೀಂ; ದಾನಮಂ |
ಲೋಗರರಿಯಲ್ ಮಾಡಲಾಶೆಯಿಂ ಮುಕ್ತಳಹೆ |
ರಾಗಿಗಳ್ ನೆರೆ ಭೋಗದಾಶೆಯಂ ಮಾಳ್ಪರ್ ವಿರಾಗಿಗಳ್ ನಿಷ್ಕಾಮ್ಯದೆ ||೪೧||

ಮಾಡುವರ್ ದಾನಮೆಂದೊಡೆ ಕೊಡುವದೆಂದರ್ಥ-।
ಮೀಡಿತರ್ ತಿಳಿದಿದಂ ಮಾಡುತ್ತೆ ಮೋಕ್ಷಮಂ ।
ನಾಡೆ ಪೊಂದಿಹರರಿದು ನೀಂ ಕೊಡುವದಂ ಕಲಿಯೆ ಕೀರ್ತಿಯಂ ಪೊಂದುವೆ; ದಿಟಂ ॥
ನೋಡೆ ಕಾಲಂ ದೇಶಮುರೆ ಯೋಗ್ಯಮಾದುದೀ ।
ನಾಡಿನೊಳ್ ದೊರೆದಪುದು ಸತ್ಪಾತ್ರಮಿದಸಾಧ್ಯ ।
ಮಾಡುವದದೇಂ ದೊರೆತ ಕಾಲದೊಳ್ ದಾನಮಂ ಮಾಡುವುದೆ ಯೋಗ್ಯ
ಮರಿಯೌ ॥೪೨॥

ಅಂಗವಿಕಲಂ ದರಿದ್ರಂ ಮಹಾ ನಿಸ್ವಾರ್ಥಿ-।
ಯಂಗವಿಸಿದ ಪರೋಪಕೃತಿನಿಷ್ಠನಿವರೆ, ತಿಳಿ; ।
ಕಂಗೊಳಿಪ ಸತ್ಪಾತ್ರರೆನಿಸಿಕೊಳ್ಳುವರಿವರ್ಗೆ ಕೊಡುವುದತ್ಯಂತಮಧಿಕಂ ॥
ಮಂಗಲೆಯೆ, ಯಿದರಿಂದ ನಿನ್ನ ಬಾಳ್‌ಬಂಗಾರ-।
ಮಿಂಗಿತಜ್ಞರ್ ಮೆಚ್ಚಲಾಗುವದು ಸತ್ಯಮಿದು ।
ಪಿಂಗಲುರೆ ಬಣ್ಣಂ ಕೆಡಲ್ ಸ್ವರ್ಣಮಲ್ಲಮದು; ಬಾಳ್‌ಗೆಡಲ್ ಮನುಜನಲ್ಲಂ;॥೪೩॥

ಮರುಳಾಗಿ ಬಣ್ಣಕ್ಕೆ ಹೊನ್ನನುರೆ ಪ್ರೀತಿಪರ್ ।
ಮರುಳಾಗಿ ಬಣ್ಣಕ್ಕೆ ಪೆಣ್ಣನುರೆ ಪ್ರೀತಿಪರ್; ।
ಮರುಳುಮಾಡುವದು ಪೆಣ್‌ಬಣ್ಣಮದು ಪೊಂಬಣ್ಣಮಾವಾಗಳುಂ; ॥
ಮರುಳುಮಾಡುವದು ಪೊಂಬಣ್ಣಮದು ಯತಿಗಳಂ ।
ಮರುಳುಮಾಡುವದು ಪೊಂಬಣ್ಣಮದು ಶಿಸುಗಳಂ ।
ಮರುಳುಮಾಡುವದು ಪೊಂಬಣ್ಣಮದು ಬಾಲರಂ; ದೇವನಿದರಾಶೆ ತೊರೆವಂ;॥೪೪॥

ತಂಗಿ, ನೀನಿದರಾಶೆಯು ತೊರೆಯದಿರ್ದೊಡಾ-।
ಸಂಗತ ಪತಿದ್ರೋಹ-ಪಾತಕಮನನುಭವಿಪೆ; ।
ಭಂಗವಿಲ್ಲದೆ ಪಿತೃದ್ರೋಹಿಯಾಗುತಲುಭಯ ವಂಶಕೆ ಕುಠಾರಿಣಿಯಹೆ ॥
ಮಂಗಲ ಪತಿವ್ರತೆಯೆನಿಪ್ಪ ನಾಮಂ ತಪ್ಪಿ ।
ಯಂಗನೆಯಿವಳ್ ವಿಲಾಸಿನಿಯೆಂಬ ಪೆಸರೊದಗಿ ।
ತುಂಗ ಭೂಸ್ವರ್ಲೋಕಗಳ್ಗೆ ದೂರಾಗುತ್ತೆ, ದುರ್ನರಕದೊಳ್ ಬೀಳುವೆ; ॥೪೫॥

ವ್ರತಧಾರಿಯಾದ ಭಕ್ತನ ಕಥೆಯನೊಂದನಿದ-|
ಕತಿ ಹರುಷದಿಂ ಪೇಳ್ವೆನಾಲಿಸೌ "ಬಸವಾಂಬೆ,
ಸ್ಥಿತಿಯೊಳಿರ್ದಂ ಬೇಡರೊಳಗೋರ್ವನುತ್ತಮಂ ಬೆಸ್ತನಾಮಕ ಭಕ್ತನು ||
ಮತಿವಂತನೊಂದುರು ವ್ರತವ ಪಿಡಿದಿರ್ದನಾ-|
ಗತುಲ ಶಿವವತ್ಸಲಂಮಾಳ್ಪ ಮತ್ಸ್ಯೋದ್ಯಮದೆ
ಹಿತದೆ ಪಿಡಿವಾಗ ಮೊದಲಿಗೆ ದೊರೆತ ಮೀನವಂ ಶಿವನಿಗರ್ಪಿಸುತಿರ್ದನು ||೪೬||

ಮತ್ತೆ ದೊರೆದಿರ್ಪ ಮತ್ಸ್ಯಂಗಳಂ ಮಾರುತ್ತ-|
ಲುತ್ತಮಂ ಬಂದ ದ್ರವ್ಯದೆ ತನ್ನ ಸತಿ-ಸುತರ |
ತತ್ತರಿಸಿದಲೆ ಪೊರೆವನಾವಗಂ ನೇಮಮಿದು ತಪ್ಪದಲೆ ನಡೆದಿರ್ದುದು; ||
ಸತ್ತಮಂಗೊಂದು ದಿನದೊಳ್ ಮೊದಲ ಮೀನಮದು |
ಕುತ್ತಮಿಲ್ಲದೆ ದೊರೆದುದಾಗ ಪೊನ್ನಿನದಾಗಿ |
ಸುತ್ತಿದಾಶೆಯ ಬಿಟ್ಟು, ಶಂಕರಂಗರ್ಪಿತಮಿದೆಂದು ನೀರೊಳಗೆಸೆದನು ||೪೭||

ಮುಗುಳ್ದು ಬಲೆಯಂ ಬೀಸೆ ಮತ್ತದೇ ಮೀನಮಿರೆ |
ತೆಗೆದು ನೋಡುತಲಿದು ಶಿವಾರ್ಪಿತಂ ಮೀನಮೆಂ-|
ದೊಗೆದು, ಮತ್ತಂ ಬೇರೆ ಕಾಸಾರಕೈದುತಂ ಬೀಸಿದಂ ಜಾಲಮನವಂ; ||
ಮುಗುಳ್ದೆ ತನ್ಮತ್ಸ್ಯಮೇ ಕಾಣಿಸಿಕೊಳಲ್ನೋಡಿ |
ನಗುತೆಸೆದು ಶಿವಲೀಲೆಯಿದನುತ್ತೆ ಸ್ವವ್ರತಂ |
ಮಿಗೆ ಕೆಟ್ಟತೆನುತೆ ಪ್ರಾಣವ ಬಿಡಲ್ ನಿರ್ಧರಿಸಲೈದಿದು ಪಂಚಮುಖನು ||೪೮||

ನೋಡಿ ನಮಿಸುತ್ತೆ ಶಿವನಲ್ಲಿ ಬೇಡಿದನವಂ |
"ಬೇಡೆನಗೆ ನಿನ್ನ ಕೈಲಾಸ-ಸುಖಮುಗಜೇಶ,
ನೀಡೆನಗೆ ನಿನ್ನ ಪದ-ಭಕ್ತಿಯಂ ಸರ್ವೇಶ, ವ್ರತವಿದಂ ನಡಿಸಳಿಸದೆ; ||
ಮೂಡಿದಾನಂದದಿಂ ಹರನೊರೆದನೆಂತೆನಲ್ |
"ಮೂಡಿದೇಂ ಭಕ್ತ ನಿನ್ನರು ವ್ರತ-ಪರೀಕ್ಷೆಯಂ |
ನಾಡೆ ಗಣ-ಪದದಲ್ಲಿ ನಿನಗಿಲ್ಲದಾಶೆಯಂ ಕಂಡು ಬೆರಗಾದೆನೀಗ; ||೪೯||

ಬೆಸ್ತನೆಂಬುವ ನಿನ್ನಯ ನಾಮುಮಾವಗಂ ।
ವಿಸ್ತರದ ತವ ಜಾತಿಯೊಳ್ ಸ್ಥಿರಮಿದಾಗಿರಲಿ ।
ವ್ಯಸ್ತಮಾಗದಲೀ ವ್ರತವ ದೇಹವಿರುವನಕ ನಡೆಸಿ ಬಾಯೆನ್ನ ಸ್ಥಲಕೆ
ಶಿಸ್ತಿನಿಂದಿಂತೊರೆದದೃಶ್ಯನಾಗಲ್ ಶಿವಂ ।
ನ್ಯಸ್ತ-ಭಕ್ತಿಯೊಳಂತೆ ನೇಮವಂ ನಡೆಯಿಸುತ- ।
ಲಾಸ್ಥೆಯಿಲ್ಲದೆ ಗಣಪದವನೈದಿದಂ; ತಂಗಿ, ನೀನರಿದು ತೊರೆಯಾಶೆಯ; ॥೫೦॥

ಇಂತೊರೆಯುತವಳ ಮಸ್ತಕದೆ ಹಸ್ತವನಿಡಲ್ ।
ಕಾಂತೆಯ ನಿರಂತರದ ದಾಗಿನವ ಧರಿಪಾಶೆ ।
ಯಾಂತುದಸ್ತೆತೆಯನವಳಾಗ ಯತಿವರ-ಕೃಪೆಯ ನುತಿಪಳೀ ಪರಿಯಾಗಿಯೆ; ॥
ಶಾಂತನೆ, ವಿಧಾತನೆ, ಮಹಾತ್ಮನೆ, ಸುಖಾತ್ಮನೆ, ಸು-।
ಕಾಂತನೆ, ಚರೇಶನೆ, ಮಹೇಶನೆ, ಯತೀಶನೆ, ಮ- ।
ಹಾಂತನೆ, ಮಹಾಸುಕೃತವಿಲ್ಲದಲೆ ಕರುಣೆಯಿದು ಸುರರಿಗಾದಡುಮಲಭ್ಯಂ; ॥೫೧॥

ಗುರುಕರುಣೆಯೇ ಕಾಮಧೇನುವಿಮ್ಮಿಗಿಲಹುದು; ।
ಗುರುಕರುಣೆಯೇ ಕಲ್ಪವೃಕ್ಷದಿಮ್ಮಿಗಿಲಹುದು; ।
ಗುರುಕರುಣೆಯೇ ದೇವರತ್ನದಿಂ ಮಿಗಿಲಹುದು; ಸೂರ್ಯ-ಮಣಿಯಿಂ ಮಿಗಿಲಿದು ॥
ನೆರೆ ಕೌಸ್ತುಭಕ್ಕಿಂತ ಮಿಗಿಲಹುದು; ಗುರುಕರುಣೆ; ।
ಪರುಷದಿಂ ಮಿಗಿಲಿಹುದು ಶಶಿಕಾಂತದಿಂ ಮಿಗಿಲ-।
ದರಿಯೆ ನೀನೆನಗೆ ಗುರುವಾ ನಿನ್ನ ಕರುಣೆಗಾವುದು ಸಮಂ? ಶಿವನದಲ್ಲಂ ॥೫೨॥

ನಿನ್ನ ಹಸ್ತಂ ಮಮ ಶಿರಕ್ಕೆ ತಾಗಲ್ ಗುರುವೆ ।
ಯೆನ್ನ ದುರಿತವ ದುರಾಶೆಯ ದುರ್ಗಣವ ಕಳೆದು ।
ಬನ್ನವಂ ತೊಲಗಿಸಿದುದಿದಕಾವುದಂ ಸಮಂ? ಸ್ಪರ್ಶಮಣಿಯಲ್ಲಮರಿಯೆ ! ॥
ಚಿನ್ನವಂ ಗೈಯ್ಯುವದದಾ ಲೋಹವಂ ಮುಟ್ಟೆ ।
ತನ್ನ ಶಕ್ತಿಯ ಕೊಡದು ತವ ಪಾಣಿಯಂತಲ್ಲ; ।
ತನ್ನಯ ಮಹಾ ಶಿಷ್ಯ-ಹಸ್ತದೊಳ್ ನಿಜ ಶಕ್ತಿಯೆಲ್ಲವಂ ನೀಡುತಿಹುದು; ॥೫೩॥

ಶಿವನ ಸರ್ವಜ್ಞತ್ವ-ಶಕ್ತಿಯಂ ತಿಳಿವರಾರ್? ।
ತವೆ ಯಿದೆನಗರಿಯದೈ-ಯೆನ್ನ ನಾಮವ ಮೊದಲೆ ।
ಸವಿನುಡಿಯೊಳುಚ್ಚರಿಸಿ ತಿಳಿಹಿಸುತಲೆನಗೆ ವಿಸ್ಮಯವ ಪುಟ್ಟಿಸಿ ಭಕ್ತಿಯ ॥
ನವವೆನಲ್ ಬೆಳೆಯಿಸಿದೆ ನಿನಗಾರ್ ಸಮರೆಯಿಲ್ಲ; ।
ಭುವನತ್ರಯದೊಳಿದುವೆ ಸತ್ಯಮಹುದೆನುತಿರಲ್ ।
ಶಿವರೂಪಿ ಗುರುವೊರೆದನೆಂತೆನಲ್ಕೆ"ಲೆಯವ್ವ, ನಿನ್ನಂತೆ ಮನುಜ ನಾನುಂ; ॥೫೪॥

ಎನ್ನನೇತಕೆ ಪೊಗಳ್ವೆ ? ಶಿವನ ನೆನೆ ಸುಖಮಹುದು; ।
ಬನ್ನಮೆಲ್ಲಂ ತೊಲಗುವುದು ದಿಟಮಿದೆಂದೆನುತೆ ।
ಸನ್ನುತಂ ಪರಸುತ್ತೆ ಗಹ್ವರದೊಳೈದುತ್ತೆ ತೊಡಗಿದಂ ಲಿಂಗಾರ್ಚೆಗೆ॥
ಚನ್ನಮೆನಲಾಗಳಾ ಗುರುಸಿದ್ಧಯೋಗಿಯಂ ।
ಚಿನ್ನಧಿ ವಿರಾಗಿಯಂ ನುತಿಸುತ್ತೆ ಭಕ್ತಳಹ ।
ಮನ್ನಣೆಯ ಬಸವಾಂಬೆ ನಿರ್ಗಮಿಸಿದಳ್ ಸೊಗದೆ ಪೂಬಳ್ಳಿಯೊಳಿಹ ಗೃಹಕೆ;॥೫೫॥

ಪಿತಗೆ ಹಿತ-ಸುತೆಯಾಗಿ, ಪತಿಗೆ ಶ್ರಿತ-ಸತಿಯಾಗಿ ।
ಶ್ರುತಜನಕೆ ಪ್ರಿಯಳಾಗಿ, ಬಾಳ್ದಳಾ ಬಸವಾಂಬೆ ।
ವಿತತಮಾದಾ ಕನಕದಾಶೆಯಂ ತಾಂ ತ್ಯಜಿಸಿ ಭಕ್ತಳಾದಳ್ ಶಿವಂಗೆ ।
ಅತಿಥಿಯಭ್ಯಾಗತರನುಪಚರಿಸುತಂ ಮತ್ತೆ ।
ಪತಿತಾಂಗ-ವಿಕಲರ್ಗೆ ಮಾತೆಯೆನಿಸುತೆ ಬಾಳ್ದ-।
ಳತಿವಿನಯದಿಂ ಸಾಧ್ವಿ ಯಾಕೀರ್ತಿ ಪಸರಿಸಿತು ಚಂದ್ರಿಕೆಯೊಲೀ ಭುವನದೆ ॥೫೬॥

ಈ ಕಥೆಯ ಸಜ್ಜನರ್ ತಿಳಿದಿಂತು ಬಣ್ಣಿಸಿದ-।
ರೇಕ ಮನದಿಂ ಪುರಾತನರ ಚರಿತಂಗಳಂ ।
ಲೋಕಮೊಲಿವಂತೆ ದೃಷ್ಟಾಂತಮಾಗೊರೆಯುತ್ತೆ, ದುರ್ಜನರನಾವಾಗಳುಂ ॥
ಶೌಕಿಕರ್ ಮೆಚ್ಚುವಂದದೆ ಸುಜನರಂ ಮಾಡಿ, ।
ಶ್ರೀಕರ ಯೆಸೆವ ಪಡೆವರೆಂತೆನಲ್ ಪೇಳ್ವೆನದ-।
ನಾಃ ಕಪರ್ದಿ-ವಿನುತ ಗುರುಸಿದ್ಧಯತಿವರನ ಕೃಪೆಯ ಸಂಪಾದಿಸುವುದು ॥೫೭॥

ಕಲಿಕೇತ ಗ್ರಾಮವಾಸಿಯು ಬ್ರಹ್ಮಯಂ ಶರಣ-|
ನಲಘು ಕಿನ್ನರಿಯ ಬ್ರಹ್ಮಯನ ಪಡಿ ಹೊನ್ನಿನುರು ।
ಮಲಿನಾಶೆಯಂ ಬಿಡಿಸಿದಂ, ಮೋಳಿಗೀ ಮಾರಯಂ ಕಟ್ಟಿಗೆಯ ಕನಕಮಂ ॥
ಸಲೆ ಪಾದತೀರ್ಥದಿಂ ನೆಗಳ್ದ ಬಸವೇಶಂಗೆ ।
ಸಲಿಸ ಬುದ್ಧಿಯ ಕಲಿಸಿದಂ; ಮತ್ತೆ ಜನತೆಯೋಳ್ ।
ವಿಲಿತ ಹೆಮಾಶೆಯ ತೊಲಂಗಿಸಿದನುರೆ ಸ್ವರ್ಣವೃಷ್ಟಿಯಂ ಗೈಸಿ ಚೋಳಂ॥೫೮॥

ಇಂತು ಸಲೆ ತಮ್ಮತಮ್ಮೊಳಗೆ ಜನರ್ ಮಾತಾಡಿ ।
ಪಿಂತಣ ಪುರಾತನರ ಕಥೆಗಳಂ ನೆನೆಯುತಿಹ- ।
ರಾಂತು ಸಮ್ಮುದವ; ಗುರುಸಿದ್ಧ ಶಿವಯೋಗಿ ಯಾ ಲೀಲೆಯುರೆ ಶ್ರವಣದಿಂದೆ; ।
ಸಂತಸಡೆ ಗುರುವರನ ಚಾರು ಮಹಿಮೆಗಳ ಸಲೆ ।
ಸಂತತಂ ಜ್ಞಾನ-ದೃಷ್ಟಿಯೊಳರಿದು ತ್ರಿಸಹಸ್ರ ।
ಸಂತರಹ ಮಾಹೇಶರುರು ಭಕ್ತಿಯಿಂ ನೆಗಳ್ದರಾತ್ಮ ಕರ್ತವ್ಯ ಕೃತಿಯ ॥೫೯॥

ವೀರೇಶ-ಪುಣ್ಯಾಶ್ರಮಂ ಗದುಗಿನೋಳ್ ಮೆರೆವು-।
ದೋರಂತೆ ಶೋಭಿಸುವುದಲ್ಲಿ ಪಂಚಾಕ್ಷರನು-।
ದಾರ ಸ್ವ ಗುರುವರನ ಯೋಗದ ಸಮಾಧಿಯಿದೆ;ಕುಳಿತಿಲ್ಲಿ ಗುರು–ಕರುಣೆಯೋಳ್॥
ಸಾರಜ್ಞ ಗುರು-ಲಿಂಗ-ಚರ-ಭಕ್ತ–ಕಿಂಕರಂ ।
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ ।
ಮೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ–ಪೌರಾಣ ಸಂಧ್ಯೇಕಾದಶಂ ॥೬೦॥



ಅಂತು ಸಂಧಿ ೧೧ಕ್ಕಂ, ಪದಂಗಳು ಅರವತ್ತಕ್ಕಂ;
ಇಂತು, ಒಟ್ಟು ಪದಂಗಳು ೫೩೩ ಕ್ಕಂ;
---ಮಂಗಲಂ—

॥ ಶ್ರೀ ಗುರುಬಸವ ಲಿಂಗಾಯ ನಮಃ ।



# ಹನ್ನೆರಡನೆಯ ಸಂಧಿ





॥ ಸೂಚನೆ ॥

ಬ್ರಹ್ಮರಾಕ್ಷಸನ ಬಿಡಿಸುತ್ತೆ;
ಪಾಳ್ ಭೂಮಿಯೊಳ್ ।
ಬ್ರಹ್ಮರೂಪಂ ಬೂದಿಯಿಂ ಫಲಗೊಳಿಸಿ; ಮತ್ತೆ।
ಬ್ರಹ್ಮವಿದನೊಪ್ಪಿ ಭೂತಂಗಳಿಂ ನಲಿಯುತ್ತೆ ಸೇವೆಯಂ ಕೊಳುತಿರ್ದನು ॥

*

[ಸಂಧಿ ಪ್ರಾರ್ಥನಾ-ಪದ್ಯ]

ತನ್ನ ಸುತ್ತಲು ಕಂಟಕಂಗಳಿರ್ದಡುಮವಂ ।
ನನ್ನಿಯಿಂದಾವದಂಟಿಸಿ ಕೊಳದೆ ಪೂವಾಗಿ, ।
ಮುನ್ನಮರಳುತ್ತೆ, ಲೋಕ-ಪ್ರಿಯತೆಯಂ ಪಡೆದು ಬಾಳುವದೋ, ತದ್‌ಗುಲಾಬಿ ॥
ಚಿನ್ನಿಧಿಯೆ, ಶಿವನೆ, ಪ್ರಿಯಮಾಗುವದು ನಿನಗುಮದು ।
ಸನ್ನುತನೆ,ಯದರಂತೆ ಪ್ರಿಯನಲ್ಲಮಾನೇತ- ।
ಕುನ್ನತನೆ, ಪೇಳೆನಗಿದಾಗದಿರೆ ಭಕ್ತಿಯಂ ಕೊಟ್ಟೆತ್ತಿಕೊಳ್ಳಾವಗಂ; ॥೧॥

10) * *

ಶಿವಪೂಜೆಯನುದಿನಂ ನಡೆದಿರಲ್ಕಾ ಗುರುವು ।
ಶಿವಶರಣ ಸಾಹಿತ್ಯದಾ ಪ್ರಸಾರಂ ನಿರತ- ।
ಮವನಿಯೋಳ್ ಜರುಗಿರಲ್ ಸತ್ಕೀರ್ತಿ-ಚಂದ್ರಿಕೆಯು ಪರ್ಬಿರಲ್ ಬಂದನೋರ್ವಂ॥
ಶಿವಭಕ್ತನೀತನಾ ರಾಯ್ ಚೂರಿ ನವನರಿಯ- ।
ಲವನ ಪೆಸರಿಹುದು ನೈನಪ್ಪನೆಂಬುವದಿವಂ- ।
ಗವಿನೀತೆಯಾದ ಸತಿಯಿರ್ದಳ್, ಕಮಲೆಯೆಂಬುವಳ್ ಮಹಾಽಽಲಸ್ಯಾನ್ವಿತೆ; ॥೨॥

ಮನೆಗೆಲಸಗಳ ಮಾಳ್ಪುದವಳ್ಗೆ ಬೇಸರವಾಗಿ ।
ಘನವಾಗಿ ಭೂತ ಪಿಡಿದವಳಂತೆ ನಟಿಸುತ್ತೆ, ।
ವನಿತೆ ಪತಿಯಿಂದಲಾ ಕಾರ್ಯಗಳ ಮಾಡಿಸುತೆ, ಸುಖವಾಗಿರುತ್ತಿರ್ದಳು; ॥
ಸನಿಹಕ್ಕೆ ಭೂತಮಂ ಬಿಡಿಸುವವರ್ಯೆದಿದೊಡೆ, ।
ಬಿನದಮಂ ಗೈವಳೆಚ್ಚತ್ತಂತೆ ನಟಿಸುತಂ; ।
ಘನತೆಯಿಂ ನಗುತಿಹಳ್, ತನ್ನ ಬಿಡಿಸುವರದಾರೆಂದು ಪೈಶಾಚದಂತೆ; ॥೩॥

ಇಂತು ಪತಿಯಂ ಕಾಡಿದಾ ಕರ್ಮಬಲವಾಗಿ ।
ಸಂತತಂ ಕಾಡಲ್ಕೆ ಸಿದ್ಧಮಾಗುತಲೈದಿ ।
ಕಾಂತೆಗದೆಯೊಂದು ದಿನದೋಳ್ ಮಹಾಭೂತಮುರೆ ತಾನಾಗುತಂಟಿತೊಯೆನೆ॥
ಸಂತಸದೊಳೊರ್ವೆ ಹೊರಗೈದಿದಾಗಳ್ ಬಂದು ।
ಶಾಂತೆಯಂ ಬೆದರಿಸುತೆ, ತದ್ದೇಹದೊಳ ಪೊಕ್ಕು, ।
ಭ್ರಾಂತಿಯಂ ಪುಟ್ಟಿಸುತೆ ಕಾಡಲಾದುದು, ಬ್ರಹ್ಮರಾಕ್ಷಸಮದೇಂ ಪೇಳ್ವೆನು ! ॥೪॥

ಆಗಳುಂ ಮೈಯ್ಯೊಳಗೆ ಯಿರ್ದವಳನೊಲವಿಂದೆ ।
ಕೂಗಿಸುತೆ ಕುಣಿದಾಡಿಸುವದು ಮಿಗೆ ಸ್ವೇಚ್ಛೆಯಿಂ; ।
ರಾಗದಿಂ ಪತಿಯುಣ್ಣಲಿತ್ತೊಡೆ ತಿರಸ್ಕರಿಸಿ, ಕೋಣೆಯೊಳಗೊಯ್ದುವಳನು ॥
ವೇಗದಿಂ ಕುಣಿದಾಡ ಹಚ್ಚುವದದಾರಿಗುಂ ।
ಲೋಗರಿಗೆ ಪೀಡೆಯಂ ಕೊಡದಂತೆ ನಿತ್ಯದೋಳ್ ।
ಭೋಗಿಸಲ್ ಪೆಚ್ಚಿಹುದು ತತ್ಪಾಪದುರು ಫಲವ ಕಮಲೆ ಯೀ ಸ್ಥಿತಿಯ ನೋಡಿ॥

ಆಪ್ತರಿಷ್ಟಟರ್ ಕೂಡಿ ತಾವೆ ಮಾಂತ್ರಿಕನನೊಲಿ- ।
ದಾಪ್ತಿಯಿಂ ಕರೆತಂದು ತೋರಿಸಿದೊಡವೆ ಪೇಳ್ದು- ।
ದಾಪ್ತ-ಚಿಂತೆಯ ತೊರೆಯಿರಾಂ ಬ್ರಹ್ಮ-ರಾಕ್ಷಸಂ; ಬಿಡೆನಿವಳನೊಯ್ಯುತಿಹೆ"ನು; ॥
ಲಿಪ್ತ ಭೀತಿಯೊಳೋಡಿದಂ ಬಿಡಿಸ ಬಂದವಂ; ।
ವ್ಯಾಪ್ತ-ಚಿಂತೆಯೊಳೆ ಯೋಚಿಸತೊಡಂಗಿರಲಾಗ ।
ಲಿಪ್ತ ನೋರ್ವಂ ಪೇಳ್ದನೆಂತೆನಲ್ ಬ್ರಹ್ಮನಿಷ್ಠನೆ ಬೇಕಿದಂ ಬಿಡಿಸಲು ॥೬॥

ಈ ನುಡಿಯ ಕೇಳ್ದಿಂತು ನೈನಪ್ಪನಾ ಕ್ಷಣದೆ ।
ಸ್ವಾನುರಾಗದೆ ನುಡಿದ"ನಯ್ಯ ತದ್ ಬ್ರಹ್ಮನಿ-।
ಷ್ಠಾನುವರ್ತಿಯನೆಂತು ಶೋಧಿಪುದೆ"ನಲ್ ಮತ್ತಮೋರ್ವನೊರೆದಿಹನವಂಗೆ ॥
ಜ್ಞಾನಿಯಿರ್ಪಂ ಪೋಗು ಪೂಬಳ್ಳಿಯಂಬೂರ್ಗೆ- ।
ನೂನ ಸದ್ಗುಣಿಯವಂ ಗುರುಸಿದ್ಧನಾಮಕಂ ।
ಸ್ವಾನುಭವಿ ಯತಿವರಂ ಮೂರುಸಾವಿರ ಶಿಷ್ಯರಾತನ ಜಸವ ಬೆಳೆಪರು; ॥ ॥೭॥

ಅದರ ಕುರುಹೆನೆ ಮಠವ ಸ್ಥಾಪಿಸಿಹರಲ್ಲಲ್ಲಿ ।
ಸದಮಳಿನ ಶರಣ-ಸಾಹಿತ್ಯ-ಪ್ರಚಾರಕನು-।
ವೊದಗಿಹುದು ಗುರುಸಿದ್ಧ ಗುರುವರನ ನಾಮಮಿದಕೆಲ್ಲಕುಂ ಕಾರಣಮಿದೆ ॥
ಪದುಳ್ದಾಪ್ತಹೃದಯದ ಬಲದೆ ಮಹಿಮೆಗಳ ತೋರ್ದಪರ್; ।
ಪದಪಿಂದೆ ತಚ್ಛಿಷ್ಯರೆಂದೊಡಾತನ ಘನತೆ- ।
ಯೊದವನಾರ್ ಬಣ್ಣಿಪರ್; ಪೋಗಿ ನೋಡಾ ಪುರದ ಬಿಲ್ವವನಕೆಂದು ನುಡಿಯೆ;॥೮॥

ಪೊರಟನಾ ಕ್ಷಣದಲ್ಲಿ ತದ್ಗುರುವ ನೆನೆಯುತ್ತೆ, ।
ಬರಲಾರದಾ ಪತ್ನಿಯಂ ಕರೆದು ಕೊಳುತೆ ಸಂ- ।
ಚರಿಸುತಂ ಬಂದನಲ್ಲಿಗೆ ಶಾಂತರೊಪ್ಪುತಿರೆ ಸ್ತುತಿಸುತ್ತೆ ಭಯವಿಲ್ಲದೆ ॥
ಪರತರನ ಪಾದಮಂ ಕಂಡು ಬದುಕಿದೆನೆನುತೆ ।
ಕರುಣೆಗಾಗಿಯೆ ನುತಿಸಲಾದನೆಂತೆನೆ " ಗುರುವೆ, ।
ಸ್ಥಿರ-ಭಕ್ತ-ತತಿಯೆ, ಸುರ-ತರುವೆ, ನಿರ್ಜರರರಿವೆ, ಘನಮುಕ್ತಿಯಿರವೆ, ಪರವೆ, ॥

ಈ ನುತಿಯ ಕೇಳ್ದಿಂತು ನುಡಿದನೆಲೆ ಸದ್ಭಕ್ತ, |
ಮಾನಿತನೆ, ನಿನಗೇನು ತೋಂದರೆಯಿಹುದು ಪೇಳು; |
ಮಾನನೀಯನೆ, ಶಿವನ ನುತಿಸಿದೊಡೆ ನಿನಗೆ ಸುಖಮಾಗಳುಂ ದೊರೆವುದು ದಿಟಂ ||
ಸ್ವಾನು-ರಾಗದೊಳಾಲಿಸುತ್ತೆ ಗುರುವಚನಮಂ |
ದೀನಭಾವದೆ ನಮಿಸಿ ನುಡಿದನೆಂತೆನೆ "ದೇವ, |
ಭಾನು-ತೇಜನೆಯೆನ್ನ ಸತಿಯೀಕೆ ಯಿವಳ್ಗೆ ದುರ್ಬ್ರಹ್ಮ ರಾಕ್ಷಸಮಂಟಿದೆ; ||೧೦||

ನಿನ್ನಿಂದಲಿದು ತೊಂಲಗಲ್ ವೇಳ್ಕು ಸದ್ಗುರುವೆ, |
ಚನ್ನಾಗಿ ನುರಿತ ಮಂತ್ರಜ್ಞರಿಗೆ ತೋರಿಸುತೆ |
ಬನ್ನಂ ಬಿಡದಿದೆಂದು ಸನ್ನಿಧಿಗೆ ಬಂದಿಹೇಂ; ಕಾಯಯ್ಯ ಕರುಣಾಕರ, ||
ಮುನ್ನಾದ ಸುಕೃತದಿಂ ಯೆನಗೆ ನೀಂ ದೊರೆದಿರ್ಪೆ; |
ಯೆನ್ನೀ ಮೊರೆಯ ಕೇಳ್ದುಪಾಯದಿಂ ರಕ್ಷಿಸುತೆ, |
ಸನ್ನೀತಿ-ಧರ್ಮಜ್ಞ, ಸಂಸಾರ ಸುಖವ ಕೊಡು; ನೀನಧಿಕ ದೈವಮೆನಗೆ" ||೧೧||

ಎಂದು ಪ್ರಾರ್ಥಿಸುತಿರಲ್ ಬೂದಿಯಂ ತತ್ಸತಿಗೆ |
ಕಂದುಗೊರಲನ ಸಮಂ ಪ್ರೋಕ್ಷಿಸಲ್ ರಕ್ಕಸಂ |
ಬಂದು ನಮಿಸುತ್ತೆ ಕೈಮುಗಿಯುತ್ತೆ ನಿಂದಾಗ ಗುರುವರಂಗಿಂತೊರೆದುದು; ||
"ತಂದೆಯಾಂ ಮಾಡಬಾರದ ಹೀನ ಕರ್ಮಮಂ |
ಸಂದಿದೆನ್ನಯ ಗುರುವಿನಾಶ್ರಮದೆ ಮಾಡುತ್ತೆ, |
ಹೊಂದಿದೇಂ ಮಾನಿತನ ಶಾಪದಿಂದೀ ತನುವ" ಪ್ರಾರ್ಥಿಸಲ್ ಗುರುವರ್ಯನು ||

ಕರುಣೆಯಿಂ ನೋಡಿಂತು ನಿಶ್ಯಾಪವಿತ್ತಿರ್ದ- |
ನರಿಯೆ ತತ್ ಕಾರುಣ್ಯದಿಂ ನಿನ್ನ ದರ್ಶನಂ |
ನೆರೆ ಘಟಿಸಿ ಪೂತ ನಾನಾದೆನೆನ್ನುತೆ ನಮಿಸಿ ಗುರ್ವಾಶ್ರಮಕೆ ಪೋದುದು; ||
ತರುಣಿಯಹ ಕಮಲಾಂಬೆ ಯತಿವರನನೀಕ್ಷಿಸುತ- |
ಲೆರಗಿ ಕೈಮುಗಿದೊರೆದಳೆಂತೆನಲ್ "ಸದ್ಗುರುವೆ |
ಪೊರೆದೆ ಯೆನ್ನಂ; ಪತಿಯ ವಂಚನದ ಫಲದಿಂದಲೀ ಪೀಡೆ ಘಟಿಸಿತೆ"ನಲಃ ||೧೩||

" ಮಾಡಲಾಗದು ತಂಗಿ, ಪತಿವಂಚನೆಯನೆಂದು- |
ಮೀಡಿತ ಶ್ರುತಿ ಪುರಾಣಂಗಳೊರೆಯುವವಿಂತು |
ನಾಡೆ ಮಾನವನಿಲ್ಲಿ ದೇವನಂ ನೋಡಿಲ್ಲನುದಕಾಗಿ ಸಲೆ ಸಂತತಂ ||
ನೋಡಿ ತಿಳಿಯಲ್ವೇಳ್ಕು ದೇವನೆಂದೆಲ್ಲರಂ !
ಮೂಡದಿರಲಿದು ಮನದೆ ಪಿರಿಯರೋಳ್ ತನ್ಮತಿಯು |
ಕೂಡಿ ಬೆಳೆಯಲ್ ವೇಳ್ಕು ಬಂಧುಬಾಂಧವರಲ್ಲಿ ಪಿರಿಯರೋಳ್ ದೈವಭಾವಂ ||೧೪||

ಮನುಜರೋಳ್ ಸ್ತ್ರೀ ಪುರುಷರೆಂಬ ವರ್ಗಗಳೆರಡು ।
ಘನಸೂಕ್ಷ್ಮಮಾಗಿಹುದು ಸ್ತ್ರೀ-ಧರ್ಮಮಿದು ಕೇಳು; |
ವನಿತೆಯರ್ಗಿರುವುದೊಂದೆ ವಿಶೇಷಮೇನೆನಲ್ ಪತಿಯ ಸೇವೆಯೊಳಿರ್ಪುದು ||
ಅನುಪಮಳೆ, ಪತಿಯೆ ದೈವಂ; ಗುರುವು; ವರ-ಸತಿಗೆ |
ಮನದೊಳಿಂತುರು ಭಾವನೆಯ ತಾಳಿ ನಡೆಯದಿರೆ ।
ಜನತೆಯೊಪ್ಪುವದಿಲ್ಲಮವಳ್ಗಾವ ಲೋಕದೋಳ್ ಸನ್ಮಾನ-ಮಿರದು ತಿಳಿಯೌ ||

ಘೋರ ನರಕದ ಯಾತನೆಯ ಜೀವಮಿರುವನಕ-|
ಮಾರಿಗಂ ತಪ್ಪದನುಭವಿಸುವದು ತಿಳಿ ತಂಗಿ, |
ಸಾರ ಸಭ್ಯಂ ಶಾಂತನಹ ಪತಿಯು ನಿನಗಿಲ್ಲಿ ದೊರೆದಿಹನು ನಿನ್ನ ಸುಕೃತಂ; ||
ಮೀರಿದಾ ಬ್ರಹ್ಮರಾಕ್ಷಸದ ಪೀಡೆಯು ತಪ್ಪಿ ।
ಭೂರಿ ಹಿತಮಾಗಿರ್ಪುದಿನ್ನಾದಡುಂ ಸತಿಯ-|
ಪಾರಧರ್ಮವ ಮರೆಯದಲೆ ನಡೆಯಿಸುತ್ತೆ ಬಾಳಾದರ್ಶ ಗೃಹಿಣಿಯಪ್ಪೆ; ||೧೬||

ಈ ಸತಿಯ ಧರ್ಮಮಂ ಪಾಲಿಸೆ ಮಹಾಸತಿಯ-|
ರಾಸುಗುಣವತಿಯರೆನಿಸಿರ್ಪರವರೊಳಗೋರ್ವ ।
ಮೀಸಲಹ ಲಲನೆಯ ಚರಿತ್ರಮಂ ಪೇಳುತಿಹೆನಾಲಿಸೌ ಕಮಲಾಂಬೆಯೆ, ||
ಲೇಸನೀಯುವ ತ್ರಿಮೂರ್ತಿಗಳ ಸುತರಂ ಗೈದ-|
ಭಾಸುರ ಮಹಾ ಸುದತಿಯನಸೂಯೆ ಯಾಕೆಯಿನಿ-|
ತೋಸರಿಸದಿಹ ಪ್ರೇಮದಿಂ ಸಾಕಿ ಸಲಹಿರ್ದ ಪುತ್ರಿಯನಲಾಯಿ ಯೊರ್ಮೆ ||೧೭||

ನೀತಿಮತಿಯುರು ತಪವ ಗೈವ ಮಹದಾಶೆಯಿಂ |
ಖ್ಯಾತ ವನಕೈದಿದಳ್ ತಂದೆಯಾದತ್ರಿ ಋಷಿ-|
ಯಾತುರದೊಳಾಜ್ಞೆಯಂ ಧಿಕ್ಕರಿಸಿದಳ್ ತಾಯಿ ಬೇಡೆಂದಡುಂ ಕೇಳದೆ, ||
ಆ ತಪವ ಗೈವ ಸಮಯದೊಳಗಾ ಬನಕೆ |
ಸಾತಿಶಯಮೆನೆ ಬೆಂಕಿ ತಗಲಿತಾ ಕ್ಷಣದಲ್ಲಿ |
ಭೂತಲಕೆ ವಿಸ್ಮಯಂ ಜನಿಸುತಿರಲನಸೂಯೆಯರಿದು ಪತಿಭಕ್ತಿ ಬಲದಿಂ ||೧೮||

ಪತಿಪಾದತೀರ್ಥಮಂ ತನ್ನಾಶ್ರಮದೆ ನಿಂದು |
ಪತಿಯ ನೆನೆಯುತ್ತೆ ಮಗಳಿರ್ದ ದಿಕ್ಕಿಂಗೆರಚ-|
ಲತಿಶಾಂತಮಾದುದಗ್ನಿಯುಃ ಋಷಿಯುು ವಿಸ್ಮಯಿಸದೆ ಸತ್ಯಾಂಶಮಂ-ತಿಳಿಯಲು ||
ಸತಿಯೊಡನರಣ್ಯಕ್ಕೆ ತೆರಳಿದಂ ತತ್ ಕ್ಷಣದೆ |
ಸುತೆಯಿಂದಲಗ್ನಿಯ ದುರಂತಮಂ ತಿಳಿಯುತ್ತೆ, |
ಮತಿವಂತನಾಕೆಗೆ ಸತೀವ್ರತದ ಮಹಿಮೆಯಂ ತಿಳಿಸುತ್ತೆ ತಪವ ಬಿಡಿಸಿ, ||೧೯||

ಕರೆತಂದನಾಶ್ರಮಕೆ; ದೈವದಿಂದನಲಾಯಿ-|
ಯುರೆ ಪೆಳವನಂ ಪತಿಯನಾಗಿ ಪಡೆದಿಹಳಾಕೆ |
ನೆರೆ "ಘೋರ ಮುನಿ"ಯೆಂಬುದವನ ಪೆಸರಿಹುದು; ವಿಧಿಲೀಲೆಯಂ ಮೀರ್ವರಾರು?||
ಕರಮವಗೆ ಸರ್ವಮಂ ನಿಷ್ಠೆಯಿಂದರ್ಪಿಸಿಹ-|
ಳೆರಡು ಕಾಲುಗಳಿಲ್ಲದವನ ಸಂಕಲ್ಪದಂ-|
ತುರು ತೀರ್ಥಯಾತ್ರೆಯಂ ಕೈಕೊಳುತಲಾತನಂ ಕುಳ್ಳಿರಿಸಿಕೊಂಡು ಪೆಗಲೊಳ್ ||

ನಡೆಯುತಿರ್ದಳ್; ಸಮಯಕನುಸರಿಸಿ ಸೇವೆಯಂ |
ಬಿಡದೆ ಮಾಡುತ್ತಿರ್ದಳುಚ್ಚ-ನೀಚವಿದೆನ್ನ-|
ದಡಿಗಡಿಗೆ ಪತಿಯಂ ಮಹಾದೇವನೆಂದರಿದು ನೆನೆಯುತಿರ್ದಳ್ ಸಾಧ್ವಿಯು; ||
ಪೊಡವಿಯಲ್ಲಿಹ ಪುರುಷ-ವರ್ಗಮಂ ತನ್ನಂತೆ |
ಮೃಡ-ಭಕ್ತೆ ಅನಲಾಯಿ ಭಾವಿಸಳ್ ಸಂತತಂ |
ಸಡಗರದೊಳಿಂತು ಬಾಳುತ್ತಿರ್ದಳಾ ಸುದತಿ ಸುಪತಿವ್ರತಾ-ಮಾನಿತೆ; ||೨೧||

ಕ್ಷೇತ್ರ-ತೀರ್ಥಂಗಳಂ ನೋಡುತ್ತೆ ನಲಿಯುತ್ತೆ ।
ಧಾತ್ರಿಯಂ ಸುತ್ತುತ್ತೆ ಕಾಶೀ-ನಗರಕೈದಿ ।
ಛತ್ರದೊಳಗಿಳಿಯುತ್ತೆ, ಗಂಗೆಯೊಳ್ ಮಿಂದು, ವಿಶ್ವೇಶ-ಲಿಂಗವ ಪೂಜಿಸಿ ॥
ಪಾತ್ರ ದಾನವ ಗೈದು ಬರ್ಪಾಗ, ಪಥದೊಳ್ಸ ಪ-।
ವಿತ್ರ ವೇಶ್ಯೆಯ ರೂಪಮಂ ಕಂಡು ಕಾಮಿಸಿ, ವಿ-।
ಚಿತ್ರ-ಕಾಪಡೆ ಬಳಲಿ, ಪತ್ನಿಗಾಗ್ರಹಿಸಿದಂ, ವಶಮಾಡಿ ಕೊಡಲಾಕೆಯಂ; ॥೨೨॥

ಇಚ್ಛೆಯಂತಾಂ ನಡೆಯದಿರ್ದೊಡೆನ್ನಯ ಗಂಡ-।
ನೊಚ್ಚತಂ ಕಾಮ-ಪೀಡೆಯೊಳೆ ಮಡಿಯುವನೆಂದು ।
ನೆಚ್ಚುತನಲಾಯಿ ಪತಿಗಾಗಿ ವೇಶ್ಯೆಯ ಮನೆಯ ಶೋಧಿಸುತೆ ತತ್ಸೇವೆಯ ॥
ನಿಚ್ಚಮಾಕೆಯು ಗೈಯ್ವಳೆಂತೆನಲ್ ಪೇಳುವೇಂ ।
ಬಿಚ್ಚಿದಭಿಮಾನದಿಂ ತದ್ಗೃಹಾಂಗಣವ ಸತಿ ।
ಮೆಚ್ಚಿಸಲ್ಕುಡುಗುತಿರ್ದಳ್, ದಾಸಿಯಂತವಳ್; ಗಣಿಕೆಯದನೊರ್ಮೆ ಕಂಡು,॥೨೩॥

ಮಾತನಾಡಿದಳೆಂತೆನಲ್ "ತಾಯೆ ಯೇಕೆನ್ನ-।
ನಾತುರದೊಳೋಲಯಿಪೆ? ಮನೆಯಂಗಳಮನುಡುಗಿ ।
ಪ್ರೀತಿಮಿಗೆ ಬಾಗಿಲಕೆ ನೀರೆರಚಿ ರಂಗವಲ್ಲಿಯ ರಚಿಸಿ ನಿತ್ಯದಲ್ಲಿ ॥
ಮಾತೆ ಯಾಂ ವೇಶ್ಯೆ; ನೀನಹೆ ಗರತಿ; ಯಿಂತಿರ-।
ಲ್ಕೇತಕೀ ಪಾಪಿಯಂ ಮತ್ತನಿತು ಹೀನತರ ।
ಪಾತಕದ ಕುಂಡದೊಳಗೆಸೆಯಲ್ ತೊಡಂಗಿರುವೆ ಪೇಳೆ"ನಲ್ ಕೇಳಿ ಸಾಧ್ವಿ ॥೨೪॥

ನುಡಿದಳೆಂತೆನೆ "ತಂಗಿ ಯಿಂತು ತಿಳಿಯಲ್‌ಬೇಡ ।
ಕಡು ಚಲುವೆಯಾದ ನಿನ್ನಂ ಬಯಿಪನೆನ್ನ ಪತಿ; ।
ಯುಡುಪವದನೆಯೆ, ಕೇಳು; ನಿನ್ನಾ ಸುಕೃತಕೆ ಮೆಚ್ಚಿ ಸೇವಿಸಲ್ ಬಂದಿರ್ಪೆನಾ ॥
ಕೊಡುವದಾದುದರಿಂದೆ ನಿನ್ನಂಗ-ಸುಖಮನವ-।
ಗೊಡನೆ ಕರೆತರ್ಪೆನಾ ನೀನೊಪ್ಪದಿರಲವಂ ।
ಮಡಿಯುತಿಹನೆನ್ನಿನಿಯನಸುವನುಳಿಸೌ ತಾಯೆ, ನಿನಗೆ ಪುಣ್ಯಂ ಬರ್ಪುದು";

ಎನುತೆ ಕೈಮುಗಿಯುತಿರಲವಳ್ಗೆ ವೇಶ್ಯೆಯು ನಮಿಸಿ |
ವಿನಯದಿಂ ಮಾತನಾಡಿದಳೆಂತೆನೆಲ್ಕಕ್ಕ |
"ಯಿನಿತೇಕೆ ಪೇಳಿಕೊಳ್ಳುವೆ ಯಿಂದೆ ಸಂಜೆಯೋಳ್ ಕರೆತರ್ಪುದೆಂದೊ"ರೆಯಲು ||
ಘನ ಮುದದೊಳನಲಾಯಿ ಕರೆತಂದೊಳಗೆ ಕಳುಪಿ |
ಮನದಾಣ್ಮನಾಜ್ಞೆಯಿಂ ಬಾಗಿಲದೆ ಕಾಯ್ದಿರ್ದು |
ವನಿತೆ ಕರೆತರ್ಪಾಗ ಮಾರ್ಗದೋಳ್ ತಪ ಗೈವ ಮಾಂಡವ್ಯಗವಳ ಪತಿಯ ||೨೬||

ಮುಂಡಗಾಲ್ ತಾಕಿದುದು ಮಾಂಡವ್ಯನರಿಯುತೆ ಪ್ರ-|
ಚಂಡ ಶಾಪವನಿತ್ತನೆಂತೆನಲ್ಕೆಲೆ ನಿನ್ನ |
ರುಂಡಮದು ಸಾಸಿರಂ ಚೂರಹುದು ರವಿಯುದಯಕಿದು ತಪ್ಪದೆನ್ನ ಶಾಪಂ ||
ಖಂಡಿತಂ ಕಾಲ್ಬಡಿಸಿದಪರಾಧ ಫಲಮೆನಲ-|
ಖಂಡ ಮುನಿ-ವಚನಮಂ ಕೇಳುತನಲಾಯಿಯಾ-|
ಖಂಡಲ-ಪ್ರಣತ ಶಿವನಾಣೆಯಿಡುತಂ, ಸೂರ್ಯನುದಯಮಂ ತಡೆದಳಮಮ !! ||

ಇದನರಿದು ದೇವತೆಗಳಾ ಶಿವನ ಬಳಿಗೈದಿ |
ಸದಮಲರ್ ಬೇಡಿ ಕೊಳ್ಳಲ್ ಶಿವಂ ಶತ್ಸತಿಗೆ |
ಮುದದಿಂದೆ ದರ್ಶನಮನಿತ್ತು ಪೇಳಿದನಿಂತು "ತಾಯಿ ತೆಗೆ ಯೆನ್ನಾಣೆಯ |
ಉದಿಸದಿರೆ ಸೂರ್ಯನೀ ಜಗದ ನಾಶಂ ತಪ್ಪ-|
ದದಕಾಗಿ ಸ್ವಾರ್ಥಿಯಾಗಲು ಬೇಡ; ಕೇಳ್ ಸಾಧ್ವಿ; |
ಮೊದಲಪ್ಪಣೆಯ ನೀಡು; ಸೂರ್ಯಂಗೆ ತವ ಹಿತಮದೆನ್ನದಾಗಿದೆ ಯೆಂದೆನೆ ||೨೮||

ಶಂಕರಂಗಭಿನಮಿಸಿ, ರವಿಗಿಟ್ಟ ಶಿವನಾಣೆ-|
ಯಂ ಕಲುಷ-ಹೀನೆ ತೆಗೆಯಲ್ಕೆ ರವಿಯುದಯಿಸಲ್ |
ಭೋಂಕನೆಯವಳ ಪತಿಯ ಶೀರ್ಷಂ ಸಹಸ್ರಭಾಗಮದಾಗೆ ಹರನೀಕ್ಷಿಸಿ ||
ಸಂಕಟವ ಪರಿಹರಿಸಿದಂ; ಬದುಕಿಸುತ್ತನನ |
ಪಂಕಮಿರದಡಗಿ ಪೂರ್ಣಾಂಗನಾದಂ ಕ್ಷಣದೆ; |
ಶಂಕೆಯಳಿದನಲಾಯಿಯೆರೆಗಿದಳ್; ಘೋರ ಮುನಿಯೊಡನೆ ನುತಿಸಲ್ ಸುರಗಣಂ||

ಈ ಕಥೆಯು ನಿನ್ನ ಬಾಳ್ಗಾಧಾರಮಾಗಿರಲಿ; ।
ಶ್ರೀಕಪರ್ದಿಯು ನಿನ್ನನಾಗಳುಂ ರಕ್ಷಿಸಲಿ; ।
ಲೋಕದೊಳ್ ಬಾಳು, ಸುಖಮಾಗಿ ಕಮಲಾಂಬೆ; ಗೆಂದಾಶಿಷಮನೀಯಲಾಗ ॥
ಶ್ರೀ ಕರನ ಪದಕೆರಗಿ ನೈನಪ್ಪನಿಂತಧಿಕ ।
ನಾಕಿಗರ್ ವಿಸ್ಮಯಿಸಲೀ ಪರಿಯೊಳುರೆ ನುತಿಸಿ ।
ಶೋಕ–ವಿರಹಿತ ಭಕ್ತಿಯಿಂ ಪ್ರಕಟಿಸುತ್ತಿಹಂ ನಿರ್ಮಲಾಂತಃಕರಣದೆ; ॥೩೦॥

ಹರನಧಿಕನಲ್ಲ ಸದ್ಗುರುವೆ, ನಿನಗಿಂತೆಂದು-।
ಮುರು ನಿಗಮ-ತತಿಯು ನುತಿಪುದು ಸತ್ಯಮದನರಿದೆ ।
ಅರಿವನೀವಂ ನೀನೆ; ಜನಿಯನೀವಂ ಹರಂ; ನೀಂ ಹರಗೆ ಸಮನಲ್ಲವು ॥
ಉರು ಕರ್ಮಹಂ ನೀನೆ; ತತ್ ಕರ್ಮದಂ ಶಿವಂ; ।
ನೆರೆ ಕಾಲಹಂ ನೀನೆ; ಕಾಲ–ಪ್ರದಂ ಶಿವಂ; ।
ದುರಿತ-ಮಾಯಾಹರಂ ನೀನೆ; ಮಾಯಿಕನಾ ಶಿವಂ; ವೇದತತ್ತ್ವಮಿದುವೆ ॥೩೧॥

ಇದನಾಲಿಸುತಲಾಗ ಗುರುಸಿದ್ಧನಿಂತೆಂದ-।
ನಿದು "ಸಾಕು ನಿಲ್ಲಿಸೀ ಸ್ತುತಿಯ ನಾನಂತಪ್ಪ ।
ಸದಮಳನ ಗುರುವಲ್ಲ; ಶಿವನ ನೆನೆಯಾವಗಂ; ನಿನಗೆ ಕಲ್ಯಾಣಮಹುದು" ; ॥
ಪದಪಿನೀ ತೆರನೊರೆದದೃಶ್ಯನಾದಂ ಕ್ಷಣದೆ; ।
ಸದಮಳನನೀ ಲೀಲೆಯಂ ಕಂಡು ಬೆರಗಾಗಿ, ।
ಪದುಳ್ದು ಸತಿಯೊಡನೆ ನುತಿಸುತ್ತೆ ಬಂದಂ ಗವಿಗೆ, ನಮಿಸಿ ರಾಯ್ಚೂರಿಗಿರದೆ;॥೩೨॥

ಭಕ್ತರೀ ಲೀಲೆಯಂ ತಿಳಿದು ಕೊಂಡಾಡುತ್ತೆ, ।
ಶಕ್ತರಹ ಮಹಿಮರ ಚರಿಂತ್ರಗಳಂ ನೆನೆದು ।
ಸಕ್ತಿಯಿಂ ನಲಿಯುತಿರ್ದರ್ ಕೂಡಿ ಜನರಲ್ಲಿ ಯೆಂತೆನಲ್ ಪೇಳ್ವೆನದನು ॥
ರಕ್ತಿಯಿಂದೋರ್ವನೆಂದಂ ಪೂರ್ವಕಾಲದೊಳ್ ।
ವ್ಯಕ್ತವಹ ಬೂದಿಯಿಂ ಜಮದಗ್ನಿ ಮುನಿಯರಿಯೆ ।
ಮುಕ್ತನಾದಂ ಬದುಕುತಿಂತೆಂದು ಕೇಳ್ದಿ ನಾಂ ಬ್ರಹ್ಮರಾಕ್ಷಸವ ಬಿಡಿಸಿ ॥೩೩॥

ಸತ್ಯಗೊಳಿಸಿದನೀ ಚರಿತ್ರಮಂ ವಿಶ್ವ–ಗುರು–।
ನುತ್ಯ ಗುರುಸಿದ್ಧ"ನೆನೆ, ಮತ್ತಮೋರ್ವಂ ನುಡಿದ ।
ನತ್ಯ"ಗಾಧಂ ವಶಿಷ್ಠಂ ಬದುಕಿದಂ ಶತತ್ರಯ ವರ್ಷಮೆಂದು ಕೇಳಿ ॥
ನಿತ್ಯದೊಳ್ ವಿಸ್ಮಯವ ಪಡುತಿರ್ದನೀಗಳಿದು ।
ಸ್ತುತ್ಯ ಲೀಲೆಯ ಕಂಡು ಶ್ರದ್ಧೆ ಸ್ಥಿರಮಾಯಿ"ತೆನೆ ।
ಕೃತ್ಯವಿದನರಿಯುತ್ತ ಮತ್ತೊಬ್ಬನಿಂತೊರೆದನಾ" ಕಶ್ಯಪನ ಚರಿತವ ॥೩೪॥

ಬೂದಿಯಿಂದಾ ಮುನಿಯು ತಾಂ ಬದುಕಿ ಸತ್ತವರ ।
ವೋದದಿಂ ಬದುಕಿಸುತಲಿರ್ದನೆಂದರಿಯುತ್ತ–।
ಲಾದರಿಸದತಿ ನಗುತಲಿರ್ದನೀ ಕಥೆಯಿಂದೆ ದಿಟದೊಳಾಸ್ತಿಕನಾದೆನು; ॥
ಮೇದಿನಿಯೊಳಿದು ನೂತ್ನನೆಂದು" ನುಡಿಯುತಿರಲ್ಕೆ ।
ಮೋದಿಸುತಲಲ್ಲಿ ಸಮ್ಮಿಲಿತರಾಗಿಹ ಜನರ ।
ಭೇದದಿಂ ಸದ್‌ಭಕ್ತಿಯುಕ್ತರಾಗುತೆ ಸತತಮಾ ಗುರುಕೃಪೆಯ ಪಡೆದರು; ॥೩೫॥

 

ಇನ್ನೊಂದು ಲೀಲೆಯಂ ಪೇಳ್ವೆನಾದರಿಸುವುದು ।
ಸನ್ನೀತಿವಂತನಿರ್ದಂ ಬಡವನಾಽಽಸ್ತಿಕಂ; ।
ತನ್ನಂತೆ ಸರ್ವರಂ ತಿಳಿಯುತಿರ್ದಂ, ಸಿದ್ಧನಾಮಕಂ ಕಲಬುರ್ಗಿಯೊಳ್ ।
ಚನ್ನಾಗಿ ಬಾಳ್ವ ಸಮಯದೊಳೋರ್ವ ಕ್ಷುಲ್ಲಕಂ ।
ಚಿನ್ನಕ್ಕೆ ಸದೃಶಮಾಗಿರ್ಪ ತಜ್ಜೀವನವ ।
ಭಿನ್ನತ್ವದಿಂ ಕೆಡಿಸಲಿದ್ದೊಂದು ಕೂರಿಗೆಯ ಪೊಲಕೆ ಮಾಟವ ಗೈಸಿದಂ; ॥೩೬॥

ಏನನುಂ ಬಿತ್ತಿದಡುಮದು ಬೆಳೆಯದಾಯಿತ್ತು ।
ಮಾನನಿಧಿ ಸಿದ್ಧಪ್ಪನತಿ ಚಿಂತೆಗೊಳಗಾಗಿ ।
ತಾನೆಯೆಲ್ಲರುಮೊರೆದ ಯತ್ನಂಗಳಂ ಮಾಡಿ ಬೇಸತ್ತು ದುಃಖಿಸುತಿರೆ, ॥
ಮಾನನೀಯಂಗೆ ಕೃಷಿಯುದ್ಯಮಮೆ ಜೀವನಕೆ ।
ಮಾನಿತಾಧಾರಮಾಗಿರ್ದುದಾತನ ಪೊಲಂ ।
ಮಾನಿಗಳ್ ಮೆಚ್ಚುವಂದದೆ ಬೆಳೆಯುತ್ತಿರ್ದತ್ತು ಮಳೆಯಲ್ಪಮಾದಡುಮಿರೆ ॥೩೭॥

ಕೊರತೆಯಿಲ್ಲದೆ ಸುಖದೆ ಬಾಳುತಿರ್ದಂ ಮಹಿತ-।
ನರಿದೆನಲದುಂ ಬೆಳೆಯದಂತಾಗಿ ಚಿಂತೆಯೊಳ್ ।
ಮರೆಯದಲೆ ತನ್ನ ಮಿತ್ರರ್ಗೆ ಪೇಳಲ್ಕವರೊಳೋರ್ವನೀ ಗುರುಸಿದ್ಧನ ॥
ಪರಮ ವಾರ್ತೆಯ ಪೇಳಲಾತಂಗೆ ಸದ್ಭಕ್ತಿ ।
ಯುರುವಿನೊಡನುದಿಸಲ್ಕೆ ತದ್ದರ್ಶನದ ಕಾಂಕ್ಷೆ ।
ನೆರೆಪೆರ್ಚುತಿರೆ ಕೈಯೊಳೊಂದು ಕಾಸುಮದಿರದೆ ಜನರ ಬೇಡುವದಾಗದೆ ॥೩೮॥

ಭಕ್ತಿಯಿಂ ಗುರುಸಿದ್ಧನಂ ಪಗಲಿರಳು ನೆನೆಯೆ, ।
ರಕ್ತಿಯಿಂದೊರ್ಮೆ ಕನಸಿನೊಳೈದಿ ಗುರುವರಂ ।
ವ್ಯಕ್ತ ದರ್ಶಮನೀಯುತ್ತೆ ಪೇಳಿದನಿಂತು "ಚಿಂತಿಸಲ್ ಬೇಡ ಸುತನೆ ॥
ಉಕ್ತಿಯಿದು ಸಟೆಯಲ್ಲ ಶಿವನ ನೆನೆಯುತೆ ನಲಿದು ।
ಸಕ್ತಿಯಿಂ ಬೂದಿಯುಂ ಕೊಂಡು ಪೊಲಕೆರಚಿದೊಡೆ ।
ಮುಕ್ತಮಾಗುವದು ದೋಷಂ; ಸುಖಂ ದೊರೆಯುವದು;
ಶಿವನ ಕೃಪೆಯುಪ್ಪುದು ಸದಾ ॥

ಎಂದೊರೆದಡಂಗುತಿರೆ ಸಿದ್ಧಪ್ಪನೇಳ್ದಾಗ-।
ಲಂದು ಗುರುಸಿದ್ಧಕೃಪೆಯಾಯಿತೆನ್ನುತೆ ಭರದೊ-।
ಳಂದದಿಂ ಸ್ನಾನಮಂ ಗೈದು ಮಡಿವಸ್ತ್ರದಿಂ ಭೂಷಿತಂ ತಾನಾಗುತೆ ॥
ಕುಂದದಲೆ ಬೂದಿಯಂ ಪೊಲಕೆ ಕೊಂಡೊಯ್ದುಮಂ ।
ಚಂದದಿಂ ಗುರುನಾಮದೊಡನೆ ಶಿವನಾಮಮಂ ।
ಕಂದದುಚ್ಚರಿಸುತ್ತೆ ಬಿಡನೆರಚುತಿರೆ ಮಾಟದೊಡವೆಗಳ್ ಸಿಡಿದೊಡೆದವು ॥೪೦॥

ಜೋಳವಮಂ ಬಿತ್ತಲೆಳಸುತ್ತೆ ಪರಗುತ್ತಿರಲ್ ।
ಪೇಳಲಸದಳಮಾದ ಕನಕಮದು ದೊರೆಯುತಿರೆ ।
ಭಾಳಲೋಚನ-ಸಮನ ಕೃಪೆಯಿದೆಂದರಿಯುತ್ತೆ ಬಿತ್ತಿ ಮುಗಿಸುತಿರಲ್ಕೆ ।
ಮೇಳವಿಸೆ ತಕ್ಕನಿತು ಮಳೆಯು ಸಮಸಮಯಕ್ಕೆ ।
ತಾಳುವಂತಚ್ಚರಿಯ ಬೆಳೆಯು ಕಣ್ಗೆಸೆದಿಹುದು ।
ಬಾಳಮಾತೇಂ ಗುರುಕೃಪಾ-ಫಲವ ಪಡೆದವಂಗುರ್ವಿಯೊಳ್ ಸರ್ವಮಲ್ಪಂ ॥೪೧॥

ಆಗಳಾ ಸಿದ್ಧಪ್ಪನಿಷ್ಟಾಪ್ತ-ಮಿತ್ರಯುತ-|
ನಾಗಿ ಪೂಬಳ್ಳಿಯೂರ್ಗೈದಿ ಗುರುಸಿದ್ಧ ಶಿವ-|
ಯೋಗಿ ಪಾದಕೆ ನಮಿಸಿ ಕೊಂಡಾಡುತಿರೆ ಬಿಡಿಸುತಾ ಸ್ತುತಿಯ ಗುರುವು ನಲಿದು||
ರಾಗದಿಂ ಪೇಳ್ದನೆಂತೆನೆ ಭಕ್ತಯೆನ್ನಿನೇ-|
ನಾಗುತಿಹುದೈ; ಯೆಲ್ಲಮಾ ಬೂದಿಯುರು ಮಹಿಮೆ; |
ಲೋಗರಿದ ನರಿಯರ್ ಮಹಾ ಮಹಿಮರಿದಕೆ ಶಿವನುರೆ ಮೈಯ್ಯ ಬೆಳಗೆಂಬರು||೪೨||

ಭೂತಿ ಶಬ್ದಾರ್ಥಮೈಶ್ವರ್ಯಮೆಂದಾಗುವದು; |
ಖ್ಯಾತಮಿದುಮೈಶ್ವರ್ಯ-ಶಬ್ದಾರ್ಥಮೀಶ್ವರಂ; |
ಭೂತಿ-ಶಬ್ದದ ತದ್ಭವಂ ಬೂದಿಯೆಂದಹುದು; ಬೂದಿ ಯೀಶ್ವರನಂತೆಯೆ |
ಓತದುಂ ನಿರ್ವಿಕಾರಿಯುಮಾ ಬೂದಿಗಿಂ |
ಭೂತಲದೊಳಧಿಕಮಿಲ್ಲಾವುದುಂ ತಿಳಿಯಲ್ಕೆ |
ಪ್ರೀತಿಯಿಂ ಧರಿಸುವರ್ ಶಿವಭಕ್ತರಾ ಶಿವಂ ಧರಿಸುವಂ ಸ್ತುತ್ಯಮಿದುವೆ ||೪೩||

ಗೋಮಯದ ಬೂದಿಯದು ಸರ್ವಾಧಿಕಂ ತಿಳಿದು |
ನೇಮದಿಂ ಧರಿಸು; ನಿನಗೊಳಿತಾಗುವದು; ಮತ್ತ-|
ಮಾ ಮನೋಹರಮಾದ ಸಕಲಸಿದ್ಧಿಯು ದೊರೆದು, ಕಲ್ಯಾಣ ಮಪ್ಪುದಿಹದೋಳ್||
ಪ್ರೇಮದಿಂದಿಂತೊರೆಯುತಾಶಿಷವನೀಯುತಿರೆ |
ಸೋಮಸಮ ಗುರುಸಿದ್ಧನಪ್ಪಣೆಯ ಪಡೆಯುತ್ತೆ |
ರಾಮಣೀಯಕಮಾಗಿ ಜಂಗಮಾssರಾಧನೆಯ ಗೈದನಾ ಬಿಲ್ವ-ವನದೆ ||೪೪||

ತೆರಳ್ದನಲ್ಲಿಂದೆ ತಮ್ಮೂರ್ಗೆ ಬಂಧುಗಳೊಡನೆ |
ಹರ-ಸಮನ ನುತಿಸುತ್ತೆ ಸುಖದಿಂದೆ ಬಾಳಿದಂ |
ನೆರೆದ ಜನರಂದು ಕಲಬುರಗಿಯೊಳಗೀ ಲೀಲೆಯಂ ನುತಿಸುತಿರ್ದರಿಂತು ||
ಶರಣನೇಲೇಶಕೇತಯನರಿಯೆ ನಿಜಭೂಮಿ-|
ಗುರು ಭಸಿತಮಂ ಬಿತ್ತಿಧಾನ್ಯದ ಬೆಳೆಯು ಕಂಡು |
ಹರ-ಭಕ್ತಿಯಂ ಮೆರೆಯಿಸಿರ್ದನೆಂದಾವ್ ಕೇಳುತಚ್ಚರಿಯ ಪಡುತಿರ್ದೆವು ||೪೫||

ಈಗ ನಿಚ್ಚಳನಾಯಿತೆಂದು ಪೊಗಳುತ್ತಖಿಲ |
ರಾಗವುಜ್ಞನ ಭಕ್ತರಾಗಿ ಬಾಳುತೆ ಸರ್ವ |
ಭೋಗ-ಸಂಪದವ ಮೇಣ್ ಶಾಂತಿಯಂ ಪಡೆಯುತ್ತೆ ಬಾಳಿದರ್ ಗುರುನುತಿಯೊಳ್||
ಭೋಗಿ-ಭೂಷಣ-ರೂಪ ಗುರುಸಿದ್ಧಯತಿವರಂ ।
ರಾಗ-ರಹಿತಂ ಭಾಕ್ತಿಕರ ಭಕ್ತಿಗೊಲಿಯುತ್ತೆ ।
ತ್ಯಾಗಿಯವರವರ ಬಯಕೆಯನರಿದು ಸಲಿಸುತ್ತಲಾತ್ಮ-ಮೋದದೊಳಿರ್ದನು ||೪೭||

 

ಓರ್ವ ಸಿದ್ಧಂ ಬಂದು ಶಿಷ್ಯನೇಮವ ಮರೆದು |
ಗರ್ವದಿಂ ಗುರುವಿಸಿದಿರಲ್ಲಿ ಕುಳ್ಳಿರುತಾಗ |
ಶರ್ವ-ಸಮನಂ ಪ್ರಶ್ನಿಸಿದನಿಂತು "ಶಿವಯೋಗಿ ನಿಮ್ಮೊಳೇನಿಹುದು ಸಿದ್ಧಿ ? ||
ಉರ್ವಿಯೊಳ್ "ಗುರುಸಿದ್ಧ"ನೆಂಬ ಪೆಸರಿದು ನಿಮಗೆ |
ಸರ್ವದೇವರ ಸ್ಮರಿಸಿ ಪೇಳುವೇಂ ಸಲ್ಲದದ- |
ಪೂರ್ವ ಸಿದ್ಧಿಗಳೆನಿತು ನಿಮ್ಮೊಳಿಹವೈ ಯವಂ ತೋರುತೆನ್ನಂ ಜಯಿಸಿರಿ ||೪೭||

ಎನ್ನ ನಾಮು ಸಿದ್ಧರಾಜನೆಂದಿಹುದರಿಯೆ |
ಚನ್ನಮೆನೆ ಸರ್ವ ಸಿದ್ಧಿಯ ಜಯಿಸುತದರಿಂದೆ |
ಬನ್ನವಿಲ್ಲದೆ ಪಡೆದ ಪೆಸರಿದಾಂ ಸರ್ವ ಸಿದ್ಧರಿಗೆ ಗುರುವಾಗಿರ್ಪೆನು ||
ನಿನ್ನ ನಾಮವ ಕೇಳಿ ಬಂದಿರ್ಪೆನೈ ಯಿಲ್ಲಿ |
ಸನ್ನಿಹಿತನಂ ಸೋಲಿಸುತೆ ತವಾಹ್ವಯವ ನೀಂ |
ಮನ್ನಣೆಯ ಪಡೆ ಕಾಯ್ದು ಕೊಳ್ಳುತ್ತಲಿಲ್ಲದಿರೆ, ಸಿದ್ಧಾಖ್ಯೆಯೊಂದೆಯಿರಲಿ" ||೪೮||

ಇಂತುಸಿರ್ದು ಸರ್ಪ-ಮಂತ್ರವ ಪಠಿಸುತಿರೆ ಬಂದು |
ಶಾಂತಿಯಿಂ ಸರ್ವ ಜಾತಿಯ ಸರ್ವ ಸರ್ಪಂಗ |
ಳಾಂತು ಮೋದವ ಮಹಾ ಗುರುಸಿದ್ಧ-ಪಾದಕ್ಕೆ ಸುತ್ತಿ ಪೋಗುತಲಿರ್ದವು ||
ಅಂತದಂ ಕಾಣುತ್ತೆ, ಮಂತ್ರದಿಂ ಗಿರಿಗಳಂ |
ಶಾಂತಸಿದಿರೊಳ್ ಸೃಷ್ಟಸುತ್ತೆ ಕೆಡಹುತಲಿರ್ದ |
ನಾಂತು ಮೌನದೆ; ಗುರುವು ನೋಡುತ್ತಲಿರ್ದಪಂ ಕಂಡಡಗುತಿಹವಲ್ಲಿಯೆ ||೪೯||

ಮಂತ್ರದಿಂ ಜೋಗಿಯುರೆ ಸೃಷ್ಟಿಸಿದ ಬಿರುಗಾಳಿ ।
ಮಂತ್ರಮಯನಿದಿರಲ್ಲಿ ಮಂದಮಾಗಿತ್ತರಿಯೆ ।
ತಂತ್ರದಿಂ ಸೃಜಿಸಿದ ಶಿಲಾ-ವೃಷ್ಟಿ ಪೊನ್ನ ವೃಷ್ಟಿಯದಾಗಿ ಸುರಿದುದಲ್ಲಿ ॥
ತಂತ್ರಮಯನರಿಯೆ ಭೂತಂಗಳಂ ಸೃಜಿಸುತೆ ಸ್ವ- ।
ತಂತ್ರನಂ ಸೇವಿಸುತ್ತಿರ್ದಪುವು ಮರಳುತ್ತೆ ।
ಮಾಂತ್ರಿಕನ ಖರ್ಪರನ ಕಾಡಲಾದವು; ಪೇಳಲೇನಾಂ ಮಹಾದ್ಭುತವನು !! ॥೫೦॥

ಭೂತಂಗಳಾ ಜೋಗಿಯಂಗದೊಳಪೊಕ್ಕು ಸಲೆ ।
ಭೀತಿಯಂ ಪುಟ್ಟಿಸುವ ಉರಿಯ ಹೊತ್ತಿಸಿದವಾ ।
ಖ್ಯಾತ ಮಾಂತ್ರಿಕನಾಗ ಗುರುಸಿದ್ಧ-ಪಾದದೋಳ್ ಬೀಳ್ದನುರೆ ಕಳವಳಿಸುತೆ ॥
ವೀತರಾಗನ ಪದಂ ಸೋಂಕುತಿರಲುರಿಯಳಿದು ।
ಪೂತಮಾಯಿತ್ತವನ ಹೃದಯಮುರು ಭಕ್ತಿಯಿಂ ।
ಪ್ರೀತನಪ್ಪಂತೆ ನುತಿಸುತ್ತಿರ್ದನನುನಯದೆ, 'ಬಿಸಿಗೆ ಬೆಣ್ಣೆಯು ಕರಗದೆ ?' ॥೫೧॥

"ಶುದ್ಧ ಶುದ್ಧಂ ನೀನೆ; ಶುದ್ಧ ಗುರುವುಂ ನೀನೆ; ।
ಬುದ್ಧ ಬುದ್ಧಂ ನೀನೆ; ಬುದ್ಧ ಗುರುವುಂ ನೀನೆ; ।
ಸಿದ್ಧ ಸಿದ್ಧಂ ನೀನೆ; ಸಿದ್ಧ ಗುರುವುಂ ನೀನೆ; ಗುರುಸಿದ್ಧ ವಿಭುವು ನೀನೆ ॥
ವೃದ್ಧ ವೃದ್ಧಂ ನೀನೆ; ವೃದ್ಧ ಗುರುವುಂ ನೀನೆ; ।
ಬದ್ಧ ಬದ್ಧಂ ನೀನೆ; ಬದ್ಧ ಗುರುವುಂ ನೀನೆ; ।
ವಿದ್ಧ ವಿದ್ಧಂ ನೀನೆ; ವಿದ್ಧ ಗುರುವುಂ ನೀನೆ; ಸುಪ್ರಸಿದ್ಧಂ" ನೀನಹೆ ॥೫೨॥

ಪ್ರೇರಕಂ ನೀನೆ; ಮೋಕ್ಷ ಪ್ರೇರ್ಯನುಂ ನೀನೆ; ಯು- ।
ದ್ಧಾರಕಂ ನೀನೆ; ಯುದ್ಧಾರ್ಯನುಂ ನೀನೆ; ಕೃತ್- ।
ಕಾರಕಂ ನೀನೆ; ತತ್‌ಕಾರಣಂ ನೀನೆ; ಸರ್ವಂ ನೀನೆಯಿರ್ಪೆಯೆಂದು ॥
ತಾರಕನೆ; ನಿನ್ನಿಂದೆ ತಾರ್‍ಯನಾದಾನರಿತು ।
ಪಾರಕನೆ, ತವ ಕೃಪೆಯ ಪಾರ್ಯಗತಿಯಂ ಬಯಸಿ ।
ವಾರಕನೆ, ನಿನ್ನ ಸನ್ನಿಧಿಗೆ ಬಂದಿಹೆನೊಲಿದು ಮಂದನಂ ಕ್ಷಮಿಸು ತಂದೆ" ॥೫೩॥

ಇಂತು ನುತಿಸುತ್ತೆ ಮತ್ತಂ ಪಾದದೊಳ್ ಬೀಳ- ।
ಲಾಂತು ಕೃಪೆಯಿಂ ಚರವರಂ ತಲೆಯ ಪಿಡಿದೆತ್ತಿ ।
ಕಾಂತನಿಂತೊರೆದನೆಲೆ "ಜೋಗಿ, ಪೋಗೈ ನಿನಗೆ ಕಲ್ಯಾಣಮಹುದಾಪಡೆ ॥
ಶಾಂತಶಿವಭಕ್ತರಂ ಮನ್ನಿಸುತ್ತಿರು ತಿಳಿದು; ।
ಸಂತತಮುದಾರನುಂ ನಿಂದಿಸದಿರೈ; ನಿನ್ನ ।
ಸಂತಸದ ನುತಿಯ ನೀನಾಗಳುಂ ಸಲೆ ಮಾಡಿ ಕೊಳಿದಿರೈ;" ಯೆಂದೊರೆಯುತೆ॥೫೪॥

ಆಶಿಷಮನಿತ್ತು ಕಳುಪುತ್ತೆ, ತದ್ಭೂತಂಗ ।
ಳಾಶೆಯಂ ತಿಳಿದು ತನ್ನಯ ಸೇವೆಯಂ ಸಲಿಸು- ।
ತೀಶ-ಸಮನಂದದಿಂ ಬಿಲ್ವ-ವನದಲ್ಲಿ ಮೆರೆದಿರ್ಪ ಪೂಬಳ್ಳಿಯೋಳ್
ಪಾಶಹರನೀ ಲೀಲೆಯಂ ಕೇಳ್ದ ಚಾಟಕದ ।
ಕ್ಲೇಶ-ತರ ವಿದ್ಯೆಗಳ ಕಲಿತವರ್ ಬಾಳ್ದರುರೆ ।
ಲೇಶಮಾದಡುಮಘಕ್ಕೆಳಸದಲೆ ಭಕ್ತರಂ ಕೊಂಡಾಡುತಿರ್ದರಿಂತು ॥೫೫॥

ಪೂರ್ವದೊಳ್ ಶಿವಶರಣ : ದಾಸಿಮಾರ್ಯಂ ನಮುಲಿ ।
ಶರ್ವನಂದದೆ ಸೇವೆಯಂ ಕೊಂಡನೆಂದರಿದು ।
ಪೂರ್ವಜರ ಪಳಿಯುತ್ತೆ ನಗುತಲಿರ್ದವದೀಗಳೀ ಲೀಲೆಯಂ ಕೇಳುತೆ ॥
ಗರ್ವಮುಡಗಿತು; ಬ್ರಹ್ಮರಾಕ್ಷಸಕ್ಕೊಲಿದು ಮಿಗೆ ।
ಸರ್ವರರಿಯಲ್ ಮುಕ್ತಿಯಂ ಕೊಟ್ಟು, ಶುನಕದಿನ-।
ಪೂರ್ವಮೆನೆ ಶ್ರುತಿಯನೋದಿಸಿದ ಕಲ್ಲಯನ ಕಥೆಯೋಳ್ ಭಕ್ತಿಯುದಿಯಿಸಿತ್ತು ॥

ಎಂದು ಬಣ್ಣಿಸುತೆ, ಗುರುಸಿದ್ಧೇಶ-ದರ್ಶನ-।
ಕ್ಕಂದದಿಂ ಬಂದು ಚಾಟಕ ವಿದ್ಯೆಯಂ ತೊರೆದು, ।
ವಂದಿಸುತೆ, ತತ್ಫಲದೆ ನೈಜ ಭಕ್ತಿಯ ಪಡೆದು ಮಹಿಮರಾದರ್ ದಿಟಮಿದು ॥
ಛಂದದಿಂ ಗುರುಸಿದ್ಧ-ಶಿವಯೋಗಿ ರಾಜಯಶ-।
ಮೆಂದಿನಂದದನೆ ಬೆಳೆಯುತಿರ್ದತ್ತು ನಿಖಿಲರ್ಗೆ ।
ಕುಂದಿರದ ಜೀವನದ ಮಾರ್ಗಮಂ ತೋರುತ್ತೆ ಶುಕ್ಲ ಬಿದಗಿಯ ಶಶಿಯವೋಲ್ ॥

ಇವನ ದರ್ಶನಕಾಗಿ ಬಾರದಿಹ ಜನರಿಲ್ಲ-।
ಮಿವನ ಗುಣಗಾನಮಂ ಪಾಡದಿಹ ಜನರಿಲ್ಲ-।
ಮಿವನ ಚರತಮನೊಲಿದು ಕೇಳದಿಹ ಜನರಿಲ್ಲಮೆನ್ನುತ್ತೆ ಕೊಂಡಾಡುತೆ ॥
ಸುವಿನಯದ ಪೂಬಳ್ಳಿಯಾ ಜನತೆಯಂ ನುತಿಸು-।
ವವಸರದೆ ಥೇಶೀಯ ನರನಾರಿಯರ ಮುಖದೆ ।
ತವೆ ಸಿಲ್ಕಿ ಹುಬ್ಬಳ್ಳಿಯಾಯಿತ್ತು ಹೂಬಳ್ಳಿ ಪೆಸರರಿಯೆ ತತ್ಕಾಲದೆ ॥೫೮॥

ಈ ನಾಮಮಿಂದಿಗುಂ ಪ್ರಖ್ಯಾತಮಾಗಿಹುದು; ।
ಮಾನಾತಿಶಯಮನುರೆ ಪೊಂದುತ್ತೆ ಹುಬ್ಬಳ್ಳಿ ।
ದೀನರ್ಗೆ ದಲಿತರ್ಗೆ ಮಾನವಂತರ್ಗೆ ನೆಲೆಯಾಗಿ ಶೋಭಿಸುತಿರ್ಪುದು ॥
ನಾನಾ ವಿಧದ ಜನತೆ ನೆಮ್ಮದಿಯೊಳೀ ಊರೊ-।
ಳೇನೇನೊ ಉದ್ಯೋಗಮಂ ಮಾಡುತಂ ಬಾಳ್ಗ-।
ಮಾನಂದಕೆಲ್ಲಕೀ ಪರಮ "ಗುರುಸಿದ್ಧ" ಕೃಪೆಯದುವೆ ಕಾರಣಮಿರ್ಪುದು ॥

ವೀರೇಶ-ಪುಣ್ಯಾಶ್ರಮಂ ಗದುಗಿನೋಳ್ ಮೆರೆವು-।
ದೋರಂತೆ ಶೋಭಿಸುವುದಲ್ಲಿ ಪಂಚಾಕ್ಷರನು-।
ದಾರ ಸ್ವ ಗುರುವರನ ಯೋಗದ ಸಮಾಧಿಯಿದೆ;ಕುಳಿತಿಲ್ಲಿ ಗುರು-ಕರುಣೆಯೋಳ್॥
ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ ।
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ ।
ಮೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣ ಸಂಧಿಯು-ದ್ವಾದಶಂ ॥೬೦॥



ಅಂತು ಸಂಧಿ ೧೨ಕ್ಕಂ, ಪದಂಗಳು ಅರವತ್ತಕ್ಕಂ;
ಇಂತು, ಒಟ್ಟು ಪದಂಗಳು ೫೯೩ ಕ್ಕಂ;
—ಮಂಗಲಂ—

॥ ಶ್ರೀ ಗುರು ಬಸವಲಿಂಗಾಯ ನಮಃ ॥

# ಹದಿಮೂರನೆಯ ಸಂಧಿ





॥ ಸೂಚನೆ ॥

ಪರಮತೀಯಾಚಾರ್ಯಗೊಲಿದವಂ; ಗುರುವಿಂದೆ ।
ಪರದೈವಕೊಲಿದವಂ ಲಿಂಗಾಯುಷಂ ಮತ್ತೆ ।
ಪರಧರ್ಮ-ನಿಂದಕಂ ನಿಜ ಭಕ್ತನುಂ ತಿಳಿಯಲುದ್ಧೃತರ್ ತಾವಾದರು;॥

* *

[ಸಂಧಿ ಪ್ರಾರ್ಥನಾ-ಪದ್ಯ]

ಶ್ವೇತ ವರ್ಣವ ಮತ್ತೆ ಸೌಗಂಧಮಂ ಪಡೆದು, ।
ಖ್ಯಾತವಹ ಮಲ್ಲಿಕಾ-ಪುಷ್ಪಮದು ಶಿವ, ನಿನಗೆ ।
ಭೂ-ತಲದೆ ಪ್ರಿಯಮಾದಡುಂ ಶಿವನದಕ್ಕಿಂತಮುವದಾತನೆಂದರುಹಲು ॥
ಪೂತವಹ ಮಲ್ಲಿಕಾರ್ಜುನನೆಂಬ ನಾಮಮಂ ।
ಖ್ಯಾತಿಯಿಂ ಪಡೆಯುತ್ತೆ, ಮೇಣಧರ ಗಂಧಕ್ಕೆ ।
ಸೋತು ಮಸ್ತಕದಲ್ಲಿ ಧರಿಪೆ ಯೆನ್ನಂಗದೋಳ್ ಲಿಂಗಮಾಗೇಕೆ ಬಂದೆ ? ! ॥೧॥

 * *

ಒರ್ಮೆ ಗವಿಯಲ್ಲಿ, ಮತ್ತೊರ್ಮೆ ಯೋಲೆಯ ಮಠದೊ-|
ಳೊರ್ಮೆ ಬಿಲ್ವದ ಬನದೊಳೊರ್ಮೆ ಸುಮಮಂಟಪದೆ |
ಶರ್ಮಕರ ಗುರುಸಿದ್ಧ-ಗುರುವು ಕುಳ್ಳಿರ್ದೊಲಿದು ಧ್ಯಾನ-ತತ್ಪರನಾಗುಪಂ ||
ಪೇರ್ಮೆಯಾ ಧ್ಯಾನದಿಂ ವಿಶ್ವ-ಜೀವರ ವ್ಯಥೆಯ |
ಕೂರ್ಮೆಯಿಂ ವಾರಿಪಂ ಹಿತವ ಸಾಧಿಪಸವಂ |
ಕರ್ಮಮಂ ಕಳೆಯೆಂದು ಪ್ರಾರ್ಥಿಪಂ ತಾನೆ ಶಿವನಾದಡುಂ ಸಾಧಕರವೋಲ್; ||೨||

ಇವನ ಧ್ಯಾನದ ಬಲಮನಿವನ ಮೌನಮಚಲಮ-|
ನಿವನ ಯೋಗದ ಕಲೆಯನಿವನ ತ್ಯಾಗದ ನೆಲೆಯ-|
ನಿವನ ಸುವ್ರತದೊಲವನಿವನ ಶಾಂತಿಯ ನಿಲವನಿವನ ಮುಕ್ತಿಯ ನಲವನು ||
ಇವನ ಸನ್ನಿಧಿಗಿವನ ಚಿನ್ನಿಧಿಯ ಬಯಸುತ್ತ-|
ಲಿವನ ದರ್ಶನಕೆಂದು ಬರುತಿಹರ್ ಜನರಂದು |
ಶಿವನೆಂದಿವನನರಿದು ಸೇವಿಸುತಲಿವಗೊಲಿದು ಬಾಳುತಿಹರನುನಯದೊಳೆ ||೩||

ಅನ್ನಿತರೊಳ್ ಬೀದರಪುರಸ್ಥನಾಗಿಹ ಲಿಂಗಿ- |
ಯ [illegible]
ಯನ ಸನ್ನಿಧಿಯೊಳಿರ್ದು ಯೋಗ-ವಿಷಯಮನರಿತು ಶಿವಯೋಗಮಂ ಪಳಿಯುತೆ||
ಘನ ಜಗದ್ಗುರುದೇವ ಗುರುಸಿದ್ಧನಾ ತಪೋ- |
ವನಕೈದಿ, ಯೋಗ-ಸಿದ್ಧಿಯ ಗರ್ವದಿಂದಲ್ಲಿ |
ಯಿನಿತುಂ ಗಿಡಂಗಳನೊಣಂಗಸಲ್ [illegible] ತನ್ನ ಬಲಮಂ ತೋರಲು ||೪||

ಆ ಕ್ಷಣದೊಳವನ ದೇಹದೊಳಿರ್ದ [illegible]
ಚಕ್ಷಣರ್ [illegible]
ಶಿಕ್ಷಣಂ ಕಳೆಗುಂದಲಾದುದಾ ಕರಣೇಂದ್ರಿಯಂಗಳು [illegible]
ರಕ್ಷಿಸುವ ಬಲಮಿಲ್ಲದಲೆ ಬೀಳಲಾದನದಕ್ಕನ್ಯಾಗ [illegible]
[illegible]
ರಕ್ಷಿಸೈ ಗುರುಸಿದ್ಧಗುರುವೆಯೆಂಬ ಸದುಕ್ತಿಯುಣ್ಮುತಿರೆ ಯತಿಯೈದುತೆ; ||೫||

ಪಿಡಿದೆತ್ತುತಂ ಕೇಳ್ದನೆಂತೆನಲ್ "ನೀನಾರು |
ಬಿಡದುಸುರ್ವದಿಲ್ಲೀತಕ್ಕೈದಿರ್ಪೆ" ಯೆಂಬುವೀ |
ನುಡಿಯನಾಲಿಸುತಲಿಂತೊರೆದನೈ "ಪ್ರಭುವರನೆ; ಯಾನೋರ್ವಮೂಢಮತಿಯು ||
ಮೃಡನೆ, ಯೆನ್ನಯ ಪೆಸರ್ ಸೋಮೇಶನೆನ್ನೂರು |
ಸಡಗರದ ಬೀದರ್-ಪುರಂ ಯೋಗಮಂ ನಲಿದು ।
ಕಡು ಹಿಂದೆ ಸಾಧಿಸುವ ಕಾಂಕ್ಷೆಯಿಂ ಯೋಗಿಯಂ ಪೊಂದಿ ತಿಳಿದಲ್ಪಮನದಂ ||೬||

ಸಾಧಿಸುತಲಾಂ ಸಿದ್ಧನಾದೆನೆಂದರಿಯುತ್ತೆ, |
ಬೋಧಕನೆ, ಶಿವಯೋಗಮಂ ಪಳಿಯುತಂ ನಿನ್ನ ।
ಶೋಧಿಸುತಲೆನ್ನ ಸಿದ್ಧಿಯ ನಿನಗೆ ತೋರಿಸಲ್ ಗರ್ವದಿಂ ಬಂದೆನಿಲ್ಲಿ ||
ಶೋಧಕನೆ, ಗರ್ವಕ್ಕೆ ತಕ್ಕ ಫಲಮಂ ಪಡೆದ- |
ನೈ ಧರಿಸಿ ಕರುಣೆಯಂ ನೀಂ ಪೊರೆವೆ ಯೆನ್ನೊಡೆಯ, |
ಸಾಧಿಸಲ್ ಶಿವಯೋಗಮಂ ಕೃಪೆಯ ಮಾಡೆನಗೆ ಮಾರ್ಗಮಂ ತಿಳುಪಿ ಗುರುವೆ,||

ಎಂದು ಪ್ರಾರ್ಥಿಸಿ ನಮಿಸುತುರೆ ಗುರುಸಿದ್ಧ-ಗುರುವರ್ಯ- |
ಮಿಂದು-ಧರ-ರೂಪ ನಿಂತೆಂದನಾಗಳ್ ನೋಡಿ |
"ಕಂದ ನೀಂ ಶಿವಯೋಗಿಗಳ ಮತದೆ ಜನಸಿದ್ಧಮಿಷ್ಟಲಿಂಗದ ತತ್ತ್ವವ ||
ಚಂದದಿಂ ತಿಳಿಯುತ್ತೆ, ಶಿವಯೋಗಿ ಯೆನಿಸದಲೆ |
ನಿಂದಿಸುತೆ ಶಿವಯೋಗ-ಮಾರ್ಗಮಂ; ಯೋಗಿಗಳ್
ಪಿಂದೆ ಸಲೆ ಶಿಷ್ಯನಾದಪರಾಧವದು ನಿನ್ನ ತಾಯ್-ತಂದೆಗಳ ಸುಕೃತದಿಂ ||೮||

ಈಗ ತೊಲಗಿಹುದಿದುವೆ ಸ್ಥಲದ ಮಹಿಮೆಯು ಸದ್ವಿ |
ರಾಗಿಯಲ್ಲಮ ಮಹಾ ಪ್ರಭುವೊಲಿಯುತಡಿಯಿಟ್ಟು
ರಾಗದಿಂ ಪಾವನಂಗೊಳಿಸಿದನಿದಂ; ತಿಳಿಯೆ ಶಿವಯೋಗಿ ರಾಜನಾತಂ ||
ಯೋಗ-ಬಲಮಿಲ್ಲಿ ನಡೆಯದದು ತಿಳಿಯಾಲ್ಕೆ ಶಿವ-|
ಯೋಗ-ಮಹಿಮೆಯಿದಲ್ತೆ ಯೀ ಸ್ಥಲದ ಮಣ್ಣಿನೊಳು |
ನೀಗುತಭಿಮಾನಮಂ ಹೊರಳಾಡಿದಡೆ ಸಾಲ್ಗು ಶಿವಯೋಗ ಸಿದ್ಧಿಯಹುದು ||೯||

ಆದಡುಂ ನೀನೆ ಶಿವಯೋಗ-ತತ್ತ್ವವ ನೈಜ- |
ಮೋದಮುಳ್ಳಾಚಾರ್ಯನಿಂದಲರಿಯುವು ದುಚಿತ- |
ಮಾದರದಿನೆಮ್ಮನುರು ಭಕ್ತಿಯಿಂ ಪ್ರಾರ್ಥಿಸುವೆ ಯದಕಾಗಿ ಮೆಚ್ಚುತ್ತಲಿ ||
ಮೇದಿನಿಯೊಳಾನೆ ಗುರುವಾಗಿ ತಿಳುಹಲ್ ವೇಳ್ಕ- |
ನಾದಿ ತತ್ತ್ವವೆ ಶಿವಂ ಸಲೆಯುವನೊಳರಿಯುತೊಂ- |
ಪಾದ ರೀತಿಯೆ ಮಹಾ ಶಿವಯೋಗವೆನಿಸುವುದು; ಶಿವನೆ ಲಿಂಗಂ ತಿಳಿಯಲು; ||೧೦||

ಲಿಂಗಮಿದು ತ್ರಿವಿಧಮಿಷ್ಟ-ಪ್ರಾಣ-ಭಾವಮೆಂ- |
ದಿಂಗಿ ತಜ್ಞನೆ, ತ್ರಿದೇಹಂಗಳಂ ಪೊಂದಿಹುದು; |
ಕಂಗೊಳಿಪ ಗುರುವರಂ ಮಸ್ತಕದೊಳಿರ್ಪಿಷ್ಟ-ಲಿಂಗ-ಕಳೆಯಂ-ತನ್ನಯ |
ತುಂಗ ಶಿವಯೋಗ-ವಿದ್ಯಾ-ಬಲದೆ ತೆಗೆಯುತ್ತೆ; |
ಭಂಗಮಿಲ್ಲದ ಶಿಲಾ-ಲಿಂಗದೊಳು ಸ್ಥಾಪಿಸುತೆ, |
ಸಂಗ-ರಹಿತಂ ಕೊಡುವನಿಷ್ಟಲಿಂಗಾಽಽಭಿಧಾನಮಿಟ್ಟು ಪೇಳ್ದು ಕರಕೆ; | ||೧೧||

ಅದನೆ ಯವನಾಜ್ಞೆಯಂತೊಲಿದು ನೋಡುತ್ತಿರಲ್ |
ಪುದಿದೆಸೆವ ಪ್ರಾಣ-ಭಾವಾಖ್ಯ ಲಿಂಗಗಳಾಗ |
ಪದುಳ್ದು ತೋರ್ಪುವು ತ್ರಿವಿಧಮೊಂದಾಗಿ ತಚ್ಛಿವಂ ನೀನೆನಿಪ್ಪರಿವನಿತ್ತು ||
ಪದಪಿನದೆ ಶಿವಯೋಗಮರಿಯಲಿದಕ್ಕೆ ಸಮ |
ಸದಮಳಿನ-ಯೋಗಮಿಲ್ಲಂ; ನೀನೆ ತಿಳಿದಿನ್ನು |
ಮುದವ ಪಡೆಯಿಷ್ಟ ಲಿಂಗವ; ನಿಷ್ಠೆಯಿಂ ಧರಿಸಿ, ಪೂಜಿಸುತೆ ನೋಡಿ ಕೂಡಿ ||೧೨||

ನೋಡುವದಸಾಧ್ಯ ಮಾಗಲ್ಕೆ ಶಿವಭಕ್ತಿಯಿಂ |
ಕೂಡಿದ ಶಿವ-ಜ್ಞಾನಮುಂ ಶಿವವ್ರತಮರಿಯೆ |
ಮಾಡುವ ಶಿವಾನು-ಸಂಧಾನಂ ಶಿವಧ್ಯಾನಮೀ ಪಂಚ ವಿಧಿಗಳಿಂದೆ ||
ನಾಡೆ ಸಿದ್ಧಿಸುವುದಾ ಶಿವಯೋಗಮದು ಸದಾ |
ಮೂಡಿದಾನಂದದಿಂ ದೃಷ್ಟಿ-ಸಾಧನವ ನೀಂ |
ಮಾಡಿದಡುಮಿವನೆ ಸಾಧಿಸವೇಳ್ಕೆವಿಲ್ಲದಿರೆ ಸಾಧಿಸದು ಸುಶಿವಯೋಗಂ; ||೧೩||

ಸರ್ವ ಯೋಗಂಗಳಿದರಲ್ಲಿ ನೆರೆದಿರ್ಪವೈ ।
ಯುರ್ವಿ ಕೇಳೆಂತೆನಲ್ ಹಠ-ಯೋಗಮದು, ವ್ರತಮ- ।
ಪೂರ್ವ ಶಿವಭಕ್ತಿಯಿದೆ ಲಯಯೋಗಮೆಂದರಿವುದೈ; ಧ್ಯಾನಮದೆ ಸುಮಂತ್ರಂ
ಶರ್ವ-ಸುಜ್ಞಾನಮುರು ರಾಜಯೋಗಂ ತಿಳಿಯೆ ।
ಗರ್ವ_ರಹಿತ ಶಿವಾನು ಸಂಧಾನಮಿದೆ ಮಹಿತ- ।
ಪೂರ್ವ- ಸದ್ವಿಹಿತ ಶಿವಯೋಗಮೆಂದರಿಯುವುದು ಕೇಳ್ ರಹಸ್ಯಮ ನೊರೆವೆನು ॥

ಲಿಂಗದೊಳಚಲ ದೃಷ್ಟಿಯಾಗೆ ಚಿತ್ತಂ ನಿಲವು- ।
ದಂಗವಿಸಿ ಬಿಂದುವೆಸೆಯುವುದು, ನಾದ-ಶ್ರುತಿಯು ।
ಸಂಗತಮೆನಿಪ್ಪ ಕಳೆಯಾಗ ತೋರುವುದದಕೆ ಪ್ರಾಣಲಿಂಗಾಖ್ಯೆಯಿರ್ಕುಂ ॥
ಮಂಗಲಾಧಾರಂ ಕಲಾತೀತ ವಸ್ತುವದೆ ।
ಸಿಂಗರದ ಭಾವಲಿಂಗಾಪ್ಪಯದೊಳೆಸೆವುದಿದೆ ।
ಭಂಗಮಿಲ್ಲದ ನಿನ್ನ ರೂಪಂ ಮಹಾನಂದಮದರಲ್ಲಿ ತೀವಿರ್ಪುದು ॥೧೫॥

ದೃಷ್ಟಿ-ಸಾಧನ ಕ್ರಮಮಂ ನಿನಗೆ ತೊರ್ಪೆವೈ ।
ಯಿಷ್ಟಮಿರ್ದೊಡೆ ತೋರುವೋಲೆಯ ಮಠಕ್ಕೆ ನಡೆ ।
ಕಷ್ಟಕರಮಿದು ಯೋಗಿಗಳ್ಗೆ; ನೀನವರನ್ನೈದುತ್ತೆ ಕೆಟ್ಟಹೆಯೆನ್ನುತ ॥
ಶಿಷ್ಟ ಗುರುಸಿದ್ಧನಲ್ಲಿಯ ದೃಶ್ಯನಾಗುತಿರೆ, ।
ಸ್ಪಷ್ಟಮಾಯಿತ್ತಾಗಳಾ ಗುರುವಿನುರು ಮಹಿಮೆ ।
ಯಷ್ಟ ಮೂರ್ತಿಯೆ ಯೀತನಿಂದಾತನಾಜ್ಞೆಯಂತರಿದನ್ನೈದುತೆ ಸೇವಿಸಿ ॥೧೬॥

ಶಿವಯೋಗಿಯಾಗಿ ಜೀವನ್ಮುಕ್ತ ನೆನಿಸುತ್ತೆ ।
ಪವಮಾನ-ಸೋಮೇಶನೆಂಬ ಭಕ್ತಂ ತಿಳಿದು ।
ನವಲೀಲೆಯಿದನಖಿಲ ಬೀದರ ಪುರದ ಭಕ್ತರಾದರದೆ ನುತಿಪರಿಂತು ।
ಸುವಿನಯದೊಳೋರ್ವನೆಂದಂ "ಮಹಾಪ್ರಭುವರಂ ।
ತವಿಪ ಗೋರಕ್ಷನಭಿಮಾನಮಂ ಖಂಡಿಸುತೆ ।
ಶಿವಯೋಗಮಂ ಕೊಟ್ಟು ಪೊರೆದನೆಂದಾಂ ಕೇಳುತಚ್ಚರಿಸುತಿರ್ದೆ'' ನಂದು ॥೧೭॥

ಎಂದು ನುಡಿಯುತಿರಲ್ಕೆ ಮತ್ತೊರ್ವನಾಗಳಿಂ-।
ತೆಂದನಹುದಹುದು ಶ್ರೀ ಸಿದ್ಧರಾಮನ ಕಥೆಯೊ-।
ಳೊಂದು ಲೀಲೆಯ ನೊಲಿದು ಕೇಳಿರ್ದನೇನಲ್ಕದೆಯಲ್ಲಮ ಪ್ರಭುವರಂ ||
ಛಂದದಿಂ ಸಿದ್ಧರಾಮಂಗೆ ಪದದೊಳಗಗ್ನಿ-।
ಯಂ ದಿಟದೆ ತೋರುತ್ತೆ, ಯೋಗದ ಮದವ ಕಳೆಯು-
ತಂದದಿಂ ಶಿವಯೋಗಿಯಂ ಗೈದನೆಂಬುದಂ ತಿಳಿದು ಸಟೆಯೆನತಲಿರ್ದೇಂ ॥೧೮॥

* *

ದಿಟಮಾಯಿತೀ ಚರಿತ್ರದಿನೆಂದು ನುಡಿಯುತಿರೆ, ।
ನಿಟಿಲಾಕ್ಷನಿವನೆನುತಲಾ ಯತಿಯ ಪೊಗಳುತ್ತೆ, ।
ಸ್ಫಟಿಕದಂತಾತ್ಮ-ಹೃದಯುವ ನಿರ್ಮಲಂಗೊಳಿಸಿ ಕೋಡಿತ್ತಲ್ಲಿಯ ಜನತೆಯು ||
ಸ್ಫುಟಮಾಗಿ ತಲ್ಲೀಲೆ ಮತ್ತೊಂದನಿತರಲ್ಲಿ ।
ಕುಟಿಲಮನರಂ ಶುದ್ಧಗೈವಂತೆ ಜರುಗಿಹುದು ।
ಪಟುತರವೆನಲ್ ಪೊರೆಯುವೇಂ; ಕೇಳಿ ನಲಿಯುವುದು, ಸದ್ಭಕ್ತರನುದಿನದೊಳೆ

ಮೈಸೂರೊಳಿದ್ದನೋರ್ವಂ ಮಹಾ ಮತಿಯವಂ;।
ಲೇಸಾದ ಸದ್ಗುಣಂಗಳಿನೊಪ್ಪುತಿರ್ದಡುಂ ।
ದಾಸತ್ವಮಂ ವಹಿಸಿ, ಪರದೈವಮಂ ಪೂಜಿಸುತ್ತಿಹಂ ಲಿಂಗಾಯತಂ ||
ಏಸಾದಡುಂ ದೇವರಿವಗೆ ಸಾಕೆನಿಸವವು; ।
ಬೇಸತ್ತಡುಂ ಲಿಂಗಮಂ ಸಮರ್ಚಿಸಲಿಲ್ಲ; ।
ವಾಸಕ್ಕದೊಂದು ಸಲಮಾದೊಡುಂ; ಗುರು-ಜಂಗಮರ ತೀರ್ಥಮಂ ಬಯಸನು॥೨೦||

ಬಸವಪ್ಪ ನೆಂಬನಾಮಂ ಚಂದಮೆನಿಸದಲೆ ।
ಸಸಿನದಿಂದೊಪ್ಪಿ ಮೋಹನನೆಂದು ಪ್ರೇಮದಿಂ ।
ಪೆಸರಿಟ್ಟು ಕೊಂಡಿಹಂ ತತ್ಸತಿಯು ಪಾರ್ವತಿಯು ಲಿಂಗ-ಜಂಗಮ-ವತ್ಸಲೆ ||
ಲಸಿತ ಪರದೈವಕಿವಳೆಂದುಂ ನಮಿಸಲಿಲ್ಲ ।
ಭಸಿತ-ರುದ್ರಾಕ್ಷಿ-ಮನುಗಳ ಮರೆಯಲಿಲ್ಲವಳ್; ।
ಕಸವಿಸಿಯು ಪಡುತಿರ್ದಳೀಕೆ ಗಂಡನ ರೀತಿಗಾಗಿ ಚಿತ್ತದೊಳಾವಗಂ ||೨೧||

ಪತಿಗೆ ಶಿವಭಕ್ತಿಯುರೆ ಜನಿಸಂತೆ ಲಿಂಗದೋಳ್ ।
ಸತಿಯಾದ ಪಾರ್ವತಿಯು ಬೇಡಿ ಕಣ್ಣೀರಿ ನಿಂ ।
ಪತಿಭಕ್ತೆಯಭಿಷೇಕಿಸುತ್ತಿರ್ಹಳ್; ತತ್ ಸಾಧ್ವಿಯೊರ್ವೆಯೋರ್ವಂ ಭಕ್ತನು ॥
ಶಿತಿ ಕಂಠ-ಕೃಪೆಯಿಂದಲಿವಳ ಮನೆಗವನೈದಿ ।
ಶ್ರುತ-ಲಿಂಗ-ಪೂಜೆಯಂ ತೀರ್ಚುತಾರೋಹಿಸುತೆ, ।
ಹಿತಕಾಗಿ "ಗುರುಸಿದ್ಧ" ದೇವನಂ ನೆನೆಯೆಂದು ತತ್ಕಥೆಯ ಪೇಳ್ದನರಿದು; ॥೨೨॥

ಅಂದಿನಿಂ ಹುಬ್ಬಳ್ಳಿ ಗುರುಸಿದ್ಧ-ಗುರುವರನ ।
ನಂದದಿಂ ನೆನೆಯಲಾದಳ್ ಭಕ್ತಿಯೋಳ್ ಬೆರೆದು ।
ಬಂದು ವನಿತೆಯ ಕನಸಿನೋಳ್ ದರ್ಶನಮನೆ ನಲಿದಿತ್ತು, ಪರಸುತೆ ಪುಷ್ಪವ ॥
ಕುಂದದಲೆ ನಿನ್ನ ಲಿಂಗಕ್ಕಿದಂ ಧರಿಪುದೆನು ।
ಠಂದದೃಶ್ಯತೆಯ ನೈದಲ್ಕೆ ಪಾರ್ವತಿಯೇಳ್ದು ।
ಸುಂದರ ಸುಮವ ನೋಡಿ ವಿಸ್ಮಯದೆ ಶ್ರದ್ಧೆಯಿಂ ಕೊಳುತೆ ಲಿಂಗಕ್ಕರ್ಪಿಸಿ ॥೨೩॥

ತಲೆಯ ಮೇಲಿಟ್ಟು ಕೋಡಳ್ ತತ್ ಪತಿಗುಮುರೆ ।
ಸಲೆ ಪೂಜ್ಯರಾದ ದೇವರ್ಕಳುಂ; ಮರು ಇರುಳೆ ।
ಸುಲಭ ವಾಗಿಯೆ ಕನಸಿನೋಳ್ ಬಂದು ಪೇಳ್ದರಿಂತನಘ ಗುರುಸಿದ್ಧಯತಿಯ ॥
ಅಲಘು ದರ್ಶನವ ಪಡೆ ನಿನಗೆ ಸುಖಮುಪ್ಪುದೈ, ।
ನಿಲದೆ ನಡೆ ಹುಬ್ಬಳ್ಳಿಪುರದ ಬಿಲ್ವ-ವನಕ್ಕೆ ।
ನಿಲುಕದ ಮನಃಶಾಂತಿಯೊದಗುತಿಹುದವನಾಜ್ಞೆಯಂತಿರೆನುತಡಗಲವರು ॥೨೪॥

ಆಗಲೇಳುತ್ತೆ, ನಿಜ ಸತಿಗಿದಂ ಪೇಳುತ್ತೆ ।
ವೇಗದಿಂದಿವಳೊಡನೆ ಹುಬ್ಬಳ್ಳಿಗೈದುತ್ತೆ ।
ರಾಗದಿಂ ಬಿಲ್ವ-ವನದೊಳಿಹ ಸ್ವಾಮಿಯ ಕಾಣುತೆರಗಿದಂ ದಿಟಮೆನಿಸಲು ॥
ಈ ಗುರುವೆ ತನ್ನ ಕನಸಿನೊಳೈದಿ ಪುಷ್ಪಮಂ ।
ಭೋಗಿಭೂಷಣನಂತನುಗ್ರಹಿಸಿದವನೆಂದು ।
ನಾಗವೇಣಿಯು ಪಾರ್ವತಿಯು ತಿಳಿದು ನಮಿಸಿದಳ್; ನೀಂ ಪೊರೆದೆ ಯೆನ್ನನೆನುತೆ॥

ಈರ್ವರಂ ಸನಿಹದೋಳ್ ಕುಳ್ಳಿರಿಸಿ ಕೊಳ್ಳುತ್ತೆ ।
ಶರ್ವ-ರೂಪಂ ನುಡಿದನೆಂತೆನಲ್ "ಬಸವಪ್ಪ ।
ಸರ್ವರಿಗೆ ಪ್ರಿಯಮಾದ ಪೆಸರನೇತಕೆ ತೊರೆದು, ಬೇರೆನಾಮವ ಧರಿಸಿದೆ ? ॥
ಪೂರ್ವಸುರಪೂಜ್ಯ ಮಾಗಿಹ ಲಿಂಗಮಂ ಮರೆದ- ।
ಪೂರ್ವ ಭಕ್ತಿಯೊಳೇಕೆ ಪರ-ಸಮರ್ಚಕನಾದೆ ? ।
ಯುರ್ವರೆಯೊಳೀ ಸತಿಯ ಸುಕೃತದಿಂದುಳಿದು ಕೊಂಡಿಹೆ ಮಾತನಾಡಂಜದೆ;! ॥

ನಿನ್ನ ಪೆಸರಾಗಲ್ಕೆ „ಬಸವಪ್ಪ"ನೆಂದಿನ್ನು; ।
ಸನ್ನುತಂ ಬಸವನಾಮಂ ಮಂತ್ರದಿಂದಧಿಕ- ।
ಮಿನ್ನಿದಕದಾವ ಪೆಸರರಿಯೆ, ಸರಿಬಾರದೈ; ಶಾಂತಿದಾಯಕಮಿರ್ಪುದು; ॥
ಸನ್ನುತಂ ತತ್ಸತಿಯ ನೋಡುತ್ತಲೆಂದನಿಂ- ।
ತನ್ನಪೂರ್ಣೆಯ ಕೃಪೆಯು ನಿನಗಪ್ಪುದೌ ತಂಗಿ, ।
ಬನ್ನಮೆಲ್ಲಂ ದೂರಮಪ್ಪುದೌ ಇರ್ವರುಂ ಲಿಂಗ ಪೂಜೆಯ ಬಿಡದಿರಿ; -॥೨೭॥

ದೇವತಾ-ಮೂರ್ತಿಗಳಿಗೆರಗುತ್ತಿರುವ ನಿನಗ- ।
ದಾವ-ನರಕಂ ಸಿದ್ಧಮಾಗಿಹುದೊ ನಾನರಿಯೆ ! ।
ನೋವಿನೀಗಳ್ ವಿಚಾರಿಸುವದತ್ಯಧಿಕ ಮೆಂದೆನುತೀ೦ಲ್ಕೆರಗಿ ಬಸವಂ ॥
"ದೇವ ಕ್ಷಮಿಸೈ ಯಿಲ್ಲಮೆನಗಿಂತಲಜ್ಞಾನಿ- ।
ಯಾವನುಂ; ಶರಣು ಬಂದಿಹೆನಯ್ಯ; ಯಿಂದಿನಿಂ ।
ಭಾವ-ಪೂರ್ವಕಮಾಗಿ ಯಾನೊಪ್ಪಿಕೊಳ್ಳುವೇಂ, ಲಿಂಗಪೂಜಕನಾಗಲು; ॥೨೮॥

ನಿನ್ನ ಕೃಪೆಯಿಂದೆನಗೆ ದೇವ-ದರ್ಶನ ಮಾಯಿ- ।
ತಿನ್ನು ಸದ್ಗುಣಿ ಸತಿಯ ಸುಕೃತದಿಂ ತವ ಕರುಣೆ ।
ಸನ್ನತನೆ ದೊರೆದುದೈ ದೇವರ್ಕಳಿಂದೆ ನಿನ್ನಯ ಮಹಿಮೆ ತಿಳಿದುದೆನಗೆ ॥
ಚಿನ್ನಿಧಿಯೆ, ತವ ಲೀಲೆಯಂ ಲಿಂಗ-ನಿಷ್ಠೆಯಿದು ।
ಬನ್ನಮಿಲ್ಲದೆ ಲಭಿಸಿತೈ; ಗುರುವೆ, ಸುಕೃತಿಯಾ- ।
ನುನ್ನತನೆ, ತ್ವತ್ಪಾದ-ಭಕ್ತಿಯನನಾರತಂ ಕರುಣಿಸುತೆ ಕಾವುದಯ್ಯ; ॥೨೯॥

ಎಂದೆರಗುತಾಳಿಪೆವ ಪಡೆಯುತೆ, ಸತೀಯುತಂ |
ಬಂದನೂರ್ಗಾ ಲೀಲೆಯಂ ತಿಳಿದು ಸಜ್ಜನರ್ |
ಚಂದದಿಂ ಕೊಂಡಾಡುತಿರ್ದರದನುರೆ ಕೇಳುತಿರ್ದನಾ ಬಸವಪ್ಪಸು ||
ಕುಂದದೆ ಸಪತ್ನೀಕನಾನಂದದಿಂಡದನ- |
ಮಂದ ಹರ್ಷದೆ ಪೇಳ್ವೆನಾಂ ಭಕ್ತರಾಲಿಪುದು; |
ಸುಂದರ ಚರಿತ್ರಮಂ ಪೇಳ್ವನಿಂತಾ ಸುಜನರೊಳಗೋರ್ವನೀ ಪರಿವಯೊಳೆ ||೩೦||

"ಸಂಗಮೇಶಂ ಪಾದಲಾಂಬಿಕಾ ಮಾದರಸ- |
ರಿಂಗಿತದ ಸ್ವಪ್ನದೋಳ್ ನೋಡಿ ಪರಸಿದನೆಂದು |
ಸಿಂಗರದೆ ಕೇಳುತ್ತೆ ನಗುತಿರ್ದೆ ನಾನಂದು; ಗುರುಸಿದ್ಧಲೀಲೆಯಿಂದೆ ||
ಮಂಗಲದ ವಾರ್ತೆಯದು ದಿಟಮಾಯಿತೆಂ"ದೆ ನಲ್; |
ಭಂಗವಿಲ್ಲದೆ ಮತ್ತ ಮೋರ್ವಂ ನುಡಿದ ನಿಂತು |
"ಸಂಗರಹಿತಂ ಶಿವಂ; ಬಸವೇಶನಂ ಸ್ವಪ್ನದಲ್ಲಿ ಕಂಡಾನಂದದೆ ||೩೧||

ಹಿಗ್ಗುತಾವ್ವರ್ ಸಾಸಿರದ ಜಂಗಮದ ನೆಲೆಯರಿಯು |
ತೆಗ್ಗಳತೆಯಿಂ ಪೋಗಿ ಕರೆತಂದನೆಂದು ತಿಳಿ- |
ದೆಗ್ಗನಂದದೆ ಮುಗ್ಧಭಕ್ತಿಯಂ ತಳೆದಿರ್ದನದು ಸತ್ಯಮಾಯಿತಿಂದು" ||
ಹಿಗ್ಗಿ ಸರ್ವರ್ ಕೇಳಿ ನೈಜ ಭಾಕ್ತಿಕರಾಗಿ |
ತಗ್ಗದಿಹ ಭಾಗ್ಯಮಂ ಪಡೆದು ಗುರು-ಕೀರ್ತಿಯಂ |
ವೆಗ್ಗಳತೆಯಿಂ ಬೆಳೆಸಿ ಮೇಲಾಗಿ ಮೆರೆದಿಹರ್ ಮೈಸೂರ ನಾಡ ಜನರು; ||೩೨||

* *

ಇನ್ನೊಂದು ಲೀಲೆಯದು ಬೆಂಗಳೂರೋಳ್ ನಡೆದು |
ಭಿನ್ನತ್ವಮಂ ಕಳೆದುದೆಂತೆನಲ್ ಪೇಳ್ವೆನಾಂ |
ಬನ್ನಂ ಬಡುತ್ತೆ ಬಾಳುತಲಿರ್ದನೋರ್ವನಾ ಪುರದಲ್ಲಿ ಶಾಂತಿಗೆಟ್ಟು; ||
ಮುನ್ನಂ ಮಹಾ ಭಾಗ್ಯವಂತನಿರ್ದಂ ನಿಜಂ; |
ಸನ್ನೀತಿ-ಸದ್ಧರ್ಮಗಳಿಗದಂ ವ್ಯಯಿಸದಲೆ, |
ತನ್ನಂತರಂಗಕ್ಕೆ ತಿಳಿದಂತೆ ದುರ್ವ್ಯಸನಕಾಗಿ ಧನಮಂ ವ್ಯಯಿಸಿದಂ; ||೩೩||

ಆದಡುಂ ಸಂಪದಂ ಬೆಳೆಯುತ್ತಲಿರ್ದತ್ತು; ।
ಗೈದಲೌಕಿಕದುದ್ಯಮಂ ಫಲಿಸುತಿರ್ದಪುದು; ।
ಮೇದಿನಿಯೊಳಖಿಲ ಜನರಚ್ಚರಿಸುತ್ತಿರ್ದಪರ್, ಬೆಳೆವಿವನಸಿರಿಯ ಕಂಡು; ॥
ಆದನಿವನಿದರಿಂದಲತಿ ಮದಾಂಧಂ; ತಿಳಿಯ– ।
ಲಾದರಿಸದಾಡಂ ಮಹಾಜನರನರಿದರಿದು ।
ವಾದಿಸುತ್ತಿರ್ದಪಂ; ನಿಂದಿಸುತೆ ಧರ್ಮವಂ ನೀತಿಯಂ ಸಲೆ ಸುಕೃತವ; ॥೩೪॥

ಇವನ ಪೆಸರಾದಯ್ಯನಿವನ ಸತಿ ಮಾದಾಂಬೆ; ।
ಯವಳ ಸದ್ಗುಣಕೆ ಸಜ್ಜನರೊಲಿದು ಬರುತಿರ್ದ–।
ರಿವನಿಲ್ಲದಾಗಳದು ಸೇರುತಿರ್ದಿಲ್ಲಿವಂಗಾದಡುಂ ಮೌನಮಿರ್ದಂ ॥
ಇವಳ ರೂಪಕ್ಕೆ ಶೀಲಕ್ಕೆ ಮೆಚ್ಚಿರ್ದವಂ ।
ಸುವಿನಯದೆ ಸಾಧುವಂತಿರುತಿರ್ದನೊಂದುದಿನ ।
ಮಿವಳಗಿಂತತಿ ರೂಪವತಿಯಾದ ಮಹಿಳೆಯೋರ್ವಳ್ ಸಿರಿಗೊಲಿದು ಬಂದಳು;॥೩೫॥

ಈಕೆಯ ಪೆಸರ್ ಮೋಹಿನೀ ಯೆಂಬುದಿರ್ದತ್ತು; ।
ಕಾಕು–ಮನದಿಂ ಸವಿನುಡಿಯನಾಡಿ, ದ್ರವ್ಯಮಂ ।
ಲೋಕಮಚ್ಚರಿಸಲ್ಕೆ ಸೆಳೆಯುತಿರ್ದಳ್ ನಲಿಸಿ ಶೃಂಗಾರ ಚೇಷ್ಟೆಯಿಂದೆ; ॥
ಲೌಕಿಕಂ ಪತ್ನಿಗಂಜುತ್ತೆ ಬೇರ್ಮನೆಯೊಳಗ–।
ನೇಕರಿಗೆ ತಿಳಿಯದಂತಿರಿಸಿರ್ದನಾದಡುಂ, ।
ಸಾಕಿದಾ ಬೆಕ್ಕು ಕಣ್ಮುಚ್ಚಿ ಪಾಲಂ ಕುಡಿಯಲೊಡತಿ ನೋಡದಲರ್ಪಳೆ?' ॥೩೬॥

ಅಂತೆ ಕೆಲದಿನಕಿದಂ ಮಾದಮ್ಮನರಿಯುತ್ತೆ, ।
ಕಾಂತೆ ಗಂಡನನೊರ್ಮೆ ಯೇಕಾಂತದೊಳ್ ಕೇಳ್ವೆ, ।
ಶಾಂತಿಗೆಡುತಾ ಕ್ಷಣದೆ ಬಡಿದು ಮೋಹಿನಿಯು; ಮನೆಯಲ್ಲಿ ಕರೆತಂದಿರಿಸುತೆ ।
ಅಂತು ಬೇಕಾದೊಡೀಕೆಯ ಸೇವೆಯಂ ಮಾಡು
ತಂತರಿಸದಂತೆ ಸ್ನೇಹದಿನಿರ್ಪುದಿಲ್ಲದಿರೆ ।
ಭ್ರಾಂತಿ–ವಿರಹಿತ–ಗುರುವಿನಾಣೆಯೆಂದೊರೆಯಲ್ಕೆ ನಡುಗಿದಳ್ ಮಾದಮ್ಮನು; ॥

ಹರಸಿಚ್ಛೆಯಿದೆನುತ್ತೆ, ಪ್ರಖ್ಯಾತ ಗುರುಸಿದ್ಧ- |
ಗುರುವರನ ನೆನೆಯುತ್ತಲವಳೊಡನೆ ಸ್ನೇಹದಿಂ |
ದಿರುತಿರ್ದಳಾ ಶಾಂತೆಯವಳ ಮನವೊಲಿಸುತ್ತೆ, ಬೈಯ್ದಡುಂ ಬೈಸಿಕೊಳುತೆ, ||
ನೆರೆ ಬಡಿದಡುಂ ಬಡಿಸಿಕೊಳ್ಳುತ್ತೆ, ದಾಸಿಯಂ- |
ತಿರುತಿಹಳ್; ತತ್ ಸಾಧ್ವಿಯೆಲ್ಲಮಂ ತಿಳಿದಡುಂ |
ಕರಮರಿಯದಂತಿಹಳ್; ಕಂಡಡುಂ ಕಾಣದಂತಿಹಳಲ್ಲಿ ಮುಗ್ಧಳಂತೆ ||೩೮||

ಒಂದು ದಿನದೋಳ್, ಬರಿದೆ ಪ್ರೇಮಮಂ ನಟಿಸುತ್ತೆ |
ಸುಂದರಿಯು ಹೊಲ-ಮನೆಯ ಬರೆಸಿಕೊಳ್ಳುತೆ, ನಯದ- |
ನಂದಮೆನೆ ತೋರುತ್ತೆ, ಬರು ಬರುತ್ತಾಕೆ ಮತ್ತೊಬ್ಬನಂ ಕೂಡುತ್ತಲೆ ||
ಚಂದದಿಂದಾದಯ್ಯನಂ ಹೊರಗೆ ದೂಡಿದಳ್; |
ಹೊಂದಿ ನಿಜ ಸತಿಯನಾದಯ್ಯತಾಂ ತೊತ್ತಾಗಿ |
ಕಂದದಲೆ ಸತಿಯೊಡನೆ ಬಾಳಲಾದಂ, ಧರ್ಮಮಂ ನಿಂದಿಸುದನಳಿಸದೆ; ||೩೯||

ಇದನು ಬಿಡಿಸದಿರಲ್ಕೆ ಸುಖಮಾಗದೆಂದರಿದು; |
ಮುದದೆ ಗುರುವಂ ನೆನೆದು, ಬೋಧಿಸಲೊಡರ್ಚಿದಳ್; |
ಸದಮಲೆಯು ಗೈದ ಯತ್ನಂ ನದಿಗೆ ನೀರು ಪೊಯ್ದಂತೆನಿಷ್ಫಲಮಾಗಲು; ||
ಪದುಳ್ದದಂ ಗುರುಸಿದ್ಧ-ಗುರುವಿಗರ್ಪಿಸುತಿರಲ್; |
ಪದಪಿಂದಲೋರ್ಮೆಯಾದಯ್ಯನೋರ್ವನ ಪೊಲದೆ |
ಪದೆದು ಪತ್ನೀ-ಸಹಿತನಾಗಿ ಕೆಲಸವ ಮಾಳ್ಪ ಸಮಯದೋಳ್, ಮೃತ್ತಿಕೆಯೊಳೆ ||

ಒದವಿ ವೃಶ್ಚಿಕಗಳುರೆ ಕಾಣಿಸುತಿರಲ್ ಭೂಮಿ- |
ಗೊದವಿಗೊಡೆಯನ ಕರೆದು ತೋರಿಸಲವಂ ನೋಡಿ, |
ಬೆದರುತೀರ್ವರ್ಗೋರೆದನೆಂತೆನಲ್ ನೀವೆನ್ನ ಕ್ಷೇತ್ರಮಂ ಕೆಡಿಸಿದಿರೆಲಾ; ||
ಪುದಿದು ಬೆಳೆಯಂ ಕಾಣ್ಬ ಮಣ್ಣಿನೋಳ್ ಚೇಳುಗಳ- |
ನೊದವಿಸಿದಿರ್ಪೈ; ನಿಮ್ಮ ಕಾಲ್ಗುಣಮದೆನಗೀಗ |
ವಿದಿತಮಾದುದು; ಸಾಕು ಪೋಗಿರೆ"ನೆ ಮಾದಮ್ಮನೆಂದಳಿವು ನಾಣ್ಯಂಗಳು; ||೪೧||

ತೋರುವೆನೆನುತ್ತೆ, ನೀರಂ ತಂದು "ಗುರುಸಿದ್ಧ |
ವೀರ, ಜಯ; " ಯೆನುತಲೆರಚುತ್ತಿರಲ್ ಮಣ್ಣಿನೋಳ್ |
ಮೀರಿ ಚಿನ್ನದುರೆ ನಾಣ್ಯಂಗಳೆಸೆಯುತಿರಲ್ಕೆ ನೋಡಿ ಬೆರಗಾಗಿ, ನಲಿದು ||
ಮೀರಿದುರು ಭಕ್ತಿಯಿಂ ಪೊಲಮನವರ್ಗಿತ್ತು ಸಲೆ |
ಸಾರಿ ವಂದಿಸುತಿರಲ್ಕಾದಯ್ಯಗಾಗಳ್ಸ- |
ಚಾರು ಗುರು-ಭಕ್ತಿಯದು ಪೊಣ್ಮುತಿರೆ ಹುಬ್ಬಳ್ಳಿಗೈದಿದಂ ಪತ್ನಿಯೊಡನೆ; ||೪೨||

ಬಿಲ್ವ-ವನಕ್ಕೈದುತ್ತೆ ಜಗದ ಗುರುವಂ ಕಂಡು, |
ಚಲ್ವ ಪದಕೆರಗುತಿರಲೀರ್ವರಂ ಕುಳ್ಳಿರಿಸಿ, |
ಸಲ್ವ ನುಡಿಯಿಂ ಕೇಳ್ದ "ನಾರು ನೀವಿಲ್ಲೇತ ಕೈದಿದಿರಿ ? ಪೇಳಿರೆಂ"ದಂ ||
ಚಲ್ವ ಮಾದಾಂಬೆಯಿಂತೊರೆದ "ಒಡೆಯನೆ, ನಿನ್ನ |
ಪೋಲ್ವ ಗುರುವೆಲ್ಲಿಯುಂ ಸಿಗದಿರಲ್ಕಿಲ್ಲಿಗಾವ್ |
ಕೊಲ್ವ ಮನಮಂ ಸೆಳೆದು ಕೊಳ್ಳುತ್ತೆ, ಬಂದೆವೈ; ಬರುವ ಬುದ್ಧಿಯನಿತ್ತಿರಿ; ||೪೩||

ಆದಯ್ಯನೆಂದನೆರಗುತ್ತಲೈ "ಶ್ರೀಗುರುವೆ, |
ಆದಣ್ಣನೆನ್ನಪೆಸರಿವಳೆನ್ನ ಪೆಂಡತಿಯು; |
ಮಾದೇವಿ ಯಿವಳನಾಮಂ; ಬೆಂಗಳೂರೆಮ್ಮ ವಾಸ-ಸ್ಥಲಂ; ತಿಳಿಯಿರಿ; |
ವಾದಕ್ಕತೀತಮದು ನಿಮ್ಮ ಲೀಲೆಯು, ತಿಳಿಯೆ; |
ಮೋದಾತಿಶಯದೊಳೀಯುತೆ ಧರ್ಮ-ಬುದ್ಧಿಯಂ; |
ವೇದಕ್ಕಗಮ್ಯಮಿದು ನಿಮ್ಮ ಮಹಿಮೆಯು; ಧರ್ಮ-ನಿಂದಕನ ರಕ್ಷಿಸಿಹುದು; ||೪೪||

ಎಂದು ಮತ್ತೆರಗುತಿರೆ, ಗುರುಸಿದ್ಧ ಗುರುದೇವ- |
ನೆಂದನೆಂತೆನಲಯ್ಯ ಬಿಡಿದು ನಿನ್ನಯ ಭ್ರಾಂತಿ- |
ಯಂದಮೆನೆ ತಿಳಿವುದಾದೊಡೆ ನಿನ್ನ ಪತ್ನಿಯುರು ಭಕ್ತಿಯಿದಕಿದೆ ಕಾರಣಂ ||
ಛಂದಮೆನಲಿನ್ನಾದಡುಂ ತಿಳಿದು ಧರ್ಮಮಂ |
ನಿಂದಿಸದೆ ಬಾಳ್ವುದುಚಿತಂ; ಧರ್ಮ ವೆಂದೊಡರಿ |
ಪೊಂದಿದವರಂ ಬಿಡದಲುದ್ಧರಿಪುದೆಂಬರ್ಥಮಿದನೇಕ ವಿಧವಾಗಿದೆ; ||೪೫||

ಎಲ್ಲಕಂ ಮಿಗಿಲಾದುದುರು ಭಕ್ತಿ ಇದರರ್ಥ- |
ಮುಲ್ಲಸಿತ ಪೂಜ್ಯರೋಳ್ ಪ್ರೇಮಮುಹುದೆಂದರಿಯೆ, |
ಸಲ್ಲಿಹುದು ನೀನಿದಂ ತಿಳಿಯುತ್ತೆ ಮಿಗಿಲಾದ ಗುರುಭಕ್ತಿಯಿಂ ಬಾಳೆಲೈ; ||
ಇಲ್ಲವೈ ಜೀವನಂ ಜಗದೆ ಧರ್ಮವ ತೊರೆದೊ- |
ಡುಲ್ಲಸದೆ " ಧರ್ಮೇಣ ಜಗತಃ ಪ್ರತಿಷ್ಠಾ " |
ಸೊಲ್ಲಿಸಿಹುದಿಂತೆಂದು " ಧರ್ಮೇಪ್ರತಿಷ್ಠಿತಂ ವಿಶ್ವ"ಮೆಂದುರೆತಿಳಿಯಲು || ೪೬ ||

" ಧರ್ಮಶ್ಚ ರಕ್ಷಿತೋ ರಕ್ಷತಿ "ಯೆನುತ್ತಿರಲ್ |
ಧರ್ಮಮುರೆ ರಕ್ಷಿಪುದು ರಕ್ಷಿಸುತ್ತಿರ್ಪರಂ; !
ಧರ್ಮದೀ ಕರ್ತವ್ಯಮಂ ಬೋಧಿಪುದು ಭಾರತ-ಶ್ಲೋಕದರ್ಥಮಿದುವೆ; |
ಮರ್ಮಮಿದು " ಪತಿತಂ ಪತಂತಂ ಪತಿಷ್ಯಂತ- |
ಮೊರ್ಮೆಗಂ ಧರತಿ"ಯೆನೆ ಬಿದ್ದವನ ಬೀಳ್ವವನ |
ನೊರ್ಮೆಗುದ್ಧರಿಸುತಿದೆ ಯೆಂಬುದೀ ವಾಕ್ಯದರ್ಥಂ ಶಾಸ್ತ್ರಮಿದು; ಸ್ಪಷ್ಟಮೆ;||೪೭||

ಇತ್ಯಾದಿ ವಾಕ್ಯಾರ್ಥಮಂ ತಿಳಿದು, ಧರ್ಮಮಂ |
ನಿತ್ಯಂ ಚರಿಪ್ಪುದಿದು ಮಾನವರ ಕರ್ತವ್ಯ- |
ಮತ್ಯಾದರದೆ ಚರಿಸದಿರ್ದೊಡೇನಿಪ್ಪುದೆಂಬುದನರಿದವಂ ನೀನಹೆ; ||
ಸತ್ಯತ್ವದಿಂ ಚರಿಪುದಂ ತೊರೆದು, ನಿಂದಿಪುದ-|
ಕೃತ್ಯಂ; ತಿಳಿಯಲಿದುವಿಚಾರಿಸಲ್ಕತಿಹೀನ- |
ಮತ್ಯಂತ ದುರ್ನರಕಮುಂ ಪೊಂದುತಿಹೆ;ಯಿದಂ ತಿಳಿದು ಬಾಳ್-
ಸುಖಮಪ್ಪುದು, ||೪೮||

ಧರ್ಮದೊಳಗುಂಟು ಸಾಮಾನ್ಯಂ ವಿಶೇಷಂ;ಸು- |
ಮರ್ಮಮಿದು ತಿಳಿಯಯ್ಯ ದ್ವಿವಿಧಕ್ಕೆ ನೀತಿಯಂ; |
ಶರ್ಮಕರ-ಮತಮೆಂಬ ಪೆಸರುಂಟು ತಿಳಿಯಲ್ಕಿವೆರಡುಂ ನರಂಗೆವೇಳ್ಕು; ||
ನಿರ್ಮಿತಂ ಸಾಮಾನ್ಯದಿಂ ಜೀವನೋದ್ಧೃತಿಯು; |
ನೆರ್ಮಿದೊಡೆ ಮತ ಧರ್ಮದಿಂದಾತ್ಮದುದ್ಧರಣ- |
ಮೊರ್ಮೆಗಂ ಚರಿಸಲ್ಕೆವೆರಡರಿಂ ಪುಣ್ಯಾತ್ಮನೆನಿಸುತಂ ದೇವನೆನಿಪಂ; ||೪೯||

ಸರ್ವರಿಗುಮವರವರ ಮತ-ನಿಯಮಗಳೆ ಶ್ರೇಷ್ಠ- |
ಮುರ್ವರೆಯೊಳಿರ್ಪನವನಾಗಳ್ ವಿಚಾರಿಸುತೆ, |
ಶರ್ವಸಿಂದಂ ಬಂದವೆಂದರಿದು ನಿಂದಿಸುವದಂ ತೊರೆಯಲೇ ವೇಳ್ಕರಿ; ||
ಖರ್ವ-ನೀತಿಗಳುಂಟವೆಲ್ಲಗುರ್ಗವೊಂದಿರ್ಪ- |
ವುರ್ವಿಯೋಳ್ ಬಾಳಲಾರಂ; ಮನುಜ-ಜಾತಿಗಿದ- |
ಪೂರ್ವನಿಯಮಂ; ತೊರೆದೊಡಿಲ್ಲಿ ಜೀವನಮಿಲ್ಲಮಾವಗಂ; ತಿಳಿದು ಬಾಳ್ಮೆ; ||೫೦||

ಕೇಳದಾಗದಿರಲ್ಕೆ ಲಿಂಗಮಂ ದೇವರ್ಕ- |
ಳೀಳಿಗೆಯ ಪಡೆದಿಹರ್; ಭಕ್ತಿಯಿಂ ಪೂಜಿಸುತೆ |
ಬಾಳ ಮಾತೇಂ ಲಿಂಗ-ವೃತ್ತದೊಳೆ ವಿಶ್ವಮಿದು ಮೂಡಿ ಮುಳುಗುತ್ತಿರ್ಪುದು |
ಪೇಳಲೇಂ ನೀಂ ಧರಿಸಿದಿಷ್ಟ ಲಿಂಗಂ ಸರ್ವ- |
ಮೇಳದಧಿ ಪತಿಯಾತ್ಮ-ರೂಪಂ ಪರಬ್ರಹ್ಮ- |
ಮಾಳವಾಗಿಹ ಸ್ಥಾವರದ ಚಿತ್ತಿಗಿಂತಪ್ಪ ಲಿಂಗಮಂ ಕೀಳೆಸಿಸುತೆ ||೫೧||

ಲಿಂಗಮಂ ಬಿಡದೆ ಧರಿಸುತ್ತೆ, ಗುರು-ಜಂಗಮರ |
ಸಾಂಗ ಮಾಗಿಯೆ ಪೂಜಿಸುತ್ತೆ, ತೀರ್ಥ-ಪ್ರಸಾ- |
ದಂಗಳಂ ಪಡೆಯುತ್ತೆ, ಭಕ್ತರಾಗಿರಿ; ವೀರಶೈವ ಮತದವರಿರ್ಪಿರಿ; ||
ಮಂಗಲಂ ನಿಮಗಹುದು; ಪೋಗಿರೆಂದಾಶಿಷವ |
ತುಂಗ ಮಹಿಮಂ ಕರುಣಿಸುತ್ತೆ, ಲಿಂಗಾರ್ಚನೆಯೊ- |
ಳಿಂಗಿತಜ್ಞಂ ಬೆರೆದು ಶರಣ-ಸಾಹಿತ್ಯದ ಪ್ರಚಾರಮಂ ತಿಳಿಯುತಿರ್ದಂ; ||೫೨||

ಸುಜನರೆಲ್ಲರ್ ಸೇರುತೊಂದೆಡೆಯೊಳಲ್ಲಲ್ಲಿ |
ನಿಜದ ಹರ-ಗುರು-ಲೀಲೆಯಂ ಸ್ತುತಿಸಲಾಗಿರ್ಪುದಂ |
ಭಜಿಸುತಂ ಕೆಲ್ಲರವನೊರೆವೆನೇನೆನ್ನೆ ಕೇಳಿರೋರ್ವನಪರೊಳಗೆಂದನು ||
“ಕುಜನನಹ ಸ್ವೇತನಾ ವೇಶ್ಯೆಯುಂ ಶಿವನಿಧಿಲೀಲೆ |
ಸ್ರುಜಮಿದುಂ ಸಿಗದೆನುತೆ ಬೀಳ್ದು ಮಡಿಯಲ್ಕತ್ತ ಶಿವಮಂ |
ಸೈಜಿಸುತಾತಂಗೆ ಸುವಿಲಾಸಮಂ ಗಣಪದವ ಕೊಟ್ಟನೆಂದುರೆ ಕೇಳುತೆ; ||೫೩||

ನಗುತಿರ್ದೆನದುಮಿಂದು ದಿಟಮಾದುದೆಂ"ದೆನಲ್ |
ಮಿಗಿ ಹರ್ಷದಿಂ ಮತ್ತವೋರ್ವನೆಂದಂ ನಿಜಂ; |
"ಮಿಗಿಲಾದ ಪಾಪಿನಿಯು ಸೌಮಿನಿಯು ದೊರೆಯದಿರಲಾಹಾರವೆನುತಿರಲ್ಕೆ ||
ಸೊಗಯಿಸುವ ಹರನೆತ್ತಿಕೊಳ್ಳುತ್ತೆ ಗಣಪದವ |
ಮಿಗಿಲಾಗಿ ಸುರರೆಲ್ಲರಹುದೆನಲ್ಕೊಲಿದಿತ್ತ- |
ನೊಗುಮಿಗೆಯೊಳಿದನೊರ್ವೆ ಪೌರಾಣದೊಳ್ ಕೇಳಿ ನಂಬಿದೆನಿದಂ ತಿಳಿಯುತೆ; ||೫೪||

ಮತ್ತವೋರ್ವಂ ನುಡಿದನೆಂತೆನಲ್ಕ"ಹುದಹುದು; |
ಸತ್ತಮ ಪ್ರಮಥ-ಪರಮಂ ಸಾಂಖ್ಯತೊಂಡನಾ- |
ವೃತ್ತಮರ್ ಬಯ್ವಂತೆ ಕಲ್ಲಿನಿಂದೊಗೆಯುತ್ತೆ, ಜವದೊಳೈದಿದನೆ"ನ್ನುತೆ, ||
ಚಿತ್ತಕಿದು ವಿಸ್ಮಯವ ನೆಗಳ್ದಿದು ಕೇಳಲೆನ- |
ಗಿತ್ತು, ವೋದವ ತದಾಶ್ಚರ್ಯಮಂ ಕಳೆಯುತೆನೆ |
ಬಿತ್ತರದ ಭಕ್ತಿಯಂ ತಳೆದಿಂತು ಕೊಂಡಾಡುತಿರ್ದರನ್ಯೋನ್ಯಮಾಗಿ ||೫೫||

ಇಂತು ಸಜ್ಜನರೆಲ್ಲರೆಲ್ಲೆಲ್ಲಿಯುಂ ಪೊಗಳೆ |
ಕಾಂತ ಗುರುಸಿದ-ಗುರುವಾ ಪೊಗಳಿಕೆಯರಿದು, |
ಸಂತಸದೆ ತೆಗಳಿಕೆಯಿದೆಂದು ತಿಳಿಯುತ್ತಿಹಂ ದುರ್ಜನರ ನಿಂದೆಯನವಂ ||
ಶಾಂತನುರು ನುತಿಯೆಂದು ತಿಳಿಯುತ್ತಲಿರ್ಪಾಗ |
ಶಾಂತಿಯಂ ಕೆಡಿಸಿಹುದು ಶರಣಸಾಹಿತ್ಯದಾ |
ಸಂತತದ ಸುಪ್ರಚಾರದ ಕಾರ್ಯಮಂ ಗೈವ-ಗಣರ ಲಿಂಗೈಕ್ಯಮದುವೆ; ||೫೬||

ಅನಿತರೊಳ್ ಬಂದಿಹಂ ಮೂರುಸಾವಿರದಯ್ಯ- |
ನನಘನುರು ಪಾದಕ್ಕೆ ವಂದಿಸುತೆ ನಿಂದಿಹಂ; |
ಘನ ಶರಣ ಸಾಹಿತ್ಯದಾ ಪ್ರಚಾರದ ಸ್ಥಿತಿಯ ಸರ್ವಮಂ ಬಿನ್ನವಿಸುತೆ ||
ವಿನುತತರನಿಬರ್ಗಳ್ಲಿಂಗದೊಳ್ಬೆರೆತಿರ್ದ ಬಗೆಗಳಸ್ವಲ್ಪಮುಂ |
ತನಗುಮಾ ಪೆಸೆಯೊಳ್ದುಗ್ಧಯೊಳರ್ಪ ಸಾತಿಸುವ ಪೆರ್ಬಾಟ |
ಸನಕಾದಿ ನುತ್ಯಂಗೆ ಮತ್ತೆ ಬಿನ್ನವಿಸುತ್ತೆಶೋಕೈಕಮಾಗಿದ್ದು, ನಿಂದನೆರಗಿ; ||೫೭||

ಕೈವಿಡಿದು ಸನಿಹದೊಳ್ ಕುಳ್ಳಿರಿಸಿಕೊಳ್ಳುತ್ತೆ ।
ಸಾವಧಾನದೊಳಿಂತು ಪೇಳಿದಂ "ನಂದನನೆ, ।
ಭಾವುಕಂ ಚನ್ನಬಸವೇಶ್ವರಂ ನಿಯಮಿಸಿದ ಕಾರ್ಯಮಿದು ನಿಲಲಾಗದು;॥
ಭಾವಿಕನೆ, ನೀನಿನ್ನುಮಿಲ್ಲಿ ಬಾಳಲ್‌ವೇಳ್ಕು ।
ದೇವನುತ ವಟುವರರ್ಗೀ ಜ್ಞಾನ-ಸಂಸ್ಕೃತಿಯ-।
ನೋವಿ, ಕರುಣಿಸಿ, ಕಾರ್ಯಮಂ ಮುಂದುವರಿಸುತೆ, ಪರಂಪರೆಯ ವಿಧಿಸವೇಳ್ಕು॥

ಹದಿನೈದು ಬರಿಸಂಬರಂ ಬಾಳಿನುತ್ತೆ ಶುಭ ।
ಸದಮಲಾಶಿಷಮಸೀ(ಯು)ತ್ತಿರ್ದನನುನಯದೆ; ।
ಪದುಳ್ದನಿತರೊಳ್ ಶಿವಾರ್ಚನೆಯ ಸಮಯಂ ಘಟಿಸೆ, ಮೋದದಿಂ ಶಿಷ್ಯನೊಡನೆ॥
ಪದೆದು ಬೆರೆಯುತ್ತುರು ಶಿವಾರ್ಪಣವ ತೀರ್ಚುತ್ತೆ ।
ಪದಪಿಂ ಶಿವಾನುಭವ-ಗೋಷ್ಠಿಯೊಳ್ ನಲಿದಿರ್ದು, ।
ಮುದದೆ ಕಳುಪಿದನಾತನಂ, ಮೇಲೆ ಮೇಲೈದುವಂತೆ ತಿಳಿಸುತೆ ಗುರುವರಂ; ॥೫೯॥

ವೀರೇಶ-ಪುಣ್ಯಾಶ್ರಮಂ ಗದುಗಿನೊಳ್ ಮೆರೆವು-।
ದೋರಂತೆ ಶೋಭಿಸುವುದಲ್ಲಿ ಪಂಚಾಕ್ಷರನು-।
ದಾರ ಸ್ವ ಗುರುವರನ ಯೋಗದ ಸಮಾಧಿಯಿದೆ;ಕುಳಿತಿಲ್ಲಿ ಗುರು–ಕರುಣೆಯೊಳ್॥
ಸಾರಜ್ಞ ಗುರು-ಲಿಂಗ-ಚರ-ಭಕ್ತ–ಕಿಂಕರಂ ।
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ ।
ಮೂರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣದೊಳ್ ಸಂಧಿಪದಿಮೂರ್ ॥೬೦॥



ಅಂತು ಸಂಧಿ. ೧೩ಕ್ಕಂ, ಪದಂಗಳು ಅರವತ್ತಕ್ಕಂ;
ಇಂತು, ಒಟ್ಟು ಪದಂಗಳು ೭೫೩ ಕ್ಕಂ;
--- ಮಂಗಲಂ—

॥ ಶ್ರೀ ಗುರುಬಸವ ಲಿಂಗಾಯ ನಮಃ ॥



# ಹದಿನಾಲ್ಕನೆಯ ಸಂಧಿ





॥ ಸೂಚನೆ ॥

ಸೊಸೆಯ ಪೊರೆದಂ, ಮಹಾಲೀಲೆಯಿಂ. ।
ದೊಸೆದು ಪ್ರಾರ್ಥಿಸಿದ ನಾರಿಯ ಸಲುಹಿದಂ ಗುರುವು ।
ಬೆಸೆಸುತಾಕಳ ಗೂಳಿಯುಂ ಪಟಳವ ತಪ್ಪಿಸಿದನಗಿಯದಣುಗನ ಕಾಯ್ದನು;॥

*                    *

[ಸಂಧಿ ಪ್ರಾರ್ಥನಾ-ಪದ್ಯ]

ಬೇವಿನೊಳ್ ಬೀಜದಿಂ ಕಾಯ್ವರೆಗುಮೆಲ್ಲಮಂ ।
ತೀವಿಹುದು ಕಹಿ ಯರಿಯೆ ಪಣ್ಣನೋೞ್ ಸಿಹಿಯಹುದು; ।
ಜೀವರೀ ಬಾಳಿನೊಳ್ ಕೊನೆವರೆಗುವೊಂದಿಲ್ಲವೊಂದು ದುಃಖಮುದೆಸೆವುದು ॥
ದೇವ, ಕೇಳ್; ಮರದಿಂದೆ ನರನ ಬಾಳ್ ಹೀನಮೇಂ?! ।
ಸಾವ ಸಮಯದೊಳಾದಡುಂ ಮಾನವಂಗೆ ಸಲೆ ।
ಭಾವದೋೞ್ ನಿನ್ನ ಧ್ಯಾನವ ಕೊಟ್ಟು ಪೊರೆಯುವುದು ನಿನಗಸಾಧ್ಯಮೆ? ಶಂಕರ ॥

ಗುರುಸಿದ್ಧ ಗುರುವರಂಗಭಿನಮಿಸಿ ಧ್ಯಾನಿಸುತೆ, ।
ತೆರಳುತ್ತೆ ಮೂರುಸಾವಿರದಯ್ಯನಾ ಗಣರ್ ಸ್ಥಾಪಿಸಿದ ।
ವಿರತ-ಸುಮಠಂಗಳಿರ್ದವು ಮೂರುಸಾವಿರಂ; ನೋಡುತವುಗಳೊಳೊಪ್ಪಿಹ ॥
ವರ ಮಹಾಸ್ವಾಮಿಗಳಿಗೀ ಜಗದ್ಗುರುವರ್ಯ-।
ನೊರೆದ ಸಂದೇಶವಮಂ ತಿಳುಪಿ, ಪರಶಿವ-ಮಹಾ ।
ಶರಣ–ಸಾಹಿತ್ಯ–ಪ್ರಚಾರ–ಕಾರ್ಯವ ನೇಮಿಸುತ್ತೆ; ಸುಖದಿಂದಿರ್ದನು; ॥೨॥

ಅವನ ಕಾರ್ಯವ ಲಿಂಗ-ಮುಖದಿಂದಲರಿಯುತ್ತೆ, ।
ಶಿವಯೋಗಿ-ಗುರುಸಿದ್ಧರಾಜನಿರುತಿರ್ದನಾ ।
ಭವರೋಗಿಗಳ ದುಃಖ-ಹರಣಮಂ ಮಾಡುತ್ತೆ, ಲಿಲಾವಿಭವದಿಂದಲೆ; ॥
ಸುವಿನಯದಳೊಂದು ಚರಿತಮನೊರೆವೆ ತಿಳಿಯುವದು; ।
ಶಿವಭಕ್ತೆಳಿರ್ದಳೋರ್ವಳ್ ಮಹಾ ಸುಗುಣವತಿ; ।
ಯವಿರತಂ ಗುರುಸಿದ್ಧನಾಮ ಸಂಸ್ಮರಣೆಯೊಳ್ ಸೋಮಲಾ ನಾಮವತಿಯು ॥೩॥

ಧಾರವಾಡದ ಮಹಾಮನೆಯವರ ಸೊಸೆಯಾಗಿ ।
ಸಾರ–ಧನಿಕನ ಮಹಾಂತಾಪ್ಪಯನ ಸತಿಯಾಗಿ ।
ಭೂರಿ ಸುಜನ–ಪ್ರಿಯಳ್ ಸೋಮಲೆಯು ತಾನಾಗಿ ಬಾಳುತಿರ್ದಳ್ ವಿನಯದೆ; ॥
ನೀರೆ ದೀನಾನಾಥ-ಬಂಧು–ಬಾಂಧವಳಾಗಿ, ।
ಮೀರಿರುವ ಕಷ್ಟ–ನಷ್ಟಂಗಳಂ ಹಿತವಾಗಿ ।
ಧೀರತನದಿಂ ತಿಳಿದು, ದುಷ್ಟರ್ಗಹಿತೆಯಾಗಿ, ನೆಲೆಸಿಹಳ್ ಶಾಂತಳಾಗಿ; ॥೪॥

ಮನೆಯ ಕೆಲಸದೊಳೀಕೆ ಯೆಂದಿಗುಮಲಸಲಿಲ್ಲ; ॥
ತನಗೆ ಧನಮಿರ್ದಡುಂ ಭೃತ್ಯರ ಬಯಸಲಿಲ್ಲ; ।
ವನಿತೆ ನುತಿ-ನಿಂದೆಗಳ ಕೇಳಿ ಮನ್ನಿಸಲಿಲ್ಲ; ಪಿಸುಣತೆಯ ಕೇಳಲಿಲ್ಲಂ; ॥
ಅನಘೆಯಿವಳಾಗಿರ್ದಡತ್ತೆ ಸೇರಲೆಯಿಲ್ಲ; ।
ಜನ-ನುತೆಯುದಾರತೆಯು ವೃದ್ಧೆಗೊಪ್ಪಲೆಯಿಲ್ಲ; ।
ದಿನ–ದಿನದೆ ಕಾಡುವಳ್ ಪದ್ಮಮ್ಮನೀಕೆಯಂ ಸೊಸೆಯೆಂಬುದಂ ಮರೆಯುತೆ; ॥೫॥

ಕುಳಿತಡುಂ ನಿಂದಡುಂ ಮಲಗಿದಡುಮೇಳ್ದಡುಂ ।
ಬಳಿಯೊಳಿರ್ದಡುಮೀಕೆ ಪೊರಗೈದಿದಡುಮಿವಳ-।
ನಳುಕುತ್ತಲುಂಡಡುಂ ಮತ್ತೆ ಯುಣದಿರ್ದಡುಂ ಬೈದು, ಬಡಿವಳ್ ಪದ್ಮೆಯು; ॥
ಕಳಕಳಿಯ ತೋರುವಳ್ ಸೊಸೆಯೆಂದು ಜನರಿದಿರೊ-।
ಳಳುಕದಲೆ ತನ್ನ ಮರ್ಯಾದೆಗಂ ನುಡಿಗಳಂ ।
ನಳಿನಾಕ್ಷಿ ಸಹಿಸುವಳ್ ಗುರುಸಿದ್ಧ-ನಾಮಮಂ ನೆನೆಯುತ್ತೆ ಸುಮ್ಮನಹಳು; ॥೬॥

ದಾನದ ಸ್ವಭಾವಮಂ ಬಿಡಲಿಲ್ಲ ಸೋಮಲೆಯು; ।
ದೀನ-ದಲಿತರಿಗಾಗಿ ತವರ ಮನೆಯಿಂ ತರಿಸಿ ।
ದಾನಗೈಯ್ಯುವಳಾಕೆ ತನ್ನತ್ತೆಗುರೆ ಬೆದರಿ ತಿಳಿದಡುಂ ತದ್ವೃದ್ಧೆಯು ॥
ಮೌನಮಂ ತಳೆಯದೆಲೆ ಬಯ್ಯುತ್ತಲಿರ್ದಪಳ್; ।
ಮಾನನಿಯು ಸಹಿಸಿಕೊಳ್ವಳ್ ದೈವಮಂ ಪಳಿಯು-।
ತೇನು ಕಾರಣಮಿಲ್ಲದಲೆ, ಬಡಿಯುತೀರ್ಪಾಗ "ಗುರುಸಿದ್ಧ"ಯೆನುತಿರ್ದಳು; ॥೭॥

ಆಗ ತತ್ಪತಿಯೆಲ್ಲಿಯೋ ಯಿರ್ದನಾತಂಗೆ।
ತಾಗದಲೆ ಬಡಿತಗಳ ನೋವು ತೋರು ತಿರಲ್ಕೆ, ।
ವೇಗದಿನವಂ ಮನೆಗೆ ಬಂದು, ನೋಡುತಿರಲ್ಕೆ, ಕೇಳುತಿರೆ ಬಡಿವ ಶಬ್ದಂ ॥
ಸಾಗುತಂ ಕದವ ತೆಗೆದೊಳಗೆ ನೂತೆಗೆ ಬಯ್ಯ-।
ಲಾಗಳಾ ತಾಯಿ ವ್ಯಭಿಚಾರ ದೋಷವ ಹೊರಿಸಿ; ।
ನೀಗಿ ಕಕ್ಕುಲತೆಯಂ; ಮತ್ತೆ ಬಡಿಯುತಿರಲ್ ಮಹಾಂತಪ್ಪಗಾ ಬಡಿತವು ॥೮॥

ಬೀಳುತಿರಲಾ ತಾಯ್ಗೆ ಕೈಮುಗಿದು ಬಿಡಿಸುತ್ತೆ, ।
ತಾಳುತಂ ಖೇದಮಂ; ಯೋಚಿಸುತ್ತೀರ್ವರುಂ ।
ಪಾಳು ಹಗೆಯೊಂದರೋಳ್ ನಟ್ಟಿರುಳೊಳೊಯ್ಯುತೊಗೆದರ್ ಸೋಮಲೆಯು ಬೆದರದೆ;
ಮೇಳಿಸಿದ ಸುಕೃತದಿಂ "ಗುರುಸಿದ್ಧ"ಯೆನುತಿರಲ್ ।
ಭಾಳ-ಲೋಚನ-ಸಮಂ ಬಂದೆನೌ ಸುತೆಯೆನುತೆ ।
ಬೀಳಗುಡದಂತೆ ಪಿಡಿಯುತ್ತು ಪಚರಿಸಿದಂ, ಹಿತವಾಗುವಂತವಳಿಗೆ; ॥೯॥

ಅಸಿತರೋಳ್ ಹಗೆಯದಂ ಮುಚ್ಚುತಿರೆ ಕಲ್ಲಿನಿಂ; ।
ಘನಗುರುವು ವೃದ್ಧ-ವೇಷದೆ ಪೋಗಿ, ಮನೆ ಮನೆಗೆ, ।
ಸನಕಾದಿ-ನುತನೈದಿ ಪೇಳುತಲದಂ ಪ್ರಚಾರಂಗೊಳಿಸಿದಂ ಕ್ಷಣದೊಳೆ; ॥
ಜನತೆಯಾಗಲ್ಲಿಗೈದುತ್ತೆ ಶಿಲೆಯಂ ತೆಗೆದು ।
ಮನದೆ ಮರಗುತ್ತೆ, ಕಾಣುತೆ ಸೋಮಲಾಂಬೆಯಂ; ॥
ವಿನಯದಿಂ ಪೊರಗೆ ತೆಗೆಯುತ್ತಲತಿ ರೋಷದಿಂ ಪದ್ಮೆಯಂ ತತ್ಸುತನನು; ॥೧೦॥

ಎಳೆದು, ವೊಯ್ಯುತಿರಲ್ಕೆ ಬಿಡಿಸಿ, ಗುರುಸಿದ್ಧಪದ-।
ನಳಿನ; ಲೀಲೆಯಿದೆಂದು ಸೋಮಲಾಂಬೆಯು ಪೇಳಿ, ।
ಬಳಿಕಮಾ ಹುಬ್ಬಳ್ಳಿ ಬಿಲ್ವಾಶ್ರಮಕೆ ಸರ್ವರಂ ಕರೆದುಕೊಂಡೈದುತೆ, ॥
ನಳಿನಾಕ್ಷಿಯಾ ಗುರುವರನನಖಿಲ ಜನರೊಡನೆ ।
ಚಳಿಸದಲೆ ನಿಂದು ನುತಿಸುತ್ತಿರಲ್ ನಲಿಯುತ್ತೆ ।
ಮಿಳಿತ-ಕರುಣಾ-ದೃಷ್ಟಿಯಿಂ ನಿಖಿಳರಂ ನೋಡುತ್ತೈದಿದಂ ಗವಿಯಿಂದವಂ; ॥೧೧॥

ಸರ್ವರೆರಗುತಿರಲ್ಕೆ ಪದ್ಮಮ್ಮನಂ ನೋಡಿ ।
ಶರ್ವ-ಸಮನಿಂತೆಂದನೆಲೆ "ತಾಯೆ ಪದ್ಮಾಂಬೆ, ।
ಯುರ್ವಿಯೋಳ್ ಜನಿಸಿದ ಬಳಕ, ಮಾನವರರಿತು ನಡೆಯದಿರ್ದೊಡೆ ಕೆಡಕಿದು ; ॥
ಉರ್ವರೆಯೊಳಿರ್ಪಾಗಳಪ್ಪುದಾ, ತಿಳಿದವರ್ ।
ಪರ್ವಕಾಲಮಿದೆಂದು ಜೀವನವ ಪಾವನವ ।
ಪೂರ್ವ ಸಜ್ಜನರಂತೆ ಮಾಡಿಕೊಂಡುಳಿಯುವದು ಮನುಜ-ಕರ್ತವ್ಯಮಿದುವೆ; ॥೧೨॥

ಕಡು ಲೋಭಮಿರಲಾಗದಾ ಮಾನವರ್ಗರಿಯೆ; ।
ಪೊಡವಿಯೊಳಗಿದರಿಂದಲಧಿಕ ದುರ್ಗುಣಮಿಲ್ಲ; ।
ಮೃಡನೊಲಿಮೆಯಂ ಪಡೆಯಲಿರವೇಳ್ಕು ಸದ್ಭಕ್ತಿಯದಕುದಾರತೆ ವೇಳ್ಕರಿ; ॥
ಪಿಡಿಯುವೇಳ್ಕಿದಕಾಗಿ ದಾನ ನೇಮಮನೊಪ್ಪಿ, ।
ಕೊಡುವುದೀ ದಾನದರ್ಥಂ ತಿಳಿದು ಸತ್ಪಾತ್ರ-।
ದೊಡವೆರೆದು, ಕೊಡವೇಳ್ಕನಾಥಾಂಗ-ವಿಕಲರ್ಗೆ ಯೋಗಿಗಿದು ಸತ್ಪಾತ್ರವು;

ಸಿನಗೆ ದಾನವ ಗೈವುದಾಗದಿರ್ದಡುಮರಿದು, |
ಜನಕರಿಯುದಲೆ ತವರ ಮನೆಯಿಂದೆ ಧನವ ತವ |
ವಿನುತಳಾಗಿಹ ಸೊಸೆಯು ತರಿಸುತ್ತೆ, ದಾನಮಂ ಗೈದು; ಜಸಮಂ ಕೊಟ್ಟೊಡೆ; ||
ಘನತೆಯಲ್ಲವೆ; ನಿಮ್ಮ ವಂಶಕ್ಕೆ? ತಿಳಿದಿಡುಂ ।
ಘನಕೋಪದಿಂ ಬಡಿದು, ಬಯ್ವುದೇತಕ್ಕದರಿ-।
ನನುವಿಂ ವಿಚಾರಿಸೌ; ನರಕಮಾಗದೆ, ನೋಡುತಿನ್ನಾದಡುಂ ತಿರ್ದಿಕೊ;" ||೧೪||

ಎಂದು ಪರಸುತಲೆಲ್ಲರಂ ಕರುಣೆಯಿಂ ನೋಡು-|
ತಂದದಿಂ ಶುಭಮಾಗಲೆಂದು ಪರಸುತ್ತವರಿ-|
ಗಂದು ಮಿಗೆ ಯಪ್ಪಣೆಯು ಗೈವುತಿರಲಲ್ಲಿಯೆ ಗಣಾರಾಧನೆಯ ಗೈಯ್ಯುತೆ, ||
ಚಂದದಿಂ ತಮ್ಮೂರ್ಗೆ ಮೋದದಿಂ ನಲಿಯುತ್ತೆ ।
ಬಂದು, ಮನೆ-ಮನೆಯಲ್ಲಿ ತಲ್ಲೀಲೆಯಿಂ ತಿಳುಪಿ, |
ಸಂದಿದಾನಂದದಿಂದಿರುತಿರಲ್, ಸಜ್ಜನರ್ ನೆರೆದು ಪೊಗಳಿದರೆಂತೆನೆ ||೧೫||

ಓರ್ವನೆಂದಂ ಕೇಳಿರೈ "ಲೀಲೆಯಿದು ಜನಕೆ ।
ಶರ್ವ-ಭಕ್ತರ ಚರಿತ್ರಂಗಳೋಳ್ ನಿಷ್ಠೆಯನ-|
ಪೂರ್ವಮೆನೆ, ಪುಟ್ಟಿಸಿಹುದೆನ್ನಯ ಸುದೃಷ್ಟಾಂತಮಂ; ಪೇಳ್ವೆ"ನೆಂತೆನಲ್ಕೆ ||
ಪೂರ್ವದೋಳ್ ಬಸವೇಶನರಮನೆಯೊಳಿರ್ಪಾಗ |
ಸರ್ವಕಾಗಿಯೆ ಪಾಲ ತರುವ ಗೊಲ್ಲತಿ ಜಾರು-|
ತುರ್ವಿಯೋಳ್ ವೃಷ್ಟಿಯ ವಿಶೇಷದಿಂ ಬೀಳುತಿರೆ "ಬಸವ"ಯೆನುತುಳಿದಳೆಂದು ||

ಕೇಳಿರುವೆನದುವಿಂದು ದಿಟಮಾಯಿತೆಂದೆನಲ್ |
ತಾಳಿ ಹರುಷವ ಮತ್ತಮೋರ್ವನೆಂದಂ ತಿಳಿದು |
ಭಾಳಲೋಚನ-ಸಮಂ ಬಸವೇಶನುದಿಪಾಗ ಸಂಗಮೇಶ್ವರನೈದುತೆ ||
ತಾಳುತಂ ಗುರುಲೀಲೆಯಿಂ ಲಿಂಗಮಂ ಧರಿಸಿ, |
ಮೇಳವಿಸಿ ದೀಕ್ಷೆಯಂ, ಪೋದನೆಂದಾಂ ಕಥೆಯ |
ಕೇಳಿ, ನಗುತಿರ್ದೆನೀಗದು ಸತ್ಯಮಾಯಿತ್ತು "ಗುರುಸಿದ್ಧ"ಲೀಲೆಯೆಂದೆ; ||೧೭||

ಮತ್ತ ಮೋರ್ವಂ ನುಡಿದನೆಂತೆನಲ್ "ಕೇಳಿರೈ |
ಸತ್ತಮನ ಮಾಡಲಿಚ್ಛಿಸಿ, ಬೇಡನಂ ಶಿವಂ |
ಚಿತ್ತವೊಪ್ಪಲ್ಕವನ ಕನಸಿನೊಳಗೈದುತ್ತೆ, ಲಿಂಗಮಂ ತೋರ್ದನೆಂದು ||
ತತ್ತರಿಸದಾಂ ನಗುತ್ತಿರ್ದನೀ ಯತಿಯ ಸಲೆ |
ಚಿತ್ತರದ ಲೀಲೆಯಿಂ ನಿಜಮಾಯಿತೆಂದೆನಲ್–!
ಲ್ಯುತ್ತಮರ್ ಸರ್ವರಹುದುಹುದೆಂದು, ಮೆಚ್ಚುತ್ತೆ ಭಕ್ತರಾದರ್ ಗುರುವಿಗೆ; ||೧೮||

 

ಅನಿತರೊಳ್ ಮತ್ತೊಂದು ಲೀಲೆ ಜರುಗಿತ್ತದೇ–|
ನೆನೆ ಪೇಳ್ವೆನಾಲೂರಳೋರ್ವ ಭಕ್ತಂ ಮೆರೆವ–|
ನನಘನಾತನ ಪೆಸರ್ ''ಗುರುವಪ್ಪ"ನೆಂದಿಹುದು; ಸತಿಯಿರ್ದಳೋರ್ವಳವಗೆ; ||
ವನಿತೆ ಯಾಕೆಯ ಪೆಸರ್ "ಲಲಿತೆ''ಯಂದಿಹುದಾಕೆ |
ಘನ ಸಾಧ್ವಿಯಾಗಿ ವ್ರತ–ನಿಷ್ಠಳಾಗಿಹಳವಳ್; |
ಘನತೆಯಿಂ ಗುರುಸಿದ್ಧ–ಭಕ್ತೆಯಾಗಿರ್ದುಮುರು ವರದ–ಶಂಕರಪೂಜೆಯ; ||೧೯||

ನೇಮಮಂ ಪಿಡಿದಿಹಳ್ ಗಂಡನುರು ಹಿತಕಾಗಿ |
ಕೋಮಲೆಯ ಯಾ ವ್ರತಕೆ ಗುರುವಪ್ಪಗೆಳ್ಳನಿತು |
ಪ್ರೇಮಮಿರಲಿಲ್ಲವಂ ಬೇಡವೆಂದಡುಮಾಕೆ ಬಿಡಲಿಲ್ಲ ಮೊರ್ಮೆಯಾತಂ ||
ಕ್ಷೇಮದಿಂ ಜರುಗಿರಲ್ ಪುಸ್ತಕವ ಕದಿಯುತ್ತೆ |
ಭಾಮಿನಿಗೆ ತಿಳಿಯದಂದದೆ ಪರಿದು ಚಲ್ಲಿದಂ |
ಶ್ರೀಮತಿಯು ಲಲಿತಾಂಬೆ ಬೇರೆ ಹೊತ್ತಿಗೆಯ ತರಿಸುತ್ತೆ ಗುರುವಂ ನೆನೆಯುತೆ||೨೦||

ಮತ್ತೆ ಪ್ರಾರಂಭಿಸಿದಳೀಕೆ ಯಾ ಛಲಕಾಗಿ |
ತತ್ತರಿಸಿ ಕೋಪದಿಂ ನದಿಯಲ್ಲಿ ಚಲ್ಲಿದಂ; |
ಹೊತ್ತಗೆಯ ಸಹಿತಮಾಗಿಯೆ ಲಲಿತಾಂಬೆಯಂ ಮಧ್ಯ ರಾತ್ರಿಯ ಸಮಯದೆ ||
ಬಿತ್ತರದ ಮಳೆಗಾಲಮಾ ಕಾಲಮದರಿಂದೆ |
ಸತ್ತಳೆನ್ನುತೆ ಬಂದು, ಮನೆಯೊಳ್ ಮಲಂಗಿದಂ |
ಸತ್ತಮನ "ಗುರುಸಿದ್ಧ"ನುರು ನಾಮಮಂ ನೆನೆಯುತಿರ್ದಳಾಕೆಯು ಬೆದರದೆ||೨೧||

ಭಕ್ತಿ ಯೀ ಬಲದಿಂದ ಗಿಡವೊಂದವಳ ಕೈಗೆ ।
ಭಕ್ತ-ರಕ್ಷಕನೊಲಿದು ಕಳುಹಿದನೊ ಯೆಂಬಂತೆ ।
ಶಕ್ತಿಯಿಲ್ಲದೆ ಮುಳುಂಗುತಿರಲ್ಕೆ ಪರಿಯುತ್ತೆ ಬಂದು ದೊರೆದಿಹುದಾಗಳೆ ॥
ಯುಕ್ತಿಯಿಲ್ಲದಲೆಸೆದ ಪುಸ್ತಕಮದೇ ಮರದೆ ।
ಯುಕ್ತಮಾದುದು ಬೀಳ್ದು ಲಲಿತಾಂಬೆಯಲ್ಲಡರಿ ।
ಸಕ್ತಿಯಿಂ ಕೊಂಡಳದನಾ ಲಲನೆ ಗುರುನಾಮಮಂ ಬಿಡದೆ ನುಡಿಯುತ್ತಲೆ; ॥೨೨॥

ಹೊಳೆ ತುಂಬಿ ಬಂದಿಹುದು; ತಟ್ಟನೈದಿಹುದಿಲ್ಲಿ; ।
ಸೆಳೆತಕ್ಕೆ ಕೀಳ್ತ ಮರನದನವಳ್ ಪಿಡಿಯುತ್ತೆ; ।
ನಳಿನಾಕ್ಷಿಯಾ ಗುರುವನುರೆ ನೆನೆಯುತೇರುತ್ತೆ ಭಯಮಿಲ್ಲದಲೆ ಶಾಂತಿಯೋಳ್ ॥
ಕುಳಿತಿರ್ದಳಾ ಮಹಿತೆ ಲಲಿತಾಂಬೆ ಭಕ್ತಿಯೋಳ್ ।
ಮಳಿನಮಿಲ್ಲದ ಮಹಾ ಗುರುಸಿದ್ಧನಂಬಿಗನ ।
ಮಿಳಿತವಹ ಕನಸಿನೊಳಗೈದುತ್ತಲೆಚ್ಚರಿಸಿ, ಕಳುಪಿದಂ ನದಿಗಾತನಂ; ॥೨೩॥

"ಗುರುಸಿದ್ಧ, ಗುರುಸಿದ್ಧ"ಯೆಂಬ ನಾಮಮನಾಕೆ ।
ಸಿರುತಮುಚ್ಚ ಧ್ವನಿಯೊಳಾಗ ನುಡಿಯುತ್ತಿಹಳ್; ।
ಭರದೊಳಂಬಿಗನಲ್ಲಿ ದೀಪಮಂ ಕೊಂಡೊಯ್ಯುತರಿದು ನಿರುಕಿಸುತಾಗಳೆ ॥
ಪೊರೆಯಲ್ಕೈದಿದೆನವ್ವ, ನೀನಂಜದಿರೆನುತ್ತೆ, ।
ಕರವಿಡಿದು, ಪರಿಗೋಲಳೊಲಿದು ಕುಳ್ಳಿರಿಸುತ್ತೆ ।
ಕರೆತಂದನಾಕೆಯಂತಿರಲ್ಕೆ ಸಲುಹುತ್ತೆ, ತಾಂ ಬಂದ ಕಥೆಯನೊರೆದು ॥ ॥೨೪॥

ಸಜ್ಜನರ ನೆರೆಯಿಸುತೆ, ಕಥೆಯನಿದನೊರೆಯಲ್ಕೆ ।
ತಜ್ಜನತೆ ಯಾಕ್ಷಣದೆ ತತ್ಪತಿಯ ಕರೆಯಿಸುತೆ, ।
ತಜ್ಜನನ-ಮರಣ-ವಿರಹಿತನ ಗುರುಸಿದ್ಧೇಶನಡಿಯೊಳವನಂ ಕೆಡುಹಲು ॥
ತಜ್ಜನಿತಮಾದ ತಪ್ಪಿಂಗೆ ಶಾಸನಮನಾ ।
ಸಜ್ಜಿತಂ ಗೈಯದಲೆ ಗುರುವಪ್ಪ ಯೇಳೆನುತೆ ।
ಲಜ್ಜೆಯಂ ಪುಟ್ಟಿಸಿದನವನ ತಲೆಯಂ ಮುಟ್ಟಿ ದುಃಖಿಸುತಲಾ ಕ್ಷಣದೊಳೆ ॥೨೫॥

ಪದದ ಮೇಲುರುಳುತ್ತೆ, ತಪ್ಪಂ ಕ್ಷಮಿಸೆನಲ್ಕೆ ।
ಪದುಳ್ದಿಂತು ಮಾತನಾಡಿದನಾಗಳಾ ಗುರುವು; ।
ಮುದದೊಳಿಂತೊರೆದನೈ ಗುರುವಪ್ಪ ನೀನಿನ್ನು ಮಾದಡುಂ ಪ್ರಾಜ್ಞನಾಗೈ; ॥
ಪುದಿದು ನಷ್ಟಂ ಮೂರ್ಖತನದೆ ಸಂಭವಿಸುವದು; ।
ಪದುಳ್ದು ಬಡಿಯುತ್ತೆ ಸತಿಯಂ ಪೊಳೆಗೆ ಚಲ್ಲಲವ- ।
ಳುದಿತ ಹರ್ಷದೆ ಪೇಳು: ಗೈದಿಹ ಪ್ರಮಾದವೇಂ? ಸುಶಿವ-ವ್ರತವ ಗೈವಳು;॥ ೨೬॥

ನಿನ್ನ ಮನೆಗೆಲಸಕ್ಕೆ ತೊಂದರೆಯ ಮಾಡದಲೆ, ।
ನಿನ್ನೆಯ ಹಿತಕ್ಕಾಗಿ ಶಿಷ್ಟನೇಮವ ಚರಿಪ- ।
ಳುನ್ನತನೆ ಯಿದರಲ್ಲಿ ಯಿವಳ ತಪ್ಪೇನಿಹುದು ದಾಸಿಯಂತಿಹಳು ಮನೆಯೋಳ್; ॥
ಸನ್ನುತ ಪತಿವ್ರತೆಯ ಕಂದಿಸಲ್ ನಿನಗಿನ್ನು ।
ಬನ್ನವೆಂದೆಂದಿಗುಂ ತಪ್ಪದು; ವಿಚಾರದಿಂ ।
ಭಿನ್ನನಾಗದೆ ವರ್ತಿಸಿವಳ ಸಂಗಡಮರಿದ್ದು, ಬಾಳು; ಸುಖಮುಪ್ಪುದನಿಶಂ; ॥೨೭॥

ಆಕೆಯಂ ನೋಡಿ ಗುರುವೆಂದನೆಂತೆನಲವ್ವ ।
ಲೌಕಿಕರ ತೆರದೆ ಲಿಂಗಾರ್ಚನೆಯ ಮರೆವುದಂ ।
ಸಾಕುಬಿಡು; ಬೇರೆ ವ್ರತಮಂ ಮಾಳ್ಪ ಕಾಂಕ್ಷೆಯಿಂ ನಿನಗೆ ಹಿತಮಾಗದಿನ್ನು; ॥
ಶೋಕ-ವಿರಹಿತಳಪ್ಪೆ; ಲಿಂಗಮಂ ಪೂಜಿಪೊಡೆ ।
ಲೋಕಮೀ ವೈಭವವ ಮೋಕ್ಷವ ಪಡೆವೆ, ಪತಿಯೊಡನೆ;
ಪಾಕ ಶಾಸನ-ವಂದ್ಯನಹ ಶಿವಂ ನಿಮ್ಮೀರ್ವರೀ ಬಾಳ್ಗೆ ಸೊಗಮನೀಗೆ; ॥೨೮॥

ಎಂದು ಪರಸುತ್ತಲಾ ಲಲಿತಾಂಬೆಯೊಡನಿರ್ಪ ।
ಮಂದಿಯಂ ಕರುಣೆಯಿಂ ಹರಸುತಪ್ಪಣೆಯಿತ್ತಂ: ।
ವಂದಿಪರ್ಗಲ್ಲದಲೆ, ತನ್ನಂ ಬಿಡದೆ ನಿಂದಿಪರ್ಗುಂ ಸುಖವ ಬಯಿಸುತೆ ॥
ಚಂದದಿಂ ಶಿವಪೂಜೆಯಂ ಮಾಡುತಿರುತಿರ್ದ- ।
ನೆಂದಿನಂದದೆ ಗವಿಯಳೋಲೆಯುರು ಮಠದೊಳಾ– ।
ನಂದದಿಂ ಶಿವಯೋಗಿಯೇನನುಂ ಬಯಸದಲೆ ಶಿವನಂತೆ ನಿರ್ಲಿಪ್ತನು ॥೨೯॥

ಮೆರೆಯುವಾಲೂರಿಂದೆ ಹುಬ್ಬಳ್ಳಿಯನಕಮೀ- ।
ಯುರುವಾರ್ತೆ ಪರ್ಬಿಹುದು; ಜನತೆಯಲ್ಲಲ್ಲಿ ಕೂ- ।
ಡಿರುತ್ತೆ, ತಲ್ಲೀಲೆಯಂ ಬಣ್ಣಿಸುತ್ತಿಹುದಿಂತು ನೆರೆದವರೊಳೋರ್ವನೆಂದಂ ॥
ಹರಸಮಂ ಬಸವೇಶನೊಲಿದು ಮುಟ್ಟಿದ ಸೀರೆ ।
ಯರಿಯಲದನಂತಮಾಯಿತ್ತೆಂದು ಕೇಳುತಾಂ ।
ಬೆರಗು ವಡೆದಿರ್ದೆನೀಗದರಿಂದೆ, ದಿಟಮಾಯಿತೈಯೆನಲ್ ಮತ್ತವೋರ್ವಂ ॥೩೦॥

ನುಡಿದನೆಂತೆನೆ "ದಾಸಿಮಯ್ಯನುರು ವಸ್ತ್ರಮಂ ।
ಮೃಡನೈದಿ, ವೃದ್ಧ ವೇಷದೆ ದಾನಮಂ ಕೊಂಡು, ।
ಕಡು ಸಿರಿಯನರಿಯದಂತಿತ್ತನೆಂದಾಂ ಕೇಳಿ, ಸಟೆಯೆಂದು ತಿಳಿದಿರ್ದೆನು; ॥
ಒಡೆಯನಹ ಗುರುಸಿದ್ಧ-ಗುರುವಿನೀ ಲೀಲೆಯಿಂ ।
ಪಡೆದೆನುರೆ ಭಕ್ತಿಯಂ ದಿಟಮಾಗಿ ತಿಳಿಯುತ್ತೆ," ।
ಸಡಗರದೆ ಮತ್ತೋರ್ವನಿಂತೊರೆದನಾ "ನಂಬಿಯಕ್ಕನಣುಗನ ಕೊಲಿಸುತೆ ॥೩೧॥

ಬದುಕಿಸಿದನೆಂದರಿದು ನಗುತಿರ್ದೆನಡಿಗಡಿಗೆ ।
ಸದಮಲನ ಪ್ರತ್ಯಕ್ಷ-ಲೀಲೆಯಿದನರಿಯುತ್ತೆ ।
ಬದುಕಿದೇಂ ಭಕ್ತಿಯಂ ಪಡೆಯುತ್ತ" ಲೆನುತಿರಲ್ ಜನತೆಯಲ್ಲಲ್ಲಿಂತುರೆ ॥
ಪದುಳ್ದು ಶರಣರ ಕಥೆಗಳಂ ಸ್ಮರಿಸಿಕೊಳ್ಳುತ್ತೆ, ।
ಪುದಿದ ವಿಶ್ವಾಸದಿಂ ಭಕ್ತಗಣಮಾಗುತ್ತೆ, ।
ಸದಯನ ಜಗದ್ಗುರುವಿನಡಿಯ ದರ್ಶನವ ಕೊಳ್ಳುತ್ತೆ ಸುಖಿಸುತ್ತಿರ್ದುದು ॥೩೨॥

* *

ಇನ್ನೊಂದು ಲೀಲೆಯಂ ಪೇಳ್ವೆನಾವುದೆನಲ್ಕೆ ।
ಚನ್ನಾಗಿ ಸನಿಹದಲ್ಲೆಸೆವ ಹಳ್ಯಾಳದೊಳ್ ।
ಬನ್ನಂ ಬಡಿಸುತಿಹುದು ಗೂಳಿಯಾಕಳವೊಂದು; ಸರ್ವರ್ಗೆ ಮೀರಿರ್ದುದು; ॥
ಭಿನ್ನಂ ಗೈಯ್ಯಲಂತೆ ಮೆಯ್ಯಗೊಟ್ಟಿರ್ದಡುಂ, ।
ತಿನ್ನುತ್ತೆ ಮನೆಮನೆಯ ಪೊಕ್ಕು ಜನತೆಗೆ ಪಾಯ್ದು-।
ಬೆನ್ನಂ ಬಿಡದೆ ಧಾವಿಸುತ್ತೆ, ಧಾವಿಸುವವರನ್ನೈದಿ ಕೆಡುಹುತ್ತಲಿಹುದು; ॥೩೩॥

ಕಟುವಾಳಿಯಾಕಳದು ಮನೆಯವರ್ ಬೇಸತ್ತು |
ಪಟುಭಕ್ತಿಯಂ ತೋರ್ದುರ್, ಗುಡಿಗರ್ಪಿಸಿರ್ದರದ- |
ರಟವಟಿಕೆ ಪೆರ್ಚಿರ್ದುರ್ದೇನನುಂ ಮಾಡಲಸಮರ್ಥರಹರೂರ ಜನರು; ||
ಕಟಕಟನೆ ಕಡಿಯುತಿರ್ದರ್ ಕೋಣ ಮಾಗಿರ್ದೊರ್- |
ದಟುಕಿನಲ್ಲಿಡುಪಾಯವ ಯೋಚಿಸುತಿರಲಾರ್- |
ಭಟಸುತ್ತಲೊರ್ವೆ ಯೂರೋಳ್ ಬರುತಿರಲೊರ್ವ ಕನ್ನಿಕೆಯು ಬೀದಿಯೋಳಿರೆ;

ಕನ್ಯೆಯಾ ಧೇನುವಂ ನೋಡಿ ಚೀರುತಲಾಗ |
ಮಾನ್ಯ ಗುರುಸಿದ್ಧಯೆಂದೊದರುತಿರಲಾ ಗೂಳಿ, |
ಯನ್ಯರೆಲ್ಲರ್ ಧಾವಿಸುತ್ತಿರಲ್, ನೋಡುತ್ತೆ ಬೀಳ್ವಬಾಲೆಯನೆತ್ತುತೆ ||
ಧನ್ಯಳಂ ತನ್ನ ಬೆನ್ನಿಗ್ಗಡಿರಿಸಲ್ಕಾಕೆಯಿಂ- |
ದನ್ಯಥಾ-ಸ್ಮರಣೆಯಿಲ್ಲದ ಮನಂ ಗುರುವಿನೋಳ್ |
ಸನ್ಯಸಿತಮಾಗುತಿರಲಾಗಳದು ಯತಿ ಯಿರ್ಪ ಬಿಲ್ವ-ವನ ಕೈದುತ್ತಲೆ; ||೩೫||

ಒದರುತಿರಲಾ ಜಗದ್ಗುರುವೈದಿ ನೋಡುತ್ತೆ, |
ಬೆದರುತಳುವಾ ಬಾಲೆಯಂ ಕಂಡು, ಕೈವಿಡಿದು, |
ಸದಮಲಂ ಕೆಳಗಿಳಿಸಿಕೊಳ್ಳುತ್ತವಳ ತಲೆಯ ಮೇಲೆ ಹಸ್ತವುನಿಟ್ಟನು ||
ಬೆದರಿಕೆಯಡಂಗುತಿರೆ ಭಕ್ತಿ ಮತ್ತಿನಿತು ಪೊಣ್- |
ಮಿದ ಕ್ಷಣದೆ ಪಾದದೋಳ್ ಬೀಳ್ದೇಳ್ದು ನಿಲ್ಲುತಿರೆ, |
ಸದಮಲೆಯ ತಾಯ್ತಂದೆ-ಬಂಧುಗಳ್ ದುಃಖಿಸುತೆ, ಬಂದು ನೋಡುತಲೆಲ್ಲವ; ||೩೬||

ಆ ಕ್ಷಣದೆ ದುಃಖಮಂ ಮರೆಯುತ್ತೆ, ಗುರುವಿನಡಿ- |
ಗೀಕ್ಷಿಸುತೆ, ಬೀಳುತೇಳುತ್ತೆ, ನುತಿಸಿದರಿಂತು |
ರಕ್ಷಕನೆ, ಭಕ್ತ-ವತ್ಸಲನೆ ಧೀನಾನಾಥಬಾಂಧವನೆ, ಶಿವಯೋಗಿಯೆ, ||
ಶಿಕ್ಷಕನೆ, ಸದ್ಗುಣ-ಸದಾಚಾರ-ಸದ್ಭಕ್ತಿ- |
ಪಕ್ಷಕನೆ, ನೀನೆಮ್ಮ ಬಾಲಿಕೆಯ ಕರುಣೆಯಿಂ- |
ರಕ್ಷಿಸಿದೆ ನೀಂ; ನಿನ್ನ ನಾಮಮಂ ನುಡಿಸುತ್ತೆ, ತವ ಲೀಲೆಯದಗೋಚರಂ; ||೩೭||

ಎಂದು ನುತಿಸುವ ಜನರ ನುಡಿಯ ನಾಲಿಸಿ, ಗುರುವು |
ಛಂದದಿಂದಿಂತೊರೆದ ನೇನಿದ್ಯೆ? ಯೆಮ್ಮನೇ- |
ಕಂದದಿಂ ನುತಿಸುವಿರಿ? ನಿಮ್ಮ ಬಾಲಿಕೆಗೆ ನೀವಿತ್ತ ಶುಭ-ಸಂಸ್ಕೃತಿಯಿದೆ; ||
ಇಂದು ಸಂರಕ್ಷಿಸಿಹುದೆಮ್ಮೊಳೀನಿಹುದರಿಯಿ-|
ರೆಂದಿನಿಂ ಭಾರತದೆ ಭಕ್ತಿ-ಸಂಸ್ಕಾರಮಂ |
ಕಂದರಿಪರ್ಾಗಳವರ್ಗೀಯುವದು, ಮೊದಲಿನಿಂ ಬಂದಿಹುದು ರೂಢಮಾಗಿ; ||೩೮||

ಅದನಾರು ಬಿಡತಿಹರವರ್ ಗಾವಿಲರ್ ತಿಳಿಯೆ; |
ಪದುಳ್ದವರ್ಗವರ ಸುತರಿಂದೆ ತದ್ ವಂಶನಾ-|
ಶದ ಸ್ಥಿತಿಯದೊದಗುವದು; ಸಗರ-ರಾಜಂ ಕುರುನೃಪಂ ಯದು-ನೃಪತಿಯಿವರೆ ||
ಮೊದಲಾದವರ ಕುಲಂಗಳ ಕ್ಷಯಮುಮಾದರ್ಶ-|
ಮಿದುಹುದ್ಯೆ; ತಿಳಿಯುತ್ತಿದಂ ಮರೆಯದಲೆ |
ಪದೆದು, ನೀವ್ ಸದ್ಭಕ್ತಿ ಸಂಸ್ಕಾರಮಂ ಕೊಟ್ಟು ಕಂಡಿರೀಸತ್ಫಲಮನೆ ||೩೯||

ಭಕ್ತಿಯಿಂ ನುಡಿದ ಗುರು-ನಾಮಮಿೀಕೆಯ ಪೊರೆದು, |
ಶಕ್ತಿಯಂ ಕಾಯ್ದು ಕೊಂಡಿಹುದು; ಸಂಸ್ಮರಣಮಿದ-|
ಶಕ್ತರಂ ಸಲಹುವುದು; ಪಾಪಮಂ ತೊಲಗಿಪುದು; ಭಕ್ತಿಯೊಂಭತ್ತರೊಳಿದು ||
ಭಾಕ್ತಿಕರೆ, ಮೂರನೆಯದಾಗಿಹುದು ಸ್ಮರಣ-ಸದ್-|
ಭಕ್ತಿಯಿಂ ಮಿಗಿಲಾದುದಿಲ್ಲ ಜಗದೋಳ್ ತಿಳಿಯೆ; |
ಭಕ್ತರಿದಕಿಟ್ಟಹರು ಪ್ರಾರ್ಥನಾ-ನಾಮಂ; ಭಜಕರಿಷ್ಟಮನೀವುದು; ||೪೦||

ಇಂತೊರೆಯುತೆಲ್ಲರಂ ಪರಸುತ್ತೆ, ಬಾಲಿಕೆಯ |
ಕಾಂತ ಮಸ್ತಕದೆ ಹಸ್ತಮನಿಟ್ಟು ಕಳುಹುತ್ತೆ, |
ಶಾಂತನಾ ಗೂಳಿಯಂ ಸ್ಪರ್ಶಿಸಲ್ಕಂದಿನಿಂ ಸಭ್ಯಮಾದುದು ತಿಳಿಯಲು; ||
ಶಾಂತಿಯಿಂ ಲೀಲೆಯಿದನರಿಯುತ್ತೆ, ಸರ್ವಜನ-|
ರಂತಮಿಲ್ಲದ ಮೋದಮಂ ತಳೆದು, ಭಕ್ತಿಯಿಂ |
ಸಂತತಂ ಕೊಂಡಾಡುತಿರ್ದರೆಂತೆನೆ ಪೇಳ್ವೆನಾಲಿಪುದು ಸದ್ಭಕ್ತರು; ||೪೧||

ಕೂಡಿದಾ ಜನತೆಯೊಳಗೋರ್ವನೆಂದಂ ಮುದದೆ, |
"ನಾಡೆ ಕೇಳಿರ್ದೆ ನಾಂ ಚೌಡಯ್ಯನೆಂಬುವಂ |
ನೋಡಿ ಗೂಳಿಯ ಕಟ್ಟಿಯಂ ಬೆತ್ತದಿಂ ಬಡಿದು, ಬದುಕಿಸಿದನೆಂದರಿಯುತೆ ||
ಮಾಡಿ ಬಿನದವ ನಗುತಲಿರ್ದೆನೀ ಕಥೆಯೆನಗೆ |
ಮೂಡಿಸಿತು ಭಕ್ತಿಯೋಜ"ಮೆನೆನಲ್ ಮತ್ತೊರ್ವ |
ನಾಡಿದಂ "ಕೇಳಿಂತು ಹುಚ್ಚಾರ್ಯನೆಂಬ ಶಿವಯೋಗಿಯುರೆ ಗೂಳಿಯಿಂದೆ; ||೪೨||

ಸೇವೆಯಂ ಕೊಳುತಿರ್ದನದು ಮಡಿಯಲಾಪೆಸರ-|
ದೋವಿ ತದ್ ಗ್ರಾಮಕಾಯಿತ್ತು "ಗೂಳಿಯ ಗುಡ್ಡ" |
ನೀ ವಸುಧೆಯೊಳಗಿರ್ದುದಾವೂರಿದೆಂತೆನ್ನುತಾಂ, ನೆನೆದು ನಗುತಿರ್ದೆನು; ||
ತೀವಿದಾನಂದದಿಂದೀ ಕಥೆಗಳಂ ಜನರ್ |
ಭಾವಮೊಪ್ಪಲ್ ಕೇಳಿ, ಗುರುಸಿದ್ಧ–ಗುರುವರಗೆ |
ಭಾವುಕ-ಮಹಾಭಕ್ತರಾಗುತ್ತೆ, ತದ್ ಯಶವ ಬೆಳೆಯಿಸುತ್ತಿರ್ದರೊಲಿದು; ||೪೩||

‡ ‡

ಲೀಲೆಯಂ ಮತ್ತೊಂದನೊರೆಯುವೆಂ ಸರ್ವ ಜನ–|
ರಾಲಿಸುತೆ ಭಕ್ತಿಯಂ ತಳೆಯುವುದದೆಂತೆನಲ್ |
ಶೀಲವಂತಾಖ್ಯೆ ಭಕ್ತನದು ಬೆಳಗಾವಿಯೊಳ್ ಚಿನ್ನಮ್ಮ ಯೆಂಬ ಸತಿಯಿಂ ||
ಮೇಲಯಿಸಿ ಸಂಸಾರಮಂ ನಡೆಯಿಸುತ್ತಿರಲ್ |
ಬಾಲನೋರ್ವಂ ಬಹುದಿನಕ್ಕೆ ಜನಿಸಿರ್ದ ನತಿ |
ಲಾಲಿಸುತೆ ಬೆಳೆಸಿರ್ದರಾತನ ಪೆಸರ್ ಶೋಭಿಸಿಹುದು 'ಚನ್ನರಸ'ನೆಂದು; ||೪೪||

ಎಂಟು ಬರಿಸದವನಾಗಿರ್ದಡುಂ ಬಹಳಮೆನೆ |
ತುಂಟನಾಗಿರ್ದನಿದು ಸಲುಗೆಯ ಪ್ರಭಾವಮತಿ |
ಕಂಟಕಪ್ರಾಯನಾಗಿರ್ದನೀತಂಗಾಗಿ ತಾಯ್ತಂದೆಗಳ್ ವ್ಯಥಿಪರು; ||
ತಂಟೆಯಂ ಮಾಡುವಂ; ತಿನುವಾಗಳುಣುವಾಗ–|
ಳಂಟಿಕೊಳ್ಳುತೆ, ಬಾಲರೊಡನಾಡುವಾಗಳುಂ |
ಬಂಟನೆನಿಸದೆ ಜಗಳಗಂಟನೆಂದೆನಿಸುತ್ತಲಪವಾದಗಳ ತರುತಿಹಂ; ||೪೫||

ಇಂತಪ್ಪ ಮಗನನೀಯದಿರ್ದೊಡೆ ಮಿಗಿಲು |
ಸಂತೋಷದಿಂದಲಿರುತಿರ್ದೆವೈ; ಶಿವ ಶಿವಾ ! |
ಕಾಂತ ಪ್ರಭೋ! ಯೆಮಗೆ ಕಷ್ಟ ಪಡಿಸುತೆ ಕೊಟ್ಟು ಸಂತಸವ ಕಳೆದೆಯಯ್ಯ; ||
ಚಿಂತಾತುರಂ ಪೆರ್ಚಿತೈ; ನಿನ್ನ ನೆನೆಯುವುದು |
ಪಿಂತಾಯಿತೈ; ಯಾವ ದುಷ್ಕರ್ಮದಿಂದೀತ-|
ನಾಂತೆಮ್ಮ ಗರ್ಭದಿಂದುದಿಸಿರಲಹುದು, ಹರನೆ! ಯೆನುತಳುವರಾ ಪಿತೃಗಳು;||೪೬||

ಇನ್ನು ಮೀ ಮಗನಿಂದಲಾವ ದುರ್ಯಶಮೆಮಗೆ |
ಸನ್ನಿಹಿತಮಪ್ಪುದೋ ಶಿವ ಶಿವ! ಯೆನುತ್ತಲಾ |
ಚನ್ನರಸನಂ ನೋಡಿ ಪಿತೃಗಳಹ ಚಿನ್ನಮ್ಮ-ಶೀಲವಂತರ್ ನೆನೆಯುತೆ ||
ಬನ್ನ ಬಡುತಂ ಚಿಂತಿಸುತ್ತಿರ್ಪ ಕಾಲದೊಳ್, |
ಚನ್ನಮೆನೆ, ಮಂಗಂಗೆ ಪೆಂಡಮಂ ಕುಡಿಸಿದಂ-|
ತುನ್ನತ ವಯಃ-ಪ್ರಾಪ್ತಿಯಾಗುತಿರೆ, ಪಾಪಕೃತಿಯಾತನೊಳ್ ಪೆರ್ಚುತಿಹುದು; |'

ಪದಿನೆಂಟನೆಯ ಬರಿಸಿದಾ ವಯೋಮಿತಿಯಲ್ಲಿ, |
ಪದುಳ್ದು ದುಸ್ಸಂಗಮಂ ಪೊಂದಿ, ದುಷ್ಕೃತಿಗವಂ |
ಪದೆದು ಸಿಲ್ಕುತ್ತಿ, ಚನ್ನರಸನೆಂಬುವ ತನ್ನ ಪೆಸರ್ಗಾಗ ಪ್ರತಿಯಾಗುತೆ ||
ಒದಗಿಹ ಪಿತನ ಶೀಲವಂತನೆಂಬಭಿಧಾನ-|
ಕೊದಗಿಸುತಲುರೆ ಮಸಿಯ; ತಾಯಿಯಾ ಚಿನ್ನಮ್ಮ-|
ನುದಿತ ನಾಮಕೆ ಕೊಳ್ಳಿಯಂ ಕೊಟ್ಟು, ವಂಶಜರ ಕೀರ್ತಿಯಂ ನಾಶಿಸಿದನು; ||೪೮||

ಆಗ ಬೇಸತ್ತವನ ತಾಯ್ತಂದೆಗಳ್ ಕಂಡ |
ಲೋಗರೊಳ್ ಪೇಳುತ್ತಲಳುತಿರಲ್, ಕೇಳ್ದೊರ್ವ-|
ನಾಗಳಿಂತೆಂದನೈ " ಸೌಮ್ಯರೆ, ಯಿದರ ಚಿಂತೆಯಂ ಬಿಡಿರಿ; ದಂಪತಿಗಳೆ ! ||
ಶ್ರೀಗುರೂತ್ತಮನ ಹುಬ್ಬಳ್ಳಿ ಗುರುಸಿದ್ಧ ಶಿವ-|
ಯೋಗಿಯಂ ನೆನೆಯಿರೈ; ಕಲ್ಯಾಣಮಹುದೆಂದು, |
ರಾಗದಿಂ ಬೆಸೆಸುತಿರಲೆಲ್ಲರೊಪ್ಪುತಿರಲ್ಕೆ, ಭಕ್ತಿಯಿಂ ನೆನೆದರವರು; ||೪೯||

ಒಂದು ದಿನದೊಳ್ ಪುತ್ರನಂ ಕರೆಯುತೀರ್ವರುಂ |
ಚಂದದಿಂ ಪೇಳ್ದರಿಂತಯ್ಯ "ನಿನಗಹುದು ಸುಖ-|
ಮಂದದಿಂ ಗುರುಸಿದ್ಧ-ಶಿವಯೋಗಿಯಂ ಭಜಿಸು; ನಿನ್ನಿಚ್ಛಿತಂ ದೊರೆವುದು |
ನಂದನಂ ನುಡಿಯನಿದನಾಲಿಸುತೆ, ನುಡಿದನಿಂ-|
ತೆಂದು" ನೀವಿರುವನಕಮೆನಗೇನು ಕೊರತೆಯಿದೆ? |
ನಿಂದು ಬೇಡಿದ ಕ್ಷಣದೆ ಧನವ ಕೊಡುವಿರಿ; ಕೊಡದಿರಲ್ ಬಡಿದು ತೆಗೆದಕೊಳ್ವೆಂ;||

ಗುರುಗಳಂ ಪಿರಿಯರಂ ನೆನೆವಿಷ್ಟಮೆನಗಿಲ್ಲ; |
ಸುರೆಯ ಸರ-ಸುಂದರಿಯ ನೆನಹಿದ್ದಡದೆ ಸಾಲ್ಗುಗ; |
ನೆರೆ ಸಿಂದೆ ಯೆನ್ನ ವಾಣಿಗೆ ಹಿತಮುದಾಗಿಹುದು; ಕೈಗೆ ಬಡಿಯುವುದಾಗಳುಂ; ||
ನೆರೆ ಕಾಲ್ಗೆ ಸುಖಕರಂ ವೇಶ್ಯಾಗಮನಮರಿಯೆ;
ಚಿರಮೆನ್ನ ಕಿವಿಗೆ ಮೋದಾವಹಂ ಸ್ತ್ರೀ ವಾರ್ತೆ; |
ಸರಿಯೆಂದು ಮಮ ಮನಕೆ ತೋರಿದಂತಾಂ ನಡೆವೆನೆಂದೆನುತಲೊಳಗೆಪೋಗಿ ||೫೧||

ತನ್ನ ದುರ್ವ್ಯಸನಕಾಗಿಯೆ ಧನವ ಕೊಳುವಾಗ, |
ಸನ್ನುತಂ ತತ್‌ಪಿತಂ ಶಿಲವಂತಂ ತಿಳಿದು, |
ಸನ್ನಿಹಿತನಾಗಿ ಗುರುಸಿದ್ಧನಂ ನೆನೆಯುತ್ತಲೋರ್ವೆ ಬಡಿಯಲ್, ತತ್‌ಸುತಂ ||
ಚನ್ನರಸನಾ ಕ್ಷಣದೆ ಬಡಿಯಲ್ ಕರಮನೆತ್ತ-|
ಲುನ್ನತಂ ಸರ್ಪಮೆಲ್ಲಿಂದಲೋ ಬಂದು, ಸಲೆ |
ಚನ್ನಮೆನಲೆತ್ತಿದಾ ಕೈಗೆ ಸುತ್ತುತೆ, ಬಿಗಿಯಲಾರಂಭಿಸಿದುದಾಗಳೆ; ||೫೨||

ಬಿಗಿತಮಂ ತಾಳದಲೆ ನೆಲಕುರುಳುತಂ ಚೆನ್ನ-|
ನೊಗುಮಿಗೆಯೊಳೊದರಲಾರಂಭಿಸಿದನುರೆ ಚೀರಿ; |
ಮಿಗೆ ಯಳುವ ಪುತ್ರನಂ ನೋಡುತಾ ಶೀಲವಂತಂ ಬಂದು, ಚಿನ್ನಮ್ಮನುಂ ||
ಮಿಗುವ ವಿಸ್ಮಯದಿಂದೆ ಗುರುಸಿದ್ಧನಂ ನೆನೆಯ-|
ಲಗಿಯದಲೆ ಬೋಧಿಸುತ್ತಿರೆ, ಜನರ್ ನೆರೆಯುತ್ತೆ-|
ಬಗೆಗೊಂಡು ಸರ್ಪದಿಂ ಮುಕ್ತಗೊಳಿಸಲ್ ಗೈದ ಯತ್ನಗಳ್ ಫಲಿಸಲಿಲ್ಲಂ ||೫೩||

ನೆನೆಯಲಾದಂ ಮಹಾಗುರುವನಾ ಚನ್ನರಸ-
ನೆನಗಿದರ ಹೊರತು ಗತಿಯಿಲ್ಲೆಂದು ತಿಳಿಯುತ್ತೆ, |
ಘನ್ನ ಭಕ್ತಿಯಂ ತಾಯಿ-ತಂದೆಗಳ ಮಾತಿನಲ್ಲಿಡುತಲುಚ್ಚ ಸ್ವರದೊಳೆ ||
ಜನತೆ ಬಿಸಿಯಾಗದಲೆ ಬೆಣ್ಣೆ ಕರಗದಿದೆಂಬು- |
ವನುಮತದ ಸದ್-ವಾಕ್ಯಮಂ ಸ್ಮರಿಸಿ ಕೊಳ್ಳುತ್ತ- |
ಲನಘ-ಲೀಲೆಯ ಕಾಣ್ಬ ಬಯಕೆಯಿಂ ಮೌನಿಯಾದುದು; ತತ್‌ಕ್ಷಣದೆ ಸರ್ಪಮೇ;||

ತೊಲಗುತಲದೃಶ್ಯಮಾಯಿತ್ತೀಳುತಾ ಕ್ಷಣದೆ |
ಚಲಿಸದುರು ಭಕ್ತಿಯಿಂ ತಾಯ್ತಂದೆಗಳ ನಮಿಸಿ, |
ನೆಲೆಸಿದಾ ಗರ್ವಮಂ ಮರೆಯುತ್ತಲನುತಾಪದಿಂ ನುಡಿದನಿಂತು ಚನ್ನಂ; ||
ಖಲನಾದ ನಿಮ್ಮ ಪುತ್ರಂಗೆ ಗುರುಭಕ್ತಿಯಂ |
ಕಲಿಸಿದಿರಿ ಮಾತಾಪಿತರೆ ಮದಪರಾಧಮಂ |
ನಲಿಯುತ್ತೆ ಮರೆಯುತ್ತೆ, ಕಾಪಾಡಿದಿರಿಂದೀಗ ನವ ಮನುಜನಾದೆ ನರಿಯೆ; ||೫೫||

ಭಕ್ತಿಯಂ ಸ್ಥಿರಗೊಳಿಸಿ ಕೊಳ್ಳಲಾ ಕ್ಷಣದಲ್ಲಿ |
ಸಕ್ತನಾಗುತೆ ಶೀಲವಂತನಾ ಸುತನೊಡನೆ |
ರಕ್ತಿಯಿಂ ಪತ್ನಿಯೊಡವೆರೆದು, ಗುರುಸಿದ್ಧಪದ-ದರ್ಶನಕೆ ತೆರಳ್ದನಾಗ; ||
ಭಕ್ತರುರು ಸುಕೃತದಿಂ ಬಿಲ್ವ-ವನದೋಳ್ ಸರ್ವ-|
ಶಕ್ತನತಿಮುದದೆ ಸಂಚರಿಸುತಿರ್ದಂ; ಕಂಡು |
ಮುಕ್ತನಂ ನಮಿಸಿದರ್, ತಾವೆ ಧನ್ಯರೆನುತ್ತೆ ಮೂವರತಿ ಭಕ್ತಿಯಿಂದೆ; ||೫೬||

ಕಂಡವರನಿಂತು ಮಾತಾಡಿದಂ ಗುರುವರಂ; |
ಪುಂಡರೀಕಾಕ್ಷನರಸನ ಕೃಪೆಯು ನಿಮಗಹುದು |
ಚಂಡ ದುರ್ವ್ಯಸನದಿಂದೀ ನಿಮ್ಮ ಸುತನರಿಯೆ ಮುಕ್ತನಾದಂ ಭಕ್ತರೆ, ||
ಖಂಡಿತಮಿದೈ ದಂಪತಿಗಳೆ, ದುರ್ನೀತಿಯಿದು |
ಪಂಡಿತವರರಂಗಾದಡುಂ ಬಿಡುವದಸದಳಂ; |
ಖಂಡ-ಪರಶುವಿನ ದಯೆ ಬಹಳವಿಹುದೈ, ನಿಮಗೆ ಸುತನಿಂದು ಸುಜನನಾದಂ ||

ಎನಿತು ಸಂಪತ್ತಿರ್ದೊಡೇಂ ಸುತಂ ದುರ್ವ್ಯಸನಿ; ।
ಯಿನಿತಾದಡುಂ ಸಾಲ್ಗು ನೀರಗುರುಳೆಯು ತೆರದೊ- ।
ಳನಿತುಂ ಕರಗಿ ಪೋಪುದಿದು, ಜಗಕೆ ತಿಳಿದ ವಿಷಯಂ, ಪೇಳ್ವದೇನಿದರೊಳೆ ॥

ಎನುತೆ ಚನ್ನರಸನಂ ಕೃಪೆಯಿಂದೆ ನೋಡುತಾ-
ತನ ಮಸ್ತಕದ ಮೇಲೆ ಕರಮನಿಡುತಿರೆ, ಶಾಂತಿ- ।
ಯನಘಮಾದಾಸ್ತಿಕ್ಯ ಸದ್ವ್ಯಸನದೋಳ್ ಪ್ರೇಮಮಚಲಮೆನೆಲೊದಗಲವಗೆ ॥

ನುತಿಸಲಾಗಿಹನಿಂತು ಗುರುವರನೆ, ಚರವರನೆ, ।
ಮತಿಯೋಳ್ ವಿವೇಕಮಂ ಮನದಲ್ಲಿ ಶಾಂತಿಯಂ ।
ಕೃತಿಯೋಳ್ ಪವಿತ್ರತೆಯನಿತ್ತು ಸಲುಹಿದೆ ಮಹಿಮ ನೀನೆಂದು ವಂದಿಸುತಿರೆ; ॥
ಅತಿಶಯದೆ ಶೀಲವಂತಂ ನುತಿಪನೆಂತೆನಲ್ ।
ಹಿತನೆ ಸನ್ನತನೆ, ಮಾಯಾತೀತ- ಜನನುತನೆ ।
ಕೃತನೆ, ಜಿತಕಾಮ, ಯೆನ್ನಂ ಪೊರೆದೆ, ಯೆಂದೆರಗಲೆಲ್ಲರಂ ಪರಸುತಿರ್ದಂ; ॥೫೯॥

ನಿರ್ವಿಕಲ್ಪಕ-ಸಮಾಧಿಸ್ಥ ಗುರುಸಿದ್ಧ, ಭೋ ।
ಸರ್ವ-ಹೃದಯ-ಸ್ಥಿತ-ತಮಸ್ಸೂರ್ಯ, ಸತ್-ಪ್ರಭೋ ।
ನಿರ್ವಿಕಾರೋತ್ತಮ-ಜಗದ್ಗುರು-ಮಹಾ ವಿಭೋ, ತ್ರಾಹಿ ವಿಶ್ವಂ ತ್ವಂ ಸದಾ ॥
ಶರ್ವರೂಪನೆ ನಿನ್ನ ಪಾದಕೃಪೆಯುಂ ಬನ್ನ-।
ಮುರ್ವರೆಯೊಳೆನಿತುಮಿಲ್ಲದಲೆ ಬರೆದಿತ್ತೆನ್ನ-।
ಖರ್ವ ಸಂಪದವ ವರ್ಧಿಸುತಿರುವ ಜ್ಞಾನ-ಕಾಂಡಂ ಮುಗಿದಾದ್ಯರೊಲಿಯೆ; ॥೬೦॥

---

ವೀರೇಶ-ಪುಣ್ಯಾಶ್ರಮಂ ಗದುಗಿನೋಳ್ ಮೆರೆವು-।
ದೋರಂತೆ ಶೋಭಿಸುವದಲ್ಲಿ ಪಂಚಾಕ್ಷರನು- ।
ದಾರಸ್ವ ಗುರುವರನ ಯೋಗದ ಸಮಾಧಿಯಿದೆ ಕುಳಿತಿಲ್ಲಿ ಗುರು ಕರುಣೆಯೋಳ್ ॥
ಸಾರಜ್ಞ ಗುರುಲಿಂಗ ಚರ ಭಕ್ತ ಕಿಂಕರಂ ।
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ- ।
ಮೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣ ಸಂಧಿ ಚತುರ್ದಶಂ ॥ ॥೬೧॥

ಅಂತು ಸಂಧಿ ೧೪ಕ್ಕಂ, ಪದಂಗಳು ಅರ್ವತ್ತೊಂದಕ್ಕಂ;
ಇಂತು, ಒಟ್ಟು ೭೧೪ ಪದಂಗಳು ಕ್ಕಂ;
—ಮಂಗಲಂ—

॥ ಶ್ರೀ ಗುರು ಬಸವಲಿಂಗಾಯ ನಮಃ ॥

# ಹದಿನೈದನೆಯ ಸಂಧಿ





॥ ಸೂಚನೆ ॥

ಮನದ ರೋಗವ ಮತ್ತೆ ಮಲರೋಗವಂ,
ಗುರುವು ।
ಘನರೋಗವಂ, ಮಗುಳ್ದು ನೈಲಿಯಯುರು
ರೋಗವಂ ।
ನೆನೆದ ಮಾತ್ರದೊಳವಂ ಪರಿಹರಿಸಿದಂ ಶ್ವೇತ ಕುಷ್ಠ ರೋಗವಸು
ಮಹಿಮಂ; ॥

* *

[ಸಂಧಿ ಪ್ರಾರ್ಥನಾ-ಪದ್ಯ]

ಕರ್ಬಿನುರೆ ಪೊಲದೊಳಗೆ ಗಜಮನಜಮಂ ಪೊಗಿಸೆ, ।
ನಿರ್ಬೆರಗಿನಿಂದಾಡು ಸೋಗೆಯನೆ ಮೆಯ್ಮುವುದು; ।
ಪರ್ಬಿದಿಕ್ಷುವನಾನೆ ಮೆಲುವದದರಂತೆನಗೆ ವಿಷಯ-ಮೋದಮನಳಿಸುತೆ ॥
ಮರ್ಬಿರದ ಸತ್ಯ ನಿತ್ಯಾನಂದಮಂ ಕೊಟ್ಟು, ।
ಕೊರ್ಬಿದೀ ಮನದ ಮದಮಂ ಕಳೆದು, ಶಿವ ನೀನೆ ।
ಯುರ್ಬುಗುಡದಂತೆಸಗಿ ತವ ಪಾದಯೂಪದೊಳ್ ದ್ವಿಪದವೋಲ್
ಬಂಧಿಸಿಕೊಳ್ಳೈ; ॥೧॥

 * *

ಶಿವ-ಪೂಜೆಯಂ ಮಾಡುತಾನಂದದಿಂ ಗುರುವು |
ಶಿವನಂತೆ ಕಂಗೊಳಿಪನರಿದು ಬರುತಿಹ ಭಕ್ತ-|
ಸಿವಹಕೊಲಿಯುತೆ ದರ್ಶನವ ಕೊಡುತಿಹಂ; ತಿಳಿಯುತವರ ತಾಪತ್ರಯಮನೆ, ||
ತವೆ ಹರಿಸುತಂ ಹರನೆ ಯಿವನೆನಿಸಿದಂ; ಮತ್ತೆ |
ಜವದೆ ಶಾಂತಿಯ ಕೊಟ್ಟು ಶಂಕರನೆನಿಪ್ಪನವ-|
ನವಿನೀತರಂ ಶಿಕ್ಷಿಪುದರಿಂದೆ ರುದ್ರನೆನಿಪಂ ಪರಮ ಗುರುಸಿದ್ಧಸು; ||೨||

ಕೆಲರಿವನ ಸ್ಮರಿಸುತ್ತೆ, ಕೆಲರಿವನ ಕಾಣುತೆ |
ಕೆಲರಿವನನರಿಯುತ್ತೆ, ಕೆಲರಿವನ ಪ್ರಶ್ನಿಸುತೆ, |
ಕೆಲರಿವನ ಸುದ್ದಿಯಂ ಕೇಳುತ್ತೆ, ಕೆಲರಿವನ ಧ್ಯಾನಿಸುತೆ ಸುಖಿಸುತಿಹರು; ||
ಕೆಲರಿವನ ಪೊಗಳುತ್ತೆ, ಕೆಲರಿವನನೊಲಿಸುತ್ತೆ, |
ಕೆಲರಿವನ ಪೂಜಿಸುತೆ, ಕೆಲರಿವನ ಪೊಗಳಿಸುತೆ, |
ಕೆಲರಿವನ ವಾರ್ತೆಯಂ ಪೇಳುತ್ತೆ, ಕೆಲರಿವನ ಸೇವಿಸುತೆ ಶಿವನಪ್ಪರು; ||೩||

ಸೇವಿಸಿಹುದಕ್ಕೊಂದು ದೃಷ್ಟಾಂತಮಂ ಪೇಳ್ವೆ-|
ನೋವಿ ತಲ್ಲೀಲೆಯಂ ಕೇಳುವದದೆಂತೆನಲ್, |
ಸೇವಿಸಲ್ಕೈದಿದಂ ತರುಣನೋರ್ವಂ ಬಿಲ್ವವನಕೆ ಸದ್‌ಭಕ್ತನಾಗಿ; ||
ಭಾವಿಕನ ಪೆಸರಿಹುದು ಗುರುಸಿದ್ಧನೆಂಬುವುದು; |
ಕೋವಿದನ ಪಿತನಾಖ್ಯೆ ಅನ್ನದಾನಪ್ಪನಿವ-|
ನೀ ವಸುಧೆಯೋಳ್ ಗುರುಸ್ಮರಣ-ಭಕ್ತಿಯ ಬಲದೆ ಮಗನನಾಗಿವನ ಪಡೆದಂ ||೪||

ಅದಕಾಗಿ ಗುರುಸಿದ್ಧನೆಂಬ ನಾಮಮನಿಟ್ಟು, |
ಮುದದೆ ಬೆಳೆಯಿಸುತೆ ವಿದ್ಯೆಯ ಕಲಿಸಿ ಭಕ್ತನಂ |
ಪದುಳ್ದು ಗೈದಿರ್ದನೀತಂಗೆ ಸುಕೃತದ ಬಲದೆ ವೈರಾಗ್ಯಮುಂಟಾದುದು; ||
ಸದಮಲನ ಹೊರತಾಗಿಯನ್ನದಾನಪ್ಪಂಗೆ |
ವಿದಿತಂಗೆ ಮಕ್ಕಳಿರ್ದಿಲ್ಲಮಾದುದರಿಂದೆ |
ಪದಪಿಂ ವಿವಾಹಮಂ ಮಾಡಲೇ ವೇಳ್ಕಿತ್ತಿದಕ್ಕಾಗಿ ನೆನೆದು ಗುರುವಂ; ||೫||

ಐದಿದಂ ತನ್ನ ನೆನಹಿನ ಸದ್-ಗುರುವಾದ |
ವೋದನಿಧಿ ಗುರುಸಿದ್ಧ-ದೇವನಂ ದರ್ಶಿಸಿ, ವಿ-|
ನೋದದಿಂದಪ್ಪಣೆಯ ಪಡೆದು ಪೋಗಲ್ ವೇಳ್ಕೆನುತ್ತಲಿಚ್ಛಿಸುತಲ್ಲಿಗೆ; ||
ಆದರದೆ ಗವಿಯ ಬಾಗಿಲಕೆ ವಂದಿಸುತಿರ್ದ; |
ಮೇದಿನಿಗೆ ಮಿಗಿಲಾದ ಸುಗುಣನಿಧಿ ಪುತ್ರನಂ |
ಮೋದಯುತನಾಗಿಹಂ ಬಂದು ಕಾಣುತಲಾಗಳನ್ನದಾನಪ್ಪನಲ್ಲಿ; ||೬||

ಹಿಗ್ಗುತಂ ನುಡಿದನಾ ನತನಾದ ಸುತಗಿಂತು |
"ಸಗ್ಗಿಗರ್ ನಮಿಪ ಗುರುವಿನ ತಾಣದಲ್ಲೆನಗೆ |
ಹಿಗ್ಗಿನ ಪ್ರಣಾಮವೊಳಿತಲ್ಲ ಮಿರಲ್ಕೆ ಮಗನೆ, ಗುರುದರ್ಶನವ ಪಡೆದೆಯಾ ? ||
ಹಿಗ್ಗಿನಿತು ನುಡಿಯುವನಿತರೊಳೆ ಗುರುಸಿದ್ಧಯತಿ |
ಯಗ್ಗಳದ ಸಂತಸವ ಬೀರ್ವ ಸ್ಮಿತವದನನುರೆ, |
ಸಿಗ್ಗಿಸುವ ಮಾತನಾಡಿದನಾಗಳೈದಿಂತು ನಮಿಸಿದೀರ್ವರನೆತ್ತುತೆ; ||೭||

"ಏನಿರೈ, ತಂದೆ-ಮಗನೀರ್ವರುಂ ಬಂದಿಹಿರಿ? |
ಮಾಸಿತರೆ, ಕಾರಣವ ನೀವೆ ಯರುಪುವದೊಳಿತು; |
ಜ್ಞಾನನಿಧಿಯಾ ನುಡಿಯನಾಲಿಸುತಲನ್ನದಾನಿಯು ಪೇಳ್ದನೆಂತೆನಲ್ಕೆ, ||
ಜ್ಞಾನಿಮಹಿತರ್ಕೆ, ತಮಗೆ ತಿಳಿಯದ ವಿಚಾರಮೇಂ ? |
ಸೂನುಗಳೆ ಯಿಲ್ಲಮೆನಗಿವನ ಹೊರತಾಗಿವಗ-|
ನೂನ ವೈರಾಗ್ಯಮೊದಗಿರ್ಪುದೆನ್ನಯ ವಂಶ-ವರ್ಧನದ ಗತಿ ಯಾವುದೈ; ? ||೮||

ಈ ವಚನಮಂ ಕೇಳ್ದು, ನುಡಿದನಿಂತಾ ಗುರುವು, |
"ಭಾವುಕನೆ, ಬಿಡು ವ್ಯಸನಮಂ; ಚಿಂತೆಯುದು ನಿತ್ಯ |
ಧಾವತಿಯ ಪಡಿಸುವ ಮನೋರೋಗಮಾಗಿಹುದು; ಸರ್ವ ರೋಗದ ತವರಿದು ||
ತಾವಕ ಸುತಂ ಲೋಕಮಾನ್ಯ ಸದ್ಗುಣಿಯಹಂ; |
ಪಾವನನಿವಂ; ನಿನಗೆ ವ್ಯಥೆಯುನೆಂತೀಯುವಂ ?|
ಸಾವಧಾನದೆ ಪೋಗು; ನಾಲ್ಕು ದಿವಸಂಗಳನಕಂ ಸೇವೆಯುಂ ಮಾಡಲಿ; ||೯||

ಎಂದಾಶಿಷಮನೀಯುತಾಗ ಕಳುಹಿದನವನ-|
ಹೊಂದಿರ್ದಮುದ ಮೆಸೆಯುತಿರೆ ಸೇವೆಯಂ ಗೈದ-|
ನಂದಾಶೆ ಮಿಗಿಲಾಗುತಿರೆ, ಭಕ್ತಿಯುರೆ ಪೆರ್ಚಲಾ ಗುರುಕೃಪೆಯು ಪೆರ್ಚಿರೆ, ||
ಪೊಂದಿರ್ದ ಶುಶ್ರೂಷೆಯಂ ದಣಿಯದಲೆ ಗುಣಿಯು; |
ಸಂದೇಹಗೊಳ್ಳದಲೆ ಮಾಡಿ ಮುಗಿಸುತ್ತಿಹಂ |
ಸಂದಿರ್ದನಾವಗಂ ಭಿಕ್ಷಾನ್ನದಿಂದೆ ಜೀವಿಸುತೆ ಗುರುಸಿದ್ಧ-ನಾಮಂ; ||೧೦||

ಒರ್ಮೆಯೊಂದುರೆ ಪಾವು ತನ್ನ ದವಡೆಯೊಳಿರ್ಪ |
ಕೂರ್ಮೆಯಾ ರತ್ನಮಂ ತೆಗೆದು ಹೊರಗಿಟ್ಟು ಸಲೆ |
ಪೆರ್ಮೆಯದರುರೆ ಬೆಳಗಿನೋಳ್ ಮೇಯುತಿರ್ದತ್ತು ದೂರದೊಳಗಂದದನವಂ ||
ಒರ್ಮೆಗಂ ನೋಡದಲೆ ತತ್ ಕಾಂತಿಯೋಜಕ್ಕೆ |
ನೆರ್ಮಿದುರು ಗುರುಸೇವೆಯಂ ಮರೆದು ಮನಮೆಳಸೆ, |
ಪೊರ್ಮಿದತ್ಯಾಶೆಯಿಂ ಕೊಳ್ಳುತಿರಲಹಿಯೈದಿತಾದಡುಂ ಮಣಿಯೊಗೆಂಪುದೆ; ||೧೧||

ಓಡುತಿರ್ದಂ ಕೊಂಡು ಬೆಂಬತ್ತಿ ಸರ್ಪಮದು |
ನಾಡೆ ಮುಂದೈದಿ ಪಿಡಿಯಲ್ಕೆ, ಗುರುನಾಮಮಂ |
ಪಾಡದಲೆ; ತಂದೆಯಂ ನೆನೆಯುತಿರೆ, ಗುರುವೈದಿ ರತ್ನಮಂ ಚೆಲ್ಲಿಸಿದನು ||
ಕೂಡೆ ರತ್ನವ ಕೊಂಡು ನಿಲದೆ, ಸರ್ಪಮದಾಗ- |
ಲೋಡುತಿರೆ, ಗುರುವರಂ ನಗುತಿಂತು ಸಲೆ ಮಾತ- |
ನಾಡಿದಂ ಕೈವಿಡಿಯುತೆಲೆ ಮಗನೆ ನಿನಗಿನ್ನುಮಾಶೆಯದು ತೊಲಗಲಿಲ್ಲಂ; ||೧೨||

ತಂದೆಯಂ ನೆನೆಯುತಿಹೆ? ಕಷ್ಟಕಾಲದೊಳದರಿ- |
ನಿಂದಿನಿಂ ತವ ಪಿತನ ಸೇವಿಸೈ;ಯವನಿಚ್ಛೆ- |
ಯಂದಮಂ ಮೀರದಲೆ, ನಿನಗೆ ಸುಖಮಹುದು ತಿಳಿ; ಗುರುಭಕ್ತಿಯೊದಗುತದುವೆ ||
ಪೊಂದಿಸುವದೈ ನಿನಗೆ ಭೋಗಮೋಕ್ಷಂಗಳಂ; |
ಸಂದೆಗವ ಬಿಟ್ಟು; ನೀನುತ್ತಮ-ಗೃಹಸ್ಥನಾ- |
ಗಿಂದು ಗಾರ್ಹಸ್ಥ್ಯ-ಧರ್ಮಂ ನೆಲಕಿಳಿಯುತಿದೆ; ಶಾಸ್ತ್ರಮಂ ತಿಳಿಸುವೆನರಿ; ||೧೩||

ಗೃಹಮೆಂದೊಡುರು ಪತ್ನಿಯುವಳೊಡನೆ ಯೊಂದಾಗು- |
ತಿಹನೆ ನಿತ್ಯಂ ಗೃಹಸ್ಥಂ ತಿಳಿಯಲೀತಂಗೆ |
ಗೃಹಿಣಿ ಯರ್ಧಾಂಗಿಯೆಂಬಭಿಮಾನಮಿರವೇಳ್ಕದಿರ್ದಡುಂ ಶಾಸ್ತ್ರದಂತೆ ||
ಸಹಜಮೆನಲಾ ಸತಿಯ ಋತುಕಾಲಮಂ ತಿಳಿದು, |
ವಿಹಿತವಹ ನಾಲ್ಕನೆಯ ನಿಶಿಯಿಂದೆ ಷೋಡಶದ |
ಮಹಿತವಹರಾತ್ರಿಯಾ ಪರ್ಯಾಂತ ಭೋಗಮಿದೆ; ಯಿದನರಿದು ಭೋಗಿಸುವದೆ; ||

ಧರ್ಮಮರಿ ಯಿದುವೆ ಸದ್ ಬ್ರಹ್ಮಚರ್ಯಂ; ಶ್ರುತಿಯ |
ಮರ್ಮವಾಕ್ಯಂ; "ಋತೌಭಾರ್ಯಾ ಮುಪೇಯಾತ್" ಸು-
ಶರ್ಮಕರಮಿದೆ ದಿವ್ಯಸಂತತಿಯನೊದವಿಪುದು; ಮಿಕ್ಕ ದಿವಸಂ ನಿಷ್ಫಲಂ; ||
ನರ್ಮಗೊಳಿಪುದು, ನೇಮರಾಹಿತ್ಯಮಿದುಹೀನ; |
ಶರ್ಮಕರ ವಿಕಲಾಂಗ ಸಂತತಿಯನೀಯ್ಯುವದು; |
ಧರ್ಮಕರ ಸುದೃಢ ಸಂತಾನಮಂ ಮಿತಮಾಗಿ ಪಡೆಯಯ್ಯ,ಹಿತಮಪ್ಪದು;||೧೫||

ಎನುತಲಾಶೀರ್ವದಿಸಿ, ಗುರುವವನ ಕಳುಹಿದಂ; |
ವಿನುತನಪ್ಪಣೆಯಂತೆ ಗುರುಸಿದ್ಧ-ನಾಮಕಂ |
ಘನ ಲೀಲೆಯೆಂದೊರ್ಮೆ ಶೋಕಿಸುತೆ, ಮತ್ತೊರ್ಮೆ ವಿಸ್ಮಯಿಸುತಂ, ಸ್ವಗೃಹಕೆ||
ಜನಕಂಗೆ ವಂದಿಸಿದನೈದಿ; ತದ್ ವಾರ್ತೆಯಂ |
ವಿನಯದಿಂದರುಹುತ್ತಲಚ್ಚರಿಯ ಪುಟ್ಟಿಸುತೆ, |
ಸನಕಾದಿ-ನುತನ ಮಾಯೆಗೆ ಬೆರಗಾಗುತ್ತೆ ಗೆಲ್ವಪರಿಯಂ ಯೋಚಿಸಿ; ||೧೬||

ಭಕ್ತಿಯಿಂದರಿಯುತೆ, ತದಾಸಕ್ತನಾಗಿಹಂ; |
ಮುಕ್ತನೀ ಲೀಲೆಯಂ ಸಜ್ಜನರ್ ತಿಳಿಯುತಾಽಽ-|
ಸಕ್ತಿಯಿಂ ಕೊಂಡಾಡುತಿರ್ದರೊಂದೆಡೆಯಲ್ಲಿ, ಸಮ್ಮಿಲಿತರಾಗುತಿಂತು ||
"ಯುಕ್ತನೋರ್ವಂ ನಯದೆ ಸರ್ಪಮಣಿ-ದೃಷ್ಟದಿಂ |
ವ್ಯಕ್ತಮೆನಲಜಗಣ್ಣನುದ್ಧೃತಿಯ ಚರಿತಮಂ ;
ಸೂಕ್ತಮೆನೆ ಕೇಳು ದಿಂದುರೆ ಸತ್ತ ಮಾಯಿತೆ"ನ್ನೆ, ಮತ್ತೊರ್ವನಾಗೊರೆದನು; ||

"ಮಾಯೆಯ ಬಲಾತ್ಕಾರವೆಂತಹುದಿದೆಂಬುದಕೆ |
ನ್ಯಾಯವಾಗಿಯೆ ರಜ್ಜು ಸರ್ಪದೃಷ್ಟವ ನೊರೆವ- |
ರಾಯತಮಿದಲ್ಲ ಮಾಶೆಯೆಯೆಂದು ದೃಢಪಡಿಸಿ, ಪಿತೃ–ಮನೋ-ರುಜವನಳಿಸಿ ||
ಹೇಯವಹ ಸಂಶಯವ ಬಿಡಿಸದ"ನೆನುತ್ತಿರಲ್ |
ಶ್ರೇಯಮಹುದಹುದೆಂದು, ಸರ್ವರೊಪ್ಪುತಾಗ– |
ಪಾಯ-ಮಾರ್ಗವ-ತೊರೆದು, ಕಿಂಕರತೆಯಿಂ ಪಿರಿಯರಂ ಸೇವಿಸುತ್ತಿರ್ಪರು;||೧೮||

* *

ಬಂಕನಾಥನ ಪುರಮದಿಲ್ಲಿಯೋರ್ವಂ ನಿರಾ- |
ತಂಕವಹ ಮಲರೋಗದಿಂ ಬಳಲುತಿರ್ದಪಂ; |
ಶಂಕರಾಹ್ವಯನವನವಂಗಾಗಳುಂ ಬಿಡದೆ ಕಾಡುತ್ತಲಿರ್ದಪುದಿದು ||
ಬೆಂಕಿ ಬಿಸಿಲುಃರುಜಲಂಗಳ ಕಾಣಲೈದುವದು;
ಶಂಕೆಯಿಲ್ಲದೆ ಮತ್ತೆ ಚಿಂತೆಯಿಂ ಚಿತೆಯಡಸೆ, |
ಜಿಂಕೆಯಂದದೆ ಬೀಳ್ವನಾಗ ಕೈಕಾಲ್ಗಳಂ ಶಟಸುತ್ತೆ ಬಿಲ್ಲಿನಂತೆ; || ||೧೯||

ವೈದ್ಯರ್ಕಳಿದಕೆ ಕೈಮುಗಿದಿಹರ್; ಮಾಂತ್ರಿಕರ್ |
ವೇದ್ಯಂ ಮಹತ್ತರಮಿದೆಂದೋಡುತ್ತಿರ್ದರನ- |
ವದ್ಯರ್ಕಳಿದಕೆ ದೇವಸಮಾನ-ಶುದ್ಧಾತ್ಮನೇ ವೇಳ್ಕೆನುತ್ತಿರ್ದರು ||
ಆದ್ಯರ್ಕಳಂ ಕೇಳುತಿರಲೋರ್ವನಿಂದಲಾ |
ಸಾಧ್ಯ-ಪ್ರಸಿದ್ಧ-ಗುರುಸಿದ್ಧ-ಗುರುನಾಮಕಿದು |
ಭೇದ್ಯಂ; ಭಜಿಸಲಪ್ಪುದೆಂದು ತಿಳಿದಾಕ್ಷಣದೆ ನುತಿಸಲಾದಂ ಭಕ್ತಿಯೋಳ್; ||೨೦||

ವಾಣಿಯೋಳ್, ಮಾನಸದೆ ಭಾವದೋಳ್ ತನ್ನಾಮ- |
ದೂಣೆಯಿಲ್ಲದ ಸ್ಮರಣಮಾವಗಂ ನಡೆದಿಹುದು; |
ಮಾಣಿಸಿತು, ತದ್ರೋಗಮುರೆ; ಮುದಂ ಸಂಗಪ್ಪಗಾಗ ಮಿಗಿಲಾದುದರಿಯೆ; ||
ಮಾಣದಲೆ ಬಿಸಿಲಲ್ಲಿ, ಮಳೆಯಲ್ಲಿ, ವೇದಿಕೆಯ |
ತಾಣದೋಳ್, ಸಂಚರಿಸಲಾಗಿಹಂ; ಬೆಂಕಿಯಂ |
ಪಾಣಿಯೋಳ್ ಪಿಡಿದುಕೊಂಡಿರುತಿರ್ದನಾದಡುಂ, ಸುಳಿಯದಾಯಿತು ಮಲರುಜಂ||

ಕನ್ಯೆಯಂ ಕೊಡದವರ್ ಕೊಡಲ್ಕೈದುತಿರ್ದಪರ್; |
ಮಾನ್ಯನಹ ಸಂಗಪ್ಪನಣ್ಣಂಗಿದಾಗ ಸಲೆ |
ಮಾನ್ಯವರನಾಗಿರ್ದಡುಂ, ಸರಿಯಿದೆನಿಸಲಿಲ್ಲಾಸ್ತ್ರಿಯೋಳ್ ಕಾಂಕ್ಷೆಯಿತ್ತು, ||
ಅನ್ಯರೀ ರೋಗಮಂ ಪರಿಹರಿಸಲಾರದಿದು |
ಜನ್ಯ-ದುಷ್ಕರ್ಮದಿಂ ಬಂದ ರುಜಮೆನುತವನ-|
ವನ್ಯ ಶಿಲೆಯಂತಿರ್ಪ ಜೇಷ್ಠಸೋದರನಾಗಳಾಸ್ತಿಯೆಲ್ಲಂ ತನ್ನದೇ; ||೨೨||

ಆಗುವುದೆನುತ್ತೆ, ಹಿಗ್ಗಿರ್ದನವನಾ ರುಜಂ |
ಯೋಗಿ ಕೃಪೆಯಾದುದಂ ತಿಳಿಯುತುಮ್ಮಳಿಸುತ್ತೆ, |
ಗೂಗಿಯಂತಿರ್ಪಾ ನರಂ ತನ್ನ ತಮ್ಮಂಗೆ ಮಾಟವೆಸಗಲ್ ಯತ್ನಿಸೆ, ||
ಆ ಗುರುವಿನುರು ನಾಮ-ಬಲದಿಂದೆ ಸಂಗಪಂ |
ನೀಗುತ್ತೆ ತೊಂದರೆಯನುಳಿದು ಕೊಂಡಂ; ಬಳಿಕ, |
ರಾಗಮಂ ತೊರೆದು ಕೊಲ್ಲಲ್ ಪ್ರಯತ್ನಿಸುತೆ, ಸಲೆ ವಿಫಲನಾಗಿಹನಣ್ಣನು||೨೩;||

ಅನುಜಂಗೆ ಮಾಡಿದಪಕಾರ-ಬಲದಿಂದವಂ-|
ಗನುವಿನಂ ಪಿರಿಯ ಬೇನೆಯುದಡಸಿ, ಕಾಡಲಾ-|
ಗನುತಾಪಮಂ ಪಡಲೊಡರ್ಚಿದಂ; ಧನಮೆಲ್ಲಮೌಷಧಕೆ ವ್ಯಯಮಾದುದು; ||
ವಿನುತ ಗುರುವಿನ ಪೆಸರ್ ತಮ್ಮನಂ ಕಾಯ್ದಂತೆ, |
ಘನತೆಯಿಂ ತನ್ನನುಂ ಕಾಯ್ವುದೆಂದರಿಯುತ್ತ-|
ಲನಘ-ನಾಮವ ಪಠಿಸಲಾಗಿಹಂ ಸಂಗಪ್ಪನಣ್ಣನಣ್ಣಪ್ಪಾಖ್ಯನು; ||೨೪||

ಭಕ್ತಿಯಿಂ ನಾಮಮಂ ಪಠಿಸಿದಡುಮಾತನಾ-|
ವ್ಯಕ್ತ ರೋಗಂ ತೊಲಗಲಿಲ್ಲಮಾದಡುಮವಂ-|
ಗುಕ್ತ ತದ್ ರುಜ-ನಿವಾರಣೆಗಾಗಿ ಗುರುಸಿದ್ಧ-ದರ್ಶನವ ಪಡೆವುದೆಂಬ ||
ಉಕ್ತಿಯ ಸ್ಮರಣಮಾಯಿತಲ್ಲಿಂದೆ ಸನ್ನಿಧಿಗೆ |
ಭಕ್ತನಾಗುತೆ ಬಂದು, ತಚ್ಚರಣಕೆರಗುತಿರೆ, |
ಶಕ್ತಿಯಿಂ ಮಾತನಾಡಿದನಾ ಯತಿವರಂ ಕರುಣೆಯಿಂದಾಗಳಿಂತು ||೨೫||

"ಮನೆಯಲ್ಲಿ ಸೂಜಿಯಂ ಕಳೆದುಕೊಂಡಂಗಳದೆ।
ದಿನ-ದಿನದೆ ಶೋಧಿಸುವ ವೃದ್ಧನಂದದೆ, ನಿನ್ನ।
ಕನಿಕರದ ಸ್ಥಿತಿಯಾಗಿಹುದು, ಪೋಗು; ನಂದನನೆ, ನಿನ್ನಯಸುಜಂಗೆರಗುತೆ,॥
ಅನುವರಿದು ಕ್ಷಮೆಯ ಬೇಡಯ್ಯ; ನೀನೆಸಗಿರ್ಪ।
ನೆನೆಯಲಸದಳಮಾದ ದ್ರೋಹಂಗಳಂ ಮರೆಯೆ।
ನಿನಗಪ್ಪುದೈ, ಕ್ಷೇಮಮೀ ಪಿರಿಯ ಬೇನೆಯ ನಿವೃತ್ತಿಯಾಗುತೆ ತತ್‌ಕ್ಷಣಂ॥

ಈ ಮಾತನಾಲಿಸುತಲಭಿಮಾನಮಂ ತೊರೆದು,।
ಪ್ರೇಮಾತಿಶಯವ ತಳೆಯುತ್ತಲನುತಾಪದಿಂ।
ಕಾಮಾರಿ-ರೂಪನಂ ನೆನೆಯುತ್ತೆ, ಸಂಗಪನ ಚರಣದೊಳು ಪಣೆಯಿಡುತ್ತೆ॥
ನೇಮ-ಪ್ರಮಾಣಮಂ ಮೀರುತ್ತೆ ದುಃಖಿಸುತೆ,।
ಧೀಮಂತನಣ್ಣಪ್ಪನಾ ಕ್ಷಣದೊಳಾವಗಂ।
ತಾ ಮಾಡಿದಪರಾಧಗಳನಿಂತು ಪೇಳಲಾಗಿಹನದನೆ ಪೇಳ್ವೆನೀಗ; ॥೨೭॥

ಮಾಟಮಂ ಮಾಡಿಸಿದೆನದು ವ್ಯರ್ಥಮಾಯಿತ್ತು।
ಕಾಟಮಂ ಕೊಟ್ಟು ಮನೆಯಂ ಬಿಡಿಸಿ, ಸೊಲ್ಲಿಸಲ್।
ತ್ರೋಟಕತ್ವದಿನೆಸಗಿದಾ ಪ್ರಯತ್ನಂಗಳುರೆ ನಡೆಯದಾದವು ಸೌಮ್ಯನೆ; ॥
ಬೇಟದಿಂ ನೀಂ ಮಾಳ್ಪ ಗುರು-ಭಜನೆ ನಿನ್ನನದು।
ಕೋಟಿ-ವಿಪದಂಗಳಿಂ ರಕ್ಷಿಸುತ್ತಿಹುದು: ನರ-।
ರಾಟಮಂ ನಡೆಯೆಗುಡದಷ್ಟೆಯಲ್ಲಂ; ಸುರರ್ ತಲೆ ಬಾಗಿಪಂತೆಸೆಪುದು; ॥೨೮॥

ಎನ್ನನೀ ರೋಗದಿಂ ರಕ್ಷಿಸೈ; ಗುರುಸಿದ್ಧ!।
ಸನ್ನಿಧಿಯ ಕಂಡು ಬಂದಿಹೆನೆನಗೆ ನೀನೆ ಗುರು-।
ವಿನ್ನು ನೀಂ ರಕ್ಷಿಸದಿರಲ್ಕಾನು ಬದುಕೆನೆಂದುರುಳಾಡುತಿರ್ದನಳುತೆ; ॥
ಸನ್ನುತಂ ಸಂಗಪ್ಪನಣ್ಣನೀ ಕಷ್ಟಮಂ।
ಮುನ್ನಮೇ ತಿಳಿಯುತ್ತೆ, ಕರಗಿರ್ದುದುರೆ ಮನಂ।
ತನ್ನ ಕಾಲ್ಮೇಲೆ ಬೀಳ್ದುರುಳಾಡುವದನವಂ ಕಂಡು, ಕರಗಿತು ಭಾವಮುಂ; ॥೨೯॥

"ಗುರುಸಿದ್ಧ," "ಗುರುಸಿದ್ಧ"ಯೆಂದು ನುಡಿಯುತ್ತವಂ |
ನೆರೆ ಬೂದಿಯಂ ಜಲದೆ ಬೆರೆಸುತ್ತೆ; ಕುಡಿಸುತಿರ- |
ಲುರೆ ಪೆರ್ಚುತಿಹ ವ್ಯೆಯ ತೀಟೆಯಡಗಿತ್ತಾಗ ನಿದ್ರೆಯಡಸಿಹುದವಂಗೆ; ||
ಕರವೊಳಗಿನಿಂದಲಾ ರೋಗದ ಪುಳಂಗಳ- |
ಲ್ಲಿರದೆ ಕಡೆಗಾದವಾ ನಿದ್ರೆಮುಗಿವನಿತರೊೞ್ |
ಬೆರಳುಗಳ್ ಚಿಗಿತಿರ್ದವೆಲ್ಲರಚ್ಚರಿಪಂತೆ, ಸೊಗಸಿತಣ್ಣಪ್ಪನಂಗಂ; ||೩೦||

ಇದನರಿದು ಸಜ್ಜನರ್ ಪೊಗಳ್ದರೀ ಮಹಿಮೆಯಂ; |
ಸದಮಲಂ ಪೇಳ್ದನಿಂತವರೊಳೋರ್ವಂ ತಿಳಿದು |
"ಮೊದಲಿಗಾಂ ಕೇಳಿರ್ದೆ ನುರೆ ಪಿರಿಯ ಬೇನೆಯವರ್ಕೈದಿ ಶಿವಯೋಗಿ ಮಠದ ||
ಪದಪಿನದರಂಗಳದೊಳುರುಳಾಡಿ, ರೋಗಮಂ |
ಮುದಮನೈದುತ್ತಿಹಂ; ಕಳೆದುಕೊಳ್ಳುತಲಿದಂ |
ಪಡೆದು ಕೇಳುತ್ತಲಾನಚ್ಚರಿಯ ಪಡುತಿರ್ದೆನಿದು ಸತ್ಯಮಾಯಿತಿಂದು; ||೩೧||

ಮತ್ತಮೋರ್ವಂ ನುಡಿದನಹುದಹುದು ಸತ್ಯಮಿದು; |
ಸತ್ತಮರನೇಕರೀ ಗುರುನಾಮ—ಮಹಿಮೆಯಿಂ |
ಬಿತ್ತರದೆ ಸಲೆ ಬರ್ಪ ತೊಂದರೆಯನೆಲ್ಲಮಂ ಕಳೆದುಕೊಳುತಿರ್ದರೆಂದು ||
ಉತ್ತಮರ ವಾಣಿಯಿಂದರಿದು ನಗುತಿರ್ದೆ ನೈ; |
ಚಿತ್ತಕಿದು ದಿಟಮಾದುದಿಂದು, ಮಲರೋಗ-ಹೃತಿ |
ಯೆತ್ತರದ ಗುರುಸಿದ್ಧ ಚರಿತದಿಂ ಭಕ್ತಿಯುದಿಯಿಸಿತು ಪ್ರತ್ಯಕ್ಷಮಾಗಿ, ||೩೨||

ತಾಯಿಯುಪದೇಶದಿಂದುಪಮನ್ಯು, ಗುರುವಿನಿಂ- |
ದಾಯತಮೆನಲ್ ದೀಕ್ಷೆಯಂ ಪಡೆದು, ಹರನನೊಲಿ- |
ಸೀ ಯಿಳೆಯೊಳಾ ಕ್ಷೀರಸಾಗರ ದೊಡೆಯನಾದನೆಂದು ಕೇಳಿರ್ದೆನಂದು; ||
ಕಾಯವಿಡಿದರ್ಗಿಂದು ಗುರುಮಹಿಮೆ ಪ್ರತ್ಯಕ್ಷ- |
ಮಾಯಿತೆನುತಿರಲೋರ್ವ ನದನಾಲಿಸಿನ್ನೋರ್ವ- |
ನಾಯಸಮುದಿಲ್ಲದಿಂತೆಂದನಹುದಯ್ಯವನೆ; ಕೃಷ್ಣ ಪರಮಾತ್ಮ ಗುರುವು; ||೩೩||

ಎಲ್ಲರದನಾಲಿಸುತಲಹುದಹುದೆನುತ್ತಲಾ- |
ಸಲ್ಲಲಿತ "ಗುರುಸಿದ್ಧ" ಗುರುವರನ ಲೀಲೆಗಳ- |
ನುಲ್ಲಸದೆ ಪೊಗಳುತ್ತಲಣ್ಣಪ್ಪ ಸಂಗಪ್ಪರೊಡನೈದಿ ಸನ್ನಿಧಿಯೊಳೆ ||
ವಲ್ಲಭನ ಪದಕೆರಗುತಾಶಿಷವ ಪಡೆಯುತ್ತೆ |
ಬಲ್ಲವರ್ ಜಂಗಮಾರಾಧನೆಯ ಮಾಡಿಸುತೆ |
ತಲ್ಲಣಿಪ ಕಷ್ಟಗಳ ನೀಗಿರ್ದರಲ್ಲಿಂದೆ ಬಂದು ತಮ್ಮಯ ಗ್ರಾಮದೆ; || ||೩೪||

*

ಶ್ರೀ ಜಗುದ್ಗುರು-ಲೀಲೆಯಂ ಮತ್ತಮೊಂದನುರೆ |
ಭೂಜನರ್ ಮೆಚ್ಚುವಂದದೊಳೊರೆವೆನಾಲಿಪುದು |
ಸೋಜಿಗವ ಪುಟ್ಟಿರ್ಪುದದಾವುದೆನೆ, ಕಡಪಟ್ಟಿ ಗ್ರಾಮದೊಳ್ ಭಕ್ತನೋರ್ವಂ ||
ಈ ಜಗಂ ವಿಸ್ಮಯಿಪ ಲಿಂಗಾಂಗಿಯುಪನಾಮ |
ಭಾಜಕನೆನಿಪ್ಪನವನಾದಡುಂ ಲಿಂಗಮಂ |
ಮೋಜಿನಿಂ ಧರಿಸದಲೆ ಬಾಳುತಿಹನವನ ಸತಿಯವಗೆ ತಕ್ಕವಳಿರ್ದಳು ||೩೫||

ಲಿಂಗಮಂ ಧರಿಸಿದವರಂ ಕಂಡು ನಗುತಿಹರ್; |
ಮಂಗಲ ವಿಭೂತಿ-ಧಾರಕರ ನಿಂದಿಪರವರ್;
ಸಂಗತ ಶಿವಾಕ್ಷ-ಧಾರಿಗಳಂ ತಿರಸ್ಕರಿಪರಾವಗಂ ದಂಪತಿಗಳು; ||
ಸಿಂಗರದೆ ಪರದೈವ-ಭಕ್ತಿಯಂ ನೆಗಳ್ದಪರ್- |
ಭಂಗಿಪರ್ ಶಿವಭಕ್ತರಂ; ಪರರ ಪ್ರೀತಿಪರ್; |
ತುಂಗ ಸದ್ಗುಣಿಗಳವರಿರ್ದಡುಂ ಮಾಳ್ಪುದೇನಪ್ರಿಯರ್ ಲಿಂಗಜನಕೆ; ||೩೬||

ಇಂತಿರ್ದಡುಂ ಸರ್ವರಿವರನಾದರಿಸುವರ್ |
ಶಾಂತ ಪ್ರಸಿದ್ಧ ಲಿಂಗಿವರರಾದಡುಮಿವರಿ- |
ನಾಂತಿರ್ಪರುಪಕಾರಮಂ ಧಾರ್ಮಿಕ-ವಿಚಾರಮಂ ಮರೆದು ಮಿತ್ರರಹರು; ||
ಸಂತೋಷದಿಂ ಲಿಂಗಮಂ ತೆಗೆದು ಬಾಳ್ವುದಂ |
ಸಂತರ್ ಸುವೀರಶೈವರ್ಕಳರಿದಿರ್ದಡುಂ, |
ಕಾಂತೋಪಕೃತಿ ಸದ್ಗುಣಕ್ಕೆ ಮನಸೋತು, ಮೌನಿಗಳಾಗಿ ಬಾಳುತಿಹರು; ||೩೭||

ಶಿಷ್ಟ-ಸದ್ಗುಣಿಗಳಹ ದಂಪತಿಗಳಭಿಧಾನ |
ಮಿಷ್ಟಮಿದು ಶಾಂತಮ್ಮ ಗುರುಶಾಂತ ರೆಂಬುವದು |
ಸ್ಪಷ್ಟ ಸದ್ಗುಣಿಯಾದ ಸುತನಿವರ್ಗಿರ್ದನೋರ್ವಂ, ಮಹಾಂತಾಭಿಧಾನಿ; ||
ಇಷ್ಟ ಸುಂದರಸಿವಂ ಪಂಚವರ್ಷೀಯನಹ- |
ನಷ್ಟ-ಮೂರ್ತಿಯ ಕೃಪೆಯು ತಪ್ಪಿ ವ್ಯೈಲಿಯ ಘೋರ |
ಕಷ್ಟಕರ ರುಜದಿನಾವೃತನಾದನಾಗವರ್ ದೇವಿಯಂ ಭಜಿಸುತಿಹರು; ||೩೮||

ದಿನದಿನಕ್ಕದು ಪೆರ್ಚುತಿರೆ, ಚಿಂತೆಗೊಳಗಾಗ- |
ಲನುನಯದೆ ತತ್ ಸ್ನೇಹಿತರ್ ಮಹಾಗುರುಸಿದ್ಧ |
ಘನ ಮಹಿಮೆಯಂ ತಿಳುಪಿ,ತನ್ನಾಮಮಂ ಸ್ಮರಿಸಿ,ಬೂದಿಯಂ ಪ್ರೋಕ್ಷಿಸೆನಲು ||
ಅನಿತನಾದಡುಮವಂ ಗೈಯದಲೆ, ಶೋಧಿಸುತ- |
ಲನುವಿಸಿಂ ಪರದೈವಭಕ್ತಿಯಂ ಬಿಡದಿರ- |
ಲ್ಕನಘ ಗುರುವಂ ಸ್ಮರಿಪುದೆಂದು, ತದ್ದೇವತೆಗಳೈದಿ ಪೇಳ್ದರ್ ಕನಸಿನೋಳ್;

ಆಗಳಾತಂಗೆ ಗುರು ಭಕ್ತಿಯುದಿಸುತಿರಲ್ಕೆ |
ರಾಗದಿಂ ಸತಿಯೊಡನೆ ತನ್ನಾಮಮಂ ಭಜಿಸು- |
ತಾಗಳನುನಯದೆ ಬೂದಿಯಕೊಂಡು, ಪುತ್ರಾಂಗದೋಳ್ ಪ್ರೋಕ್ಷಿಸುತ್ತಿರಲ್ಕೆ ||
ರೋಗಮುದಡಂಗುತಿರೆ, ಗುರುಳಿಗಳ್ ಕರಗಲ್ಕೆ; |
ಭೋಗಿ ಭೂಷಣಸಮನ ಕರುಣೆಯಿಂ ಬಾಲಕಂ |
ಲೋಗರಚ್ಚರಿಪಂತೆ ತಿರುಗಾಡುತಿರ್ದನದನೀಕ್ಷಿಸುತೆ ದಂಪತಿಗಳು; ||೪೦||

ಗುರುಮಹಿಮೆಯಂ ಬಣ್ಣಿಸುತ್ತೆ, ಲಿಂಗವ ಧರಿಸಿ, |
ಕರೆಯಿಸುತೆ ಮಾಹೇಶ್ವರಾರಾಧನೆಯ ಗೈದು, |
ನೆರೆ ಭಸ್ಮ-ರುದ್ರಾಕ್ಷಿಗಳ ಪಡೆದು, ಧರಿಸಿದರ್ ಪಾದೋದಕವ ಕೊಳ್ಳುತೆ; ||
ಪರಮ ಭಕ್ತಿಯು ಬೆಳೆಯುತಿರೆ, ಸುತಂಗಾದಡುಂ |
ಕರಮಗಲದಂತೆ ತದ್ಧಾರಣವ ಗೈಸಿದರ್; |
ಪರತರಾಷ್ಟಾವರಣ, ಪರಮ ಪಂಚಾಚಾರ, ಷಟ್‌ಸ್ಥಲಂಗಳ ತಿಳಿದರು; ||೪೧||

ಅವರೊರ್ವರ್ ಬಂಧುಗಳೊಡನೆ ಬೆರೆದು, ಗುರುಸಿದ್ಧ–|
ಶಿವನಂಘ್ರಿ–ದರ್ಶನವ ಪಡೆದು ನಮಿಸುತ್ತಿರಲ್, |
ಸುವಿನೀತರಂ ಕೃಪೆಯೊಳೀಕ್ಷಿಸುತೆ ಕುಳ್ಳಿರಿಸುತಿಂತೊರೆದನುರು ಧರ್ಮವ ||
"ಶಿವಭಕ್ತಿಯಂ ಬಿಡದಿರ್ಪೈ; ಯೆಲವೊ ಗುರುಶಾಂತ |
ಶಿವಧರ್ಮದೊಳ್ ಪುಟ್ಟದವರುಂ ಶಿವಾರ್ಚನೆಯ |
ತವೆ ಗೈದಸಾಧ್ಯ ಶುಭ ಫಲವ ಪಡೆದಿರ್ಪರೈ; ವಿಧಿ–ಹರೀಂದ್ರ-ಪ್ರಮುಖರು; ||೪೨||

ವೈಷ್ಣವರ್ ಜೈನರುಂ ಶಿವಭಕ್ತರಾಗಿಹರ್; |
ವಿಷ್ಣು–ಭಕ್ತಂ ಮಹಾಕವಿ ಕಾಲಿದಾಸನುಂ, |
ಜಿಷ್ಣುನುತ ಶಿವಭಕ್ತನಾಗಿಹಂ ಜೈನ; ವೈಜವ್ವೆ ಶಿವಭಕ್ತೆಯಹಳು; ||
ತೃಷ್ಣೆಯೆಲ್ಲವ ಕೊಡುವ ಶಿವಧರ್ಮದೊಳ್ ಜನಿಸಿ, |
ತೂಷ್ಣಿಯಿಂದಿರದೆ, ಶಿವನಿಂದೆಯಂ ಮಾಡುತಸ–|
ಹಿಷ್ಣುವಹ ದುಃಖಕೀಡಾಗುತಿರ್ದೈ; ನಿನ್ನ ಸುಕೃತದಿಂದುಃಳಿದುಕೊಂಡೆ; ||೪೩||

ಅವನ ಸತಿಯಾದ ಶಾಂತಮ್ಮನಂ ನೋಡುತ್ತೆ |
ಶಿವ-ಸಮಂ ನುಡಿದನೆಂತೆನೆ ತಾಯೆ, ನಿನಗೇಕೆ |
ಶಿವಭಕ್ತಿಯುಂದಿಸಲಿಲ್ಲಂ ? ಬಂಧುಗಳ ತಿರ್ದಿ, ಶಿವಭಕ್ತರಂ ಮಾಡಿದ ||
ತವೆ ಯುದಾಹರಣಂಗಳಿಲ್ಲಿ ಸಾಕನಿತಿಹವು; |
ಸುವಿನಯದೆ ಕೇಳೊಂದನೊರೆಯುವೆವು; ಮೊಂಗಾಯಿ |
ಶಿವಭಕ್ತೆ; ಜಿನಭಕ್ತನಾದನುಜ ವಾಗೀಶನಂ ತಿರ್ದಿದಳ್ ಶ್ರುತಮಿದು; ||೪೪||

ಜ್ವರ-ರೋಗದಿಂ ಬಳಲ್ವ ಬುಧನಾದ ವಾಗೀಶ-|
ನುರು ಜೈನನಾಗುತೆ, ಪ್ರವಾದಿಯೆಂಬುವ ಪೆಸರ–|
ನುರು ಪಡೆದನೇಕ ಶಿಷ್ಯರ್ಕಳಂ ಮಾಡಿಕೊಂಡಿರ್ದಡುಂ, ತದ್ ವ್ಯಾಧಿಯ ||
ಪರಿಹರಿಸಲೆಲ್ಲರಸಮರ್ಥರಾಗುತಲವನ |
ನೆರೆ ಕಾಂಕ್ಷೆಯಂತೆ, ತದ್ ಭಗಿನಿಯಾಲಯಕ್ಕವರ್ |
ಕರುಣೆಯಂ ಪಡೆದಿಹರ್ ಕಳುಪಿ; ನೃಪನುರೆ ಸೇನೆ ಬೆಂಬತ್ತಲುರೆ ರಕ್ಷಿಸಿ, ||೪೫||

ಬೂದಿಯಂ ಪ್ರೋಕ್ಷಿಸುತ್ತೆ, ರೋಗಮಂ ಕಳೆಯುತ್ತ-|
ಲೈದಿದುರು ಸೈನ್ಯಮಂ ಸಂಹರಿಸುತದರಿಂದೆ |
ಮೋದಮಂ ಶಿವಭಕ್ತಿಯಂ ಪುಟ್ಟಿಸುತ್ತವಗೆ ಮೊಂಗಾಯಿಯಕ್ಕನೊಲಿದು; ||
ಆದಿ ಗುರುವರನಾದ ಪಿಳ್ಳೈನೈನಾರನಿಂ-|
ದಾದರದೆ ಲಿಂಗ-ದೀಕ್ಷೆಯ ಕೊಡಿಸೆ ನಿಷ್ಠೆಯದು |
ಸೋದರನೊಳೆಸೆಯುತಿರೆ ಪಿರ್ಗುತಿಪಳವನ ಮಹಿಮೆಗಳು ನೋಡುತ್ತಲಿಂತು||೪೬||

ಶಿವದೀಕ್ಷೆಯಂ ಪಡೆದ ವಾರ್ತೆಯಂ ಕೇಳುತ್ತೆ, |
ಕವಿದು ಜೈನರ್ ಮುತ್ತುತವನ ಬೆಂಕಿಯೊಳೊಗೆಯೆ, |
ತವೆ ವಹ್ನಿಯದೆ ಶಾಂತಮಾಯಿತ್ತು, ತತ್ ಕೇಶಗಳನಾದಡುಂ ಸುಡದಲೆ; ||
ಜವದೆ ನೃಪನಾಜ್ಞೆಯಿಂ ಕಾಲಕೂಟವ ಕುಡಿಸ-|
ಲವನಿಯರಿಯಲದಮೃತಮಾಯಿತಚ್ಚರಿಸಂತೆ; |
ನವ ಗಜವನವನ ಮೇಲಾಗಳೆ ಬಿಡುತ್ತಿರಲ್, ಮಡಿಯಿತದು ಸೈನ್ಯ-ಸಹಿತಂ;||೪೭||

ಪಟಪಟನೆ ಬೀಳ್ದು, ಜನರೆಲ್ಲರಳಿಯಲೊಡರ್ಚೆ |
ಚಟಚಟನೆ ಶರಣಾಗತರ್ ಜೈನರಾಗಲ್ಕೆ |
ಘಟಘಟಿಕೆಗನುತಾಪದಿಂ ಭಕ್ತಿಯುದಿಸುತಿರೆ, ನೃಪನೊಡನೆ ಶಿವದೀಕ್ಷೆಯಂ ||
ಮಿಟಮಿಟಿಯನೆಸಗದಲೆ ಮಾಡುತ್ತೆ, ಶಿಷ್ಯರಂ |
ತಟತಟನೆ ಮಾಡಿಕೊಳ್ಳುತ್ತೆ, ಶಿವಭಕ್ತರ್ಗೆ |
ಕಟಕಟಿಯ ತಪ್ಪಿಸುತೆ ಶಾಂತಿಯಂ ನೆಲಿಸಿದಂ; ಶಾಂತಮ್ಮ ತಿಳಿದುಕೊಳ್ಳಾ ||೪೮||

ಅವರವರಿಗವರವರ ಧರ್ಮಮೇ ಶ್ರೇಷ್ಠಮಹು-|
ದವನಿಯೊಳ್ ಪರಧರ್ಮಮುರು ಭಯಾವಹಮೆಂದು |
ಸುವಿನಯದೆ ತಿಳಿಯುತ್ತೆ, ಪ್ರೀತಿಯಿಂ ಬಾಳ್ವುದೆನುತಂ ಪರಸುತಖಿಲ ಜನರಂ; ||
ಶಿವಯೋಗಿಯಾನಂದದಿಂ ಕಳುಪಿದಂ ಬಂದು, |
ತವೆ ತಮ್ಮ ಗ್ರಾಮದೊಳ್ ಭಕ್ತಿಯಿಂ ಬಾಳ್ದಪರ್; |
ಭವರೋಗ-ವೈದ್ಯನಂ ವಿಶ್ವಗುರು-ಗುರುಸಿದ್ಧ ಯತಿವರ್ಯನಂ ನೆನೆಯುತೆ;||೪೯||

ಈ ಲೀಲೆಯಂ ಕಂಡು ಸಜ್ಜನರ್ ಬೆರಗಾಗು–|
ತೋಲಾಡುತಾನಂದದೊಳ್, ತಮ್ಮ-ತಮ್ಮೊಳಗೆ |
ಮೇಲಾದ ಭಕ್ತಿಯಿಂ ಕೊಂಡಾಡುತಿರ್ದರದನಾಲಿಸುತಲವರೊಳೋರ್ವಂ; ||
ಶೀಲಾತ್ಮನೊಂದು ದೃಷ್ಟಾಂತಮಂ ಸ್ಮರಿಸುತ್ತೆ |
ಕಾಲಕ್ಕೆ ತಕ್ಕಂತೆ ಪೇಳ್ದನೆಂತೆನಲಯ್ಯ |
"ಬಾಲತ್ವದೊಳ್ ಬಸವರಾಜನಾ ಲಿಂಗದಿಂ ಸಾಕ್ಷಿ ನುಡಿಸಿರ್ದನೆಂದು; ||೫೦||

ಕೇಳಿರ್ದೆನದುಮಿಂದು ದಿಟಮಾಯಿತೆಂದೆನಲ್, |
ತಾಳುತ್ತೆ ಮುದವ, ಮತ್ತೋರ್ವನಿಂತೆಂದನಹು |
ದಾಳಾಗಿ ದಾಸಿಮಯ್ಯನ ಸೇವಿಸುತ್ತಿರ್ದರಖಿಲ ದೇವತೆಗಳೆಂದು ||
ಮೇಳಾಗಿ ಪೌರಾಣಿಕಂ ಪೇಳ್ದೊಡಾಂ ನಕ್ಕೆ–|
ನೇಳೇಳು ಜನ್ಮಗಳ ಪಾಪಮಂ ಕಳೆಯುತ್ತೆ, |
ತಾಳಿರ್ಪ ಮೌಢ್ಯಮಂ ತೊಲಗಿಸಿತು ಲೀಲೆಯಿದೆನಲ್ಕೆ ಮೆಚ್ಚಿದರೆಲ್ಲರು; ||೫೧||

ಆತಂಗೆ ಪೇಳಲಾದರ್; ಧನಿಕನವನಿರ್ದ-|
ನಾ ತುಂಗ ಧನಿಯ ನಾಮಂ ವಿರೂಪಾಕ್ಷಪ್ಪ–।
ನೀತಂಗೆ ಕನ್ಯೆಯಂ ಶೋಧಿಸಿರ್ದರ್; ತೊನ್ನು ಪತ್ತಿದವನೆಂದು ತಿಳಿದು ||
ಖ್ಯಾತಂಗೆ ಕೊಡದಾದರವನನಾವೂರವರ್; |
ಪ್ರೀತಂಗೆ ಮಾತನಾಡಿಸದಾದರುರೆ ಬೆದರ್ದು-।
ನೀತಂಗೆ ಬಂಧುಗಳ್ ದೂರಾದರಗದೊಪಚಾರಮಂ ಮೊದಲಿಂದಲೆ; ||೫೨||

ಮಾಡುತಿರ್ದರ್ ಬಿಡದೆ ತಾಯ್ತಂದೆಗಳ್; ರುಜೆಯು |
ನಾಡೆ ಕುಂದದಲೆ ಬೆಳೆಯುತ್ತೆ ಬೆಳೆಯುತ್ತವನ |
ಕೂಡಿದಂಗವ ಪೂರ್ಣಮಾಗಿ ಸಲೆ ವ್ಯಾಪಿಸುತೆ ಸೌಂದರ್ಯಮಂ ಕೆಡಿಸಿತು; ||
ಮೂಡಿತಾ ವಿರುಪಣ್ಣನೊಳ್ ನಾಚಿಕೆಯದಾಗ ।
ಮೂಡಿದಭಿಮಾನದಿಂ ಮನೆಯೊಳಿರಲಾಗಿಹಂ |
ಬಾಡಿತೀತನ ಜೀವನಾಶಾಲತೆಯು ಮೃತಿಯ ಮಾರ್ಗಮಂ ಶೋಧಿಸುತಿಹಂ! ||೫೩||

ಪರಮಾಪ್ತ ಮಿತ್ರನೋರ್ವಂ ಬಂದು, ಮನೆಯಲ್ಲಿ।
ನೆರೆ ಹುಚ್ಚನಂತೆ ಕುಳಿತಿರುವ ಗೆಳೆಯನ ನೋಡು-;
ತುರು ದುಃಖದಿಂದೆ ಕಣ್ಣೀರ್ಗರೆದು ಕನಿಕರದೆ, ಗುರುಸಿದ್ಧ ಗುರುಲೀಲೆಯಂ ॥
ಒರೆಪಾತನೋಳ್ ಭಕ್ತಿಯಂ ಪುಟ್ಟಿಸುತ್ತಾಗ ।
ಪರಮನಾ ನಾಮದ ಮಹತ್ವಮಂ ಬೋಧಿಸುತೆ, ।
ಸರಿಯಾಗಿ ಬಿಡದೆ ಭಜಿಸೆಂದು ಪೇಳುತ್ತವಗೆ ಭಸ್ಮಮಂ ಧರಿಸಲೊರೆದು; ॥೩೪॥

ಪೋಗುತಿರಲಾ ಧನಿಯು ಭಕ್ತಿಯಂ ಬೆಳೆಯುವನು-।
ರಾಗದಿಂ ಗುರುನಾಮಮಂ ಭಜಿಸಲಾ ಬಲದೆ ।
ರೋಗಮದು ದಿನದಿನಕೆ ಕುಂದುತಿರೆ, ಮೊದಲಂತೆ ಸತ್‌ಕಾಂತಿ ಪೆರ್ಚುತಿರಲು ॥
ಸಾಗಿತಾತನ ಶರೀರವ ತೊರೆದು ಬರಬರುತೆ ।
ಲೋಗರಚ್ಚರಿಪಂತೆ ಸುಂದರತೆ ಮೊದಲಿಗಿಂ-।
ತಾಗಲಿಮ್ಮಡಿಯಾಗಿ, ಮೋದಮದು ಪೆರ್ಚುತಿರೆ ದಾಸೋಹಮಂ ನಡೆಸಿದಂ; ॥೩೫॥

ನಿತ್ಯಲುಂ ಕರ್ತೃವಿನ ದರ್ಶನವ ಪಡೆಯುತ್ತೆ, ।
ಸತ್ಯಮಾಗಿಯೆ ಸಕಲ ಸಂಪದವ ಪಡೆದಿಹಂ; ।
ಭೃತ್ಯಮಾಗಿಯೆ ಬಾಳ್ದನೆಲ್ಲರರಿಯುತ್ತಿರಲ್-ಸಜ್ಜನರ್ ಪೊಗಳ್ದರಿಂತು ॥
ನುತ್ಯಮಾಗಿಯೆ ಪುರಾಣಂಗಳೊಳಗಿಂತಪ್ಪ ।
ಸ್ತುತ್ಯ ಲೀಲೆಗಳುಂಟವಂ ಭಕ್ತಿಯುದಯಕ್ಕೆ ।
ಪ್ರತ್ಯಗಾತ್ಮರ್ ಬರೆದಿರಲ್ ಬಹುದೆನುತ್ತಲಾವ್ ತಿಳಿದಿರ್ದೆವದು ಮೀಗಳೆ ॥೩೬॥

ದಿಟ ಮಾಡುದೆಂದೆನುತೆ ನುತಿಸುತ್ತಲಿರ್ದಪರ್; ।
ಕುಟಿಲ ಬುದ್ಧಿಯ ಜನರುಮದನೀಕ್ಷಿಸುತ್ತೆ, ಸಲೆ ।
ಸ್ಫಟಿಕದಂದದೆ ತಮ್ಮ ಮತಿಯ ನಿರ್ಮಲಗೊಳಿಸಿಕೊಂಡರದ್ಭುತವೆನಲ್ಕೆ; ॥
ಜಟಿಲಮಲ್ಲವತಾರಿಗಳಿಗೀ ವಿಷಯಮರಿಯೆ: ।
ಸಟೆಯಲ್ಲ ರವಿಯೋರ್ವನಿಂ ವ್ಯಾಪ್ತಧ್ವಾಂತ-।
ಪಟಲಮದು ಹರಿಯುವದು,ಸಾಮಾನ್ಯ ಗುರುವ ಗೃಹದೀಪಮೆಂದರಿಯಲಹುದು;॥

ಈ ಪರಿಯ ಲೀಲೆಗಳನೆಸಗಿ ಪೂರ್ವಜ ಯಶವ ।
ತಾಪ-ವಿರಹಿತನೆಸೆದು, ಬೆಳೆಸುತ್ತಲಿರ್ದಂತೆ, ।
ಪಾಪಿ ಜನರೀಗಳುಂ ಸಲೆ ಪೆರ್ಚಿಹರ್; ತಿಳಿದು ಮತ್ತಮವತರಿಸಿ, ಬಂದು ॥
ಕೋಪ-ವರ್ಜಿತನಾಗಿ ರಾಜಿಸುತೆ ಭೂಮಿಯಂ, ।
ಲೇಪ-ರಹಿತಂ ಪೊರೆಯಲೆಂದಾಂ ಮುದದೆ ವಿರತ ।
ಭೂಪನಂ ಪ್ರಾರ್ಥಿಪೇಂ ಕರ್ತೃ ಗುರುಸಿದ್ಧನಂ ತ್ರಿಸಹಸ್ರ-ಮಠದೀಶನಂ; ॥೫೮॥

ವೀರೇಶ-ಪುಣ್ಯಾಶ್ರಮಂ ಗದುಗಿನೊಳ್ ಮೆರೆವು-।
ದೋರಂತೆ ಶೋಭಿಸುವುದಲ್ಲಿ ಪಂಚಾಕ್ಷರನು-।
ದಾರ ಸ್ವ ಗುರುವರನ ಯೋಗದ ಸಮಾಧಿಯಿದೆ; ಕುಳಿತಿಲ್ಲಿ ಗುರು-ಕರುಣೆಯೊಳ್ ॥
ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ ।
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ ।
ಮೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣ ಪಂಚದಶ ಸಂಧಿ ॥೫೯॥

ಅಂತು ಸಂಧಿ ೧೫ಕ್ಕಂ, ಪದಂಗಳು ಐವತ್ತೊಂಭತ್ತಕ್ಕಂ;
ಇಂತು, ಒಟ್ಟು ಪದಂಗಳು ೭೭೩ ಕ್ಕಂ.

— ಮಂಗಲಂ —

॥ ಶ್ರೀ ಗುರುಬಸವಲಿಂಗಾಯ ನಮಃ ।



# ಹದಿನಾರನೆಯ ಸಂಧಿ





॥ ಸೂಚನೆ ॥

ಹರ-ಮತಕೆ ಸೇರಲಿಚ್ಛಿಸಿ ಬಂದ ವೈಷ್ಣವಂ- ।
ಗುರೆ ಸ್ವಧರ್ಮದೆ ನಿಷ್ಠೆಯಂ ಬೋಧಿಸುತೆ
ಪೊರೆದು, ।
ಪರಮತಕೆ ಸೇರಬಯಸಿದ ಶಿವಮತೀಯನಂ ಬಿಡಿಸಿ ಗರತಿಯ ಸಲಹಿದಂ ॥

* *

[ಸಂಧಿ ಪ್ರಾರ್ಥನಾ-ಪದ್ಯ]

ಮೊಸಳೆ ತನ್ನಯ ಸ್ಥಾನಮಂ ತೊರೆದು ಪೊರಗಿರ- ।
ಲ್ಕೆಸೆವ ಶುನಕಂ ಬಂದದಂ ಬೆದರಿಸುತ್ತಿಹುದು; ।
ಸಸಿನದಿಂ ಸ್ವಸ್ಥಲದೊಳಿರಲದುವೆ ಮದಕರಿಯ ನೆಳೆಯುತಿಹುದಂತೆ, ಶಿವನೆ; ॥
ಹಸನಾದ ತವ ಚರಣಮೆನ್ನ ಮನದುರೆ ತಾಣ- ।
ಮೊಸೆದಿರಲ್ಕಿಲ್ಲಿದಕ್ಕಾವ ಭೀತಿಯೆ ಯಿಲ್ಲ; ।
ಕಸವಿಸಿಯ ಪಡಿಸುವದು ಹೊರಗೈದಿದೊಡೆ ಮಾಯೆ; ಹೊರಹಾಕದಂತೆ ಸಲಹೈ; ॥



* *

ಕರ್ತೃ ಗುರುಸಿದ್ಧೇಶನುರು ಬಿಲ್ವ-ವನದಲ್ಲಿ |
ಭರ್ತೃವೆನಿಸುತೆ ಜಗವ ಪೊರೆವ ಬಲವಿದ್ದೊಡುಂ |
ಧರ್ತೃವಾಗದೆ ಲಿಂಗಮಂ ಪೂಜಿಸಂ ಬಿಡದೆ ಕಾಲತ್ರಯದೆ ಪ್ರತಿದಿನಂ; ||
ಸ್ಮರ್ತೃವಾಗದೆ ಭಕ್ತರಂ ಸಲಹುವಂ; ಭವದ |
ಹರ್ತೃವಾಗಿಯೆ ಮೆರೆವನಾ ಜಗದ್ಗುರುವರಂ; |
ಮರ್ತ್ಯವಾಗದೆ ಬಾಳಲೆಂದು ತಜ್ಜಗಕೆ ಧರ್ಮವ ಕಲಿಸುವಂ ಚರಿಸುತೆ; ||೨||

ಒಂದು ದಿನದೊಳ್ ವೈಷ್ಣವಂ ಹುಬ್ಬಳ್ಳಿಯುವ- |
ನಂದಂದಿದೋರ್ವನೆ ಮಹಾಂತ-ವರಸನ್ನಿಧಿಗೆ |
ಬಂದು, ಭಯಭಕ್ತಿಯಿಂ ದೂರದಿಂದಲೆ ನಯದೆ ಸಾಷ್ಟಾಂಗಮಾಗಿ ಯೆರಗಿ, ||
ಮಂದನಾಗದಲಿಂತು ಪ್ರಾರ್ಥಿಸಿದನೈ ಗುರುವೆ, |
ಬೆಂದು,ಬಂದಿರುವೆನೈ, ಸಂಸಾರ ತಾಪದೊಳ್: |
ನೊಂದವನನೀಗ ಕೈಬಿಡದಂತೆ ರಕ್ಷಿಸೈ ಕೊಟ್ಟು ಲಿಂಗ-ಸು ದೀಕ್ಷೆಯ; ||೩||

ಮಕ್ಕಳೀರ್ವರ್ ಮನೆಯ ಭಾರಮಂ ವಹಿಸಿದರ್; |
ತಕ್ಕವರ್ ವೈಷ್ಣವ ಮತಕ್ಕೆಳಸಿ ಬಾಳುವರ್; |
ಮಿಕ್ಕಿರುವ ಲಿಂಗಿಮತಮಂ ಪೊಂದುತೆನ್ನ ಬಾಳಂ ಸಾರ್ಥಕಂಗೊಳಿಸಲು; ||
ಚಿಕ್ಕದೆನ್ನಯ ಮತದ ತತ್ತ್ವಮೆಂದರಿಯುತ್ತೆ, |
ಲೆಕ್ಕಿಸದೆ ಬಂಧುಗಳ ಮಾತನಿಲ್ಲಿಗೆ ಬಂದೆ- |
ನಕ್ಕರದೆ ಪೊರೆವುದೀ ಮಾಧವನ ಕೈಬಿಡದೆ ಮುಕ್ತಿ-ಮಾರ್ಗವ ತೋರಿಸಿ ||೪||

ಈ ಮಾತನಾಲಿಸುತೆ ಯತಿವರ್ಯನಿಂತೆಂದ- |
ನೈ ಮಾಧವನೆ, ನಿನ್ನ ಲಿಂಗಿಮತದಲ್ಲಿರ್ಪ |
ಪ್ರೇಮಾತಿಶಯಕೆ ಮೆಚ್ಚಿದೆನಾದಡುಂ, ಸ್ವಧರ್ಮಾಭಿಮಾನಾಭಾವಕೆ ||
ಧೀಮಂತನೇ, ಮೆಚ್ಚಲಾರೆನೈ; ಮಾನವಂ- |
ಗೀ ಮೇದಿನಿಯೊಳಿರಡು ಸುಗುಣಂಗಳಿರವೇಳ್ಕು;
ತಾ ಮಾಳ್ಪ ಧರ್ಮದೊಳ್ ಶ್ರದ್ಧೆ, ಪರ-ಧರ್ಮದೆ ಸಹಿಷ್ಣುತೆಯು;ಮುಖ್ಯಮಾಗಿ ||

ಆವ ಧರ್ಮದೆ ಮಾನವಂ ಜನಸಿಹನೊ ತಿಳಿಯ- ।
ಲಾವಗಮುದೇ ಧರ್ಮದೊಳ್ ಬಾಳಿ, ಶ್ರೇಯಮಂ ।
ತೀವಿದುತ್ಸಾಹದಿಂ ಪಡೆಯಲೇವೇಳ್ಕಿದೆ ಭಾರತೀಯ ಸುಸಂಸ್ಕೃತಿ; ॥
ಸಾವಧಾನದೊಳಿದಂ ತಿಳಿದು ನಡೆದವರಿಲ್ಲಿ ।
ಜೀವನದೆ ಸದ್ಭೋಗಮಂ ಪಡೆದಿಹರ್; ತನುವ ।
ಸಾವಧಾನದೆ ತೊರೆದು, ಮುಕ್ತಿಯಾನಂದಮಂ ಪೊಂದಿಹರ್, ಭಕ್ತಜನರು; ॥೬॥

ಆ ತುಕಾರಾಮ ಸಾಧುವು ತಿಳಿಯೆ ವೈಷ್ಣವಂ ।
ನೀತಿ-ವಿದನಾಗಿ ಸತಿಯೊಡನಿರ್ದು ಮಕ್ಕಳಂ ।
ಪೂತ ಚಿತ್ತಂ ಪಡೆದು, ಭಕ್ತಿಯಿಂ ವಿಠಲನ ಭಜಿಸುತೆ, ತ್ರಿಕರಣಂಗಳಂ ॥
ಪ್ರೀತಿಯಿಂದರ್ಪಿಸುತೆ, ಬಾಳಿರ್ದನಾತಂಗೆ ।
ಖ್ಯಾತ ವಿಷ್ಣುವಿನ ಕೃಪೆಯಾಗಿ; ವರ ಸಿದ್ಧಿಗಳ-।
ನೋತು ಪಡೆಯುತ್ತಭಂಗಂಗಳಂ ರಚಿಸುತ್ತೆ, ಶಿಷ್ಯರ್ಗೆ ಬೋಧಿಸುತ್ತೆ ॥೭॥

ಭಾಗವತ ರರಿಯಲ್ಕೆ ವೈಕುಂಠದಲ್ಲೆಸೆದ- ।
ನೀಗಳಾ ಸಿನ್ನೊಂದು ಚರಿತಮಂ ಪೇಳ್ವೆನರಿ; ।
ರಾಗದಿಂ, ಚಂದ್ರಹಾಸಂ ವೈಷ್ಣವ ವರನಿರ್ದಂ ಕುಂತಳಾಖ್ಯಪುರದೆ; ॥
ನೀಗಿರ್ದನೈದನೆಯ ಬರಿಸದೊಳ್ ಪಿತೃಗಳಂ; ।
ಲೊಗರರಿಯಲ್ಕೆ ಶಾಲಿಗ್ರಾಮಮೊಂದವಂ- ।
ಗಾಗ ದೊರೆದಿರ್ದುದದನರ್ಚಿಸುವ ಭಕ್ತಿಯೊದಗುತ್ತೆ, ಕಷ್ಟವನೀಗುತೆ ॥೮॥

ರಾಜನಾಗುತೆ, ಸಕಲಭೋಗಮಂ ಪಡೆಯುತ್ತೆ, ।
ತೇಜದಿಂದೇಕಾದಸಿಯ ಮಹತಿಯಂ ತೋರ್ದು, ।
ನೈಜ ವೈಕುಂಠ ಪುರವಾಸಿಯಾಗಿಹನೆಂದು ತಿಳಿದಿಲ್ಲವೇ ವೈಷ್ಣವ? ॥
ಸೋಜಿಗಮದೇಂ ಭಕ್ತಿಯೊಂದಿರ್ದಡದು ಜನಕೆ ।
ರಾಜಿಪ ಸಕಲ ಸಿದ್ಧಿಯಂ ಕೊಡುತ್ತಿಹುದರಿಯ– ।
ಲೀ ಜಗಕದುವೆ ದೈವಮಹುದು; ಬೇರಿನ್ನು ದೇವರ್ಕಳಿಲ್ಲಾವಾಗಳಂ ॥೯॥

ಭಕ್ತಿಯೇ ಹರಿಯು; ಮೇಣ್ ಭಕ್ತಿಯೇ ಪರಶಿವಂ; ।
ಭಕ್ತಿಯೇ ಜಿನನರಿಯೆ ಭಕ್ತಿಯೇ ಗೌತಮಂ; ।
ಭಕ್ತಿಯೇ ಗುರುವರಂ; ಭಕ್ತಿಯೇ ಶಕ್ತಿಯುಂ; ಭಕ್ತಿಯೇ ಭೋಗ–ಮೋಕ್ಷಂ; ॥
ಭಕ್ತಿಯೊಂದಿಲ್ಲದಿರೆ, ಹರಿಯೆಂಬುದದು ಪ್ರತಿಮೆ; ।
ಭಕ್ತಿಯೊಂದಿಲ್ಲದಿರೆ, ಶಿವನೆಂಬುದದು ಶಿಲೆಯು; ।
ಭಕ್ತಿಯೊಂದಿಲ್ಲದಿರೆ, ಗುರುವೆಂಬುವಂ ನರಂ; ಭೋಗ–ಮೋಕ್ಷಂ ನಶ್ವರಂ; ॥೧೦॥

ಇಂತೊರೆದು ಮೌನಿಯಾಗುತಿರಲ್ಕೆ, ಮಾಧವಂ ।
ಶಾಂತಮನನಾಗಿ ನಮಿಸುತ್ತಲೀ ಪರಿಯಾಗಿ ।
ಸಂತಸದೆ ನುತಿಸಿದಂ; "ಗುರುವರನೆ, ಚರವರನೆ, ಶ್ರೀಜಗದ್ಗುರು–ವರ್ಯನೆ, ॥
ಕಾಂತನೆ, ಸ್ವಧರ್ಮದೊಳ್ ನಿಷ್ಠೆಯಂ ಪುಟ್ಟಿಸಿದೆ, ।
ಸ್ವಾಂತಮೊಪ್ಪಿಹುದು ನಿನ್ನೆಯ ಚರಿತ್ರಕ್ಕೆ, ।
ಕಂತುವಿನ ಪಿತನಾ ಹರಿಯೆ ನೀನಲ್ಲದಿರೆ, ಹಿತವ ಬೋಧಿಸುತಿರ್ಪೆಯಾ?" ॥೧೧॥

ತಮ್ಮ ಧರ್ಮಕೆ ಬಲಾತ್ಕಾರದಿಂ ಜನತೆಯಂ ।
ನೆಮ್ಮೆಗೆಯ ಪುಟ್ಟಿಸುತೆ ಸೆಳೆಯುವವರುಂಟು; ನೀಂ ।
ಸಮ್ಮತಿಯೊಳಾನೆ ಬಂದೊಡುವುದಕ್ಕೊಪ್ಪದಲೆ, ನಿಜ ಧರ್ಮದೊಳ್ ಶ್ರೇಯುವ ॥
ಸಮ್ಮತದೆ ಪಡೆಯೆಂದು ಪೇಳ್ದಿನಗೆ ಸಚ್ಛಾಸ್ತ್ರ–।
ವೊಮ್ಮೆಗೆ ನೆನಹುಗೊಟ್ಟೆಯ್ಯೆ; ಸ್ವ–ಪರ–ಧರ್ಮದೊಳ್ ।
ಸಮ್ಮತಿಪ ಸಹನ-ಭೂತಿಯು ಜನಿಸಿತಿನ್ನೆಂದು ಮೀ ಪರಿಗುಣವ ಕೊಡದಿರು; ॥೧೨॥

ಎಂದು ಮತ್ತಂ ನಮಿಸುತಾಶಿಷವ ಪಡೆಯುತ್ತೆ, ।
ಸಂದ ಮುದದಿಂ ದಾನಮಂ ಮಾಡಿ ದೀನರ್ಗೆ, ।
ಕಂದುಗೊರಲನೆ ಯೀತನೆಂದು ನೆನೆಯುತ್ತವಂ ತೆರಳ್ದನಲ್ಲಿಂದಲೂರ್ಗೆ, ॥
ಛಂದದಿಂದೀ ಲೀಲೆಯಂ ತಿಳಿಯುತಖಿಲ ಜನ–।
ರಂದದಿಂ ಪೊಗಳುತಿರ್ದರ್, ಸಭೆಯಗೈಯ್ಯುತ್ತ-।
ಮುಂದ ಮುದದಿಂ; ಪೇಳ್ವೆನೊರೋರ್ವರಾ ನುಡಿಯ ದೃಷ್ಟಾಂತಕಾಗಿ ಕೆಲವಂ; ॥

ಶಿವ-ಸಿಂಪೆಯಂ ಗೈದ ಜೈನಂಗೆ ಶರಣರೆಸೆ-|
ಯುವ ಕಥೆಗಳಂ ಪೇಳ್ದು, ತನ್ನ ಲೀಲೆಯ ತೋರ್ದು, |
ತವೆ ಗರ್ವಮಂ ಬಿಡಿಸುತೂರ ಜೈನರ ಶಿವಮತೀಯರಂ ಗೈಯ್ದನೆಂಬ; ||
ನವ ಚರಿತಕಿದು ಪೊಸತು; ತಾನಾಗಿಯೇ ನಿಜ ಮ-|
ತವ ತೊರೆಯಲೊಪ್ಪಿ ಬಂದವಗೆ ಬೋಧಿಸಿದ ಕಥೆ |
ಭುವನದ ಪುರಾಣದೊಳಗೆಲ್ಲಿಯುಂ, ಕಾಣದೆಂದೋರ್ವಂ ನುತಿಸುತಿರ್ದನು; ||೧೪||

ಅಹುದಹುದೆನುತ್ತೆ, ಮತ್ತೋರ್ವನಿಂತೊರೆದಿಹಂ:—
"ಮಹನೀಯ ಬಸವಂಗೆ ಲಿಂಗ-ಪ್ರಸಾದಮಂ |
ಸಹಜಮೆನೆ ಭಕ್ತಿಯಿಂ ಕೇಳುತಿರೆ, ಕೊಡಲಿಲ್ಲಮೆಂದು ಕೇಳಿರ್ದನದುವೆ ||
ಮಹಿಮನಹ ಗುರುಸಿದ್ಧನೀ ಲೀಲೆಯಿಂದೆನಗೆ |
ವಿಹಿತಮಾಗಿಯೆ ತಿಳಿದವರವರ ದೇವರಿಂ-|
ದಹ ಪ್ರಸಾದಮುದವರವರ್ಗೆ ಯೋಗ್ಯಮೆನುತ್ತಲರಿತು ಕೊಂಡಿಹೆನೀಗಳೆ; ||೧೫||

ಎನುತಿರಲ್ ಮತ್ತೋರ್ವನಿಂತೆಂದನಾ" ಮಹಿತ |
ಘನ ಶರಣ ಚೌಡಯ್ಯನೊಂದು ದಿನ ಪರ-ಮತದ |
ಜನರಾಗ ಕಲ್ಲ ಪುತ್ಥಳಿಯ ತಂದಿರುಸುತ್ತೆ, ಮನುಜನಂ ಗೈಯಿಸುತ್ತೆ, ||
ಘನತೆಗುರೆ ಮೆಚ್ಚುತ್ತೆ, ಶಿವಮತಕೆ ಸೇರ್ದರಂ-|
ದನಘ ಪೌರಾಣದೊಳ್ ಕೇಳಿರ್ದನದರಿಂದೆ |
ವಿನುತನೀ ಲೀಲೆಯಧಿಕತೆಯಾಂತು; ತೋರ್ಪುದೈ ಯಖಿಲ ಧರ್ಮ ವಿವರ್ಧಕಂ; ||

* *

ಸರಸಮೆನಲೊಪ್ಪುತ್ತಲೆಲ್ಲರುರೆ ನುತಿಸುತ್ತ- |
ಉರುಭಕ್ತರಾಗುತ್ತಲೈಕ್ಯಮಂ ಪಡೆದು, ಬಾಳ್-|
ದಿರುತಿರಲ್, ಮತ್ತೊಂದು ಲೀಲೆಯನಘಂ ಪೇರ್ಮೆವೆತ್ತೆಸೆಯುತದನೊರೆವೆನು ||
ಮೆರೆವ ಹುಬ್ಬಳ್ಳಿಯುರೆ ಸನಿಹದಲ್ಲೆಸೆವ ಭ- |
ಕ್ತರ ಬಳಗದಿಂ ಶೋಭಿಪುಣಕಲ್ಲ ಗ್ರಾಮದೊಳ್ |
ನೆರೆ ಬಡವನಿರ್ದನೋರ್ವಂ, ಲಿಂಗವಂತನಪ್ಪಣ್ಣನೆಂಬುವ ನಾಮದಿಂ; ||೧೬||

ಆವ ಉದ್ಯೋಗಮಂ ಮಾಡಿದಡುಮಾತನಾ |
ಧಾವತಿಯ ಪಡಿಸುತಿಹ ಬಡತನಂ ವರ್ಣಿಸಲಿ- |
ಲ್ಲೋಽವಿ, ಮನೆತನವ ಸಾಗಿಸುವ ಬಗೆಯೇನೆಂದು ಚಿಂತಿಸುತ್ತಿರ್ದನವನು; ||
ಭಾವಮೊಪ್ಪುತೆ ತಮ್ಮ ಮತಕೆ ಸೇರಿದವರ್ಗೆ |
ತೀವಿದುತ್ಸಾಹದಿಂ ಬೇಡಿದನುಕೂಲತೆಯ |
ಸಾವಧಾನವ ಮಾಡದೊದಗಿಸುತಲಿರ್ದರ್ ಕೆಲರ್ ಮ್ಲೇಂಚ್ಛ-ರಾಜರಾಗ; ||೧೮||

ಅದನರಿಯುತಪ್ಪಣ್ಣನಾಗ ತನ್ನಯ ವೃದ್ಧ |
ಸದಮಳಿನ ಪಿತನ ಕಾಣುತ್ತೆ, ಪ್ರಶ್ನಿಸಿದನಿಂ- |
ತೊದವಿದುರು ದುಃಖದಿಂ ವಂದಿಸುತೆ, ಬಡತನದ ತಾಪಮಂ ವರ್ಣಿಸುತ್ತೆ ||
ಪದುಳ್ದು ಧರ್ಮಾಂತರಕೆ ಸೇರಲಪ್ಪಣೆಯ ನೀಂ |
ಪದಪಿನೀಯಲ್‌ವೇಳ್ಕು; ಬೇಡಮಾದೊಡೆ, ಪಿತನೆ, |
ಪದೆದು ಮೃತಿಗೀಡಾಗವೇಳ್ಕೆಂದು ನುಡಿಯುತಿರೆ, ತಂದೆ ಪೇಳಿದನೆಂತೆನೆ; ||೧೯||

ಬೇಡವೈ ಸುತನೆ, ಯಾವ್‌ಮೃತಿಗೆ-ಬಲಿಯಾಗಲ್ಕೆ |
ನಾಡೆ ಪ್ರೇಮದಿ ಸಿದ್ಧರಾಗೋಣ; ಪರಮತಕೆ |
ನಾಡೊರೆದಡುಂ ಸೇರಲಾಗದೈ; ಸತ್ಕೀರ್ತಿಯಂ ಕಳೆದುಕೊಳಲಾಗದು |
ಮಾಡುವುದದೇನಿರ್ದು? ಮಮ ಕೃತಿಯು ಮುಗಿದಿಹುದು; |
ಕೂಡಿ ನೀಂ ತವ ಜನನಿಯೊಡನೆ ಯೋಚಿಸಿ ನೀವೆ |
ಮಾಡುವದು ತಿಳಿದಂತೆ; ಸಾವೆನಗೆ ಸ್ವರ್ಗಮೈ ನರಕ-ವಾಸಂ ಪರಮತಂ; ||೨೦||

ಆ ಕ್ಷಣದೊಳಪ್ಪಣ್ಣನೆಂದಂ ಪಿತಂಗೆರಗಿ, |
"ವಕ್ಷಿಪುದದೇಂ ತಂದೆ? ಸಿಂಹದುದರದೆ ಕತ್ತೆ |
ಲಕ್ಷಿಸಲ್ ಜನಿಸುವುದೆ? ಮಾತೆ ಸಿಂಹಣಿಯಲ್ತೆ? ಮಡಿಯುವುದೆ ದಿಟಮೆಂದರಿ; ||
"ರಕ್ಷಕಂ ಗುರುಸಿದ್ಧ ಗುರು"ವೆಂದು ತಿಳಿಯುತ್ತೆ, |
ರಕ್ಷಿಸಲ್ ಪಗಲಿರುಳೆ ಪ್ರಾರ್ಥಿಸೋಣೆಂದು; ತಿಳಿ-|
ದೀಕ್ಷಿಸದಿರಲ್‌ಕಾತನಂ ಬಿಡದೆ ನೆನೆಯುತ್ತೆ,ಮೃತಿಯ ಹೊಂದೊಣ, ತಿಳಿಯೈ||೨೧||

'ಗುರುಸಿದ್ಧ, ಗುರುಸಿದ್ಧ' ಎಂಬ ನಾಮವ ಬಿಡದೆ ।
ನೆರದು ಮೂವರ್ ಬೆಳಗುವಾಗುವನಕಂ ಭಜಿಸು-।
ತಿರಲದೇ ಕ್ಷಣದಲ್ಲಿ ಸಿದ್ರೆಯಾವರಿಸುತಿರೆ, ಸುತ್ತಲುಂ ಬಂಗಾರದ ॥
ನೆರೆ ವೃಷ್ಟಿಯಾಗುತಿರಲರಮನೆಯ ತೆರದೊಳುರೆ ।
ಪರಿಶೋಭಿಸುತ್ತಿರಲ್ ಕಣ್ದೆರೆಯುತೇಳುತ್ತೆ ।
ನಿರುಕಿಸಲ್, ವಿಸ್ಮಯಂ ಭಕ್ತಿಯುದಿಸುತ್ತಿರಲ್, ಬಂದರಾ ಬಿಲ್ವ-ವನಕೆ; ॥೨೨॥

ಗವಿಯ ದ್ವಾರದೆ ನಿಂದು, 'ಗುರುಸಿದ್ಧ, ಬಾರಯ್ಯ; ।
ಶಿವ-ಸಮನೆ, ಬಾರಯ್ಯ; ಭಕ್ತಾಽಽಪ್ತ, ಬಾರಯ್ಯ; ।
ಭವ-ಹರನೆ, ಬಾರಯ್ಯ; ಶುಭ-ಗಣನೆ, ಬಾರಯ್ಯ; ನೆನೆವವರ ಬಾಂಧವನೆ, ಬಾ; ॥
ತವ ನಾಮಮಂ ಮರೆದು, ಮೃತಿಯನೈದುತ್ತಿರ್ದೆ-।
ವವಕಾಶವೆಸಗದಲೆ, ಮನಕೆ ನೆನಹಂ ಕೊಟ್ಟು, ।
ತವೆ ಜಗಂ ಬೆರಗಾಗುವಂತೆ ಸಲುಹಿದೆ, ಯೆಮ್ಮನೆಂದ"ವರ್ ನುತಿಸುತಿಹರು; ॥೨೩॥

ಅವರ ಭಕ್ತಿಯ ಕರೆಯನಾಲಿಸಿ, ಜಗದ್ಗುರುವು ।
ತವೆ ಕರುಣೆಯಿಂ ನಲಿದು, ದಯಮಾಡಿಸುತ್ತಿರಲ್ ।
ಸುವಿನಯದೊಳೆರಗಿ ಮೂವರ್, ಗುರುವಿನಪ್ಪಣೆಯ ಪಡೆದೇಳ್ದು, ಕೈಮುಗಿಯಲು,॥
ಶಿವ-ಸಮಂ ಮೂವರಂ ಪುಷ್ಪವಾಟಿಕೆಯಲ್ಲಿ ।
ಪವಮಾನನೊಲಿದು ಕುಳ್ಳಿರುಸುತ್ತೆ, ತತ್ತ್ವಮಂ ।
ಸುವಿವೇಕಮುದಿಪಂತೆ, ಬೋಧಿಸಿದನಪ್ಪಣ್ಣನಂ ನೋಡಿ ಕರ್ತನಿಂತು:- ॥೨೪॥

"ಏನಿದೈಯಪ್ಪಣ್ಣ, ಪೂರ್ವ ಸುಕೃತದೆ ಬಲದೆ ।
ಮಾನಿ ಲಿಂಗಾಯತರೊಳುದಿಸಿರ್ಪೆಯಾದಡುಮ-।
ನೂನ ಲಿಂಗವ ಬಿಡುವ ಕಾಂಕ್ಷೆಯುದಿಸಲ್ ಬಾರದೈ; ದೈನ್ಯಕಿದೆ ಮೂಲವು; ॥
ದೀನರೀ ಧರಣಿಯೊಳಗಾವ ಮತದಲ್ಲಿಲ್ಲ? ।
ಮಾನಿತನೆ, ನಿನ್ನಲ್ಲಿ ಪರಮತಕೆ ಸೇರ್ವಮತಿ-।
ಗೂನವಿಲ್ಲದ ಪ್ರೇಮಮಂ ಪುಟ್ಟಿಸಿದವರ್ ಕುಲಗೆಡಿಸಿ ಕೈಬಿಡುವರು; ॥೨೫॥

ಗುರುವು ನಿನಗಿತ್ತಿಹಂ ವೈಭವವು, ಸತ್ಯವಿದು; |
ಚಿರವಾಗಿ ತಾಯ್ತಂದೆಗಳ ಸೇವೆಯಂ ಮಾಡಿ, |
ಪರಮ ಯಶಮಂ ಪಡೆವುದೆಂ"ದೆಲ್ಲರಿಗೆ ಪರಸಿ ಗುರು ತಾನದೃಶ್ಯನಾದಂ ||
ಮೆರೆವ ಮಾತಾ–ಪಿತರನುಜ್ಞೆಯಂತಾಗನಾ–|
ಥರನಂಗ–ವಿಕಲರಂ ದೀನರಂ ದುಃಖಿಗಳ |
ನೆರೆಯಿಸುತೆ, ಧನ–ಧಾನ್ಯ–ವಸ್ತ್ರಂಗಳಂ ಸಲಿಸಿ ತತ್‌ಸ್ಥಾನದಿಂದೆ ತೆರಳ್ದಂ; ||೨೬||

ಎಲ್ಲರಿಗಿದಚ್ಚರಿಯ ಪುಟ್ಟಿಸಿದುದಲ್ಲಲ್ಲಿ |
ಸೊಲ್ಲಿಸುತ್ತಿರ್ದರಿಂತಾ ಸಜ್ಜನರ್ ನೆರೆದು, |
"ಸೂಲ್ಲಸಿತ ವಿಭವಮಂ ಶಿವದಾಸಿಮಯ್ಯಂಗೆ ಶಿವನಿತ್ತನೆಂದು ಕೇಳಿ; ||
ಬಲ್ಲ ಮಾಣಿಸದಲ್ಲಿ ವಾದಿಸುತೆ, ನಗುತಿರ್ದ–|
ಮುಲ್ಲಸಿತ ಗುರುಸಿದ್ಧನೀ ಚರಿತದಿಂ ದಿಟಂ |
ಸಲ್ಲಲಿತಮಾದುದೆ"ನಲೋರ್ವನದನಾಲಿಸುತಲೀ ಪರಿಯೊಳೊಬ್ಬನೆಂದಂ; ||೨೭||

"ಬಸವೇಶನಂ ನುತಿಪ ಚರರಿಂದಲಾತನಂ |
ಸಸಿನದಿಂ ಕರೆಯಿಸುತೆ, ಶರಣ-ಮಹಿಮೆಯ ಪೇಳು–|
ತೊಸೆದೆರಚಿದಾ ನೀರು ಮುತ್ತು–ರತುನಮದಾಗಿ, ಕಂಗೊಳಿಸುವಂತೆಸಗಿದಂ; ||
ಎಸೆವ ಪೌರಾಣದಿಂ ಕೇಳಿ ಸಟೆಯೆನುತಿರ್ದ-|
ನೆಸೆಯುವೀ ಲೀಲೆಯಿಂ ದಿಟಮಾಯಿತೆಂ"ದೆನಲ್ |
ಕೊಶದಹುದೆನುತ್ತೆ ಮತ್ತೊರ್ವನಿಂತೆಂದನುರೆ ಕನ್ನದಾಬ್ರಹ್ಮಯ್ಯನು; ||೨೮||

ಚರಣಮಂ ಸೋಂಕಿಸುತೆ ಬಿಜ್ಜಳ-ನೃಪಾಲಯದ |
ನೆರೆ ಮಣ್ಣ ಹೊನ್ನನಾಗಿಸಿದನೆಂದಾಂ ಕೇಳಿ, |
ಬೆರಗುವಟ್ಟಿರ್ದೆನೀ ಲೀಲೆಯಿಂ ಪ್ರತ್ಯಕ್ಷಮಾಗಿ ಜನಿಸಿತು, ಭಕ್ತಿಯು; ||
ಆರಿದೆಲ್ಲರಹುದೆನುತ್ತಂ ಶ್ರದ್ಧೆಯಂ ತಾಳು–|
ತುರು ಭಕ್ತರಾಗುತ್ತೆ, ಕರಮೆಸೆದು ಜೀವನಮು–|
ನುರೆ ಪಾವನವ ಮಾಡಿಕೊಂಡರಲ್ಲಿಯ ಜನರ್; ಗುರು–ಮಹಿಮೆಯಂ ಪಾಡುತೆ; ||

ಇಸಿತು ಸಂತಸದಿಂದಲಿರುವಾಗ ಮತ್ತೊರ್ವೆ ।
ಜನತೆಗತ್ಯಾನಂದಮಂ ಕೊಡುವ ಮತ್ತೊಂದು ।
ಘನ ಲೀಲೆ ಜರುಗಿದುದು; ವಿಸ್ಮಯಾವಹಮಾಗಿ ಪೇಳುವೆನದೇನೆಂದೊಡೆ :-
ವನಿತೆಯಿರ್ದಳ್ ಮಹಾರೂಪವತಿ, ಅತಿ ಸಾಧ್ವಿ; ।
ಯನಘೆಯ ಪೆಸರ್ ವಿಮಲೆ; ಸುಗುಣವತಿಯಾದಡುಂ ।
ವಿನುತ ವರರಿವಳ್ಗೆ ದೊರೆದಿರಲಿಲ್ಲಮದಕಾಗಿ ಪಿತೃಗಳತಿ ಚಿಂತಿಸುವರು; ॥೩೦॥

ರೂಪಮಿರ್ದೊಡುಮುರು ಸುಗುಣಮಿರ್ದೊಡುಂ, ಮತ್ತೆ ।
ತಾಪಮಂ ಕಳೆವ ಸತ್ಕಲೆ ವಿದ್ಯೆಯಿರ್ದಡುಂ, ।
ಪಾಪವಿರಹಿತ ಸುತಗೆ ವರರೇಕೆ ದೊರೆಯರೆಂದವಳ ಮಾತಾಪಿತೃಗಳ ॥
ಈ ಪರಿಯೊಳಾಗಾಗ ಪಲುಬಿ, ಪಂಬಲಿಸುವರ್, ।
ವೈಪರೀತ್ಯಮಿದೇನು? ಸುಂದರತೆ ಸದ್ಗುಣಂ ।
ದೀಪಿಪಂತಿರದೊಡುಂ, ಯೋಗ್ಯವರರಂ ಪೊಂದಿ, ಶೋಭಿಪರ್ ಸ್ತ್ರೀಯರೀಗ॥೩೧॥

ಇವಳ ಪ್ರಾಚೀನ ದುಷ್ಕರ್ಮಮೆಸಿತಿಹುದಕಟ ! ।
ತವೆ ನೋಡಿದೀ ವಿಮಲೆಯಾಪ್ತರಿಂತುರೆ ನೆನೆದು ।
ಕವಿದ ವ್ಯಥೆಯಿಂ ಮನದೆ ಮರುಗುತಿರ್ದರ್ ಬಾಲೆಗಾದಡುಂ ಪರಿತಾಪವು ॥
ತವಿಸಿ ಕಾಡುತಲಿರ್ದುದಿದಕೆ ಕಾರಣಮಿರ್ದು- ।
ದವಳ ತಾಯ್ತಂದೆಗಳ್ ಬಂದ ವರರಲ್ಲಿ ದೋ-
ಷವ ಬಿಡದಲಾರಿಸುತಲೆಮ್ಮ ಸುತೆಗೀ ವರಂ ಯೋಗ್ಯನಲ್ಲೆಂದೆನ್ನುತೆ, ॥೩೨॥

ಕಳಿಸುತಿರ್ದರ್; ತದ್ವನಿತೆಯ ರೂಪಕೆ ಸೋತ ।
ಮಿಳಿತ ನಿಜ ಮನಮಂ ಬಲಾತ್ಕಾರದಿಂದವರ್ ।
ಸೆಳೆದುಕೊಳ್ಳುತ್ತೆ ಮರುಗುತ್ತೆ, ಪೋಗುತಲಿರ್ದರೊರ್ವೆಯೊಂದುರು ಘಟನೆಯು ॥
ಬಳಿಕ ಜರುಗಿಹುದಿಂತು: ತದ್ವರ-ಗಣದೊಳೋರ್ವ- ।
ನೆಳೆಸುತಾಕೆಗೆ ತಾಂ ಸಮಾನನಲ್ಲೆಂದರಿದು- ।
ಮಳುಕದೆ ಬಲಾತ್ಕರಿಸಿಯಾದಡುಂ ತೃಪ್ತನಾಗಲ್ ಬಂದನಲ್ಲಿಗೊಲಿದು; ॥೩೩॥

ಹುಬ್ಬಳ್ಳಿಯೊಳಗಿರ್ದರವಳ ತಾಯ್ತಂದೆಗಳ- |
ನೊಬ್ಬಾತನೇ ಕಂಡು ತಿಳಿಸುತೆ, ನಿಜಾಶಯವ- |
ನುಬ್ಬಿಂ; ಮಹೇಶನೆಂಬುವ ತನ್ನ ನಾಮಮಂ ಪೇಳ್ದಂ ವಿನೀತನಾಗಿ; ||
ಇಬ್ಬರ್ ತದಿಚ್ಛೆಯಂ ತಿಳಿದು, ಬಿಲ್ವ-ವನಕ್ಕೆ |
ಕೊಬ್ಬಿರ್ಪ ಮನವ ಗುರುಸಿದ್ಧೇಶಗರ್ಪಿಸುತೆ, |
ಪಬ್ಬುತ್ತಿರಲ್ ಶಾಂತಿಯಾಗ ನುತಿಸುತ್ತಿರ್ದರೆಂತೆನಲ್ ಪೇಳ್ವೆನದನೆ., ||೩೪||

"ಗುರುನಾಥ, ವಿಖ್ಯಾತ, ಪರಿಪೂತ, ಚಿರಶಾಂತ, |
ಕರುಣಾಪ್ತ, ಸುವಿನೀತ; ನಿರ್ಗಮಿತ-ದುರ್ಧ್ವಾಂತ, |
ಸುರ-ವಿನುತ, ಶುಭಚರಿತ, ಸನ್ನಮಿತ, ಚಿತ್ಕಾಂತ ಸದ್ಭಕ್ತ-ಹೃದ್-ಗೃಹಗತ ||
ಶರಣ, ಗುಣಮಣಿ, ಮಾಲ, ಮಹಿತ ಶಿವಸಮಲೀಲ, |
ಭರಿತ-ಸದ್ಗುಣಶೀಲ, ವಿಜಿತ-ದುಷ್ಕಲಿಕಾಲ, |
ವರ, ಜಗದ್ಗುರು, ಪಾಲ, ಕರ್ತೃ, ಗುರುಚರಲೋಲ ಗುರು-ಸಿದ್ಧ ಪೊರೆ ಯೆಮ್ಮನು"||

ಎಂದು ನುತಿಸುತ್ತಿರಲ್, ಪ್ರತ್ಯಕ್ಷನಾಗಿ ನಿಲೆ, |
ವಂದಿಸಿದರಾ ಜಗದ್ಗುರುವರಂಗತಿ ಮುದದಿ- |
ನಂದವರನೀಕ್ಷಿಸುತಲಿಂತೆಂದ''ನೇಳಿರೈ, ನಿಮಗಿಂದು ಸುಖಮುಪ್ಪುದು;" ||
ತಂದೆಯಹ ಶಾಂತಪಂ ಗುರುವಚನಮಂ ಕೇಳ್ದು, |
ಚಂದದಿಂ ನುಡಿದನೆಂತೆನೆ "ಗುರುವೆ ಯೆಮಗೀಗ |
ಕುಂದದ ಸೊಗಂ ಹೇಗೆ ತಾನಹುದು? ಮಮ ಸುತೆಗೆ ದೊರೆತಿಲ್ಲ ತಕ್ಕ ವರರೆ; ||೩೬||

ಈಗಳೈದಿಹನಿವಂ ಪೆರ್ಗಣದ ತೆರದೊಳಿಹ |
ನಾಗಳಿಂ ಛಲವ ಪಿಡಿದಿಹನೆಂತಿವಂಗಾಂ ಸು- |
ರಾಗದೆ ವಿವಾಹಮಂ ಮಾಡಿಕೊಡಲಹುದು ? ಕೊಡದಿರೆ, ಬಲಾತ್ಕರಿಪನು; ||
ಭೋಗಿಭೂಷಣ-ಸಮನೆಯದಕಾಗಿ ನಿನ್ನೆಡೆಗೆ |
ಲೋಗರರಿಯಲ್ ಕರೆದು ತಂದಿರ್ಪೆನೆಲ್ಲರಂ; |
ಯೋಗಿವರ್ಯನೆ, ಯೆಮ್ಮ ಕಷ್ಟಮಂ ನೀನೆ ಪರಿಹರಿಪುದೆಂ"ದಡಿಗೆರಗಿದಂ; ||೩೭||

ಈ ನುಡಿಯನಾಲಿಸುತೆ, ನುಡಿದನದುಮೆಂತೆನಲ್ :– |
''ಮಾನಿತನೆ, ಕೆಂಪು–ಕೆಂಪೆಂದು, ಕೆಂಪಿರ್ದವರ– |
ನೂನಮಿಲ್ಲದಲೆಲ್ಲರಾರಿಸುತ್ತಿರ್ದೊಡಾ ಕರ್ಪಿಗರ ಗತಿಯೇನೊರೆ; ? ||
ನೂನಮಿದು ಬ್ರಹ್ಮ–ಸೃಷ್ಟಿಯು ಕೊರತೆಯಾಗರಂ; |
ಮಾನವರದಾವಗಂ ಗುಣಮನರಸಲ್ ವೇಳ್ಕು; |
ಜ್ಞಾನ, ಭಕ್ತಿಯೆ ಮುಖ್ಯಮದರಲ್ಲಿ ವರನಿವಂ ಶ್ರೇಷ್ಟನಾಗಿಹನರಿವುದು; ||೩೮||

ಗುಣಮಿಲ್ಲದೊಡೆ, ರೂಪ ಸಂಪದಕೆ ಬೆಲೆಯಿಲ್ಲ- |
ಮೊಣಮಾತಿದಲ್ಲ; ದೃಷ್ಟಾಂತವೊಂದಂ ಪೇಳ್ವೆ- |
ನಣಿಯರಂ ನೆನೆಹಿರ್ದಡಾವಗಂ ಭಕ್ತಿಯಿಂ ಬಾಳಲನುಕೂಲಿಸುವುದು; ||
ಮಣಿಭದ್ರನೆಂಬೋರ್ವ ಧನಿಕನಿರ್ದಂ; ವೃದ್ಧ- |
ನುಣಲುಡಲ್ ಕೊರತೆಯಿರಲಿಲ್ಲ; ಪೆಣ್ಣಿಂದಡುರೆ |
ಕುಣಿದಾಡುತಿರ್ದನವನತಿ ಕೃಪಣನಾದಡುಂ, ಧನವಿತ್ತು, ರೂಪವತಿಯಂ ||೩೯||

ಗುಣಿಯಲ್ಲವಳ್; ತಿಳಿದಿದಂ ಧನಿಯು ಸಂಶಯದೆ, |
ಕ್ಷಣಮಾದಡುಂ ಯುವಕರಂ ಮನೆಗೆ ಬರಗೊಡದೆ, |
ದಣಿಯದಲೆ ಲಕ್ಷ್ಯದಲ್ಲಿಟ್ಟು, ನಡೆಯುತ್ತಿರ್ದನಾದಡುಂ ಮೋಸಮಾಯ್ತು; ||
ತಣಿಸೆಂದು ಬಂದನೋರ್ವಂ ವಿಪ್ರನಾಲಯಕೆ; |
ಮಣಿಯುತ್ತ ನಿರ್ವಾಹದಿಂ ಭೋಜನಕ್ಕೆ ಕರೆ- |
ದುಣುವಾಗವಂಗೆ ಮುಖವೆತ್ತದಂತೆಯೆ ಕಟ್ಟು ಮಾಡಿರ್ದನಂತಿರ್ದಡುಂ, ||೪೦||

ನೀಡುವಾಗಾ ಧನಿಕ-ಸತಿಯ ಕಾಲ್ಬಣ್ಣಮಂ |
ನೋಡಿ ಮೆಚ್ಚುತೆ, ಮುಖದ ಬಣ್ಣಮಂ ಮರೆಯುತಂ, |
ನೋಡಿದಂ ಮುಖವೆತ್ತಿ; ತಕ್ಷಣದೆ ಸಿರಿವಂತನಾ ವಿಪ್ರನಂ ದಂಡಿಸಿ, ||
ಮಾಡದಲೆ ಕ್ಷಮೆಯ, ಹೊರಹಾಕಿದಂ ತದ್ವಿಜಂ ||
ಮಾಡಿ ತಪಮಂ, ರವಿಯ ನೊಲಿಸಿಕೊಳ್ಳುತೆ ಕ್ಷಣದೆ |
ಬೇಡುತಿಚ್ಛಿತ ವರವ; ಮಣಿಭದ್ರನಂತಾಗಿ ಬಂದನವ ನಿಲ್ಲದಾಗ; ||೪೧||

ಕೂಡೆ ಮನೆಯೊಳ್ ಪ್ರವೇಶಿಸಿ, ವಸಿತೆಗಿಂತುಮಾ- |
ತಾಡಿದನೆಲವೊ ಸತಿಯೆ, ಮುಮ ವೇಷಮಂ ಧರಿಸು- |
ತೋಡುತ್ತೋರ್ವಂ ಬರ್ಪನುರೆ ಯೆಚ್ಚರೆಂದೊರೆದು, ಸರ್ವರಿಗುಮೋರೆದನವಸೆ; ||
ಕೂಡಿದಾ ಸೂರ್ಯ-ವರ-ಬಲದಿಂದೆ ಧಸಿಕನಂ |
ನಾಡೆ ಬಡೆಯಿಸುತಾಳ್ಗಳಿಂದೆ ಹೊರ ಹಾಕಿಸುತೆ, |
ಪಾಡಿ, ನಿಜದೈವಮಂ; ತದ್ಭೋಗಕೆಲ್ಲಕುಂ ಸ್ವಾಮಿಯಾಗಿಹನಾ ದ್ವಿಜಂ; ||೪೨||

ರಾತ್ರಿಯೊಳ್ ನಿಜ ರೂಪಮಂ ಧರಿಸಿ, ಸ್ತ್ರೀಯೊಡನೆ |
ಪಾತ್ರಧಾರಿಯ ತೆರದೆ, ಬಿನದಿಸುತಲಿರ್ದು, ಕ್ಷಣ- |
ಮಾತ್ರದೊಳ್ ವೇಷಮಂ ಬದಲಿಪಂ; ಕಪಟೆಯುಹ ದ್ವಿಜನಿಂತು ಸುಖದೊಳಿರುತಂ||
ಧಾತ್ರಿಯೊಳ್ ಮೃತಿಯನಪ್ಪಿದನವಂ ಮುಪ್ಪಡಸಿ; |
ಶತ್ರುಗಳುಮಾದಡುಂ ಮರಗುತಿರೆ, ನರಕ-ಸಮ |
ಚೈತ್ರವಹ ದುಃಖಮಂ ನಿತ್ಯಮನುಭವಿಸುತ್ತಲಿರುತೆ ಸ್ತ್ರೀಸಹಿತನಾಗಿ; ||೪೩||

ನಿಜಮಾದ ಮಣಿಭದ್ರನಲ್ಲಲ್ಲಿ ಸಂಚರಿಸಿ;
ರುಜೆಯಡಸುತಡವಿಯೊಳ್ ಮಡಿದಪಂ; ನೀವಿದಂ- |
ತ್ಯಜಿಸಿರೈ; ತಿಳಿಯುತ್ತೆ ರೂಪದುರೆ ಹಂಬಲಕೆ, ಬಲಿಯಾಗದಿರಿ; ಯೆಂದೆನೆ ||
ಅಜ-ಮುಖ್ಯರತಿ ನುತಿಸಿ, ಕಾಣದಿಹ ಪಾದಕ್ಕೆ |
ಪ್ರಜಮನರ್ಪಿಸಿ, ವಿಮಲೆ ನಮಿಸುತ್ತೆ, ಪ್ರಾರ್ಥಿಸುತೆ |
ಭಜಿಸುತ್ತೆ, ಪಾದೋದಕವ ಪಡೆಯುತಾ ವರಂಗಾಽಽನನವ ತೊಳೆದುಕೊಳಲು||೪೪||

ಸೂಚಿಸುತೆ, ಕೊಡುತಿರಲ್, ಸೂಕ್ಷ್ಮಮತಿ ಯಾದವಂ; |
ಸೂಚನೆಯ ಸಂಜ್ಞಾರ್ಥಮಂ ತಿಳಿದುಕೊಳ್ಳುತ್ತೆ |
ಸೂಚಿಸಿದ ಸಾಧ್ವಿಯುಪಕೃತಿಯ ನೆನೆಯುತ್ತವಂ ಭಕ್ತಿಯಿಂ ತನ್ನ ಮುಖವ ||
ನಾಚದಲೆ ತೊಳೆದುಕೊಳ್ಳುತೆ, ಮೈಗೆಲ್ಲಕ್ಕು- |
ಮಾ ಚತುರ್ ಮುಖನರಿದೆನಲ್ ಪ್ರೋಕ್ಷಿಸಿಕೊಳಲ್
ಸೂಚಿಸಿದವರ್ ತದಾಪ್ತರ್ ಮೆಚ್ಚಲಾ ವರಂ ರೂಪಿಷ್ಠನಾದನಾಗ, || ||೪೫||

ವಂದಿಸುತಿರಲ್ಕವನನೀಕ್ಷಿಸುತೆ, ಗುರುಸಿದ್ಧ; |
ನಂದದಿಂ ಗುರುವರಂ ಕಾಳಪ್ಪನೆಂಬವನ |
ಸಂದ ನಾಮವ ಬದಲಿಸುತ್ತೆ, ಕೆಂಪಣ್ಣನೆಂಬುವ ಪೆಸರನಿಟ್ಟು, ಕರೆವ ||
ಚಂದದಿಂ ವಿಮಲೆಯುರು ಭಕ್ತಿಯಂ ಚತುರತೆಯ- |
ನಂದು ಪೊಗಳುತ್ತವಳ ತಾಯ್ತಂದೆಗಳನೊಲಿದು |
ಪೊಂದಿದಂ ಕೃಪಾದೃಷ್ಟಿಯಿಂ ನೋಡುತಿಂತೊರೆದನೀ ಮಗಳ ಪಡೆದ ನೀವೆ ||೪೬||

ಧನ್ಯರೆಂದೊರೆಯುತ್ತಲಾಶಿಷವನೀಯುತ್ತೆ, |
ಮಾನ್ಯನಾಗಳದೃಶ್ಯನಾಗುತ್ತಿರಲ್ಕಖಿಲ- |
ರನ್ಯರರಿಯಲ್ ಪೊಗಳುತಲ್ಲಿಯೆ ಗಣಾರಾಧನೆಯ ಮಾಡಿ, ಪೋಗುತಊರ್ಗೆ ||
ಮಾನ್ಯತೆಯ ಪಡೆದಿಹರ್; ಸುತೆಯಾ ವಿವಾಹಮಂ |
ಧನ್ಯತೆಯನೈದಿರ್ದ ಕೆಂಪಣ್ಣನೊಡನೆಸಗಿ, |
ಶೂನ್ಯವಾಗಿಹ ತಮ್ಮ ಬಾಳ್ ಪೂರ್ಣಮಾದುದಕೆ ಗುರುಕೃಪೆಯ ಬಣ್ಣಿಸಿದರು; ||

ಈಕ್ಷಿಸಿದವರ್ ಗುಂಪುಗುಂಪಾಗಿ ಬಣ್ಣಿಸುತೆ; |
ರಕ್ಷಿಸಿದ ಗುರುಸಿದ್ಧನೀ ಲೀಲೆಯಿಂ ಶರಣ |
ಪಕ್ಷದವರುರು ಚರಿತ್ರಂಗಳಂ ಸ್ಮರಿಸುತ್ತಲಿರ್ದರೋರ್ವೋರ್ವರಾಗ; ||
ಶಿಕ್ಷಕನ ಸಿರಮಿಲ್ಲದುದನರಿದು ನನ್ನಯ್ಯ- |
ನೀಕ್ಷಿಸುತೆ, ಮಣ್ಣ ತಲೆಯಂ ಮಾಡುತಂಟಿಸುತೆ |
ವೀಕ್ಷಕರ್ ಶಂಸಿಸಲ್ ಬದುಕಿರ್ದನೆಂಬ ಕಥೆ ದಿಟಮಾದುದೆಂದನೋರ್ವಂ; ||೪೮||

ಮತ್ತಮೋರ್ವಂ ನುಡಿದನೆಂತೆನಲ್ಕಹುದಹುದು |
ಸತ್ತನುಂ ನಾದಯ್ಯನಖಿಲ ನಾದಂಗಳಂ |
ಬಿತ್ತರದೆ ತನ್ನ ಧ್ವನಿಯೊಳಿ ತೊರ್ದು, ಶಿವನನೊಲಿಸುತೆ, ಸಿದ್ಧಿಯಪಡೆದನು; ||
ಉತ್ತಮರೆ, ಸತ್ಪುರಾಣದೊಳಾಲಿಸಿರ್ದೆನಾಂ |
ಚಿತ್ತಕಿದು ದಿಟಮಾಯಿತೆಂದೆನಲ್ ಮತ್ತೊಬ್ಬ- |
ನಿತ್ತಲಾ ಚೋಳಕ್ಕನೊಲಿಯುತೆ, ಶಿವಾಲಯದೆ ಬೆಳಕನೆಂದಾಂ ಕೇಳುತೆ; ||೪೯||

ನಗುತಿರ್ದನೀ ಮಹಾತ್ಮನ ಲೀಲೆಯಿಂದೆನ್ನ |
ಮಿಗಿಲಾದ ಮೂಢತೆಯು ತೊಲಗಿತೆಂದಾಡುತಿರೆ |
ಮಿಗೆ ಹರ್ಷಿಸುತ್ತೆಲ್ಲರಹುದಹುದೆನುತ್ತೆ, ಗುರುಭಕ್ತರಾದರ್, ನಲಿಯುತೆ; ||
ಮಿಗುವ ಜಸಮಿದರಿಂದೆ ಪುತ್ತಿನಿತು ಪರ್ಬುತಿರೆ, |
ಸೊಗಯಿಸಿದರಖಿಲ ಜಾತಿಯ ಜನರ್ ಗುರುಸಿದ್ಧ– |
ನಗಣಿತ ಮಹಾ ಮಹಿಮೆಗಳನರಿದು ಭಾವಿಪರ್, ನಿಜ ದೈವರೂಪನೆಂದು; ||೫೦||

ಇಂತು ಜಸಮಂ ಪಡೆದು ಮೆರೆವ ಲೀಲಾತ್ಮಕಂ |
ಶಾಂತ ಕರ್ತೃ ಜಗದ್ಗುರೂತ್ತಮಂ ನಿರುಪಮಂ ।
ಕಾಂತ ಗುರುಸಿದ್ಧನಗಣಿತ ತೇಜನುರುಯುತಂ ತ್ರೈಕಾಲದೋಳ್ ಲಿಂಗಮಂ ||
ಸಂತಸದೊಳರ್ಚಿಸುತೆ, ಜಗಕೆ ಭಕ್ತಿಯ ನಿಧಿಯ |
ಸಂತತಂ ಜನಕೊಲಿದು ನೀಡುತ್ತೆ, ಕರುಣಾಬ್ಧಿ– |
ಯಾಂತು, ಲೀಲೆಯೊಳಿರ್ದನಭವನೆನಿಸುತೆ ಬಿಲ್ವ-ವನದ ಗವಿಯೊಳ್ ಸುಪೂಜ್ಯಂ;

ವೀರೇಶ-ಪುಣ್ಯಾಶ್ರಮಂ ಗದುಗಿನೋಳ್ ಮೆರೆವು-|
ದೋರಂತೆ ಶೋಭಿಸುವುದಲ್ಲಿ ಪಂಚಾಕ್ಷರನು-।
ದಾರ ಸ್ವ ಗುರುವರನ ಯೋಗದ ಸಮಾಧಿಯಿದೆ;ಕುಳಿತಿಲ್ಲಿ ಗುರು–ಕರುಣೆಯೋಳ್||
ಸಾರಜ್ಞ ಗುರು-ಲಿಂಗ-ಚರ-ಭಕ್ತ–ಕಿಂಕರಂ |
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ ।
ಮಿರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣ ಸಂಧಿಯು ಷೋಡಶಂ ||೫೨||

ಅಂತು ಸಂಧಿ ೧೬ಕ್ಕಂ, ಪದಂಗಳು ಐವತ್ತೆರಡಕ್ಕಂ;
ಇಂತು, ಒಟ್ಟು ಪದಂಗಳು ೮೨೫ ಕ್ಕಂ.
—ಮಂಗಲಂ—

॥ ಶ್ರೀ ಗುರು ಬಸವಲಿಂಗಾಯ ನಮಃ ॥

# ಹದಿನೇಳನೆಯ ಸಂಧಿ





॥ ಸೂಚನೆ ॥

ಎಸೆದುರು ಕುಮಾರಾರ್ಯನೆಂಬ ಮಾಹೇಶಂಗೆ |
ಹಸನಾದ ವೀರಶೈವ ಮತ ಸಿದ್ಧಾಂತದೊಳ- |
ಗೆಸೆಯುವೇಕೋತ್ತರ-ಶತಸ್ಥಲಂಗಳೊಳಿಹಂಗ-ಸ್ಥಲಂಗಳ ನೊರೆದನು ॥

* *

[ಸಂಧಿ ಪ್ರಾರ್ಥನಾ-ಪದ್ಯ]

ಕಲ್ಲಾಗಿ, ಮಣ್ಣಾಗಿ, ಗಿಡ-ಬಳ್ಳಿಯಾಗಿ ಮೇಣ್ |
ಹುಲ್ಲಾಗಿ, ಕ್ರಿಮಿಕಿಟ-ಪಶುಪಕ್ಷಿ-ಮೃಗಮಾಗಿ, |
ಸಲ್ಲುತ್ತೆ ಮನುಜನಾಗುತ್ತೆ, ಕೊನೆಯಲ್ಲಿ ತವ ಭಕ್ತನಾಗುದಿಸಿರ್ಪೆನು; ॥
ಸಲ್ಲಿರ್ಪೆನೀಗ; ಮತ್ತಂ ಮರಳದಂತೆಸಗಿ, |
ವುಲ್ಲಾಸದಿಂ ನಿನ್ನೊಳಾವಗಂ ಬೆರೆದಿರ್ಪ; |
ಬಲ್ಲಾ ಮನವ ಕರುಣಿಸಯ್ಯ; ನಿನಗಾಗದಿರೆ, ಗುರುವಾಗಿ ಬಾ ಶಂಕರ; ॥೧॥

* *

ಒಂದು ದಿನದೋಳ್ ಕರ್ತೃ ಗುರುಸಿದ್ಧ ಶಿವಯೋಗಿ-।
ಯಂಡದಿಂ ಬೆಳಗಿನೋಳ್ ಲಿಂಗಾರ್ಚನೆಯ ತೀರ್ಚಿ, ।
ಸಂದ ಮುದದಿಂ ಬಿಲ್ವ-ವನದಲ್ಲಿ ಕುಳಿತಿರಲ್ ಮಾಹೇಶನೋರ್ವನೈದಿ, ॥
ವಂದಿಸುತೆ ಕೈಮುಗಿದು, ಪ್ರಾರ್ಥಿಸಲೋಡರ್ಚಿದಂ; ।
"ವಂದಿತ ಸುರಾಸುರ-ನರೋರಗ-ಜಗತ್ಯಖಿಲ ।
ಸುಂದರ-ಪದಾಬ್ಜ, ಗುರುಸಿದ್ಧ, ಮಹಿಮಾಗ್ರಣಿಯೆ, ಶ್ರೀ ಜಗದ್ಗುರು-ರಾಜನೆ, ॥

ಲೋಕ-ಮಾನಿತ, ಸಚ್ಚರಿತ್ರ, ಮಂಗಲಗಾತ್ರ, ।
ಪಾಕ-ಶಾಸನ-ವಿನುತ-ಪಾತ್ರ, ದುಷ್ಕೃತಿ-ಛೈತ್ರ, ।
ಶ್ರೀಕರಾಂಚಿತ-ಸುಗುಣ-ಸೂತ್ರ, ಮಹಿತಸ್ತೋತ್ರ, ಮನ್ಮಥ-ವಿಕೃತಿ-ಜೈತ್ರನೆ, ॥
ಶೋಕ-ರಹಿತ-ಪವಿತ್ರ, ಸಮತೀತ-ಶುಭಗೋತ್ರ,
ನಾಕ-ಸೇವಿತ-ಹೋತ್ರ, ದೀನ ಸಂಶ್ರುತ ಸತ್ರ ।
ಭೋಕರುಣಿ ಭವಮಾತ್ರಕಂಜಿ ಬಂದಿಹೆನತ್ರ ರಕ್ಷಿಸೈ ಶಿವ-ಮಿತ್ರನೆ" ॥೩॥

ಇಂತು ನುತಿಸುತ್ತಿರೆ, ಜಗದ್ಗುರುವು ಬಿಡಿಸುತ್ತ-।
ಲಾಂತು ಮೌನವ ತೊರೆದು, ಸದ್ಗುರುವರಂ ಕೇಳ್ದ-।
ನೆಂತೆನಲ್ ಕೇ"ತಕ್ಕೆ ನುತಿಸುವುದು ? ನಿನಗೇನು ಕೊರತೆಯಾಗಿಹುದು ಪೇಳೈ; ॥
ಸಂತಸದೊಳೀ ನುಡಿಯನಾಲಿಸುತೆ, ಮತ್ತೆರಗಿ, ।
ಶಾಂತಿಯಿಂದೀ ತೆರದೆ ಮಾತನಾಡಿದನೊಡೆಯ; ।
ಸಂತತಂ ನೀನನುಷ್ಠಾನಮಂ ಗೆಯ್ವುದರಿನೆನಗೇಕೆಯೀ ವಿಶ್ವಕುಂ; ॥೪॥

ಕೊರತೆಯೆಂಬುದೆ ಬರದು; ಜನನದಂಜಿಕೆ ಯೆನಗೆ; ।
ನೆರೆ ಕಾಡುತಿದೆ; ಬಿಡಿಸಿ ಸಲಹಯ್ಯ; ಸದ್ಗುರುವೆ, ।
ಪರತರನೆ, ನೂರೊಂದು ಸುಸ್ಥಲಂಗಳ ವಿಚಾರವ ತಿಳುಪಿ, ಭವದುಃಖವ ॥
ಪರಿಹರಿಸು; ನಿನ್ನ ಹೊರತಾರು ಗತಿಯಿಲ್ಲವೈ; ।
ಪರಮ ತತ್ತ್ವಜ್ಞಾನದಿಂದಹುದು ಮುಕ್ತಿಯಂ-।
ದರಿದು, ಬಂದಿರ್ಪೆನೈ; ಯೆನ್ನ ತಾಯ್ತಂದೆಯಾಪ್ತಂ ಗುರುವು ನೀನೆಯರಿಯೈ; ॥೫॥

ಸೇವೆಯಂ ಬಯಿಸಿ ಸನ್ನಿಧಿಗೆ ಬಂದವನೆ ಯಾ- |
ನೋವುತಿಹ ಶುಶ್ರೂಷೆಯಿಲ್ಲಿ ದೊರೆವುದಸಾಧ್ಯ- |
ಮೋವಿ ನಿರುಕಿಸೆ, ತಿಳಿದು ಕೇಳ್ದಿನೈ; ಕ್ಷಮಿಸಿರಿದು ಸರ್ವಜ್ಞನಿರ್ಪೆಯೈ ನೀಂ; ||
ಕಾವರಂ ಶೋಧಿಸುವದಸದಳವುದಾಗೆನಗೆ |
ಪಾವನ ಗುರೂತ್ತಮನೆ, ನೀನೊಪ್ಪದಿರಲಲ್ಲಿ |
ಸಾವಧಾನವ ಗೈಯ್ಯದಲೆ, ಪ್ರಾಣಮಂ ಬಿಡುವೆನೈ, ಚರವರನೆ ದಿಟಮಿದು; ||೬||

ಎನ್ನಯ ಪೆಸರ್ ಕುಮಾರಯ್ಯನೆನಗಿಲ್ಲವೈ |
ನಿನ್ನ ಹೊರತಾರ ಪರಿಚಯಮಾನೆ ಮಾಹೇಶ- |
ನೆನ್ನನರಿಯುತೆ ಸಲಹು; ಬಂದಿರ್ಪೆನೈ ಯೆನ್ನ ಕೈ ಬಿಡದಿರೈ ಗುರುವರ; ||
ನನ್ನಿಯಿಂದಿಂತೊರೆದು, ಬಾಷ್ಪಮಂ ಸುರಿಸುತ್ತೆ, |
ತನ್ನ ಪಾದದೆ ಬೀಳ್ದ ಬ್ರಹ್ಮತೇಜೋಯುತನ- |
ನುನ್ನತ ಮಹಾ ಲಕ್ಷಣಾಂಕಿತನನೆಂಟು ಬರಿಸದ ಬಾಲಕನ ನೀಕ್ಷಿಸಿ, ||೭||

ಗುರುಸಿದ್ಧಯತಿ ಜಗದ್ಗುರುವಿಂತು ನುಡಿದಿಹಂ; |
ಹರನಿಂದೆ ಬಂದಿರ್ಪನೆಂದು ಮಾಹೇಶ-ಶ |
ಬ್ದ-ರುಚಿರಾರ್ಥಂ ತಿಳಿಯಲಹುದೈ; ಕುಮಾರಾಖ್ಯೆಯಿರ್ಪುದೈ ಷಣ್ಮುಖಂಗೆ; ||
ಪರಶಿವ-—ಸುತಂ ನೀನೆ ಬಂದಿರುವೆಯೆಂಬುದಂ |
ನೆರೆ ಸ್ಪಷ್ಟ ಪಡಿಸಿದೈ; ನಿನಗೆಲ್ಲಿ ಭವಮಿಹುದು ? |
ಧರೆಯ ಭಕ್ತರನೀಗಳುದ್ಧರಿಸಲೈದಿರ್ಪೆ; ಬಾ ಮಗನೆ ಯೆನುತಲೊರೆದು, ||೮||

ಆ ಕ್ಷಣದೆ ಕೈವಿಡಿದು ಜ್ಞಾನ – ದೃಷ್ಟಿಯೊಳವನ-|
ನೀಕ್ಷಿಸುತೆ, ಸರ್ವಜ್ಞನಾ ಷಟ್–ಸ್ಥಲಾಹ್ವಯದ |
ದೀಕ್ಷೆಯಂ ಗೈಯ್ಯುತ್ತಲುಪದೇಶಿಸಲ್ತೊಡಂಗಿದನೆಂಟು ಬರಿಸದವಗೆ; ||
ವಕ್ಷಿಪೇಂ ನಿನ್ನಾಗ್ರಹಕ್ಕಾಗಿ, ನೀನೆಯುರಿ, |
ರಕ್ಷಕ-ಶಿವಂ ಪರಬ್ರಹ್ಮನೆನಿಪಂ, ಮತ್ತ- |
ಮೀಕ್ಷಿಸಲ್ ಸ್ಥಲನಾಮಮುಂ ಮೆರೆವುದಾತನೋಳ್, ವೀರಶೈವರ್ಗಿದೆ ಹಿತಂ; ||

ಸ್ಥಲನಾಮ-ವಿಸ್ತೃತಿಯ ಕೇಳ್, ಕುಮಾರನೆ ಜಗಂ; ।
ನೆಲಿಸುತಮಡಂಗುತಿಪುದೆಲ್ಲಿಯದೆ ತತ್ ಸ್ಥಲಂ; ।
ಸಲುವ ಪರಮಾತ್ಮಮದೆ ಯದುವೆಯುಂಗಂ,ಲಿಂಗಮೆಂದೆರಡು ವಿಧಮಾದುದು; ॥
ಸಲೆ ಯಂಗಮುಂ ತ್ರಿವಿಧಮಾಯಿತ್ತು; ಲಿಂಗಮುಂ ।
ಸಲುತಿಪುದು ಮೂರಾಗಿ; ಬಳಿಕ ಮೂರಾರಪ್ಪು -।
ದೆಲೆ,ಮಗನೆ; ತದ್ದ್ವಯದೆ ನೂರೊಂದು ಸ್ಥಲಮಹುದು;ಮೊದಲಂಗ-ಭೇದಮನರಿ

ಅಂಗದರ್ಥಂ 'ಪರಬ್ರಹ್ಮಮಂ ಹೊಂದುವವ'-।
ನಿಂಗಿತಜ್ಞನೆ, ಯಿದರ ಮೂರು ಭೇದಗಳ ನಾ-।
ಮಂಗಳಂ ಕೇಳ್ಮಗನೆ, ತ್ಯಾಗಾಂಗ-ಭೋಗಾಂಗ-ಯೋಗಾಂಗಗಳ್ ಮೆರೆವವು; ॥
ಕಂಗೊಳಿಪ ವೊಂದೊಂದರಲ್ಲಿವೆರಡೆರಡಾಗಿ, ।
ಭಂಗಮಿಲ್ಲದೆ ಷಡ್ವಿಧಂಗಳಾಗಿಹವವರ ।
ಮಂಗಲಾಖ್ಯೆಗಳ ಪೇಳ್ವೆಂ; ಕುಮಾರನೆ, ತಿಳಿದು ಸ್ಮರಣದಲ್ಲಿಡು, ಸಂತತಂ; ॥೧೧॥

ಭಕ್ತ-ಮಾಹೇಶ-ಪ್ರಸಾದಿ-ಪ್ರಾಣಲಿಂಗಿ-।
ಸಕ್ತ ಶರಣೈಕ್ಯಂಗಳಿವು ಷಟ್ ಸ್ಥಲಂಗಳಿ; ।
ಮುಕ್ತನೆ, ತದಂಗ-ಸ್ಥಲಂಗಳಿವೆ; ಯಿನ್ನಿವರುಪ-ಸ್ಥಲಂಗಳ ನೊರೆವೆ ನಾಂ; ॥
ಶಕ್ತನೆ, ಯಿವೀ ಷಟ್ ಸ್ಥಲಂಗಳೋಳ್ ಜನಿಸಿಹವು; ।
ಯುಕ್ತರೊರೆಯುವರಿವಂ, ನಲವತ್ತುನಾಲ್ಕೆಂದು; ।
ವ್ಯಕ್ತಮಾಗಿಯೆ ಮೊದಲು ಭಕ್ತಸ್ಥಲದೊಳಿರ್ಪ ಭೇದಂಗಳಂ ನೀಂ ತಿಳಿ; ॥೧೨॥

ಪಿಂಡಮುಂ, ಪಿಂಡವಿಜ್ಞಾನಮುಂ, ಸಂಸಾರ-।
ಚಂಡಗುಣ-ಹೇಯಮುಂ, ಗುರುಕರುಣೆ, ಲಿಂಗಧೃತಿ, ।
ಮಂಡಿತ ವಿಭೂತಿ ಧೃತಿ, ರುದ್ರಾಕ್ಷಧಾರಣಂ, ಪಂಚಾಕ್ಷರ-ಜಪಂ, ತಥಾ ॥
ಖಂಡಮಿಲ್ಲದ ಭಕ್ತಮಾರ್ಗಕ್ರಿಯೆಯುಮುಭಯ-।
ಮಂಡಲೆಯದಾ ತ್ರಿವಿಧ-ವಿಭವಂ, ಪ್ರಸಾದಾಪ್ತಿ, ।
ಖಂಡಿಸದ ಸೋಪಾಧಿ-ನಿರುಪಾಧಿ-ಸಹಜ ದಾನತ್ರಯಂ, ಪದಿನೈದಿವೆ; ॥೧೩॥

* *

ಶಿವಭಕ್ತ-ಕಾಯಂಗಳೆಂದು ತಿಳಿಯಲ್ ವೇಳ್ಕು; ।
ಶಿವಕುಮಾರನೆ, ಕೇಳು, ಮೊದಲು ಪಿಂಡಸ್ಥಲವ; ।
ಸವೆಯುತಿರೆ ಪಾಪಮದು ಬಹುಜನ್ಮ-ಪುಣ್ಯದಿಂ ಶುದ್ಧ ದೇಹಿಯೆ ಪಿಂಡನು; ॥
ಶಿವಶಕ್ತಿ-ಸಂಜಾತಮಾದೀ ಪ್ರಪಚಂದೋಳ್ ।
ಸುವಿಶಿಷ್ಟನಾಗಿ, ಪುಣ್ಯಾಧಿಕಂ ತಾನಾಗ, ।
ಯವಿರತಂ ಪಾಪ-ವಿರಹಿತನಾಗಿ, ಶೋಭಿಸುವ ಶುದ್ಧಾತ್ಮಕನೆ ಪಿಂಡನು; ॥೧೪॥

* *

ಎರಡನೆಯದಾದ ಪಿಂಡ-ಜ್ಞಾನಮಂ ಕೇಳು; ।
ನೆರೆ ಶರೀರಾತ್ಮ ಸುವಿವೇಕಿ ಪಿಂಡಜ್ಞಾನಿ; ।
ಮೆರೆವ ದೇಹಮೆ ಯಾತ್ಮನೆಂಬರಾ ಚಾರ್ವಾಕರಿಂದ್ರಿಯಮೆ ಯಾತ್ಮನೆಂದು ॥
ಒರೆವರವರೊಳ್, ಕೆಲರ್ ಬುದ್ಧಿಯೆ ತದಾತ್ಮನೆಂ-।
ದೊರೆಯುವರ್; ಬೌದ್ಧರ್ಕಳನುಭೂತ ಶ್ರುತಿಗೆ ಪಲ-।
ರೊರೆಯುತಿಹರಾತ್ಮಮೆಂದೆಲ್ಲಕ್ಕತೀತನೆ ತದಾತ್ಮನೆಂದರಿದ ನರನೇ ॥೧೫॥

* *

ಪಿಂಡ-ವಿಜ್ಞಾನಿಯೆನಿಪಂ; ಮತ್ತಮೀ ದೇಹ ।
ತಂಡದಿಂದೀ ಯಾತ್ಮನುಂ ಬೇರೆಯಾತ್ಮದಿಂ ।
ಖಂಡಿತಂ ಪರಮೇಶ್ವರಂ ಬೇರೆಯಂದರಿದವನೆ ಪಿಂಡ-ವಿಜ್ಞಾನಿಯು; ॥
ಪಂಡಿತರ್ ಸಂಸಾರಹೇಯಮಂ ಪರ್ಣಿಪರ-।
ಖಂಡ ಮತಿವರನೆ, ಮೂರನೆಯದದು ತಿಳಿಯಯ್ಯ; ।
ಮಂಡಿತ ವಿವೇಕರ್ಗೆ, ನಷ್ಟದೋಷರ್ಗೆ ಪುಟ್ಟುವುದು ಸಂಸೃತಿ-ಹೇಯತೆ ॥೧೬॥

ಈ ಲೋಕದೊಳಗಿರ್ಪ ಕ್ಷಣಿಕ ಭಾರ್ಯಾದಿ ಸುಖ-।
ಮಾಲೋಕಿಸಲ್ ಕ್ಷಯದೆ ಬೆರೆದಿರ್ದ ಸ್ವರ್ಗಮುಂ ।
ಶೀಲೋಚ್ಚ ಸದ್ವಿವೇಕಿಗೆ ಸಂಸೃತಿಯೊಳಾಗ ಹೇಯ,ಮತಿಯಲ್ಲುದಿಪುದು; ॥
ಕಾಲಾಸ್ಪದಂ ಶರೀರಂ ದುಃಖ-ಸಂಶ್ರಿತಂ; ।
ಮೂಲಜ್ಞ ಸದ್ವಿವೇಕಿಗೆ ಸಂಸೃತಿಯುಮಿದುವೆ ।
ಲೋಲತ್ವಮಿಲ್ಲಿಯೆಂದುಂ ಜನಿಸಲಾರದೈ; ಹೇಯತೆಯೆ ಸ್ಥಿರಮಪ್ಪುದು; ॥೧೭॥

* *

ಬಳಿಕಮಾ ವಿನಯ-ಪೂರ್ಣಂ ವಿವೇಕಿಯು ಸುಗುಣಿ |
ಕುಳಯುತಂ ಶೀಲವಂತಂ ಭಕ್ತಿ-ಸಂಶ್ರಿತಂ ।
ಮಳಿನ-ರಹಿತಂ ಶುದ್ಧಶಿಷ್ಯನೈದಲ್ ವೇಳ್ಕು, ಶಿವರೂಪಿ ಪರಮ ಗುರುವಂ; ||
ಮಿಳಿತ ಸತ್ ಪ್ರಿಯನ ಸುಜ್ಞಾನಿ, ಸುವಿರಾಗಿಯಂ ।
ಕಳಿತ ಲಿಂಗ-ವಿಭೂತಿ-ರುದ್ರಾಕ್ಷಧಾರಿಯಂ ।
ವಳಿತ ಶುದ್ಧ ಚರಿತ್ರನಂ, ಕಾಮ-ಮುಖ್ಯ-ರಿಪು-ದೂರನಂ ಕರುಣೆಗಾಗಿ; ||೧೮||

ಸೇವಿಸುತವಂ, ಪಡೆದು ಪ್ರಾರ್ಥಿಸುತೆ, ದೀಕ್ಷೆಯಂ |
ಪಾವನ ಮಹಾಚಾರ್ಯನಿಂ ಕುಲಕ್ರಮಗತಸು-|
ಭಾವಿಕಾಚಾರ್ಯನಿಂ ಪಡೆದು, ಬಾಳಲ್ ವೇಳ್ಕು, ಶಾಂತನಾಜ್ಞೆಯ ಮೀರದೆ; ||
ಭಾವುಕ-ತದಾಜ್ಞೆಯೆಂದೊಡೆ ಲಿಂಗಧಾರಣಂ; |
ಕೋವಿದನೆ, ಸು-ಶಿಲಾ-ಮಯಂ ಪಂಚಸೂತ್ರಗಂ |
ದೇವ-ನುತಮಿದು ಬಾಣಮಯಮುತ್ತಮಂ ಲಿಂಗಮಾವಗಂ ಧಾರಣೀಯಂ ||೧೯||

* *

ಕಲೆಯಿಲ್ಲದಾ ಲಿಂಗಮಂ ಧರಿಸಲಾಗದೈ; |
ಕುಲಗುರುವು ಚಿತ್ಕಳೆಯ ನಿಲಿಸಿ ತಲ್ಲಿಂಗದೊಳ್ ।
ಮಲ-ರಹಿತ ಸತ್ಪ್ರಾಣದೊಳ್ ಲಿಂಗ-ಕಳೆಯಿಟ್ಟು, ಚರಕಿತ್ತನೆಂದು ತಿಳಿದು ||
ಸಲೆ ಧರಿಸವೇಳ್ಕಿದಂ ಪ್ರಾಣವೆಂದರಿಯುತ್ತೆ |
ಸಲುವ ಲಿಂಗಮನೆಂದುಮಗಲಲಾಗದು, ಮಗನೆ; |
ಯಲಘು ಲಿಂಗಂ ಗತಿಸೆ, ಪ್ರಾಣಮಳಿಯಲ್ ವೇಳ್ಕು; ಲಿಂಗಮಂ ಬಿಡದೆ ಧರಿಸೈ;||

ದ್ವಿವಿಧಮಿದು ಲಿಂಗ-ಧಾರಣಮಾಂತರಂ ಬಾಹ್ಯ- |
ಮವಿರತಂ ಪ್ರಖ್ಯಾತಮಾಗಿಹುದು; " ಶಾಸ್ತ್ರದೊಳ- |
ಗವನಿಯರಿಯಲ್ ಶಾಂಕರಂ ಚಿತ್ಸ್ವರೂಪಮದು ವಿಶ್ವಕಾರಣಮಾಂತರಂ; ||
ಅವತಾರಿಗಳ್ ಚಿತ್ತದೊಳ್ ಧರಿಸಲೊರೆವರಿದೆ ।
ಶಿವ-ಶಾಶ್ವತಂ; ಸರ್ವದೇಹಿಗಳ ಮೂಲದೊಳ್ |
ತವೆ ಹೃದಯದೊಳ್ ಮತ್ತೆ ಭ್ರೂಮಧ್ಯದೊಳ್ ಜ್ಯೋತಿರ್ರೈಶ್ವರಂ
ಲಿಂಗಮಿದುವೆ; ||೨೧||

ಬೊಮ್ಮವೆನಿಸುವಪಾಗಮೇಡಿತಂ ತಿಳಿ, ಮಗನೆ; |
ಸಮ್ಮತಿಸಿ, ಮೂರು ತಾಣದೆ ಯೋಗಿಗಳ್ ತಿಳಿದು |
ನೆಮ್ಮಿ, ಯನುಸಂಧಾನಿಪರ್ ಯೋಗಿಗಳ್ ಪರಮಿದಾಂತರಂ ಧಾರಣವುರಿ; ||
ಚಿಮ್ಮುತಾಧಾರದೊಳ್ ಕನಕ-ಪ್ರಕಾಶಮುಂ |
ಹಮ್ಮಳಿದು ಹೃದಯದೊಳ್ ವಿದ್ರುಮ-ದ್ಯುತಿಯನಾ- |
ಗೊಮ್ಮೆಗಂ ಕೂರ್ಚದೊಳ್ ಸ್ಫಟಿಕದುರು ಕಾಂತಿಯುಂ ಬೆಳಗುವುದು ತೋರುತದುವೆ; ||೨೨||

ಸಿರುಪಾಧಿಕಂ ಲಿಂಗಧಾರಣಂ ತಿಳಿಯಿಡುವೆ; |
ಪರಮ ಶಕ್ತಂಗಿದುಂ ಸಾಧ್ಯಮುಪ್ಪದಶಕ್ತ-|
ಗರಿಯಲ್ ಸುಶಕ್ತಂಗುಮೀರ್ವರ್ಗುಮಾ ಬಾಹ್ಯ-ಲಿಂಗಧಾರಣಮುಚಿತವು; ||
ಕರಗಿದಾ ತುಪ್ಪಮದು ಹೆತ್ತುಪ್ಪಮಪ್ಪಂತೆ; |
ಗುರುಯೋಗಶಕ್ತಿಯಿಂದೊಳಗಿನಾ ಲಿಂಗ-ಕಳೆ |
ಪೊರಗಣ ಶಿಲಾ-ಲಿಂಗದೊಳ್ ಸ್ಥಾಪಿಸಲ್ ಪಡಲ್ಕಿಷ್ಟ-ಲಿಂಗಮದೆನಿಪ್ಪುದು; ||೨೩||

ಮೆರೆವದೇ ಯೋಗ-ಬಲದಿಂದಿಷ್ಟ ಚೇತನಮು- |
ನುರು ದೇಹದೊಳಗಿರ್ದ ಪ್ರಾಣದೊಳ್ ಬೆರಿಸಲ್ಕೆ ।
ನೆರೆ ಪ್ರಾಣಲಿಂಗಮದು ಭಾವಲಿಂಗಮದೆನಿಪುದಾ ಭಾವದೊಳ್ ಬೆರಿಸಲು; ||
ಧರಿಪುದಾ ಗುರುವಿತ್ತ ಪರಮೇಷ್ಟ-ಲಿಂಗಮಂ |
ಕರದಲ್ಲಿ, ಯುರದಲ್ಲಿ, ಕಕ್ಷದೊಳ್, ರಟ್ಟೆಯೊಳ್ ।
ಕೊರಳಲ್ಲಿ, ಯುದರದೊಳ್, ನೆತ್ತಿಯೊಳ್; ಪೊರ್ಕಳದ ಕೆಳಗೆ ಧರಿಸಲ್ ಬಾರದು; ||೨೪||

*  *

ಇದನೆ ಪರಮಂ ಬ್ರಹ್ಮಮೆಂದರಿದು, ಧರಿಸಿದೊಡೆ, |
ಸದಮಲನೆ, ಸೂತಕಂ ಪಾತಕಂ ನರಗಿಲ್ಲ; |
ಸದಮಳಿನ ಗುರುಕರುಣೆಯಿಂದಿದುಂ ದೊರೆವುದಿವೆ ನಾಲ್ಕೈದುಪಸ್ಥಲಗಳು; ||
ವಿದಿತವರ್ಯನೆ ಯಿನ್ನುಮಾರನೆಯುಪಸ್ಥಲವ |
ಪೊದುಳ್ದೊರೆವೆನಾಲಿಸೈ; ಭಸ್ಮಧಾರಣಮದುವೆ |
ಮುದಿತರಪ್ಪರ್ ಭಸ್ಮಧಾರಕರ್ ಶಿವ-ಸಮರ್ ಪಾಪ-ರಹಿತರ್ ಸಂತತಂ; ||೨೫||

ಭೋ ಕುಮಾರನೆ, ಕೇಳು ಭಸ್ಮ-ನಾಮಂಗಳಂ; |
ಶ್ರೀಕರ ವಿಭೂತಿ, ಭಸಿತಂ, ಭಸ್ಮಮುಂ, ಕ್ಷಾರ- |
ಮೇಕ, ರಕ್ಷೆಯಿನ್ನೈದುಮೀ ಭಸ್ಮಮುದಿಸಿರ್ಪ ಗೋವುಗಳ ಪೆಸರನರಿಯೈ; ||
ಶೋಕ-ರಹಿತನೆ, ನಂದೆ-ಭದ್ರೆ-ಸುರಭಿ-ಸುಶೀಲೆ- |
ಬೇಕೆನಿಪ ಸುಮನೆಯುಮಿವೈದೆ ಧೇನುಗಳರಿಯೆ, |
ಲೋಕಪಾಲಕ ಶಿವನ ಪಂಚ-ವದನಂಗಳಿಂದುದಿಸಿದವು, ಕ್ರಮದಿಂದಲೆ; ||೨೬||

ಕಪಿಲೆ-ಕೃಷ್ಣೆಯು-ಧವಲೆ-ಧೂಮ್ರೆ-ರಕ್ತೆಯುಮಾದ- |
ನುಪಮಾನಗೋಕುಲಂ ನಂಡಾದಿ ಸಂತತಿಯು:
ಸುಪಥವೀಯುವ ಭಸ್ಮಮುದಿಪುದಿವುಗಳ ಮಯದೆ; ಕಲ್ಪ-ಭಸ್ಮಂ ತಿಳಿ ಅದೆ; ||
ವಿಪಿನದಾ ಕಾಕುಳ್ಳ ಬೂದಿಯಿಂದನುಕಲ್ಪ- |
ಮುಪಕಲ್ಪಮಂಗಡಿಯ ಭಸ್ಮಮದಕಲ್ಪಮರಿ; |
ವಿಪರೀತ ವಹ ಬೂದಿಯೊಳ್ ಧೇನು-ಮೂತ್ರಮಂ ಬೆರಿಸಲಪ್ಪುದು ಶಿಷ್ಯನೆ; ||

ಈ ವಿಭೂತಿಯ ಸ್ನಾನಮುತ್ತಮಂ, ತಿಳಿ ಕ್ರಮವ; |
ಕೋವಿದನೆ, ಯೀಶಾನ-ಮಂತ್ರದಿಂ ಮಸ್ತಕಕೆ; |
ಪಾವನದ ತತ್ಪುರುಷದಿಂ ಮುಖಕೆ; ಹೃದಯಕ್ಕೆ ಸದಘೋರದಿಂ ವಾಮದಿಂ ||
ಭಾವುಕನೆ, ಗುಹ್ಯಕ್ಕೆ; ಸದ್ಯೋಜಾತದಿಂದೆ |
ಸಾವರಿಸಿ ಪ್ರೋಕ್ಷಿಪುದು ಪಾದವೆರಡಕ್ಕೆ, ಘನ |
ಸಾವಧಾನತೆಯಿರಲ್ ಸ್ನಾನ-ವಿಧಿಯಪ್ಪುದಿನ್ನುದ್ಧೂಲನಂ, ಲೇಪನಂ; ||೨೮||

ಭೂತಿ-ಧಾರಣವ ನಲವತ್ತೆಂಟು ತಾಣದೋಳ್ |
ಪ್ರೀತಿಯಿಂದಂ ತ್ರಿಪುಂಡ್ರದೆ ಧರಿಸವೇಳ್ಕದಂ;
ಖ್ಯಾತಿಯಿದನಾಮಿಕಂ-ಮಧ್ಯಮಂ-ತರ್ಜನಿಯುಮೀ ಮೂರು ಬೆರಳಿಂದಲೆ ||
ಒತು ಧರಿಸಿದೊಡದು ತ್ರಿಪುಂಡ್ರಮೆನಿಪುದು, ಮಗನೆ;
ಖ್ಯಾತಮಿದೆ ಶಾಸ್ತ್ರದೊಳ್ ತರ್ಜನಿಯ ಬದಲಾಗಿ, |
ಪೂತನೆ, ವಿಲೋಮದಿಂದಂಗುಷ್ಠದಿಂ ಧರಿಪುದೊಂದು ಪದ್ಧತಿ ಯಿರ್ಪುದು; ||೨೯||

ಪಣೆಯುಂ ತಲೆ ಕರ್ಣ್ ಕಿವಿಯುಂ ಕೊರಳು ಪೆಗಲುಂ ರಟ್ಟೆ ।
ಮಣಿಬಂಧ ಭುಜಗಳ ಮೊದಲ್ಗೊಂಡು ತಿಳಿಯುತ್ತೆ ।
ಗುಣಿವರನೆ, ಧರಿಸು, ನಲವತ್ತೆಂಟು ತಾಣದೋಳ್; ಶಿವನ ನೆನೆಯುತ್ತೆ, ಮನದೆ;॥
ಗಣಿತಮಿಲ್ಲದ ಪಾಪಮಿರ್ದಡುಂ ನಸಿಸುವುದು; ।
ಗಣಿಸಲಸದಳಮಾದ ರೋಗಂಗಳಿರಲವುಂ ।
ದಣಿಸದಲೆ ತೊಲಗುವವು; ಧಾರಣಂ ಶ್ರೇಷ್ಠಂ; ಕೃತಾರ್ಥರ್ ಸದಾ ಧರಿಪೊಡೆ;॥೩೦॥

ಶಿವನ ಮೈವೆಳಗು ತಾನಾದ ಭಸಿತಮನಿದಂ ।
ಸುವಿನಯದೆ ಧರಿಸುತ್ತೆ, ಜಮದಗ್ನಿ–ಮುಖ್ಯರಹ ।
ಪವಮಾನ ಮುನಿವರರ್ ಯಮನ ಬಾಧೆಯ ಗೆಲ್ದು ಶಿವಸಮರೆನಿಪ್ಪರಿದುವೆ ॥
ಸುವಿಭೂತಿ-ಧಾರಣದ ಮಹಿಮೆ; ಯಿನ್ನೊರೆವೆನೈ ।
ಕವಿದ ಮೋಹವ ಹರಿಪ ರುದ್ರಾಕ್ಷ-ಧಾರಣವ; ।
ತವೆ ಬೋಧಿಪೆವು; ಕೇಳ್, ಮಹಾತ್ಮರೆಲ್ಲರ್ ಧರಿಸಿ, ಶಿವ-ಕೃಪೆಯ ಪಡೆದರಂದು;॥

*                    *

ಏಳನೆಯುಪಸ್ಥಲಂ : ರುದ್ರಾಕ್ಷ–ಧಾರಣಂ; ।
ಭಾಳಲೋಚನನಂದು ತ್ರಿಪುರಂಗಳಂ ದಹಿಸ- ।
ಲೇಳುತಂ, ಮುಕ್ಕಣ್ಗಳಂ ತೆರೆದು ನಿಂದಿರಲ್, ಕಣ್ಣೀರ್ಗಳುದುರೆ ಧರೆಗೆ; ।
ಬಾಳ ಮಾತೇಂ ? ಶಿವಾಕ್ಷಗಳ ಪೆಸರಿಂದವೇ ।
ಮೇಳವಿಸಿ ಜನಿಸಿದವು, ತಿಳಿಯೆ ಮುವತ್ತೆಂಟು; ।
ಮೇಳವಿಪ ಭೇದದಿಂ ಸೂರ್ಯಾಕ್ಷಿ–ಭಿದಗಳವು ಪನ್ನೆರಡು, ಕಪಿಲವರ್ಣಂ; ॥೩೨॥

ಚಂದ್ರಾಕ್ಷಿ-ಭೇದಮಿವು ಪದಿನಾರು; ಶ್ವೇತದಿಂ ।
ಸಾಂದ್ರಾಗ್ನಿ–ನೇತ್ರ-ಭೇದಂಗಳುರು ಕೃಷ್ಣಮಿವು; ।
ರುಂದ್ರಂಗಳಿವು ದಶವಿಧಂಗಳ್; ಸದಚ್ಛಿದ್ರಮಾಗಿ, ಪರಧೃತಮಲ್ಲಿದ, ॥
ಕೇಂದ್ರೀಕೃತಾಽಘನಾಶಕ ರುದ್ರಾಕ್ಷಗಳ-।
ನಿಂದ್ರಾದಿಗಳ್ಗೆ ದೊರೆಯವಿವುವೆಂದು, ತಿಳಿಯುತು–।
ಪೇಂದ್ರಾಽಽನತ [illegible] ತಲೆ [illegible] ರಟ್ಟೆ ಕೈ ಬಗಲ್ಗೆ ಧರಿಸಿ; ॥೩೩॥

ಧರಿಪಾ ಕ್ರಮವನೊರೆವೆನಾಲಿಸಯ್ಯ, ಕುಮಾರ; |
ಪರಮ ಶಿಖೆಯಲ್ಲೊಂದು-ಮುಖದ ರುದ್ರಾಕ್ಷಮಂ; |
ಯೆರಡು-ಮೂರ್-ಪನ್ನೆರಡು-ಮುಖದ ರುದ್ರಾಕ್ಷಗಳ ಮೂರಂ ಧರಿಸಿ, ಮೂರ್ಧದೆ;||
ಶಿರಕೆ ಪನ್ನೊಂದು-ಮುಖಮುಳ್ಳ ಮೂವತ್ತಾರ |
ಧರಿಸಿ; ಕರ್ಣಗಳೊಳೇಳ್-ಪತ್-ಐದು ಮುಖಮುಳ್ಳ-|
ಮೆರೆಯುವಾರಾರು ರುದ್ರಾಕ್ಷಗಳ ಧರಿಸುತ್ತಲೀರೆಂಟು ಮುಖದವುಗಳಂ, ||೩೪||

ನಲಿದು ಮೂವತ್ತೆರಡು ಮಣಿಗಳಂ ಕಂಠದೋಳ್; |
ಸಲೆ ನಾಲ್ಕು ಮುಖದಕ್ಷಗಳನೆದೆಯೋಳೈವತ್ತ- |
ನೊಲಿದು; ಪದಿಮೂರು-ಮುಖದಕ್ಷಗಳ ಪದಿನಾರನೆರಡು ಬಾಹುಗಳಲ್ಲಿಯೆ; ||
ಮಿಲಿತಮಾದೊಂಭತ್ತು ಮುಖವಹ ಶಿವಾಕ್ಷಗಳ |
ಕಲಿಸಿ ಮುಂಗೈಗಳೋಳ್ ಪನ್ನೆರಡನುರೆ ಧರಿಸಿ, |
ಕಲಿತಮಾಗಿಹ ಚತುರ್ದಶ-ಮುಖ-ಶಿವಾಕ್ಷಗಳ ನೂರೆಂಟನೈದೆ ಬಗಲೋಳ್, ||

ಉಪವೀತದಂತೆ ಧರಿಸುತ್ತೆ, ಶಿವಪೂಜೆಯಿಂ |
ಕಪಟಾದಿ ದುರ್ಗುಣಗಳಂ ನೀಗಿವಂ, ನೆಗಳ್ದು |
ಸು-ಪಥಮಂ ಪಡೆಯುವಂ ಬ್ರಹ್ಮ-ಹತ್ಯಾದಿ-ಪಾಪಂಗಳಂ ಕಳೆದುಕೊಂಡು; ||
ಉಪಮೆಯಿಲ್ಲದ ಭಕ್ತಿಯುದಿಸುವುದು ನೋಡಿದೊಡೆ; |
ತಪದ ಫಲಮಂ ಪಡೆಯುವಂ ಮುಟ್ಟಿದೊಡೆ; ನಲಿಯು- |
ತಪರಿಮಿತ ಸುಕೃತಲಾಭಂ, ಧರಿಸಿದೊಡೆ; ಭಕ್ತನಾಗೊಂದನುಂ ಧರಿಸುತೆ; ||೩೬||

*   *

ಎಂಟನೆಯುಪಸ್ಥಲಂ ಪಂಚಾಕ್ಷರೀ-ಜಪಂ; |
ಬಂಟನಾಗೈ ತಿಳಿದು, ಪಂಚಾಕ್ಷರೀ ಮನುವ; |
ಕಂಟಕಮದಿಲ್ಲ ಗುರುವರ್ಯನಿಂದುಪದೇಶಮಾಗಿ ಪಡೆದೊಡೆ, ಮಂತ್ರವ; ||
ತುಂಟ ಕಾಮಾದಿಗಳ ಕಾಟಮಿನಿತುಂ ಘಟಿಸ-|
ದಂಟದೈ; ಯೀ ಮಹಾ ಮಂತ್ರಮಂ ಜಪಿಸಿದೊಡ-|
ನುಂಟೆನಿಸದೈ, ಕಾಲ-ಕರ್ಮ-ಮಾಯೆಗಳ ಭಯಮಿದು; ಸರ್ವ ಮಂತ್ರರಾಜಂ; ||

ಜಗದಾದಿ ಬೀಜಮಿದು ಪಂಚಾಕ್ಷರಂ, ಮಗನೆ; |
ಸೊಗಯಿಪ 'ನಮಃ' ಪೂರ್ವಮಿರೆ 'ಶಿವಾಯ' ಪದ-ಪರ-|
ಮಗಣಿತಂ ಪಂಚಾಕ್ಷರಂ ಮಂತ್ರಮದು; ತಿಳಿಯಲಿನ್ನು ಕೇಳ್, ತನ್ಮಹಿಮೆಯ; ||
ಮಗನೆ, ಯೋಂಕಾರಮಿದಕೊದವಿರೆ, ಷಡಕ್ಷರ-ಸು-|
ಭಗ ಮಂತ್ರಮೆನಿಸುತಿಹುದೋಮಿದುವೆ ಪಂಚಾಕ್ಷ-|
ರಗಳ ಬೀಜಂ; ತಿಳಿಯೆ; "ಸೋऽಹಮೆ"ಂಬಾತ್ಮ-ಮನುವಿನ ಸಹಾಕ್ಷರ-ಲೋಪಜಂ;

ಈಶ-ಮಂತ್ರಂ ಮಹಾಶಕ್ತಿ; ಯೀಶ್ವರ-ಬೋಧಿ; |
ಯೀಶ-ಸಮರಾದರ್ ಮುನೀಂದ್ರರ್ ಜಪಿಸುತಿದನೆ; |
ಯೀಶತೆಯ ಪಡೆದು, ವಿಧಿ-ಹರಿ-ಮುಖ್ಯರೀ ಜಗತ್ ಸೃಷ್ಟಿಮುಖಕೃತಿಯೆಸಪರು;||
ಈಶ-ಮನುವಂ ವಾಚಕೋಪಾಂಶು-ಮಾನಸದೊ-|
ಳೀಶ-ಪದಕಾಗಿ ಜಪಿಸುವದೊಳಿತು; ಕೇಳಿನ್ನು-|
ಮಾಶೆ ಯಿಟ್ಟೀ ತ್ರಿವಿಧ-ಜಪದ ಕ್ರಮಮಂ ಪೇಳ್ವೆನೈ; ಕುಮಾರನೆ, ಭಕ್ತಿಯಿಂ.

ಸನಿಹದಲ್ಲಿದ್ದವಂಗದು ಕೇಳುತಿರಲದಕೆ |
ತನಯನೆ, ಸುವಾಚಕದ ಜಪಮೆಂದು ಶ್ರುತಿಯೊರೆವು-|
ದನುವನೊರೆಯುತ್ತಿಹೆನುಪಾಂಶು ಜಪದಾ ಕ್ರಮದ ತುಟಿಯಲುಗುಪಾಂಶುಜಪವು;||
ಮನದಲ್ಲಿ ಮಂತ್ರಮಿರೆ, ಮಾನಸಿಕ ಜಪಮದುವೆ; |
ಯನಘ ವಾಚಕದಿಂದೆ ಘನಮುಪಾಂಶುವದರಿಯೆ, |
ಘನತೆಯುಂಟಾ ಮನೋ-ಜಪದಲ್ಲುಪಾಂಶುವಿಂದದೆ ಮೋಕ್ಷ ಸಿದ್ಧಿಕರವು; ||೮೦||

ಸಾನಂದ ಮುನಿವರಂ ಪಂಚಾಕ್ಷರಿಯ ಜಪಿಸು- |
ತಾನಂದವಿತ್ತಿಹಂ ನರಕಿಗಳ ಸಲುಹುತೆ; ಶ- |
ತಾನಂದಮುನಿಯೆಸಗಿದಂ ನರಕಮಂ ಸ್ವರ್ಗಮಂ; ತಿಳಿಯಲುಪಮನ್ಯುವು ||
ತಾನಾಗಿ ಶಿವರೂಪಿಯಖಿಲ ಸಿದ್ಧಿಯ ತೋರ್ದ- |
ನೀ ನೀತಿವಂತರ ಚರಿತ್ರಂಗಳಂ ತಿಳಿದು, |
ನೀನಾಗು, ಮಂತ್ರಸಿದ್ಧನೆನುತ್ತೆ ನವಮೋಪ ಸುಸ್ಥಲಮನೊರೆಯಲಾದಂ; ||೮೧||

ಭಕ್ತ-ಮಾರ್ಗಕ್ರಿಯೆಯು ಕೇಳ್ಮಗನೆ, ನಿಷ್ಠೆಯಿಂ; |
ಭಕ್ತಿಯುಳ್ಳವನೆ ಭಕ್ತಂ; ಭಕ್ತಿ ನವ ವಿಧಂ; |
ಸಕ್ತಿಯುಳ್ಳಾ ಶ್ರವಣ-ಕೀರ್ತನ-ಶಿವಸ್ಮರಣ-ಪಾದ-ಸೇವಾರ್ಚನೆಗಳು ||
ಯುಕ್ತವಂದನ ದಾಸ್ಯ-ಮಿತ್ರತ್ವಾತ್ಮಾರ್ಪಣಗ- |
ಳುಕ್ತ ನವ ವಿಧ ಭಕ್ತಿ-ನಾಮಂಗಳಿವು ತಿಳಿಯೆ; |
ಸೂಕ್ತ ಭಕ್ತ್ಯರ್ಥಮಿಹುದೈ;ಮೂರರೋಳ್ ಸ್ಮರಣೆ-ಸೇವೆಯರ್ಚನೆ ಪೂರ್ವೆ; ||

ಸ್ಮರಣವೆಂದೊಡೆ, ಧ್ಯಾನಮದುವೆರಡು ತೆರನಹುದು; |
ನೆರೆ ಶ್ರೌತಮುಂ ಸ್ಮಾರ್ತವೆಂದು ತಿಳಿಯೈ, ಯೆರಡ-|
ನುರೆ; ಶ್ರೌತವೆಂದೊಡದು ಶ್ರವಣ-ಭಕ್ತಿಯು; ಜ್ಞಾನಮಿದರಿಂದೆ ದೊರೆಯುತಿಹುದು
ಕರವೆಸೆವ ಸ್ಮಾರ್ತದಿಂ ನೆನಹು ನೆಲಿಸುತ್ತಿಹುದು; |
ಮರೆಯದಿಹ ಮನನವೂ ಸ್ಮಾರ್ತದರ್ಥಂ; ಸ್ಮೃತಿಯ |
ಪರಮ ಭಾವಮದೆ ಸ್ಮಾರ್ತಮೆನಿಪುದೈ; ಯಿದರ ನೆಲೆ ಧ್ಯಾನಂ ನಿದಿಧ್ಯಾಸವು;||೪೩||

ನೆರೆ ಧ್ಯಾನಗಮ್ಯ-ತತ್ತ್ವಂ ಪ್ರಾಣಲಿಂಗಮದ-|
ನರಿದು ಸಲಿಸುವದರ್ಚನೆಯುಮದುಂ ದ್ವಿವಿಧಮಿದೆ; |
ಹರ-ಕುಮಾರನೆ ಬಾಹ್ಯಮಾಂತರಂ ತಿಳಿಯಯ್ಯ ಪ್ರಾಣಲಿಂಗಕ್ಯಾಂತರಂ; |
ಸರಸವೆನೆ ಸಲುತಿಹುದು ಪ್ರಾಣಲಿಂಗಾರ್ಚಕರೆ |
ಧರೆಯೊಳಧಿಕರ್; ಕೇಳು ಬಾಹ್ಯಾರ್ಚೆ ಸಲ್ಲುವುದು |
ಪರಮೇಷ್ಟಲಿಂಗಕ್ಕೆ; ನಿಲಲಲ್ಲಿ ದೃಷ್ಟಿಯದು, ಪ್ರಾಣಲಿಂಗಂ ಕಾಣ್ಬುದು; ||೪೪||

ಅದರಿಂದಲಿಷ್ಟಲಿಂಗಾರ್ಚನೆಯೆ ಶ್ರೇಷ್ಠಮಹು-|
ದದರರ್ಚಕರ್ ಜಗದೊಳತ್ಯಧಿಕರಾಗಿಹರ್; |
ಸದಮಲಿನರೆಂದಿಗುಂ ಸ್ಥಾವರದ ಲಿಂಗಕ್ಕೆ ವಂದಿಸರ್, ನಿಂದಿಸರದಂ; ||
ಪದುಳ್ದಿಷ್ಟ-ಲಿಂಗವಿರದವರ ಸಂಗವ ಮಾಡ-|
ರದುಮಿಲ್ಲದಾ ಜನರ ನಿಂದಿಸರ್; ಸದ್ಭಕ್ತ-|
ರುದಿತ ಮೋದದೆ ಶಿವಾಕ್ಷ-ವಿಭೂತಿ-ಲಿಂಗಧಾರಕರನರ್ಚಿಸಿ ಬಾಳ್ವರು; ||೪೫||

ಮೂರು ವಿಧವಾಗಿಹುದು ಸೇವೆಯದು; ಕೇಳ್ಮಗನೆ, |
ಸಾರತರ ಕಾಯಕಂ ವಾಚಕಂ ಮಾನಸಂ; |
ಸಾರವಿಹ ಕಾಯಕಂ ಪಾದ-ಸೇವೆಯು; ತಿಳಿಯೆ ವಾಚಕಂ ಕೀರ್ತನವುದೆ; ||
ಧೀರನೆ, ಸು-ಮಾನಸಂ ನಿತ್ಯ ಸರ್ವಾರ್ಪಣಂ; |
ವೀರನೆ, ಮಹಾಭಕ್ತರಂ ಶಂಭುವೆಂದರಿದು |
ಭೂರಿ ಸದ್ಭಾವದಿಂದವರ ಕೃಪೆಯಂ ಪಡೆವ ಸದ್ಭಕ್ತನುರು ಸೇವಕಂ; ||೪೬||

ಈ ಮಹಾಭಕ್ತಂಗೆ ಸಮರಿಲ್ಲ ಲೋಕದೊಳ್; |
ಸಾಮ-ನುತ ಭಸ್ಮ-ರುದ್ರಾಕ್ಷ-ಲಿಂಗ-ಸುಮಂತ್ರ |
ನೇಮಮಂ ಪಿಡಿದಿರ್ಪರೊಡನೆ ಸ್ನೇಹವ ಮಾಡುತಾಪಗಂ ಸುಖಿಯಾಗಿಹಂ; ||
ಪ್ರೇಮದಿಂ ನೆಂಟತನಮಂ ಭಕ್ತರೊಡನೆಸಪ-|
ನೀ ಮಹಿತ ಲಿಂಗವಳಿಯಲ್ಕಸುವ ತ್ಯಜಿಸುವಂ; |
ಪ್ರೇಮದೆ ಶಿವ-ಕ್ಷೇತ್ರದೊಳಗನ್ನ-ಸತ್ರಮಂ ನಡೆಸುತಿಹನಾಗಾಗಲೆ; ||೪೭||

* *

ಶಿವಮತದ ನಿಂದೆಯಂ ಕೇಳನೆಂದೆಂದಿಗುಂ; |
ಶಿವಧರ್ಮಕಾಗಿ ತನು-ಮಾನಸ-ಧನಮನಿತ್ತು, |
ಶಿವಲಿಂಗಮಾಚಾರಮಿಲ್ಲದ ಜನಂಗಳಂ ಭವಿಗಳೆಂದರಿದು ತ್ಯಜಿಸಂ; ||
ಶಿವಭಕ್ತ-ಮಾರ್ಗಕ್ರಿಯೋಪ-ಸ್ಥಲಮಿದುವೇ । 
ಶಿವ-ಕುಮಾರನೆ, ಯಿನ್ನುಮುಭಯ ಸ್ಥಲವ ಕೇಳಿ |
ಶಿವ-ನಿಷ್ಠೆಯಂ ಬೆಳಸಿಕೊಳ್ಳ್ಳ;ಯದುವೆ ಪತ್ತನೆಯುಪಸ್ಥಲಮೆನಿಸಿದುದು; ||೪೮||

ಇಂತು ಸದ್ವೀರಶೈವ-ಮತೀಯ ಸದ್ಭಕ್ತ-|
ನಾಂತು ಮಹಿತಾಚಾರ-ನಿಷ್ಠೆಯಂ; ಗುರುವನುಂ |
ಕಾಂತ ಶಿವಲಿಂಗಮಂ ಭಕ್ತಿಯಿಂ ಪೂಜಿಸುತೆ, ಶಿವಭಾವದಿಂ ಬಾಳುವಂ; ||
ಸಂತತಂ ಗುರುವೆ ಶಿವನೆಂದರಿದು ತತ್ತ್ವದಿಂ, |
ಸಂತಸದೊಳವಾಜ್ಞೆಯಂ ಶಿವನಾಜ್ಞೆಯೆನು-|
ತಂತರಂಗದೆ ತಿಳಿದು ಭಾವಿಸುತ್ತೆ, ಶಿವನೆ ಪ್ರತ್ಯಕ್ಷನಾಗಿಹನೆನ್ನುತೆ; ||೪೯||

ಗುರುವಿಂದೆ ಸುಜ್ಞಾನಮೆಲ್ಲರ್ಗೆ ದೊರೆಯುವದು; ।
ಪರಮನೆ ಶಿವಜ್ಞಾನಮಂ ಕರುಣಿಸಲ್ ತನ್ನ ।
ನೆರೆದ ಮಾಯಾ-ಬಲದೆ ಗುರುರೂಪದಿಂದೆ ಪ್ರತ್ಯಕ್ಷನಾಗಿಹನೀಶನೆ; ॥
ಗುರುವಿನರ್ಚನೆಯಿಂದೆ ಶಿವನ ಸಂತೋಷಮಹು-।
ದರುವಿಂದಿವಂಗೆಸಗಿದುಪಚಾರಮಾ ಶಿವಂ-।
ಗರಿದೆನಲ್, ಮುಟ್ಟುತಿಹುದಿವನಿತ್ತ ಸುಜ್ಞಾನಮೀ ಸಂಸೃತಿ-ವಿನಾಶಕಂ; ॥೫೦॥

ಏಕಾದಶೋಪಸ್ಥಲಂ ತ್ರಿವಿಧ-ಸಂಪತ್ತಿ; ।
ಲೋಕತ್ರಯಕೆ ಪೂಜ್ಯನಾಗಿಹಂ ಜಂಗಮಂ, ।
ಭೂಕಾಂತ ಗುರುವಿನೊಳ್ ಲಿಂಗದೊಳ್ ಭಕ್ತಿಯೆಸಿತಸಿತು ಭಕ್ತಿಯೊಳೆ ಚರನಂ
ಸಾಕಾಗುವಂತೆ ಪೂಜಿಪುದು; ಚರಲಿಂಗಮಂ ।
ಶೋಕ ಪ್ರಹರ ಲಿಂಗಮೆರಡು ವಿಧಮಾಗಿಹುದ-।
ನೇಕಾಗಮೋಕ್ತಮಿದು ಚರಲಿಂಗಮಚರಲಿಂಗಂ ಪೂಜ್ಯಮೆಂಬುವುದಿದು; ॥೫೧॥

ಕೇಳು, ಜಂಗಮ-ಲಿಂಗದೊಳ್ ಶಿವಂ ಸಾಸ್ಕಾರ-।
ಮೇಳದಿಂ ಬರುತಿಹಂ; ಜಂಗಮ ಸುಲಿಂಗದೊಳ್ ।
ಮೇಳಯಿಸಿಹಂ; ಸದಾ ಜಂಗಮಂ ಶಿವಯೋಗಿ; ತತ್ ತೃಪ್ತಿ ಶಿವ-ತೃಪ್ತಿಯು; ॥
ಬಾಳಮಾತೇಂ ? ಚರನ ತೃಪ್ತಿಯದೆ ಗುರು ತೃಪ್ತಿ; ।
ತಾಳಿ ಶಿವನಾ ಜಂಗಮಾಕೃತಿಯ, ಚರಿಸುವಂ;
ತಾಳಿಹಂ ಚರಲಿಂಗ-ನಾಮಮಂ, ತ್ರೈಲೋಕ ಹಿತಕಾಗಿ ಪರಶಿವನರಿ; ॥೫೨॥

* *

ದ್ವಾದಶೋಪಸ್ಥಲವ ಕೇಳಿನ್ನು, ಶಿಷ್ಯವರ; ।
ಮೋದದಿಂ ಸು-ಪ್ರಸಾದ-ಸ್ವೀಕೃತಿ-ವಿಧಿಯ ।
ಸ್ವಾದರದೆ ಗುರುಲಿಂಗ-ಜಂಗಮ-ಪದೋದಕಮನೆಂತು ಸ್ವೀಕರಿಪನಂತೆ ॥
ಮೇದಿನಿಯ ಭಕ್ತನವರಾ ಪ್ರಸಾದವನೊಪ್ಪಿ, ।
ಭೇದಮಿಲ್ಲದೆ ನಲಿದು ಸ್ವೀಕರಿಸುವಂ, ಪಡೆದು; ।
ಖೇದಮಂ ಕಳೆದುಕೊಳ್ವಂ ಪತ್ರಪುಷ್ಪಾದಿಕವ ಮಸ್ತಕದೆ ಧರಿಸುತೆ; ॥೫೩॥

ಸಲೆ ಪೌಂಡರೀಕ-ಯಾಗದ ಫಲವ ಪಡೆಯುವಂ; |
ನಲಿದು ಸವಿಸಲಶ್ವಮೇಧ-ಸಿದ್ಧಿಯ ಪಡೆವ-|
ನಲಘು ಶಿವಭಕ್ತಸುರು ಭಕ್ತರ್ಗೆ ನೀಡುತಿಹನನ್ಯರ್ಗೆ ನೀಡನೆಂದುಂ; ||
ಲಲಿತ ಗುರುವರ್ಯನಂ, ಪರಮ ಚರವರ್ಯನಂ, |
ಸಲಿಸುವಂ ತತ್ ಪ್ರಸಾದವ ಕರೆದು, ಪೂಜಿಸುತೆ; |
ಸಲಿಪನಾ ಲಿಂಗಕ್ಕೆ ಸಲ್ಲಿಸುತೆ; ಲಿಂಗವೇ ತಾನೆಂಬ ಭಾವ-ಭರಿತಂ; ||೫೪||

* *

ಪದಿಮೂರರಿಂ ಮೂರುಪಸ್ಥಲಂಗಳನೊರೆವೆ; |
ಸದಮಲನೆ, ಲಕ್ಷ್ಯವಿಟ್ಟಾಲಿಸೈ ಪೆಸರ್ಗಳಂ; |
ಪದುಳ್ದ ಸೋಪಾಧಿ-ನಿರುಪಾಧಿ-ಸಹಜವೆನಿಪ್ಪ ದಾನ-ಭೇದಂಗಳಿವನೆ ||
ಪದೆದು ಭಕ್ತಸ್ಥಲದ ಕೊನೆಯುಪಸ್ಥಲಗಳಿಂ-|
ದೊದವಿನಾನಂದದಿಂ ತತ್ತ್ವವಿದರೊರೆಯುವರ್; |
ಪದಪಿಂ ಮಹಾತ್ಮನೆನಿಪಂ, ಭಕ್ತನಾಚರಿಸಿ; ಮೊದಲುಪಸ್ಥಲವ ತಿಳಿಯೈ; ||೫೫||

ಸರಸ ಸೋಪಾಧಿ-ದಾನಂ ಫಲಾಶೆಯೊಳೊಲಿದು, |
ನೆರೆ ಮಾಳ್ಪ ದಾನಮಿದುಮಿದರಿಂದ ಶ್ರೇಷ್ಠಮಾ |
ನಿರುಪಾಧಿದಾನಮರಿವುದು; ನಿರಾಶೆಯೊಳೆಸಪ ದಾನಮದುಮದರಿಂದುರು ||
ಪರಮವೆನಿಪುದು ಸಹಜದಾನಂ; ತಿಳಿದು ಮಾಳ್ಪ-|
ನುರುಭಕ್ತನೆನಿಸುವಂ; ಕರ್ತೃತ್ವ-ಭಾವಮಂ |
ತೊರೆಯುತೆ, ಸಹಜವಾಗಿ "ಹರನೆ ಕೊಡುವಂ; ಹರನೆ ಕೊಳ್ವನೆಂ"ದಾನಂದದೆ,||

ಬರುವ ಗುರುವಂ, ಚರನನು ಹರನೆಯೆಂದರಿದು, |
ವರ ಭಕ್ತಿಯಿಂ ಮಾಡುವುದೆ ಸಹಜದಾನ; ದಾನಮಿದು |
ಕರೆದು ಶಿವಯೋಗಿಗೀಯಲ್ ಮೇಳ್ಕವಂ ತೃಪ್ತನಾಗೆ, ಶಿವತೃಪ್ತಿಯಹುದು; ||
ಕರುಣೆಗಿತ್ತಾ ತನು-ಮನೋ-ಧನಂಗಳ್ ಸದಾ |
ಗುರು-ಲಿಂಗ-ಮಾಹೇಶ್ವರರ್ಗೆ ಸಲ್ಲುತ್ತಿಹವು; |
ನಿರುತಮಿಂತರಿದು ದಾಸೋಹಮೆಂಬುರು ಭಾವದಿಂ ಮಾಳ್ಪನೇ ಭಕ್ತನು; ||೫೭||

* *

ಇದನಾಲಿಸುತ್ತೆ ಬಾಲಕನೆಂದ"ನೈ ಗುರುವೆ, |
ಸದಮಲನೆ, ಭಕ್ತಸ್ಥಲವ ಕೇಳಿ ಬದುಕಿದೇಂ; |
ಮುದವೆ ಪೇಳೈ ತಂದೆ, ಮುಂದಣ ಮಹಾ ಸ್ಥಲದ ಭೇದಂಗಳಂ ಕರುಣೆಯಿಂ;" ||
"ಪೊಡುಳ್ದು ತಿಳಿ; ಮಾಹೇಶ್ವರ, ಪ್ರಶಂಸೆಯು ಮಗನೆ, |
ವಿದಿತ-ಲಿಂಗ-ಸುನಿಷ್ಠೆ, ಪೂರ್ವಾಶ್ರಯ-ನಿರಸನೆ, |
ಮುದಿತ ಸರ್ವಾದ್ವೈತ-ನಿರಸನಮುಮಾಹ್ವಾನ-ನಿರಸನಂ, ಮತ್ತೆ ಕೇಳೈ ||೫೮||

ಅಷ್ಟಮೂರ್ತಿ-ನಿರಾಸ, ಸರ್ವಗತ್ವ-ನಿರಾಸ, |
ಸ್ಪಷ್ಟ ಶಿವ-ವಿಶ್ವಮಯ, ಭಕ್ತ ದೇಹಿಕಗಳಿವೆ; |
ಶಿಷ್ಟರೊಪ್ಪುವುಪಸ್ಥಲಂಗಳೈ, ಮಾಹೇಶ್ವರ ಸ್ಥಲದೊಳೊಂಭತ್ತಿವೆ: ||
ಇಷ್ಟ ಪರವಧುವ, ಪರಧನವ, ಪರಹಿಂಸೆಯಂ-|
ದಿಷ್ಟ ಶೈವಾಗಮದೆ ಪೇಳ್ದಂತೆ, ತೊರೆಯುತ್ತ-|
ಲಷ್ಟಮೂರ್ತಿಯು ಮೆಚ್ಚುವಂತೆ ಚರಿಪನೆ ವೀರಮಾಹೇಶ್ವರಂ ಭಕ್ತನು; ||೫೯||

* *

ಇದು ಮೊದಲನೆಯದು ಮಾಹೇಶ ಪ್ರಶಂಸೆಯರಿ; |
ಸದಮಲನೆ, ಮೆರಡನೆಯದಾದುಪಸ್ಥಲವ ಕೇಳ್; |
ಪದುಳ್ದು ಲಿಂಗ-ಸುನಿಷ್ಠೆಯಾಲಿಸೈ, ಯದನೊರೆವೆನರಿ; ಲಿಂಗ-ನಿಷ್ಠನಾಗೈ; ||
ಪಡೆದ ಲಿಂಗಮದಗಲೆ, ಪ್ರಾಣವಳಿಯುಪ ನಿಷ್ಠೆ |
ಪುದಿದಸುವು ಪೋದಡುಂ ಲಿಂಗಪೂಜೆಯ-ನಿಷ್ಠೆ |
ಪದಪಿನುರು ಲಿಂಗಾರ್ಪಿತವ ಕೊಳ್ವ ನೆರೆ ನಿಷ್ಠೆಯುಳಿಯಲದೆ, ಲಿಂಗ-ನಿಷ್ಠೆ; ||೬೦||

* *

ಕೇಳು, ಪೂರ್ವಾಶ್ರಯದ ನಿರಸನೋಪ-ಸ್ಥಲವ; ||
ತಾಳು, ಶಾಂತಿಯ; ಮಗನೆ, ಮೂರನೆಯದಿದನರಿದು, |
ತಾಳಿರುವ ಪೂರ್ವ ಧರ್ಮಂಗಳಂ ತ್ಯಜಿಸುವುದೆ ಪೂರ್ವಾಶ್ರಯ-ನಿರಸನಂ; ||
ಪೇಳುವದು ಶಾಸ್ತ್ರಮಪ್ರಾಕೃತವ ಪ್ರಾಕೃತವ |
ಭಾಳಲೋಚನ-ಸೃಷ್ಟಿಯಪ್ರಾಕೃತಂ: ಬ್ರಹ್ಮ-
ಮೇಳಮದು ಪ್ರಾಕೃತಂ: ಪ್ರಾಕೃತವ ತ್ಯಜಿಸುತಪ್ರಾಕೃತವ ಪಿಡಿಯುವೇಳ್ಕು; ||

* *

ಮಗನೆ, ಸರ್ವಾದ್ವೈತ-ನಿರಸನೋಪಸ್ಥಲವ; |
ಮಿಗಿಲಾಗಿ ಚರಿಸುವಂ ವೀರಮಾಹೇಶ್ವರಂ; ।
ಮಿಗೆ ನಾಲ್ಕನೆಯ ಭೇದಮಿದುಮಿದಂ ಚರಿಸದಿರೆ ಸಿದ್ಧಿಸದು ಮಾಹೇಶ್ವರಂ; ||
ಬಗೆಯ ಸಾಧನ-ದೆಸೆಯೊಳದ್ವೈತನಿರಲಾಗಿ- |
ದಗಣಿತಂ ಪೂಜ್ಯಮಾ ಲಿಂಗಮಾಂ ಪೂಜಕಂ; |
ಜಗದಲ್ಲಿ ಪತಿ ಶಿವಂ; ಪಶುವಾನೆ; ಗುರು ಶಿವಂ, ಶಿಷ್ಯನಾನೆಂಬ ಭೇದಂ ||೬೨||

* *

ಇರದಿರಲ್ ವ್ಯವಹಾರಮೆಂದುಂ ಜರುಗದರಿಯೆ;
ಧರೆಯಲ್ಲಿ ಕ್ರಿಯೆಯೊಳದ್ವೈತಂ ನಡೆಯದೆಂದು |
ನೆರೆ ತಿಳಿದು, ನಡೆವವಂ ವೀರಮಾಹೇಶ್ವರಂ; ಕೇಳೈದನೆಯ ಭೇದವ; ||
ಪರತರಾಽಽಹ್ವಾನ-ನಿರಸನಮುಪಸ್ಥಲಮಿದುಂ; |
ಸರಿಯಾಗಿ ಜ್ಞೇಯಮಾಗಲ್ ವೇಳ್ಕದಲ್ಲದಿರೆ, ।
ಕರದಿಷ್ಟ-ಲಿಂಗಾರ್ಚನೆಯುಂ ಘಟಿಸದದರಿಂದಲಾಹ್ವಾನಮಂ ತ್ಯಜಿಪುದು; ||೬೩||

ತಿಳಿಯೆ ಸಂಸ್ಕೃತ ಲಿಂಗಕಾಹ್ವಾನಮಿಲ್ಲೆಂದು- |
ಮುಳಿದ ಲಿಂಗಕ್ಕುಂಟದಿಷ್ಟ-ಲಿಂಗಕ್ಕಿಲ್ಲ; ।
ತಿಳಿ; ಗುರುವು ಶಿವ ಕಲೆಯನಾಹ್ವಾನಿಸಿತ್ತಿಹಂ, ದೀಕ್ಷಾಸು-ಸಂಸ್ಕಾರದೆ; ||
ಬಳಿಕಮಾಹ್ವಾನಂವಿಸರ್ಜನಮುಮಿಲ್ಲೆಂದು ।
ತಿಳಿಯುವುದೆಯಾಹ್ವಾನ-ನಿರಸನೋಪಸ್ಥಲಂ; |
ತಿಳಿಯಯ್ಯ, ಯಿನ್ನಾರನೆಯದಾದುಪಸ್ಥಲಮನಷ್ಟಮೂರ್ತಿ-ನಿರಸನಂ; ||೬೪||

* *

ಪಂಚಭೂತೇಂದು-ರವಿ-ಜೀವಾತ್ಮರೀಶಂಗೆ |
ಸಂಚಯಿಸಿದಷ್ಟ-ಮೂರ್ತಿಗಳೆನಿಪವಿವು, ತಿಳಿಯೆ; |
ಮುಂಚಿನವವೇಳ ಚೇತನಗಳ್; ಜೀವನಜ್ಞನೀಶ್ವರಂಗೇಕತೆಯದು ||
ವಂಚನೆಯ ಮಾತಿಹುದು ಘಟಿಸದೆಂದುಮೆನುತ್ತೆ |
ಕೊಂಚಮಾದಡುಮಾವಗಂ ಶಂಕಿಸದಿರ್ಪ |
ಪ್ರಾಂಚಿತ ಮಹಾ ಜ್ಞಾನಮಷ್ಟಮೂರ್ತಿ- ನಿರಾಸನಂ ತಿಳಿಯುತಾಚರಿಪನೆ; ||

* *

ಅಷ್ಟಮೂರ್ತಿನಿರಾಶಕಂ; ಶಾಂತನೆನಿಸಿಪನರಿ- |
ದಿಷ್ಟದಿಂ ಕೇಳ್, ಸರ್ವಗತ್ವ-ನಿರಸನಮಿದುವೆ |
ಸ್ಪಷ್ಟಮೇಳನೆಯುಪಸ್ಥಲಮೆನಿಪ್ಪುದು; ಮಗನೆ, ಲಿಂಗ-ಪೂಜಕನಾವಗಂ ||
"ಇಷ್ಟಲಿಂಗಮನುಳಿದು ಮತ್ತೆಲ್ಲಿ ಶಿವನಿಲ್ಲ |
ಸೃಷ್ಟಿಯೊಳಗೆಂದ"ರಿದು ನಿಜಲಿಂಗ-ಪೂಜಕನ- |
ದಿಷ್ಟ ಸರ್ವಗ-ನಿರಾಸಕನೆನಿಪನಾ ಸ್ಥಿತಿಯೆ, ಸರ್ವಗತ್ವದ ನಿರಸನಂ; ||೬೬||

ಸರ್ವಗತ್ವವ ಸರ್ವ ಶಾಸ್ತ್ರಂಗಳೊಪ್ಪುವವು; |
ಪೂರ್ವದಾಧಾರಮೆ ಶಿವಂಗೆ ಲಿಂಗಂ; ತಿಳಿಯ- |
ಲುರ್ವಿಯೊಳಗಗ್ನಿಗಾಧಾರಮಾ ಶಮಿಯ ಕಾಷ್ಠಂ ||
ಶರ್ವ-ತೇಜಕೆ ಮೂಲಮೆಂಬ, ಜ್ಞಾನಮೆ ಶ್ರೇಷ್ಠ; ಹೇಗೊ ಹಾಗೆ-ಲಿಂಗಂ ;|
ಸರ್ವಗತ್ವದ ನಿರಸನಂ ಕುಮಾರನೆ, ಕೇಳು; |
ಸರ್ವಗತ್ವಮೆ ಶಿವ-ಜಗನ್ಮಯೋಪಸ್ಥಲಂ ಸಿದ್ಧಿಪುದು ಲಿಂಗಾರ್ಚೆಯೋಳ್; ||೬೭||

* *

ಪೂಜೆಯುರು ವಿಧಿಯ ಕೊಳ್ಳಲ್ ಶಿವಂ ಲಿಂಗದೋಳ್ |
ನೈಜಮಾಗಿಯೆ ಸದಾ ನೆಲಿಸಿರ್ಪನೆಂದರಿದು |
ಪೂಜಕಂ ತದನಂತರದೆ ಭಾವಿಸಂ, ನಲಿದು ಶಿವನೆ ಜಗಮಾದನೆಂದು; ||
ಸೋಜಿಗಮಿದಲ್ಲ; ಕೊಡ-ಗಡಿಗೆಗಳ್ ಮಣ್ಣಿನವೆ; |
ಭೂಜದಿಂ ಬೇರಲ್ಲ ಶಾಖೋಪ-ಶಾಖೆಗಳು- |
ಮೀ ಜಗದ್ರೂಪನಂತಾ ಶಂಭುವೆಂಬರಿವೆಯೆಂಟನೆಯ ಭೇದಮಾದ ||೬೮||

* *

ಆ ಶಿವ-ಜಗನ್ಮಯೋಪಸ್ಥಲಮಿದಿನ್ನೊರೆವೆ- |
ನಾಶೆಯಿಂ ಭಕ್ತದೇಹಿಕನೆಂಬುಪ-ಸ್ಥಲಮು- |
ಮೀಶನಾಗಮದಲ್ಲಿ ಪೇಳ್ದುದಂ ಕೇಳಿದೊಂಭತ್ತನೆಯ ಭೇದಮಹುದು ||
ಕ್ಲೇಶಮಂ ಲೆಕ್ಕಿಸದೆ, ಸಾತಿಶಯ ಮುದದಿಂದೆ |
ಲೇಶಮಂ ಬಿಡದೆ, ವಿಶ್ವವ್ಯಾಪಿಯಾಗಿಹ ಮ- |
ಹೇಶಂ ಮಹಾ ಭಕ್ತ-ದೇಹಿಕನೆಂಬ ನಾಮಮಂ ಪಡೆಯುವಂ ಭಕ್ತನೋಳಿ;||೬೯||

ಈ ಮಹತ್ತರವಹ ನವೋಪಸ್ಥಲಂಗಳಂ |
ಪ್ರೇಮದಿಂ ತಿಳಿದಾಚರಿಪ ಸುಭಕ್ತನೆ ಜಗದೊ-|
ಳಾ ಮಹಿತ ಮಾಹೇಶನೆನಿಪನೈ; ಯೀ ಯೆರಡು ಸು-ಸ್ಥಲ-ವಿಭೇದಂಗಳಂ ||
ನೇಮದಿಂ ಕೂಡುತಿಪ್ಪತ್ನಾಲ್ಕಿವಾಗುವವು; |
ಕಾಮಹರ-ಸುಪ್ರಸಾದ-ಸ್ಥಲದ ಭೇದಗಳ |
ನಾಮಗಳನೊರೆಯುವೇಂ,ಲಕ್ಷಣ-ಸಹಿತಮಾಗಿ; ಕೇಳುತಾಚರಿಸು, ಮಗನೆ; ||೨೦||

* *

ಭೋ ಗುರುವೆ, ಲಿಂಗ-ನಿಷ್ಠಾದಿ-ಧರ್ಮಗಳುಳ್ಳ |
ತ್ಯಾಗಿ ಮಾಹೇಶ್ವರನೆ ಯೆಂತಾ ಪ್ರಸಾದಿ ತಾ-|
ನಾಗುವಂ ? ಪೇಳಿ”ನೆಲ್ ಕೇಳಿಂತು ಬೋಧಿಸಿದನೆಂತೆನಲ್ಕದನೆ ಪೇಳ್ವೆಂ ||
ನೀಗದೆ ಪ್ರಸಾದಿ-ಮಾಹಾತ್ಮ್ಯ, ಗುರುಮಾಹಾತ್ಮ್ಯ |
ಯೋಗಿ ಲಿಂಗಮಹತ್ತ್ವ ಜಂಗಮ ಮಹತ್ತ್ವಸ-|
ದ್ಭಾಗಿ ಭಕ್ತಮಹತ್ತ್ವ ಶರಣಮಾಹಾತ್ಮ್ಯ ಶಿವಶೇಷ ಮಹತ್ತ್ವಂಗಳು; ||೨೧||

ಏಳಿವು ಪ್ರಸಾದಿ ಸು-ಸ್ಥಲದುಪಸ್ಥಲಗಳರಿ; |
ಕೇಳು ಮೊದಲನೆಯ ಭೇದವ, ಪ್ರಸಾದಿಯ ಘನವ; |
ಮೇಳೈಪ ಮನದಾ ಪ್ರಸನ್ನತೆ ಪ್ರಸಾದಮದೆ ಶಿವಲಿಂಗದಿಂದೊಗೆವುದು; ||
ತಾಳಿದಾ ಶುದ್ಧಾನ್ನಮೇ ಶಿವಾರ್ಪಿತಮಕ್ಕು; |
ತಾಳುತಂ ಶಿವ-ಭಾವಮಂ, ಲಿಂಗಕರ್ಪಿಸುತೆ; |
ಮೇಳಯಿಸುತದನುಣಲ್ ಚಿತ್ತಂ ಪ್ರಸನ್ನಮಹುದದರಿಂದೆ, ಸರ್ವಸಿದ್ಧಿ; ||೨೨||

* *

ಪತ್ರ-ಫಲ-ಪುಷ್ಪಂಗಳಾವಾದಡಾಗಲೈ |
ಪುತ್ರನೆಯವಂ ಭಕ್ತಿಯಿಂ ಸಮರ್ಪಿಸಲತಿ ಪ-|
ವಿತ್ರ ಮತಿಯಿಂ ಕೊಳ್ವನಾ ಶಿವಂ; ನಿನಗದುವೆ ಸುಪ್ರಸಾದಂ ಶಾಂತಿದಂ; ||
ಛಾತ್ರ, ದ್ವಿತೀಯ ಭೇದಂ ಗುರು-ಮಹಿಮೆಯ, ತಿಳಿ; |
ಚಿತ್ರಮೆನೆ ನರನಾಗಿ ಬಂದ ಶಿವನೆಂದರಿದು, |
ಪಾತ್ರಮಾಗಿಹ ಪ್ರಸಾದವ ಕೊಳ್ವುದೈ ಶಿವನೆಂದರಿದು ಸದ್ಭಾವದೆ; ||೨೩||

ಪರಮ ನಿಷ್ಕಲ-ಶಿವನೆ ಶಿವಯೋಗಿಯೆಂದರಿದು, |
ಸರಸದಿಂ ತತ್ ಪ್ರಸಾದವ ಕೊಳ್ವನಾ ಗುರು-ಶಿ-|
ಪರೊಳೆಂದಿಗುಂ ಭೇದಮಂ ಮಾಡಲಾಗದರಿ; ಯಿದು ಮೂರನೆಯುಪಸ್ಥಲಂ; ||
ಕರಮಿದುವೆ ಲಿಂಗ-ಮಹಿಮೆಯದೆಂತೆನಲ್, ಕೇಳು; |
ಗುರು-ಮಹತ್ತ್ವದ ಯೋಗದಿಂ ವಿಶೇಷತೆಯಿಂದೆ |
ಪರತರ ಜ್ಞಾನಮುಂಟಾಗಿ, ಲಿಂಗದ ಮಹಿಮೆ ಗೋಚರಿಪುದೈ, ಕುಮಾರ; ||೭೪||

ಶಂಕರ-ಜ್ಞಾನಮದೆ ಲಿಂಗ-ಸಂಜ್ಞೆಯ ಪಡೆದು |
ಶಂಕೆಯಂ ನಾಶಿಸಿ ವಿರಾಜಿಪುದು, ಬ್ರಹ್ಮವಿದು; |
ಪಂಕಹಾರಿ ಸನಾತನಂ ಲಿಂಗ; ಲಿಂಗಮಿದುಮಿದಕೆ ಪೀಠಮದೆಶಿವ್ರದು; ||
ಸೋಂಕಿನಿಂ ಶಿವ-ಶಕ್ತಿಯಿಂ ಜನ್ಮಿಪುದು, ಜಗಂ; |
ಶಂಕಿಸದ ಲಿಂಗಾಽಽಕೃತಿಯ ವಿಶ್ವಮೈದಿಹುದು; |
ಕಿಂಕರತೆಯಿಂ ಜ್ಯೋತಿರಾತ್ಮ-ಶಿವಲಿಂಗಮಂ ಬ್ರಹ್ಮ-ಹರಿಗಳ್ ಕಾಣರು; ||೭೫||

* *

ಇದೆ ನಿಷ್ಕಲಂ, ಸಕಲ-ನಿಷ್ಕಲಂ, ಸಕಲಮೆಂದೊದ |
ದೊದವಿಹುದು ಭಾವನೆಗೆ, ಧ್ಯಾನಕ್ಕೆ, ಶಿವಪೂಜೆ-|
ಗಿದನರಿಯುತಿನ್ನು ಜಂಗಮ-ಮಹಿಮೆಯಂ ಕೇಳಿದಂ, ನಾಲ್ಕನೆಯುಪಸ್ಥಲಂ; ||
ಒದವಿ ಗುರು-ಶಿಷ್ಯರೋಳ್ ಹೊಳೆವ ಲಿಂಗಮಹತ್ತ್ವ |
ಸದಮಳಿನ ವಿಭವವಹ ಸರ್ವಚಿದ್ರೂಪಮದೆ; |
ಯಿದರ ವಿಜ್ಞಾನದಿಂದೊದಗುವುದು ಜಂಗಮಾಧಿಕ್ಯಮೆಂಬುಪದಾಗಮಂ; ||೭೬||

ಶಿವನಂ ಜಗತ್-ಪ್ರಕಾಶಕನನಾಗೀಕ್ಷಿಸುತ-|
ಲವಿರತಂ ಸ್ವ-ಸ್ವರೂಪದಿಂದಲಾವನತಿ |
ಪವಮಾನ ಸತ್ತ್ವದಿಂ ಭಾವಿಪನೊ, ಜಗದೊಳವನೇ ಜಂಗಮಂ ತಿಳಿವುದು; ||
ಶಿವಯೋಗದಿಂದಲಾವಂ ಜಗಜ್ಜಾಲಮಂ |
ಸುವಿನೀತನಾಗಿ, ಚಿದ್ರೂಪತೆಯೊಳರಿಯುವನೊ |
ಶಿವಯೋಗಿಯವನಡಿಯ ಸ್ಪರ್ಶದೆ ಗೃಹಂ ಪಾವನಂ, ಹಿತಂಪರಮೋಕ್ಷಣಂ; ||೭೭||

* *

ಕಾಮಮುಖ್ಯ-ಗುಣಂಗಳಿಂ ವಿವರ್ಜಿತಮಾದ ।
ಸೋಮ ಗುರು-ಲಿಂಗ-ಜಂಗಮ ಮಹಿಮ-ಕಥನದಿಂ-।
ದಾ ಮಹಿತ ಭಕ್ತ-ಮಹಿಮೋಪಸ್ಥಲಂ; ಸಿದ್ಧಿಸುವುದೈದನೆಯ ಭೇದವು; ॥
ಶ್ರೀಮಹೇಶನನುಕ್ತಿಯಿಂ ಮನದಿನಂಗದಿಂ ।
ರಾಮಣೀಯಕಮಾಗಿ, ಭಜಿಪನೆ ಸುಭಕ್ತನೈ; ।
ಸಾಮನುತ ಭಕ್ತಿಯುಳ್ಳವನೆ ಶಿವಭಕ್ತನೀಶ್ವರಭಕ್ತಿಯೆ ಸೂತ್ತಮಂ; ॥೭೮॥

* *

ಪಾಪಿಯೀ ಭಕ್ತಿ-ಬಲದಿಂ ಪಾಪಮಂ ಗೆಲ್ವ-।
ನೋಪನಹ ಶಿವನಾದನತಿ ಪಾಪಿ ಚಂಡಂ ಮ-।
ಹಾಪಿತೃ ವಿಘಾತ-ಪಾತಕದಿಂದಲುಳಿಯುತಂ ಕೇಳಾರನೆಯ ಭೇದವ ॥
ತಾಪ-ಹರ ಶರಣ-ಮಹಿಮೋಪಸ್ಥಲವತಿಳಿದು, ।
ವೈಪರೀತ್ಯದ ದೋಷಮಂ ಕಳೆದು ಕೊಳ್ಳುವಂ; ।
ಕೋಪಹರ ಗುರು-ಲಿಂಗ-ಮುಖ್ಯ ಮಾಹಾತ್ಮ್ಯ ಸದ್ಬೋಧ ಶೋಧನ ಸಂಗತಂ; ॥

ಶರಣ ಮಹಿಮೋಪಸ್ಥಲಂ ಶಿವನನೈದುವಡೆ ।
ಪರದೇವತಾ ಸಂಪದಮನಾಸಿಸದಲಿಹುದೆ ।
ಶರಣಾಗತಿ; ಶ್ರದ್ಧೆಯಿಂ ಪಿಡಿದು ಶಿವನಲ್ಲಿಯಾಸ್ತಿಕಂ ತಾನಪ್ಪುದೆ ॥
ಹರನ ಹೊರತಾರುಮೆನಗಿಲ್ಲ ರಕ್ಷಕರೆಂದು, ।
ನೆರೆ ನಂಬುತಿಹುದೆ ಶರಣಾಗತಿಯ ಲಕ್ಷಣಂ; ।
ಪರತರನೆ, ಕೇಳಿನ್ನುಮಾಪ್ರಸಾದ-ಮಹತ್ವಮೆಂಬೇಳನೆಯ ಭೇದವ; ॥೮೦॥

* *

ತವಿಪ ಗುರು-ಲಿಂಗಾದಿ ಮಹಿಮೆ ಯ ವಿಶೇಷದನು-।
ಭವದ ನೆಲೆಗಾವುದುರು ಕಾರಣವೊ, ಕೇಳಿದುವೆ, ।
ಶಿವನಾ ಪ್ರಸಾದ-ಮಹಿಮೋಪಸ್ಥಲಂ ಮಗನೆ ತಿಳಿಯಿದರ ವಿಸ್ತಾರವ; ॥
ಶಿವಲಿಂಗ-ನಿಷ್ಠಂಗೆ ಗುರುಪೂಜಕಂಗೆ ಮೇಣ್ ।
ಸವನಿಪುದು ಹರ-ಕರುಣೆಯದು; ಸುಪ್ರಸಾದಮೆನಿ-।
ಸುವುದದುವೆ ಸದ್ಭಕ್ತಿ-ದಾಯಕಂ; ಸರ್ವಮಂ ರಕ್ಷಿಪುದು ತದನುಗ್ರಹಂ; ॥೮೧॥

* *

ಇನಿತೊರೆಯುತಿರೆ, ಗುರುವು; ಮತ್ತಮೆರಗುತೆ ಕೇಳ್ದ-।
"ನನಘ, ಸದ್ಗುರುವೆ, ಮುಂದಣ ಸ್ಥಲಂಗಳನೊರೆದು, ।
ಘನ ಮಹಾತ್ಮನೆ ಪೊರೆಯೆನಲ್" ಕುಮಾರನ ನೋಡಿ ಮತ್ತೊರೆದನಾ ಗುರುವರಂ;
ವಿನುತ ಭಕ್ತಾದಿ-ಸ್ಥಲತ್ರಯದುಪಸ್ಥಲಗ-।
ಳನೆ ಪೇಳ್ದಿನಯ್ಯ ಮೂವತ್ತೊಂದನಿನ್ನು ಕೇಳ್; ।
ಘನತೆಯಿಂ ಪ್ರಾಣಲಿಂಗಿಯುಪಸ್ಥಲಂಗಳಂ ತಿಳಿಯಲ್ಪೈದಿವು, ಪುತ್ರನೆ; ॥೮೨॥

* *

ಪ್ರಾಣಲಿಂಗಿಯು ಮತ್ತೆ ಪ್ರಾಣಲಿಂಗಾರ್ಚನಂ, ।
ಜಾಣ, ಕೇಳ್; ಶಿವಯೋಗ-ಸುಸಮಾಧಿ, ಲಿಂಗನೈಜಂ, ಮಹ-।
ಚ್ಛ್ರೇಣಿಯೊಪ್ಪಿರುವಂಗ-ಲಿಂಗಮಿವೆ, ಪಂಚ ಭೇದಂಗಳೆಂದರಿ, ಪುತ್ರನೆ; ॥
ಪ್ರಾಣ-ಸದಪಾನ-ಘಾತದ ಕಂದ-ಮಧ್ಯದೊಳ್ ।
ಕಾಣುವಾ ಚೇತನಮೆ ಪ್ರಾಣಲಿಂಗಮುದೆಂದು ।
ಮಾಣದರಿಯುತ್ತಿಹರು; ಜನಕೆ ಪ್ರಾಣಾಯಾಮ-ಪಟುಗಳ್ ದಿಟಂ ಶಿಷ್ಯನೆ;॥೮೩॥

ರವಿ-ಚಂದ್ರನಾಡಿಕಾ-ಘಟ್ಟನದೆ ಪ್ರಾಣಮುದು ।
ಜವದೆ ಲಯಮಂ ಪೊಂದುವದೊ, ಯೆಲ್ಲಿಯದನೆ, ತಿಳಿ; ।
ಪ್ರವಿಮಲ ಪ್ರಾಣ-ಲಿಂಗಮನಾಗಿ ತಿಳಿದವನೆ, ತದ್ಧಾರಿ, ತದ್ ರೂಪನೆ; ॥
ತವೆ ಪ್ರಾಣಮುರು ಶಕ್ತಿ ಲಿಂಗಮುದು ಚಿದ್ ಬ್ರಹ್ಮ-।
ಮವಿರತಂ; ತತ್‌ಸ್ಥಿತಿಯನರಿದಾ ಪ್ರಾಣಲಿಂಗಿ-।
ಗವರಾರ್ ಸಮರ್? ಜ್ಞಾನಿಯವನೆ ಯೋಗಿಯು,ಜ್ಯೋತಿರಾಕೃತಿಯು ಲಿಂಗಧಾರಿ;

ಇದುಮೊಂದನೆಯ ಭೇದಮಿನ್ನುಮೆರಡನೆ ವಿಭೇ-।
ದದ ಪರಿಯನರಿಯದುವೆ ಪ್ರಾಣಲಿಂಗಾರ್ಚನಂ; ।
ತದುಪಸ್ಥಲವ ಕೇಳು; ಸುಗುಣೋಪಚಾರನುಂ ಭಾವಿಸುತೆ ಪೂಜಿಸುವನೆ ॥
ಚಿದಮಲ ಪ್ರಾಣ-ಲಿಂಗಾರ್ಚಕಂ; ಹೃತ್ಕಮಲ ।
ವಿದಿತ ಪೀಠದೆ ಸ್ಥಾಪಿಸಿರ್ಪನವಿರತಮುಮಂ; ।
ಪದುಳ್ದು ಚಿತ್‌ಕ್ರಿಯೆಯೆಲ್ಲಮಂ ಸಮರ್ಪಿಸುತಿಹಂ ಪುಷ್ಪಾದಿಕವ ಭಾವದೆ; ॥೮೫॥

* *

ಇನ್ನು ಕೇಳ್, ಶಿವಯೋಗ-ಸುಸಮಾಧ್ಯುಪಸ್ಥಲವ; ।
ಮನ್ನಣೆಯ ಮೂರನೆಯ ಭೇದವಿದುವೆಂತೆನಲ್-।
ಸನ್ನಿಹಿತಮಾದಾಂತರ-ಕ್ರಿಯಾ-ರತಿಯಿರಲ್, ಪ್ರಾಣಲಿಂಗಾರ್ಚಾ-ಕ್ರಮಂ; ॥
ಮನ್ನಿಸಂದದೆ ನಡೆದಿರಲ್ ಶಿವಾತ್ಮ-ಧ್ಯಾನ, ।
ಸನ್ನುವಿತ ಸಂಪತ್ತಿಯೊದಗಲ್ ಸಮಾಧಿಯದೆ; ।
ಸನ್ನುತಾಖಿಲ ತತ್ತ್ವ-ಗಣದ ಮೇಲೆಸೆಯುತಿಹ ಬ್ರಹ್ಮಂ ಮಹಾಲಿಂಗವೆ; ॥೮೬॥

ಪ್ರಾಣಮೇ ಜೀವಮದು, ಪೊರಗಣಾ ವಾಸನೆಯೆ ।
ಕಾಣಿಪುದು, ವೈಕಲ್ಪ್ಯ-ವಿಶ್ವಮಂ; ತಿಳಿ ಸುತನೆ; ।
ವಾಣಿಗಸದಳಮಾದ ಚಿನ್ಮೋದಮಂ ಪಡೆವನಂತರ್ ಮನಂ, ಯೋಗಿಯು; ॥
ಕಾಣುವಂ ತದ್-ಬಲದೆ ಜಗವ, ಶಿವಮಯಮಾಗಿ; ।
ಮಾಣದಲೆ ಸಂಸಾರ-ವೃಕ್ಷಮಂ ಶಿವಯೋಗಿ ।
ಮಾಣದ ಶಿವಜ್ಞಾನ-ಪರಶುವಿಂ ಛೇದಿಪುದೆ, ಶಿವಯೋಗ ಸುಸಮಾಧಿಯು ॥೮೭॥

* *

ಕೇಳು, ನಾಲ್ಕನೆಯುಪಸ್ಥಲವೆ ಲಿಂಗದ ನಿಜಂ; ।
ತಾಳಿದಂತಸ್ಥ-ಶಿವ-ಲಿಂಗದಾ ಪ್ರತ್ಯಕ್ಷ ।
ಮೇಳದನುಭವದ ಸ್ಥಿತಿಯಾವುದುಂಟದುವೆ ತಿಳಿ, ಘನಲಿಂಗ ನಿಜವೆನಿಪುದು; ॥
ಪೇಳುವುದು ಶ್ರುತಿಯದೆ, ನಿರಂಜನಂ ಶಿವನೆಂದು; ।
ಮೇಳಯಿಸಿ ಸಚ್ಚಿದಾನಂದಾತ್ಮ-ತತ್ತ್ವಕ್ಕೆ ।
ಮೇಳಿತ ಮಹಾಲಿಂಗಮದುವೆ, ಯದರಿಂದಲೀ ವಿಶ್ವ-ಸಂಭವಮಪ್ಪುದು; ॥೮೮॥

ಐದನೆಯುಪಸ್ಥಲವ ನೀನಾದರದೆ ಕೇಳು; ।
ಮೋದದಿಂದಂಗ-ಲಿಂಗಾನ್ವಯಹವ, ನೀನರಿದು, ।
ಭೇದವಳಿಯುತ್ತಂಗ-ಲಿಂಗಿಯಾಗೈ, ಮಗನೆ ವಿವರಿಸುವೆ ನಾನೀಗಳೆ; ॥
ವೇದದೊಳ್ ಜ್ಞೇಯ-ಲಿಂಗಕೆ ಜ್ಞಾನವಂಗವೆಂ-।
ದಾದಿಯಿಂದೊರೆಯುತ್ತೆ, ಸುಜ್ಞಾನಿಗಳ್ ತಿಳಿದು, ।
ವಾದಿಸದೆ, ಸಾಧಿಸುತ್ತಂಗ-ಲಿಂಗಿಗಳಾದರಂತಾಗು, ನೀಂ ಕುಮಾರ; ॥೮೯॥

ಅಂಗದೊಳ್ ಲಿಂಗಮದು, ಲಿಂಗದೊಳಗಂಗಮದು, ।
ಭಂಗಮಿಲ್ಲದಲೆರಡುಮಾವನೊಳ್ ಬೆರೆದಿಹವೊ, ।
ತುಂಗನಹನವನಂಗ-ಲಿಂಗಿಯೆನಿಸುತ್ತೆ, ತಿಳಿಯದುವೆ ಸಮರಸದ ಮಾರ್ಗಂ; ॥
ಲಿಂಗಮುಂ ಮುಕ್ತಿ-ಪದಮಾದ ಬ್ರಹ್ಮಮೆಯೆಂದು, ।
ಸಂಗತ ಸು-ಶಾಸ್ತ್ರಂಗಳಿಂ ತಿಳಿದು ನಂಬಿದೊಡೆ, ।
ಪಿಂಗುಮೀ ದೇಹ ಮಿರ್ದೊಡುಮಾತನುರು ಮುಕ್ತನೆನುತೆ ಗುರು, ಪೌಸಿಯಾದಂ;॥

* *

" ಭಕ್ತ-ಮಾಹೇಶ-ಪ್ರಸಾದಿ-ಸುಪ್ರಾಣಂ- ।
ಗ್ಯುಕ್ತ ಸದುಪಸ್ಥಲಂಗಳನೆ ಮುವತ್ತಾರ ।
ಸಕ್ತಿಯಿಂ ಕೇಳಿದೇಂ; ಮುಂದಣಾಸ್ಥಲಗಳಂ ಪೇಳಿಂ''ದು ಪದಕೆರಗಲು ॥
ಮುಕ್ತನಹ ಗುರುಸಿದ್ಧ-ಶಿವಯೋಗಿ ಯೀಕ್ಷಿಸುತೆ, ।
ಸೂಕ್ತಿಯಿಂದಾ ಕುಮಾರಾಖ್ಯಾಹ್ವಯದ ಶಿಷ್ಯಂಗೆ ।
ರಕ್ತಿಯಿಂ ಪೇಳಿದಂ, ಶರಣ ಸ್ಥಲವನಿಂತು ಮುದದೆ ತದ್‌ಭೇದಾಖ್ಯೆಯಂ; ॥೯೧॥

''ಒರೆಯುವೇಂ; ಕೇಳ್‌ಕುಮಾರನೆ, ಶರಣ-ಸುಸ್ಥಲವ; ।
ನೆರೆ ಧರ್ಮದಿಂ ನಾಲ್ಕು ಭೇದಮಾಗಿಹುದದುಂ; ।
ಶರಣನಾ ತಾಮಸಿಕ-ನಿರಸನಂ, ನಿರ್ದೇಶಮುರು, ಶೀಲ-ಸಂಪಾದನಂ; ॥
ಪರಮ ಸತಿಯೊದವಳ್ ತನ್ನ ಪತಿಯಂ ಪುರುಷ-।
ವರನೆಂದು ತಿಳಿವಂತೆ, ಪರಶಿವನೆ ಶಕ್ತನೆಂ-।
ದುರೆ ಭಾವಿಸುತ್ತೆ, ಪರ-ವಿಮುಖನಾಗಿರುವವನೆ ಶರಣನೆಂದರಿ, ವತ್ಸನೆ; ॥೯೨॥

* *

ಕೇಳದುವೆ ಯೊಂದನೆಯುಪಸ್ಥಲಂ ಶಿಷ್ಯವರ; ।
ತಾಳಿರುವ ಹರ್ಷದಿಂದೆರಡನೆಯುಪಸ್ಥಲವ ।
ಪೇಳುವೇಂ; ಶರಣಸ್ಥಲಾನಂತರಂ ನಿನಗೆ ತಾಮಸಿಕ-ನಿರಸನಮನೆ; ॥
ತಾಳಿದ ಮಹಾಭಕ್ತಿ-ಮೋದಿಯಹ ಗುರುವಿನಿಂ-।
ದೇಳಿಗೆಯ ಕಳೆಯುವ ತಮೋ-ಭಾವಗಳ್ ನಸಿಪ-।
ವೇಳುತೋಡುವವು, ಕಾಮಾದಿಗಳ್; ಸೊಗಮುಹುದು, ತಾಮಸಿಕ-ನಿರಸನಮಿದೆ; ॥

* *

ಮೂರನೆಯುಪಸ್ಥಲವ ಕೇಳು, ನಿರ್ದೇಶವಮಂ; ।
ಸಾವಿರದ ಗುರುವು ತಾಮಸಿಕ-ಭಾವವ ಕಳೆದು, ।
ಭೂರಿ ಕರುಣೆಯೊಳೆ ಜ್ಞಾನಮನೆ ನಿರ್ದೇಶಿಪಂ ಕೇಳಿದುವೆ ನಿರ್ದೇಶನಂ; ॥
ಪಾರವಿಲ್ಲದ ಲಿಂಗ-ತತ್ತ್ವ-ಜಿಜ್ಞಾಸೆಯದೆ ।
ಸಾರಶೀಲಂ, ಮಗನೆ; ಸತ್-ಪತಿವ್ರತೆಗೆ ಪತಿ ।
ಕಾರುಣಿಕರಾಗ ಸಂಪಾದನದ ಪರಿಯಂತೆ, ಸುಜ್ಞಾನ-ಸಂಪಾದನಂ, ॥೧೪॥

ಶೀಲಸಂಪಾದನಮೆನಿಪ್ಪುದೈ, ಸತ್ಯಮಿದು; ।
ಮೇಲೆನಿಪ ಶರಣ-ಸ್ಥಲದೆ ಭೇದಮಂ ತಿಳಿದೆ ।
ಮೇಲಿಸಿದವಿಲ್ಲಿಗೆಲ್ಲಂ, ಸೇರಿ ನಲವತ್ತುಪಸ್ಥಲಂಗಳ್, ಕುಮಾರ; ॥
"ಪಾಲಕನೆ, ಮುಂದಣಾ ಸ್ಥಲಗಳಂ ಪೇಳೆಂದು ।
ಭಾಲಲೋಚನ-ಸಮಂಗಾ ಕುಮಾರಂ ನಮಿಸೆ, ।
ಲೀಲೆಯಿಂ ಮತ್ತೆ ಪೇಳಲ್‌ತೊಡಂಗಿದನಿಂತು ಕೊನೆಯಾ ಸ್ಥಲದ ಭೇದವ; ॥೧೫॥

"ಕೇಳು; ಶಿಷ್ಯನೆ, ಮೊದಲಿಗೈಕ್ಯ-ಸ್ಥಲದ ಭೇದ-।
ಮೇಳಮಂ, ತತ್ ಸ್ಥಲದೆ ನಾಲ್ಕುಪಸ್ಥಲಂಗಳುಂ-।
ಟೇಳಿಗೆಯ ಸಮರಸವ ಶಿವನೊಡನೆ ಪಡೆಯಲ್ಕೆ, ತಿಳಿಯಲೇವೇಳ್ಕವುಗಳಂ; ॥
ವೇಳುವವು ಮೊದಲು ಪೆಸರ್ಗಳನೆಂತೆನಲ್ಕೈಕ್ಯ ।
ಮಾಳವಾದಾಚಾರ-ಸಂಪತ್ತಿಯರಿಯಲ್ಕೆ ।
ಮೇಳಯಿಪುದೇಕಭಾಜನಮರಿಯೆ; ಸಹಭಾಜನಂ ನಾಲ್ಕು ಭೇದಗಳಿವೆ; ॥೧೬॥

* *

ಮೊದಲನೆಯದಾದ್ಯೈಕ್ಯ-ಸುಸ್ಥಲವ ಕೇಳ್, ಮಗನೆ; ।
ಪದುಳ್ದು ಲಿಂಗಾನಂದಮೆಂಬುದೊಂದು ಸಮುದ್ರ-।
ಮುದರಲ್ಲಿ ಯೀ ವಿಷಯ-ಮೋದವನೊಂದೇ ಕಣಮಿದಾ ಜಲಧಿಯೋಳ್ ಮುಳುಗಿದ ॥
ಸದಮಳಿನನೆಂದುಮಾಶಿಸನಿದಂ, ತಿಳಿಯವಂ; ।
ಪದೆದೈಕ್ಯನೆಂಬ ಪೆಸರಂ ಪಡೆವನಾವಾಗ-।
ಳದರಿಂದಹಂಭಾವಮುಳಿದು, ಲಿಂಗವೆಯಾಗಿ, ವಿಶ್ವಭಾವಮನಳಿವನು; ॥೧೭॥

ಜಗಮೇಕ-ಲಿಂಗಮಯಮಾಗಿ, ತೋರ್ಪುದವಂಗೆ; |
ಸೊಗಯಿಸುತಿಹೈಕ್ಯ-ಸ್ಥಲಂತಿಳಿದು; ಮುಂದಣಾ |
ಮಿಗಿಲೆನಿಪ್ಪಾಚಾರ-ಸಂಪತ್ತಿಯಂ ಕೇಳ್ವುದೆರಡನೆಯುಪಸ್ಥಲವಿದೆ; |
ಮಿಗುವ ಶಿವಚಿಂತನೆಯೆ, ಜಾಗರ-ಸ್ವಪ್ನ-ಸು-|
ಪ್ತಿಗಳಲ್ಲಿ ಸಹಜಮಾಗಿಯೆನೆ; ನಡೆದಿರ್ದೊಡದೆ |
ಸೊಗಯಿಪ ಶಿವೈಕ್ಯನಾಚಾರ–ಸಂಪತ್ತಿಯರಿ, ಕೃತ್ಯಕೃತಿ ಲೇಪವಿಲ್ಲಂ; ||

* *

ಕೇಳು, ಮೂರನೆಯದಾದೇಕ-ಭಾಜನ-ವಿಧಿಯ, |
ತಾಳಿ ಮಿಗೆ ವಿಶ್ವಮೀಶ್ವರನೆಂಬ ಭಾವನೆಯ |
ಬಾಳುವಂ; ಜೀವ ಶಿವರೇಕತ್ವ-ಭಾವಮಂ ಮರೆಯದಲೆ ಶಿವಯೋಗಿಯು ||
ತಾಳಿದೀ ಯೇಕಭಾಜನದುಪಸ್ಥಲಮಿದುವೆ; |
ಯೇಳಿಗೆಯ ಪಡೆಯಲ್ಕೆ ಸಹ-ಭಾಜನವ ಕೇಳ, |
ಭಾಳಲೋಚನನಪ್ಪೆ; ನಾಲ್ಕನೆಯುಪಸ್ಥಲಮಿದೆಂಬರಿವು ಮೂಡಿ ಬೆಳೆಯೆ; ||೯೯||

ತಾನೆ ಶಂಭುವು–ಗುರುವು ಶಿಷ್ಯನೆಂದರಿಯುತ್ತೆ, |
ತಾನೆ ಯೀ ಜಗಮೆಂಬ ಭಾವಮುಳವಡುತಿರಲ್, |
ಮಾನಿತನೆ, ಸಹ-ಭಾಜನೋಪಸ್ಥಲಂ ಸಿದ್ಧಿಸುವುದೆಂದು, ತಿಳಿಯೈ, ಸುತ; ||
ಮಾನನೀಯಾಂಗ-ಸ್ಥಲಂಗಳಿವನೆಣಿಸಲ್ಕೆ, |
ಧ್ಯಾನದಲ್ಲಿಡು; ತಿಳಿದು ನಲವತ್ತು ನಾಲ್ಕಹವು; |
ಮಾನಿಯೆ ಯಿವಂ ಚರಿಸಿ,ಲಿಂಗಸ್ಥಲಂಗಳಂ ತಿಳಿಯುತವುಗಳೊಳಿ ಬೆರೆಯೈ;||೧೦೦||

ಎಂದೊರೆದು, ಗುರುಸಿದ್ಧ-ದೇವನತಿ ಮೌನಿಯಾ-|
ದಂದಮಂ ತಿಳಿಯುತೆ ಕುಮಾರದೇವಂ ನಲಿದು, |
ವಂದಿಸುತೆ, ಸಾಷ್ಟಾಂಗಮಾಗಿಯೊಲಿದೇಳುತ್ತೆ, ಸ್ತುತಿಯಲ್ಲಿ ಮಗ್ನನಾದಂ; ||
ಚಂದಮಂ ಗುರುವರಿಯುತಾಚರಣೆಯಾ ಕ್ರಮುವ |
ಕುಂದದರಿಯಲ್ಕೆ ಗವಿಯೊಳ್ ಕರೆದುಕೊಂಡೈದಿ |
ಕಂದಿಸದೆ ಶಿಷ್ಯಂಗೆ ತಿಳಿಸುತಿರ್ದಂ ಭಕ್ತಿಯನು ಎಡಿದು ಸುಗುಣವೆರಸಿ ||೧೦೧||

ವೀರೇಶ-ಪುಣ್ಯಾಶ್ರಮಂ ಗದುಗಿನೋಳ್ ಮೆರೆವು-।
ದೋರಂತೆ ಶೋಭಿಸುವುದಲ್ಲಿ ಪಂಚಾಕ್ಷರನು-।
ದಾರ ಸ್ವ ಗುರುವರನ ಯೋಗದ ಸಮಾಧಿಯಿದೆ;ಕುಳಿತಿಲ್ಲಿ ಗುರು-ಕರುಣೆಯೋಳ್॥
ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ ।
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ ।
ವಿೂರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣ ಸಂಧಿ ಹದಿನೇಳ್ ॥೧೦೨॥

ಅಂತು ಸಂಧಿ ೧೭ಕ್ಕಂ, ಪದಂಗಳು ಒಂದುನೂರಾಎರಡಕ್ಕಂ;
ಇಂತು, ಒಟ್ಟು ಪದಂಗಳು ೯೨೭ ಕ್ಕಂ.
— ಮಂಗಲಂ—

॥ ಶ್ರೀ ಗುರು ಬಸವಲಿಂಗಾಯ ನಮಃ ॥

# ಹದಿನೆಂಟನೆಯ ಸಂಧಿ





॥ ಸೂಚನೆ ॥

ಶಕ್ತನಹ ಗುರುಸಿದ್ಧ ದೇವಂ ಜಗದ್ಗುರುವು ।
ಭಕ್ತಿಯುಳ್ಳ ಕುಮಾರ ದೇವಂಗೆ ದಿವ್ಯಂಗೆ ।
ಸಕ್ತಗೈವತ್ತೇಳು ಲಿಂಗಸ್ಥಲಂಗಳಂ ತಿಳುಪಿದಂ, ಕಾಂಕ್ಷೆಯುಂದಿಸೆ; ॥

* *

[ಸಂಧಿ ಪ್ರಾರ್ಥನಾ-ಪದ್ಯ]

ಕನ್ನಡಿಯದಿಲ್ಲದಲೆ ಮುಖವೆಂತು ಕಾಣಿಸದೊ, ।
ಚನ್ನಮೆನೆ ಲಿಂಗವಿಲ್ಲದಲಾತ್ಮದರಿವಿಲ್ಲ; ।
ನನ್ನಿಯಿದೆ ತಜ್ಜ್ಞಾನವಿಲ್ಲದೆ, ಜಗಂ ಲಿಂಗಮಂ ತೊರೆಯುತಿದ್ದೆ, ಯಭವನೆ; ॥
ಚಿನ್ನಧಿಯೆ, ಕನ್ಯೆಯೋಳ್ ಸ್ನೇಹಮಂ ಪುಟ್ಟಿಪಂ- ।
ತುನ್ನತನೆ ಭಕ್ತಿಯಂ ಪುಟ್ಟಪುದದಾಗದಿರೆ,
ಸನ್ನುತನೆ, ಗುರು-ರೂಪನಾಗಿ ಮತ್ತಂ ಬಂದು ಬೋಧಿಪುದು, ತನ್ನಿಷ್ಠೆಯಂ; ॥೧॥

* *

ಒಂದು ದಿನದೊಳ್ ಲತಾ-ಮಂಟಪದೆ ಗುರುವೈದು-|
ತಂದದಿಂ ಕುಳಿತಿರ್ದ ಸಮಯಮಂ ಸಾಧಿಸುತೆ, |
ಒಂದಿಸುತಲಾ ಕುಮಾರಾಹ್ವಯಂ ಶಿಷ್ಯವರನೈದುತ್ತೆ ಕೇಳ್ದನಿಂತು; ||
"ಇಂದು-ಧರ-ಸಮನೆ, ಭಕ್ತಾದಿಯೈಕ್ಯಾಂತ ಮಾ-|
ದಂದೆಸೆಯುಮಂಗ-ಸ್ಥಲಂಗಳಂ ಬೋಧಿಸಿದೆ, |
ಯಿಂದು ಲಿಂಗ-ಸ್ಥಲಂಗಳನೊಲಿದು ಬೋಧಿಸೈ; ನೀನೆ ರಕ್ಷಕನೆಂ"ದೆನೆ ||೨||

ಗುರುವೊಲಿದು, ಗುರ್ವಾದಿಮ-ಜ್ಞಾನಶೂನ್ಯಾಂತ |
ವಿರುತಿಹೈವತ್ತೇಳು ಲಿಂಗ-ಸ್ಥಲಂಗಳಂ |
ಪರಮ ಭಕ್ತಾದಿ-ಶ್ರಿತಂಗಳಂ ಗುರುಸಿದ್ಧನವಗೆ ಬೋಧಿಸಿದನಿಂತು:-|
"ನೆರೆ ಚಿತ್ತವಿಟ್ಟಾಲಿಸೈ, ಮಗನೆ; ನೀಂ ಮೊದಲು |
ಮೆರೆವ ಭಕ್ತ-ಸ್ಥಲದ ನವ ವಿಭೇದಂಗಳಂ |
ಸ್ಮರಣದಲ್ಲಿಡು, ತಿಳಿದು; ದೀಕ್ಷಾಗುರುಸ್ಥಲಂ, ಶಿಕ್ಷಾಗುರು-ಸ್ಥಲಮದುಂ; ||೩||

ಮತ್ತೆ ಪ್ರಜ್ಞಾಗುರುವು, ಸಕ್ರಿಯಾ-ಲಿಂಗಮದು; |
ಮತ್ತಮಾ ಭಾವಲಿಂಗಂ, ಜ್ಞಾನ ಲಿಂಗಮುಂ, |
ಸತ್ತಮ ಸ್ವಯ-ಚರ-ಪರಂಗಳಿವೆ, ಯೊಂಭತ್ತುಪಸ್ಥಲಂಗಳ ಪೆಸರ್ಗಳು; ||
ಉತ್ತಮನೆ, ಯಿವುಗಳುರು ಲಕ್ಷಣಮನಾಲಿಸೈ; |
ಯಿತ್ತು ಜ್ಞಾನವ, ಪಾಶಮಂ ಕಳೆವ ಸದ್ಗುರುವೆ, |
ಕುತ್ತವಿಲ್ಲದಿಹ ದೀಕ್ಷಾಗುರುವು ಸ್ವಾಚಾರಮಂ ತಿಳಿಸುವಾಚಾರ್ಯನು; ||೪||

*   *

ಇನ್ನು ಶಿಕ್ಷಾಗುರುವಿನಂದಮಂ ಕೇಳಯ್ಯ; |
ಸನ್ನುತನ ದೀಕ್ಷಾ-ಗುರುವೆ, ನಿಜ ಶಿಷ್ಯಂಗೆ |
ಸನ್ನುತಾಚಾರಂಗಳಂ ಕಲಸಿ, ಜ್ಞಾನಮಂ ಬೋಧಿಪನೆ ಶಿಕ್ಷಾಗುರು; ||
ಮನ್ನಣೆಯ ಗುರುವು ಪ್ರಜ್ಞಾಗುರುವುಮಿವಂಗೆ |
ಸನ್ನತರ್ ಜ್ಞಾನಗುರುವೆಂದು ಪೆಸರಿಟ್ಟಿಹರ್; |
ಚಿನ್ನಿಧಿಯ ಶಿಕ್ಷಾ-ಗುರುವಿನುಪದೇಶದೊಳ್ ಸಂಶಯವ ಪರಿಹರಿಸುವಂ; ||೫||

*   *

ನಿರ್ವಿಕಾರಂ ಕೃಪಾ-ಮಾತ್ರದಿಂ ರಕ್ಷಿಪಂ; |
ಸರ್ವ ದೇಶಿಕನಿವಂ, ಚಿತ್ ಪ್ರಕಾಶಕನಮಲ |
ಶರ್ವರೂಪಂ ಸಿದ್ಧರರಸನೀ ಜ್ಞಾನಗುರುವಿಗೆ ಸಮಾನರೆ ದೊರೆಯರು; ||
ಉರ್ವಿಯೊಳ್ ಗುರುವಿನಾ ವಿಜ್ಞಾನಯೋಗದಿಂ |
ಖರ್ವವಹ ಕ್ರಿಯೆಯರಿಯೆ ಲೀನಮಾಗುವುದೆಲ್ಲಿ |
ಯುರ್ವರೆಯೊಳದುವೆ ಶೋಭಿಪ ಕ್ರಿಯಾಲಿಂಗ ಮೆನಿಪುದು, ಪರಬ್ರಹ್ಮಮರಿಯ್ಯೆ; ||

* *

ಇದರ ಪೂಜೆಯೆ ಕೋಟಿಯಜ್ಞದಿಂದಧಿಕವಿದೆ; |
ಯಿದರ ಪೂಜೆಯೆ ಸರ್ವತಪದಿಂದಲಧಿಕವಿದೆ; |
ಯಿದರ ಪೂಜೆಯೆ ಸರ್ವ ನೇಮದಿಂದಧಿಕವಿದೆ; ಯಿದುವೆ ತಿಳಿಯಿಷ್ಟಲಿಂಗಂ;
ಇದನೆ ತಜ್ಜ್ಞಾನ-ಗುರುವಾದ ಜಂಗಮನೊಲಿದು |
ಸದಮಲಂ ಧರಿಸುತ್ತೆ, ಪೂಜಿಪಂ ಗುರುವು, ಮೇಣ್ |
ಸದಮಲಿನ ಶರಣರ್ಕಳರಿದು ಧರಿಸುತ್ತೆ ಪೂಜಿಸಿದರಾ, ಭಕ್ತರ್ಕಳು; ||೭||

* *

ಕ್ರಿಯೆಯೆಂತು ಲಯವ ಪೊಂದುವದೊ ತಿಳಿ ಯಂತೆ ಸುತ; |
ಲಯವ ಪೊಂದುವುದು, ತದ್ ಭಾವಮಾದೊಡುಮಲ್ಲಿ;|
ನಯ-ವಿದರ್ ಭಾವಲಿಂಗಮನಾಗಿ ಪೇಳ್ವರಿದು, ಸರ್ವಲಿಂಗೋತ್ತಮಮಂ; ||
ಭಯಹರಂ ಭಾವೋಪಚಾರಾರ್ಚಮರಿಯೆ ಚಿನ್- |
ಮಯ ಮಹಾ ಜ್ಯೋತಿಯಿದೆ; ಯೀ ಭಾವಬೋಧಕಂ |
ಜ್ಞೇಯವಹ ತಜ್ಜ್ಞಾನಮೆಲ್ಲಿ ಲಯಮೈದುವದೊ, ಕೇಳದುವೆ ಜ್ಞಾನಲಿಂಗಂ; ||೮||

* *

ಅಂತಪ್ಪ ಭಾವ-ಬೋಧಕಮಾದ ತಜ್ಜ್ಞಾನ- |
ಮೆಂತಾದಡುಮದಾವನೋಳ್ ಲೀನಮಾಗಿಹುದೊ, |
ಅಂತರ್ಗೆ ಪ್ರಿಯನಾದ ಸ್ವಯನಾಮನವನೆ ಕೇಳ್ ಸ್ವಾಭಿಧಾಸಿಯು ಮೆಣವಂ ||
ಸ್ವಾಂತಃಸ್ಥಿತ ಜ್ಞಾನಮಾ ಶಿವಧ್ಯಾನಮೇ -|
ಕಾಂತೈಕ-ಶೀಲತೆಯು ಭಿಕ್ಷೆಯಿವು, ನಾಲ್ಕು ಸ್ವಯ |
ಶಾಂತಾತ್ಮನುರು ಸಿದ್ಧ-ಕರ್ಮಂಗಳೆನಿಸುತಿಹವಿವನೆ, ನಿರಹಂ, ನಿರ್ಮಮಂ; ||೯||

* *

ನಿಜರೂಪ ಸುಜ್ಞಾನಿ ಸ್ವೇಚ್ಛಾ ಶಿವಾನಂದಿ ॥
ಸುಜನಪ್ರಿಯಂ ಸ್ವಯಂ ಚರಿಸುತ್ತೆ, ಪುಣ್ಯಮಯ ।
ಕುಜನತೆಯ ಕಳೆಯುವಂ ನೈಜ ಲೀಲೆಯೊಳವನೆ'ಚರನಾಮ' ಶಿವಯೋಗಿಯು; ॥
ಭಜಕರಂ ಪೊರೆಯುವಂ, ಪಾಪ-ಪುಣ್ಯವ ಮೀರಿ; ।
ಸ್ವಜನ-ಪರಜನ-ಭೇದಹರ, ಕಾಮ-ಮುಖ್ಯ-ಗುಣ- ।
ವಿಜಯನಾಗುತ್ತೆ, ಪರಶಿವನೆ ತಾನೆನಿಸಿ, ವಿಶ್ವಮಯ "ಪರ-"ರೂಪಿಯವನೆ;॥೧೦;॥

*   *

ಇದನಾಲಿಸುತೆ ಶಿಷ್ಯನಹ ಕುಮಾರಾಭಿಧಂ ।
ಸದಮಲಿನ ದೇವಗೆರಗುತ್ತೆ, ಕೇಳ್ದಂ, ಮತ್ತೆ, ।
"ಮುದದೆ ಪೇಳ್ಕೈ; ಗುರುವೆ, ಮಾಹೇಶ್ವರ-ಸ್ಥಲಮನೆಂದು ಕೈಮುಗಿಯುತಿರಲು ॥
ಪದುಳ್ದೊರೆದನಿಂತು ಶ್ರೀಗುರುಸಿದ್ಧಗುರುವರಂ; ।
ಸದಪಿಂ ಕುಮಾರ, ತಿಳಿ; ಮಾಹೇಶ್ವರ-ಸ್ಥಲದೆ ।
ಪುದಿದ ಭೇದಂಗಳೊಂಭತ್ತು, ತನ್ನಾಮಂಗಳಂ ಪೇಳ್ವೆನೈ, ಮೊದಲಿಗೆ; ॥೧೧॥

ಕ್ರಿಯೆಯಾಗಮಸ್ಥಲಂ, ಭಾವಾಗಮ-ಸ್ಥಲಂ, ।
ನಯದ ಜ್ಞಾನಾಗಮ-ಸ್ಥಲಮುಂ, ಸಕಾಯಮಂ, ।
ಭಯಹರಾಕಾಯಮುಂ, ಪರಕಾಯಮುಂ, ಧರ್ಮದಾಚಾರಮುಂ, ನಿತ್ಯಮಾ ॥
ಸ್ವಯಭಾವದಾಚಾರಮುಂ, ಜ್ಞಾನದಾಚಾರ-।
ಮಯಮಿದುಂ ನವ ವಿಧಕೆ ಕ್ರಮದಿಂದಲಿವುಗಳ ।
ದ್ವಯ, ಲಕ್ಷಣವ, ಕೇಳು; ಕೇಳ್ದುದಂ ಮರೆಯದಿರ್; ನೀಂ ಮನನಗೈ, ಕುಮಾರ; ॥೧೨॥

ತಿಳಿ, ಲಿಂಗ-ಪೂಜೆಯದೆ ಕ್ರಿಯೆಯು; ತತ್ ಶಾಸ್ತ್ರಮದು; ।
ಮಿಳಿತಾಗಮಂ ವತ್ಸ, ಘರ್ಷಣಮದಿಲ್ಲದಲೆ, ।
ಪೊಳೆಯದೆಂತಗ್ನಿಯಂತಾಚಾರಮಿಲ್ಲದಾ ಶಿವಚಿತ್-ಪ್ರಕಾಶಮಿಲ್ಲಂ; ॥
ತಳೆದಿರಲ್‌ವೇಳ್ಕು ತತ್‌ಸಿದ್ಧಿ-ಗುರುಶಾಸ್ತ್ರಮಂ ।
ತಿಳಿಯುತಿಹುದಾಗಳ್ "ಕ್ರಿಯಾಗಮ-ಸ್ಥಲ"ಮೆಂದು ।
ತಿಳಿಯೆ, ಭಾವಾಗಮಂ ಸಿದ್ಧಿಪುದು ಶಿವಯೋಗಿ ಭಾವಚಿಹ್ನಮೆ ತತ್‌ಸ್ಥಲಂ;॥೧೩॥

ಭಾವಮಿಲ್ಲದೆ ಪೂಜೆ ಮೊದಲಾದದಿಲ್ಲಮರಿ; |
ಭಾವಿಕನೆ, "ಜ್ಞಾನಾಗಸು ಸ್ಥಲ"ಕೆ ಭಾವಿಸಲ್ |
ಸಾವಧಾನತೆವೇಳ್ಕು, ಸತ್ಕರ್ಮ-ಸದ್ಭಾವಗಳ್ ಜ್ಞಾನಮೂಲಂಗಳು ||
ಭಾವುಕ ಸುಶಾಸ್ತ್ರದಿಂದೊರೆದಿಹ ಶಿವಜ್ಞಾನ- |
ಮಾವಗಂ ಮುಕ್ತಿಕಾರಣಮಪ್ಪುದೆಂದರಿಯೆ |
ಪಾವನ ಜ್ಞಾನಾಗಮಸ್ಥಲದ ಸಿದ್ಧಿಯಹುದೆಂದರಿಯಲವನೆ ಸಿದ್ಧಂ; ||೧೪||

* *

ಕಾಯಮಿಲ್ಲದೆ ಜ್ಞಾನಮುಂ, ಭಾವಮುಂ, ಕ್ರಿಯೆಯು-|
ಮಾಯತಮದಾಗದೈ; ಮೂರ್ತಿಯಿಂ ದೇವತೆಯ |
ನ್ಯಾಯಮೆನಲರಿಯುವಂತಾತ್ಮ-ಸಾಕ್ಷಾತ್ಕಾರಕೀ ಕಾಯಮಿರವೇಳ್ಕರಿ; ||
ಸಾಯುಸಮದಿಲ್ಲದೊಡೆ ಶಿವ-ಸಂಸ್ಕೃತಿಯ ಪಡೆದು, |
ಧ್ಯೇಯಕಾಶ್ರಯಮಾದುದೆಂದು ತಿಳಿದಾತನೆ "ಸ-|
ಕಾಯ-ಸುಸ್ಥಲ"ವ ಪಡೆಯುತಿಹನಾಸಿನ್ನ ಕಾಯಸ್ಥಲವ ಪೇಳ್ವೆನರಿಯೆ; ||೧೫||

* *

ದೇಹಮಿದು ತೋರಿಕೆಗೆ ಸ್ವಾಽಽಶ್ರಯಮದಾಗಿಹುದು; |
ಮೋಹಮಿದು ಜಗಮೆ ತನ್ನಯ ಶರೀರಂ ದಿಟಂ; |
"ನೇಹ ಮಾಯಾರಹಿತ"ನಾನೆಂಬುವುದೆ, ಸತ್ಯಮೆಂದರಿದೊಡವನಕಾಯಂ; ||
ಸ್ನೇಹ-ಮಾಯಾ-ಮಾರ್ಗಮುಂ ಮೀರಿ, ವಶಕರಿಸಿ, |
ದಾಹಮುಳ್ಳೀ ಪ್ರಕೃತಿಯಂ ಗೆಲ್ದು, ಶಿವಾತ್ಮ-|
ಮೂಹೆಯಿಲ್ಲದೆ; ಪರಬ್ರಹ್ಮನೆ ಶರೀರಮಾದವನೆ "ಪರಕಾಯ"ನೆನಿಪಂ; ||೧೬||

* *

ಪರಕಾಯನಾದಡುಂ, ಧರ್ಮದಾಚರಣೆಯಂ |
ನಿರುತಮಾವನುಮೇತರಿಂ, ಸದುಪಕಾರಮನೆ |
ಧರೆಯಲ್ಲಿ ನಡೆಯಿಸುವನದುವೆ "ಧರ್ಮಾಚಾರ-ಸುಸ್ಥಲ''ಮೆನಿಪ್ಪುದರಿಯೈ ||
ಉರು ಧರ್ಮಮದಹಿಂಸೆಮೊದಲಾದ ಸುಗುಣಗಣ-|
ಪರಿಯುತಂ ಜಗಕದುವೆಯಾಧಾರಮಾಗಿಹುದು; |
ನೆರೆ ನಡತೆಯೊಳಿದು ಸುಸ್ಥಿರಮಾಗಲಿದುವೆ ಧರ್ಮಾಚಾರಮಾರ್ಗಕ್ರಮಂ ||೧೭||

* *

ಧರ್ಮ-ಯುಕ್ತನ ಭಾವಮುದೆ ಕೇಳು ಸರ್ವಗ್ಗೆ; |
ನಿರ್ಮಿತಂ ತಿಳಿಯೆ "ಭಾವಾಚಾರ-ವಿಧಿ"ಯು ಸುತ, |
ನಿರ್ಮಲರುಪ ಭಾವಮೆಂದೊಡೆ,ಮನದ ವ್ಯವಹೃತಿಯು ಪರಿಪೂರ್ಣ; ಪರಶಿವಾಪ್ತಂ;||
ಪೆರ್ಮೆಯಿಂ ಶಿವಭಾವದಿಂ ಮಾಳ್ಪ ನಿತ್ಯಾದಿ |
ಕರ್ಮಮದೆ ಪಾವನಕೆ ಪಾವನಮೆನಿಪ್ಪುದೈ; |
ಶರ್ಮಕರಮಿದುವೆ ಜ್ಞಾನಾಚಾರಮಂ ಕೇಳು ಸರ್ವಕ್ಕೆ ಮೂಲಮಿದುವೆ; ||೧೮||

* *

ಸರ್ವ ಜೀವಿಗಳಾ ಸಮಾಚಾರಮೀತನುರೆ |
ಕೋರ್ವ "ಜ್ಞಾನಾಚಾರ"ಮೆನಿಸುವುದು ನಿಖಿಲರ್ಗ-|
ಪೂರ್ವಮಿದು, ಕೇಳ್; ಶಿವಾದ್ವೈತ-ಸುಜ್ಞಾನಮದು ನಡೆಯಲ್ಲಿ ತೋರುತಿರಲು; ||
ಉರ್ವರೆಯೊಳೊಪ್ಪುವೀ ಪೆಸರ ಪಡೆಯುವುದಿದುವೆ |
ಯುರ್ವಿಯೋಳ್ ಮೋಕ್ಷ-ಕಾರಣಮಪ್ಪುದಿಲ್ಲಿ ಗುರು; |
ಪೂರ್ವಜರ್ ಚರಿಸಿರ್ಪ ಪದಿನೆಂಟುಪಸ್ಥಲಗಳಂ ಪೇಳ್ದೆನೈ, ಶಿಷ್ಯನೆ;" ||೧೯||

* *

ಶ್ರೀ ಜಗದ್ಗುರುವರ್ಯ-ಗುರುಸಿದ್ಧದೇವಂಗೆ |
ಪೂಜನೀಯಂಗೆ ವಂದಿಸಿ ಕುಮಾರಂ ಕೇಳ್ದ-|
ನೋಜದಿಂ, "ಸದ್ಗುರುವೆ, ಸತ್‌ಪ್ರಸಾದಿಯ ಲಿಂಗ-ಸುಸ್ಥಲಂಗಳ ಪೇಳೆ"ನೆ ||
ನೈಜ ಕೃಪೆಯಿಂ ಗುರುವು ಶಿಷ್ಯನಂ ನೋಡುತ್ತೆ, |
ಸೋಜಿಗಮೆನಲ್ ನವೋಪಸ್ಥಲಂಗಳ ಪೆಸರ |
ತೇಜಕಾಗಿಯೆ ಪೇಳ್ದನಿಂತು, ಮಹಿಮಾನ್ವಿತಂ ತಲ್ಲಕ್ಷಣಂಗಳನವಂ; ||೨೦||

ಅಮಿತ ಕಾಯಾನುಗ್ರಹಂ, ಸ್ವೇಂದ್ರಿಯಾನುಗ್ರ-|
ಹಮುರೆ, ಪ್ರಾಣಾನುಗ್ರಹಂ, ಕಾಯಾರ್ಪಣಂ, |
ವಿಮಲ ಕರಣಾರ್ಪಣಂ, ಭಾವಾರ್ಪಣಂ, ಶಿಷ್ಯ ಸುಸ್ಥಲಂ, ಶುಶ್ರೂಷಣಾ ||
ಸಮುಸುಸ್ಥಲಂ, ಸೇವ್ಯಸುಸ್ಥಲಂ, ಪೆಸರ್ಗಳಿವೆ; |
ಕ್ರಮದೊಳಿವುಗಳ ಲಕ್ಷಣಂಗಳಂ ಕೇಳ್ ಮಗನೆ; |
ಸಮತೆಯಿಂ ಕಾಯಮಂ ತೋರ್ದನುಗ್ರಹಿಸೆ "ಕಾಯಾನುಗ್ರಹಾಖ್ಯ"ನವನೆ;||೨೧||

* *

ಮೂರ್ತಿಗತನಾಗಿಯೆ ಶಿವಂ ಪೂಜೆಯಂ ಕೊಂಡು, |
ಸ್ಫೂರ್ತಿಯಿಂ ಪೂಜಕನ ಪೊರೆವಂತೆ, ಶಿವಯೋಗಿ |
ಕೀರ್ತಿಯಂ ಪಡೆಯುವಂ, ಕಾಯದೊಳಗಿರ್ದು, ಭಕ್ತಾನುಗ್ರಹವ ಮಾಳ್ಪನು; ||
ವಾರ್ತೆಯಂ ಕೇ"ಳಿಂದ್ರಿಯಾನುಗ್ರಹಾ"ಭಿಧನ |
ಪೂರ್ತಿಯಹ ಶಿವನನೀಕ್ಷಿಸುತೆ, ಕರಣ ವಿವೇಕಿ.|
ಯಾರ್ತಿಯಂ ಕಳೆವಸಿಂದ್ರಿಯ-ಮುಖ್ಯ ಮನವ ಹರಗರ್ಪಿಸುತೆ ಶಿವರೂಪಿಯು; ||

* *

ಹೊರಗೀಕ್ಷಿಸಲ್ ಜಗಂ ಶಿವನಾಗಿ ತೋರುವುದು; |
ಪರಮೇಂದ್ರಿಯಾನುಗ್ರಹಾಖ್ಯನಾಗುವನಾಗ; !
ವರ ಕುಮಾರನೆ, ಕೇಳ್ವುದಿನ್ನು "ಪ್ರಾಣಾನುಗ್ರಹ"ಸ್ಥಲದ ಸ್ಥಿತಿಯನೊರೆವೇಂ; ||
ಪರಕಾಯ ಶಿವನ ದರ್ಶನಮುಸುನಿರೋಧದಿಂ |
ದೊರೆಯೆ, ಪ್ರಾಣಾನುಗ್ರಹಂ ಮಗನೆ ಲಿಂಗದೋಳ್ |
ನೆರೆ ದೃಷ್ಟಿ-ಸಾಧನದಿನಾದಡುಂ ಪ್ರಾಣಲಯಮಾಗಲದು ಸಿದ್ಧಿಸುವುದು; ||೨೩||

* *

ಕಾಯದಭಿಮಾನಮಂ ಪರಶಿವಂಗರ್ಪಿಸಲ- |
ಪಾಯಮಿಲ್ಲದಲೆ "ಕಾಯಾರ್ಪಣಂ" ಸಿದ್ಧಿಪುದು- |
ಪಾಯದಿಂ ದೇಹದಿಂದಲೆ ದೊರೆವ ಸುಖವ ಹರಗರ್ಪಿಪೊಡೆ, ಸಿದ್ಧಿಸುವುದು; ||
ಧ್ಯೇಯವಹ ಲಿಂಗದೋಳ್ ಸರ್ವ-ಕರಣಂಗಳಂ |
ಸಾಯಸಮುದಿಲ್ಲದಲೆ ತಲ್ಲೀನಗೊಳಿಸುವುದೆ |
ಶ್ರೇಯವಹ "ಕರಣಾರ್ಪಣಂ" ಸಿದ್ಧಿಸುವುದಾಗಳೀತಂಗೆ, ದುಃಖಮಿಲ್ಲಂ; ||೨೪||

* *

ಭಾವಾರ್ಪಣಂ ಮುಖ್ಯಮಿದನೆ ನೀಂ ಚರಿಪುದೈ; |
ಭಾವಾರ್ಥವೇದಿಗಳ್ ಮಾನಸ-ಜ್ಞಾನಗತಿ |
ಯಾವಾಸಮುದೆ ಭಾವಮೆಂದೊರೆವರದನರಿಯುತರ್ಪಿಪುದೆ ಭಾವಾರ್ಪಣಂ;
ದೇವಾತ್ಮನಹ ಗುರುವಿಗುರು ಶಾಸನೀಯನಹ- |
ನಾವಂ ಸುಕೃತ್ಯನವನರಿಯಲ್ಕೆ "ಶಿಷ್ಯ ಸ್ಥ- |
ಲಾ"ಽಽವಿಷ್ಟನೆನಿಪನೈ; ಗುರುಶಿವರೊಳೇಕತ್ವಮಂ ತಿಳಿದು ಪೂಜಿಸುವನು; ||೨೫||

* *

ಗುರುವಿಂದೆ ಬೋಧಿಸಲ್ಪಟ್ಟು ಸುಜ್ಞಾನಿಯಾ- |
ಗಿರುತಿರ್ದಡುಂ ಬಿಡದಲವನ ಶುಶ್ರೂಷೆಯೊಳ್ |
ನಿರತನಾಗಿಹನೆ "ಶುಶ್ರೂಷಸ್ಥಲಾಽಽಪನ್ನನೆನಿಸಿಪನೈ ಯಾಜ್ಞಾಪರಂ; ||
ಸ್ಥಿರವಾಗಿ ಶುಶ್ರೂಷೆಯಂ ಮಾಡಿ, ಗುರುವಿಂದೆ |
ಪರತರ ಜ್ಞಾನಮಂ ಪಡೆದು, ಬೋಧಿಸುವವನೆ |
ಪರಮ ಸೇವ್ಯನೆನಿಪ್ಪನಾತನೆ ಸ್ವಶಿಷ್ಯರ್ಗೆ "ಸೇವ್ಯಸ್ಥಲಂ" ತಿಳಿಯಿದೆ; ||೨೬||

ಇದು ಪ್ರಸಾದಿ-ಸ್ಥಲಂ; ತಿಳಿಯಿದರುಪಸ್ಥಲಗ- |
ಳೊದವುತಿಪ್ಪತ್ತೇಳು ಪೂರ್ಣವಾಗಿಪವಿಲ್ಲಿ- |
ಗೊದವಿದಾನಂದದಿಂ ಮನನ ಮಾಡೈ, ಯಿವಂ; ಕಲ್ಯಾಣಮಪ್ಪುದೆನಲು; ||
ಪೊದಳ್ದೇಳ್ದು ವಂದಿಸುತಲಿಂತು ಕೇಳ್ದಂ ಗುರುವ-|
ನುದಯಿಸಲ್ ಭಕ್ತಿಯದು ಪ್ರಾಣಲಿಂಗಿ-ಸ್ಥಲವ |
ಮುದದೆ ಪೇಳ್ಳೈ, ಕರುಣೆಯಿಂದೆಲ್ಲಮಂ; ತಿಳಿದು, ಮನನಮಂ ಮಾಳ್ಪೆ ನೊರೆಯೈ;

* *

ಗುರುಸಿದ್ಧನಾಗಿಂತು ಪ್ರಾಣಲಿಂಗಿ-ಸ್ಥಲದ |
ನೆರೆ ನವೋಪಸ್ಥಲಾಂಚಿತನಾಮ-ಲಕ್ಷಣಮ- |
ನೊರೆಯುತಿಹನೆಂತೆನಲಾತ್ಮಸ್ಥಲಮುಮಂತರಾತ್ಮಸ್ಥಲಂ ಮತ್ತೆ ಪರಮಾತ್ಮಸ್ಥಲ ಮಿದು ||
ಪರಮ ನಿರ್ದೇಹಾಗಮ-ಸ್ಥಲಂ, ಮತ್ತಮಾ |
ಸರಸ ನಿರ್ಭಾವಾಗಮ-ಸ್ಥಲಂ, ತಿಳಿಯಲ್ಕೆ |
ಮೆರೆವ ನಷ್ಟಾಗಮ ಸ್ಥಲಮುಮಾದಿ ಪ್ರಸಾದಿಯು ಸದಂತ್ಯಪ್ರಸಾದಿ; ||೨೮||

ಸೇವ್ಯಪ್ರಸಾದಿಯಿನ್ನಿವರ ಲಕ್ಷಣವ ಕೇಳ್; |
ಭವ್ಯಮಾಗಿಹುದಾತ್ಮಮಿದು ತತ್ತ್ವಮರಿಯಯ್ಯ; |
ಶ್ರಾವ್ಯ ಗುರುಬೋಧೆಯಂ ಜೀವಭಾವಂ ಬಿಡಲ್ ತೋರ್ಪುದದು, ಸ್ಥಿರಮಾಗಿಯೆ;
ನವ್ಯ ಕೇಶದ ತುದಿಯ ಶತಭಾಗದಿಂ ಸೂಕ್ಷ್ಮ |
ದಿವ್ಯಮಾಗಿಯೆ ಹೃದಯ-ಮಧ್ಯದೊಳಗಿರ್ದು ಕ- |
ರ್ಮವ್ಯವಹೃತಿಯ ಫಲವ ಭೋಗಿಸುವದಶರೀರಿಯಾಗಿರ್ದಡುಂ ದೇಹಿಯು; ||೨೯||

ಇದನರಿಯುತಿನ್ನಂತರಾತ್ಮ ಲಕ್ಷಣಮನರಿ; ।
ಪೊದಳ್ದು, ಜೀವಾತ್ಮ-ಪರಮಾತ್ಮ-ಮಧ್ಯಸ್ಥಿತಿಯ- ।
ದೊದವಿರ್ಪುದಾವಂಗವಂ ತಿಳಿಯಲಂತರಾತ್ಮಂ ಸ್ವಗುರುಬೋಧಗಮ್ಯಂ; ॥
ಪದಪಿಂದೆ ಜೀವತ್ವಮುಂ ಗುರುಕೃಪಾ-ಬಲದೆ ।
ಪದೆದು ಕಳೆದವನಾಗಲಂತರಾತ್ಮನೆನಿಪ್ಪ- ।
ನೊದವಿದಾ ಪರಮಾತ್ಮ ಸಲ್ಲಕ್ಷಣವ ಕೇಳಿ, ನೀನೆ ಪರಮಾತ್ಮನಾಗೈ; ॥೩೦॥

ಗುರುವಿನುಪದೇಶದಿಂದಾಣವಾದಿಕ ಮಲವ ।
ತೊರೆಯುತ್ತೆ, ಸಾಮರಸ್ಯವನಂತರಾತ್ಮನಾ- ।
ಗಿರುವ ಪರಮಾತ್ಮನೊಡನೈದುವಂ ತಿಳಿ, ಸುತನೆ; ಪರಮಾತ್ಮನೆನೆ ತೈಜಸಂ; ॥
ಪರಶಿವಂ ಸ್ವಪ್ರಕಾಶಂ ನಿತ್ಯ ನಿರ್ಮಲಂ ।
ಮೆರೆವ ಬ್ರಹ್ಮಾಂಡ ಪಿಂಡಾಂಡ ಚಿದ್-ವ್ಯಾಪಕಂ ।
ಪರಿಪೂರ್ಣ ಸಚ್ಚಿದಾನಂದನೋಳ್ ಬೆರೆದೊಡಿನ್ನೊಂದು ವಸ್ತುಮದಿಲ್ಲವು; ॥೩೧॥

ನಿತ್ಯಮಾತ್ಮಂಗೆ, ಪರಮಾತ್ಮ ಸ್ವರೂಪಂಗೆ ।
ಸತ್ಯನಿರಹಂಕೃತಿಗೆ ತ್ಯಕ್ತತನು-ಧರ್ಮಂಗೆ ।
ಪ್ರತ್ಯಗಾತ್ಮಂಗೆ ನಿರ್ದೇಹಾಗಮಾಽಽಪ್ವಯಂ ಸಲ್ಲುವುದು ನಿರ್ಗುಣಂಗೆ; ॥
ಅತ್ಯಗಾಧಂಗೆ ಭಾವವಿಕಾರಮಿಲ್ಲಿವಗೆ; ।
ಮತ್ಯತೀತಂಗೆ ಪೆಸರೊಂದೆಯಿಹುದೀತಂಗೆ; ।
ನುತ್ಯ-ಮಹಿಮಂಗೆ ನಿರ್ಭಾವಾಗಮಾಖ್ಯೆಯುಂ ನೂತನಮಿದುವೆ, ಜ್ಞಾನಿಗೆ;॥೩೨॥

ಇವನ ಸುಜ್ಞಾನಮುಂ ಭೇದ-ಶೂನ್ಯಮದಾಗಿ- ।
ಯವನಲ್ಲಿ ಜ್ಞಾತೃ-ಮುಖ್ಯ-ತ್ರಿಪುಟಿಯಿಲ್ಲದಿರೆ, ।
ತವೆ ಜ್ಞಾನಮಿದು ನಷ್ಟಭಾವದಿಂದಿರುತಿರಲ್ ನಷ್ಟಾಗಮಾಖ್ಯನಪ್ಪಂ ॥
ಶಿವನೆ ಸರ್ವಾದಿಷ್ಟಮವನೆ ಜಗದಾದ್ಯನುಂ ।
ಜವದೆ ತದನುಗ್ರಹದಿ ನಾದಿಪ್ರಸಾದಿಯೆಂ- ।
ಬುವ ನಾಮಮಂ ತಳೆವನವಿಕಾರಿ ಪದದೊಳಿಹ ಶಿವಯೋಗಿಯಮಲರಾಗಿ ॥೩೩॥

"ಮಗನೆ, ನೀನಂತ್ಯಪ್ರಸಾದಿ ಲಕ್ಷಣವ ಕೇಳ್ |
ಮಿಗೆ ಯಂತ್ಯಮೆನೆ ಲಯಂ ತದನುಭವಮಾಗದದೆ |
ಮಿಗಿಲಹ ಪ್ರಸಾದಿಮಂ; ತದ್ವಂತನಂತ್ಯ-ಪ್ರಸಾದಿಯೆನಿಪಂ ಜಗದೊಳೆ; ||
ಸೊಗವೀವ ಶಿವನೆ ಗುರುವವನೆ ಸೇವ್ಯಂ ಜಗಕೆ; |
ಮಗುಳ್ದನ್ಯಮಿಲ್ಲವೆಂಬನುಭವವೆ ಸುಪ್ರಸಾ- |
ದಗತಿಯದನ್ಯೈದಿಹನೆ ಸೇವ್ಯ-ಪ್ರಸಾದಿಯಿವಗಿಲ್ಲಮನ್ಯದ್ ಭೇದವೆ; ||೩೪||

ಇದು ಪ್ರಾಣಲಿಂಗಿ ಲಿಂಗಸ್ಥಲಂ ನಾಲ್ಕು ಸ್ಥಲ- |
ಕೊದವಿ ಮೂವತ್ತಾರುಪ-ಸ್ಥಲಂಗಳ ಪೇಳ್ದೆ- |
ನೊದಗಿದಾನಂದದಿಂ ಸ್ಮರಣದಲ್ಲಿಡಿವಂ; ಸುಖಾತ್ಮನಾಗುವೆ, ಶಿಷ್ಯನೆ;"||
ಮುದದೊಳಿಂತೊರೆದು, ಮೌನವ ತಳೆಯೆ, ಗುರುವರಂ |
ಸದಮಲಂ ಶಿವಕುಮಾರಾಹ್ವಯಂ ಮತ್ತೀಳ್ದು |
ಪೊದಳ್ದು, ನಮಿಸುತ್ತೆ: ಕೈಮುಗಿದು ಶರಣಸ್ಥಲಮನೊರೆಯೆಂದು ಪ್ರಾರ್ಥಿಸಿದನು;

ಮತ್ತಮಾನಂದದಿಂ ಗುರುಸಿದ್ಧಗುರುವರಂ |
ಸೊತ್ತಮಂ ಶಿಷ್ಯನಾ ಪ್ರಾರ್ಥನೆಗೆ ಮನವೊಲಿಯೆ |
ಬಿತ್ತರಿಸಲನುವಾಗಿಹಂ, ಶರಣ ಸುಸ್ಥಲದ ಪನ್ನೆರಡುಪ ಸ್ಥಲಗಳಂ; ||
ಮತ್ತೆ ಕೇಳ್ ದೀಕ್ಷಾ-ಪದೋದಕಂ ಘನಶಿಷ್ಯ-|
ಸತ್ತಮನೆ-ಶಿಕ್ಷಾಪದೋದಕಂ ಸದ್ಭಕ್ತಿ- |
ವಿತ್ತಮನೆ- ಜ್ಞಾನ ಪಾದೋದಕಂ ಸತ್‌ಕ್ರಿಯಾನಿಷ್ಪತ್ತಿ, ಸುಸ್ಥಲಮದುಂ ||೩೬||

ಭಾವ-ನಿಷ್ಪತ್ತಿಯುಂ ಜ್ಞಾನ-ನಿಷ್ಪತ್ತಿಯುಂ |
ಭಾವುಕನೆ, ಪರಮ ಪಿಂಡಾಕಾಶಮುಂ ಸುತನೆ |
ಭಾವಿಕನೆ ಯೆಸೆವ ಬಿಂದ್ವಾಕಾಶಮುಂ ಮಹಾಕಾಶಸ್ಥಲಂ ಮತ್ತೆ ಕೇಳ್ ||
ಓವುವ ಕ್ರಿಯಾ ಪ್ರಕಾಶಸ್ಥಲಂ ಸುಗುಣಿವರ |
ಸೇವಿತನೆ ಭಾವಪ್ರಕಾಶಸ್ಥಲಂ ಮಗಳ್ದು |
ದೈವಿಕನೆ, ಜ್ಞಾನ ಪ್ರಕಾಶ ಸ್ಥಲಂ ತಿಳಿಯಲಿವರ ಲಕ್ಷಣಮನೊರೆವೆನೇಂ; ||೩೭||

* *

ದೀಕ್ಷೆಯಿಂ ಪ್ರಾಪ್ತಮಾದದ್ವೈತ ಜ್ಞಾನಮದೆ |
ಸಾಕ್ಷಿಯೈಕ್ಯಾನಂದಮಿದರಿಂದೆ ತತ್‌ಸ್ಥಲಾ- |
ಧ್ಯಕ್ಷ "ದೀಕ್ಷಾಪದೋದಕ"ವೆಂದು ತಿಳಿ, ಮಗನೆ; ದೀಕ್ಷೆಯೆನೆ ಸದುಪದೇಶಂ; ||
ರಕ್ಷಿಸುವ ಗುರುವೆ ಪದಮೆಂದೊಡರ್ಥಂ ತಿಳಿಯೆ; |
ಲಕ್ಷಿಸಲ್ಕುದಕದರ್ಥಂ ಶಿಷ್ಯನೆನಿಸುವನ- |
ಪೇಕ್ಷಿಸುವ ಗುರುಶಿಷ್ಯರೈಕ್ಯದಾನಂದದುಪದೇಶಮಿದರರ್ಥಮಹುದು; ||೩೮||

* *

ಗುರುಶಿಷ್ಯರೂಪಮಾಗಿಹ ಜ್ಞಾನ-ಮನನಮದೆ; |
ಯರಿಯೆ ಶಿಕ್ಷೆಯಿದೆನಿಪುದವರ ಸಮರಸಮೆ ತಿಳಿ; |
ಸರಸವಹ"ಶಿಕ್ಷಾ-ಪದೋದಕೋಪಸ್ಥಲಂ" ಜ್ಞಾನ ಪಾದೋದಕವ ಕೇಳ್ ||
ಪರಮೈಕ್ಯ ಸಂಪನ್ಮುದಾಶ್ರಯನದಾವನವ- ||
ನುರು ಜಗಕೆ ಜ್ಞಾನ-ಗುರುವವನೊಳೈಕ್ಯಮೆ ಶಿಷ್ಯ- |
ವರನಿಗಿದೆ "ಜ್ಞಾನ-ಪಾದೋದಕಂ" ಸಚ್ಛಿಷ್ಯನಾದಾಗ ತಿಳಿಯುವುದದು; ||೩೯||

ಇನ್ನು, ಕೇಳೈ, "ಕ್ರಿಯಾ-ನಿಷ್ಪತ್ತ್ಯುಪ-ಸ್ಥಲ"ವ; |
ಮನ್ನಣೆಯ ಜ್ಞಾನಿಗಾ ಕರ್ಮಂಗಳಿಲ್ಲವೈ; |
ಸನ್ನುತನೆಯಿರ್ದಡುಂ ಜನ್ಮ-ಹೇತುಗಳಿಲ್ಲ ಹುರಿದ ಬೀಜಗಳಂತೆಯೆ; ||
ಉನ್ನತನೆ "ಭಾವನಿಷ್ಪತ್ತಿ"ಯಂ ತಿಳಿಸುವೆಂ; ||
ಚಿನ್ನಿಧಿಗೆ ಭಾವಮಂತಿರ್ದಡುಂ ಫಲಿಸದದು; |
ಸನ್ನಿಹಿತಮಾಗಿಹುದದಾಡುಂ ಶಿವನಲ್ಲಿ ನೆಲಿಸದದು, ಮತ್ತೊಂದರೊಳ್ ||೪೦||

* *

ಶಿವನಲ್ಲಿ ಲೀನಮಾಗಿರೆ ಜ್ಞಾನಿ-ಚಿತ್ತಮದು|
ನವ ವಸ್ತುವಾವುದುಂ ಜ್ಞೇಯಮಾದುದೆಯಿಲ್ಲ; |
ತವೆ ಪಾಲ-ಕೆನೆಯೆ ನವನೀತಮಾದಂತೆ, ತಿಳಿ, "ಜ್ಞಾನ-ನಿಷ್ಪತ್ತಿ"ಯ ಸುತ; ||
ತವ ಪಿಂಡದೊಳಿಹಾತ್ಮಮದು ಪೊರಗುಮಿರ್ಪುದೈ, |
ತವಿಪ ಪೊರಗಣ ಬಯಲು ಪಿಂಡದೊಳಗಿರ್ಪಂತೆ, |
ಸುವಿವೇಕಮಿದುವೆ "ಪಿಂಡಾಕಾಶ-ಸುಸ್ಥಲಂ" ತದ್ ಘಟಾಕಾಶದಂತೆ; ||೪೧||

* *

ಎಂದರಿಪ ಮೇಲೆ 'ಬೀದ್ವ್ಯಾಕಾಶ' ಸಿದ್ಧಿಯಹು-।
ದಂದದಿಂ ಸರ್ವ ಜೀವಿಗಳ ಮೇಲಾಗಸಂ-।
ಪೊಂದಿರುವ ತೆರದೊಳಾತ್ಮಂ ವ್ಯಾಪ್ತನಹನೆಂಬರಿವೆ ತತ್‌ಸ್ಥಲಮೆನಿಪುದು; ॥
ಕುಂದದಾತ್ಮಂಗೆಂತು ಪಿಂಡಸ್ಥಮಾಗಸಂ।
ಸಂದಿಹುದಭಿನ್ನಮಾಗಂತೆ ಪರಮಾತ್ಮನೆಂ-।
ಬೆಂದರಿವೆ ತನ್"ಮಹಾಕಾಶ-ಸುಸ್ಥಲ'ಮೆಂಬುದಾಗಿ ಸುಜ್ಞಾನಿಯೊರೆವಂ; ॥೪೨॥

* *

ಮೇಲಹ "ಕ್ರಿಯಾಪ್ರಕಾಶ-ಸ್ಥಲ"ವ ಪೇಳುವೆಂ; ।
ಕಾಲಸಮತೀತ ಶಿವನೊಡನಾತ್ಮ-ಸಂಧಾನ-।
ಮೋಲಯಿಸಲಾ ಸ್ಥಿತಿಗೆ ತನ್ನಾಮಮೊದಗುವುದು, ಕ್ರಿಯೆಯಾಗಳಾ ಶಿವಮಯಂ॥
ಮೇಲಯಿಪ ಜಲಧಿ-ರೂಪಂ ತರಂಗಾದಿಕಂ ।
ಬಾಲಕನೆಯುದರಂತೆ ಭಾವಗಳ್ ಬುದ್ಧ್ಯಾದಿ-।
ಮೇಲದಿಂ ಭಿನ್ನಮಾದಡುಮಾತ್ಮರೂಪಮೆನೆ "ಭಾವ-ಪ್ರಕಾಶಸ್ಥಲಂ;" ॥೪೩॥

* *

ಶಿವಯೋಗಿಯಾವಾಗಳೀ ಲೋಕಮಂ ಪರಮ ।
ಶಿವರೂಪಮಾಗಿ ತಿಳಿಯುತ್ತೆ, ಬಾಳುತ್ತಿಹನೊ, ।
ಶಿವ-ಸಮಂಗಿಲ್ಲಮಾಗಳ್ ಜ್ಞೇಯಮದುವೆ ತಜ್‌ಜ್ಞಾ"ನ-ಪ್ರಕಾಶಸ್ಥಲಂ;" ॥
ಶಿವರೂಪಿಯೀ ಶರಣ, ಲಿಂಗಸ್ಥಲಮನೊರೆದು ।
ಶಿವನ ನೆನೆಯುತೆ ಮೌನಿಯಾಗಿರಲ್ ಸುಕುಮಾರ ।
ಶಿವಕಲ್ಪಗಾಗೆರಗಿ, ಕೇಳ್ದನೆಂತೆನೆ, "ದೇವ, ಪೇಳ್ವುದೈಕ್ಯ-ಸ್ಥಲಗಳಂ;" ॥೪೪॥

ಗುರುಸಿದ್ಧ ಶಿವಯೋಗಿ ವರ ಜಗದ್ಗುರುವಿಂತು ।
ಕರುಣೆಯಿಂ ನೋಡುತ್ತೆ, ಪೇಳ್ದ"ನೈ ನಂದನನೆ, ।
ಮೆರೆವ ಮೂವತ್ತಾರುಪಸ್ಥಲಂಗಳನೀಗ ನಿನಗೆ ಪೇಳ್ದೆವು, ವತ್ಸನೆ; ॥
ಪರಮೈಕ್ಯ-ಸುಸ್ಥಲದ ಭೇದಂಗಳೊಂಭತ್ತು; ।
ನೆರೆ ಸ್ಮರಣದಲ್ಲಿಡಿವುಗಳ ಪೆಸರ್ಗಳಂ ತಿಳಿದು ।
ಸರಸವಹ ತಲ್ಲಕ್ಷಣಂಗಳಂ ಸಹಿತಮಾಗಿಯೆ ಮರೆಯದಾಚರಿಸಲು; ॥೪೫॥

ತಿಳಿ ಸ್ವೀಕೃತ ಪ್ರಸಾದಿಸ್ಥಲಂ, ವತ್ಸಲನೆ, |
ಪೊಳೆವ ಶಿಷ್ಟೌದನ-ಸ್ಥಲಮುಂ, ತದಲ್ಲದಲೆ |
ಪೊಳೆಯುವ ಚರಾಚರಲಯ ಸ್ಥಲಂ, ಭಾಂಡಸ್ಥಲಂ, ಭಾಜನ ಸ್ಥಲಮದುಂ; ||
ಹೊಳೆಯುವಂಗಾಲೇಪನಸ್ಥಲಂ, ಮತ್ತೆಯುಂ |
ಪೊಳೆಯುತಿಹ ಸ್ವಪರಾಜ್ಞ ಸುಸ್ಥಲಂ" ಮತ್ತನಾ |
ಪೊಳೆದ ಭಾವಾಭಾವಲಯಿಕಸ್ಥಲಂ ಜ್ಞಾನಶೂನ್ಯ ಸ್ಥಲಂ ನವಮಿವೆ; ||೪೬||

ಸಚ್ಚಿದಾನಂದ ಸಾಗರನಾಗಿ ಸ್ವಾತ್ಮನಹ |
ನಿಚ್ಚಳದ ಲಿಂಗದೊಳು ಸರ್ವವ ಸಮರ್ಪಿಸುತೆ, |
ನಿಚ್ಚಮುಪ ಭೋಗಿಪನೆ ತಿಳಿ ಸ್ವೀಕೃತ-ಪ್ರಸಾದಿ- ಸ್ಥಲಾಹ್ವಯನೆನಿಪನು ||
ಮುಚ್ಚಿರುವ ಯಾವ ಮಾಯೆ ಸರ್ವರೋಳ್ ತೋರ್ದು-|
ದಿಚ್ಚಯಂದದೊಳದುವೆಯೋದನಾಕೃತಿಯಾಗಿ |
ಮೆಚ್ಚುವಂತರಿಯೆ ಚಿಲ್ಲಿಂಗ ದೊಳಗಡಗುತ್ತೆ ಶಿಷ್ಟವೆನಿಸುವದಂತದೆ; ||೪೭||

ಲಿಂಗೈಕ್ಯನೋಳ್ ಮಾಯೆ ತತ್ ಕಾರ್ಯಮಡಗುಳಿಯೆ |
ಲಿಂಗಾತ್ಮನೋಳ್ ಜ್ಞಪ್ತಿಯದುವೆ "ಶಿಷ್ಟೌದನಂ" |
ಲಿಂಗ-ಸ್ವರೂಪಿಗೆ, ಚರಾಚರ ಜಗಲ್ಲಯಂ ಸಹಜಮಾಗಿಯೆ, ತೋರ್ಪುದು; ||
ಮಂಗಾಟಮೆಂತಿಲ್ಲವೊ ನಿದ್ರಿತನ ಮನದೆ |
ಲಿಂಗಾಂಗಿಯೊಳಗಂತೆ ಯೀ ಚರಾಚರಮಿಲ್ಲ; |
ಲಿಂಗಾಸ್ಪದಂಗಲ್ಲದಲೆ "ಚರಾಚರಲಯಸ್ಥಲ"ಮದಿನ್ನಾರಿಗಹದು? ||೪೮||

* *

ತದಖಿಲ ಬ್ರಹ್ಮಾಂಡ-ಸೃಷ್ಟಿಸು-ಸ್ಥಿತಿ-ಲಯಕೆ |
ಸದಮಲ ಸ್ಥಾನಮಾಗಿಹ ವಿಮರ್ಶಕ-ಶಕ್ತಿ- |
ಯದುವೆ ಭಾಂಡಸ್ಥಲಂ ಕೇಳಿದುವೆ ಲಿಂಗದೋಳ್ ಬೆರೆದುದು ಶಿವಯೋಗಿಯೋಳ್;
ಪೊದುಳ್ದ ಬ್ರಹ್ಮಾಂಡಕಾಶ್ರಯವಹ ವಿಮರ್ಶಿಕೆಯ |
ಪದಪಿನಾ ಸ್ಥಾನಮದೆ, ಭಾಜನವೆನಿಪ್ಪುದೈ; |
ಸದಮಲ ಬ್ರಹ್ಮವಹ ಲಿಂಗಕೀ ಪೆಸರಹುದು;ತದ್ ರೂಪಿ ಶಿವಯೋಗಿಗಂ; ||೪೯

ಕಾಲಮುಖ್ಯ ಪ್ರಪಂಚಕ್ಕೆ ದೂರಮದಾಗಿ, |
ಮೇಲೆನಿಪ ಸಚ್ಚಿದಾನಂದಮಯವಹ ಬ್ರಹ್ಮ-|
ಲೋಲನಹ ಶರಣನಂಗಾಲೇಪ-ಭಾಗ್ಯಮಂ ಪಡೆದು ಶಿವಯೋಗಿಯಹನು; ||
ಲೀಲೆಯಿಂ ಬ್ರಹ್ಮದೋಳ್ ಬೆರೆದು ಸ್ವಪರಜ್ಞಾನ |
ಶೀಲಮಂ ಮೀರಿ ತೋರ್ಪವನೆ ಸ್ವಪರಾಜ್ಞಸ್ಥ-
ಲಾಲಯವ ಪೊಂದುವಂ ಬ್ರಹ್ಮರೂಪಂಗೆ ಸ್ವಪರ-ಜ್ಞಾನಮಡಗುತಿಹುದು; ||೫೦||

ಭಾವ ಶಬ್ದಾರ್ಥಮುಂಟೆಂದಪ್ಪುದೈ ತಿಳಿಯ-|
ಭಾವ ಶಬ್ದಾರ್ಥಮಿಲ್ಲೆಂದಹುದು ಕೇಳೆರಡು; |
ಭಾವಿಸಲ್ ವ್ಯವಹಾರಿಗುಂಟು ಲಿಂಗೈಕ್ಯಂಗಿವೆರಡುಮಿಲ್ಲಂ, ಶಿಷ್ಯನೆ; ||
ತೀವಿದಾಲಿಂಗ-ವೇದದೆ ಬೆರೆದ ಮಹಿಮಾನು- ||
ಭಾವಿಯೊಳಿಹಂಭಾವಮುರು ಜಗವ ವ್ಯಾಪಿಸುತ |
ಭಾಪತೆಯ ಪೊಂದುತಿರೆ ಬ್ರಹ್ಮಭಾವಮಳಿಯಲೀ ಸ್ಥಲಂ ಸಿದ್ಧಿಸುವುದು ||೫೧||

* *

ಕೇಳು ಭಾವಾಭಾವಲಯಮಿಂತು ಸಿದ್ಧಿಸಲ್; |
ತಾಳಿರುವ ಬ್ರಹ್ಮಾತ್ಮದೊಳ್ ಬೇರೆ ಜ್ಞಾನಮುಂ |
ಮೇಳಯಿಸದದರಿಂದೆ ಬ್ರಹ್ಮಮುಂಟೆಂಬ ಜ್ಞಾನಂ ಶೂನ್ಯಮಹುದರಿಂದೆ ||
ಮೇಳಯಿಪುದೈ "ಜ್ಞಾನಶೂನ್ಯಸ್ಥಲಂ" ತಿಳಿದು, |
ಬಾಳುತೈವತ್ತೇಳು ಲಿಂಗ-ಸ್ಥಲಂಗಳೋಳ್ |
ಕೇಳಿದಂಗ-ಸ್ಥಲದ ನಲವತ್ತುನಾಲ್ಕನುಂ ಬೆರಸಿ ನೂರೊಂದು ಸ್ಥಲವ ||೫೨||

ಕ್ರಮದಿಂದಲಳವಡಿಸಿಕೊಂಡು ಜೀವನ್ಮುಕ್ತ-|
ನಮಿತನಾದಡುಮರಿದು, ಭಕ್ತನಾಗಿರವೇಳ್ಕು-|
ಮಮಳಿನಂ ಪ್ರಭುವಲ್ಲಭಂ ಚನ್ನಬಸವನುಂ 'ನಮ'ಯೆಂದು ಶರಣ-ತತಿಗೆ ||
ವಿಮಲ ಭಕ್ತಿಯ ಪಥವ ತೋರುತಿರ್ದರ್ ನಲಿದು; |
ಸಮತೆಯಿಂ ನೀನಿದಂ ತಿಳುಹಲ್ಕೆ ಬಂದವಂ; |
ಭ್ರಮಮಿಲ್ಲದಾ ಕುಮಾರಂ ನೀನೆ ನಿನಗೇನು-ಪೇಳ್ಕುದೆಂದೊರೆಯುತಿರ್ದಂ; ||೫೩||

ವಂದಿಸುತಲೆಂಟು ಬರಿಸದ ಕುಮಾರಂ ಗುರುವ-|
ನಂದದಿಂ ನುತಿಸಲಾಗಿಹನಿಂತು "ಗುರುದೇವ, |
ಸುಂದರ-ಗಣೋದ್ಭವ, ಸುಶಿಷ್ಯ-ಮಂದಾರ, ಶಿವಭಕ್ತ-ಬಂಧುವೆ, ಸಿಂಧುವೆ;" ||
ಎಂದು ನುತಿಸುತೆ ಮತ್ತೆಮತ್ತೆ ಗುರುಸಿದ್ಧನಂ |
ಛಂದದಿಂತನುಗ್ರಹಿಸೆಂದು ಪ್ರಾರ್ಥಿಸ-|
ಲ್ಕಿಂದುಧರ-ಸಮನೊಪ್ಪುತಿರೆ, ಮೂರುಸಾವಿರ ಗಣೇಶರ್ಬೈದೆರಗಿರ್ದರು; ||೫೪||

ಇವರ ಯೋಗಕ್ಷೇಮಮಂ ವಿಚಾರಿಸಿ ಗುರುವು |
ಶಿವಪೂಜೆಗುರೆ ವ್ಯವಸ್ಥೆಯ ಮಾಡಿ, ಲೀಲೆಯಿಂ |
ಶಿವಯೋಗಿ ಕರ್ತೃ ಗುರುಸಿದ್ಧೇಶ ವಿಶ್ವ-ಗುರು-ವರನೆಲ್ಲರೊಪ್ಪುತಿರಲು, ||
ಗವಿಯಲ್ಲಿ ಲಿಂಗಪೂಜಾಲೋಲನಾಗಿರ್ದು, |
ಶಿವಲಿಂಗದೋಳ್ ಸರ್ವಮಂ ತಿಳಿದು ನಿಶ್ಚಿಂತ-|
ನವನಾಗಿಹಂ ಹರಸಮಂಗಸಾಧ್ಯಮುದಾವುದುಂಟೇ ತ್ರಿಲೋಕದಲ್ಲಿ? ||೫೫||

ವೀರೇಶ-ಪುಣ್ಯಾಶ್ರಮಂ ಗದುಗಿನೋಳ್ ಮೆರೆವು-|
ದೋರಂತೆ ಶೋಭಿಸುವುದಲ್ಲಿ ಪಂಚಾಕ್ಷರನು-|
ದಾರ ಸ್ವ ಗುರುವರನ ಯೋಗದ ಸಮಾಧಿಯಿದೆ; ಕುಳಿತಿಲ್ಲಿ ಗುರು-ಕರುಣೆಯೋಳ್
ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ |
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ |
ಮೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣ ಸಂಧ್ಯಷ್ಟಾದಶಂ ||೫೬||

ಅಂತು ಸಂಧಿ ೧೮ಕ್ಕಂ, ಪದಂಗಳು ಐವತ್ತಾರಕ್ಕಂ;
ಇಂತು, ಒಟ್ಟು ಪದಂಗಳು ೯೮೩ಕ್ಕಂ;
—ಮಂಗಲಂ—

॥ ಶ್ರೀ ಗುರುಬಸವಲಿಂಗಾಯ ನಮಃ ॥



# ಹತ್ತೊಂಭತ್ತನೆಯ ಸಂಧಿ





॥ ಸೂಚನೆ ॥

ಮೂರು ಸಾವಿರ ಗಣಂಗಳಪೇಕ್ಷೆಗನುಸರಿಸಿ, ।
ಮೂರುಸಾವಿರದಪ್ಪಗಧಿಕಾರವಿತ್ತು ಗುರು।
'ಮೂರುಸಾವಿರ ಮಠ'ಮೆನುವ ನಾಮವಿರಿಸಿದಂ ಮೊದಲು ತಾನಿರ್ಪ ಮಠಕೆ ॥

* *

[ಸಂಧಿ ಪ್ರಾರ್ಥನಾ-ಪದ್ಯ]

ಕಮಲಮೆಂಬೊಂದು ಪುಷ್ಪಕ್ಕೆ ಕವಿಗಳ್ ನರನ ।
ಸುಮುಖಕ್ಕೆ, ಕಣ್-ಕೈಗೆ ಪೋಲಿಸುತೆ, ಶಿವ, ನಿನ್ನ ।
ಸಮರಾದ ಶಿವಯೋಗಿಗಳ ಪದಕೆ ಪೋಲಿಪರ್; ಭ್ರಮರಕ್ಕೆ ತಚ್ಚಿತ್ತವ ॥
ಸಮನಿಪರ್; ಸ್ತ್ರೀಮುಖಾಬ್ಜದೆ ಮನ್ಮನೋ-ಬೃಂಗ- ।
ಮಮಿತ ಮೋದದೆ ಸಕ್ತಮಪ್ಪುದದರಂತೆ ಪೇಳ್ ।
ರಮಿಸಲಾರದದೇಕೆ ಗಣರ ಪಾದಾಂಬುಜದೊಳಾಸಕ್ತಮಾಗಿಯಭವ? ॥೧॥

* *

ಶ್ರೀಜಗದ್ಗುರುವರ್ಯ ಗುರುಸಿದ್ಧ–ಕೃಪೆಯಿಂದೆ ।
ಸೋಜಿಗಮೆನಲ್ಕನುಗ್ರಹೀತನಾದ ಕುಮಾರ –।
ನೋಜಮಂ ಕಾಣುತ್ತೆ; "ಮೂರು ಸಾವಿರದಪ್ಪ" ನೆಂಬ ಸ್ವಾಮಿಯು ಜ್ಞಾನದಿಂ ॥
ನೈಜರಾಗಿರ್ಪ ತ್ರಿಸಹಸ್ರ ಚರವರ್ಯರ್ಗೆ ।
ವೋಜಿನಿಂದರಿದವನ ಪರಿಚಯುವ ಸರ್ವರ್ಗೆ ।
ತೇಜದಿಂ ಮಾಡಿಕೊಟ್ಟಂ, ಮಹಾಗುರು–ಕರುಣೆಯಿರಲಸಾಧ್ಯಮದಾವುದು? ॥೨॥

ಪತ್ತು ಬರಿಸದ ಬಾಲನೆಲ್ಲರುರು ಸೇವೆಯಂ ।
ಪೊತ್ತಿಗನುಸರಿಸಿ ಮಾಳ್ಪುದನರಿದು ಗಣವರರ್ ।
ಸತ್ತಮರ್ ವಿಸ್ಮಯಾಂಬುಧಿಯೊಳ್ ಮುಳುಂಗಿರಲ್ ತತ್ ಪರಿಚಯಂ ನೌಕೆಯೋಲ್ ॥
ಎತ್ತುತಾಶ್ರಿತಮಾಗಿ ಸರ್ವರಂ ತಚ್ಚರಿತ–।
ಮುತ್ತಮನನೆಲ್ಲರುಂ ಷಣ್ಮುಖನೆ ಯಿವನೆಂದು ।
ಚಿತ್ತದೊಳ್ ತಿಳಿಯುತ್ತಲವನಿಂದೆ ಸೇವೆಯಂ ಗೈಸಿಕೊಳ್ವದನುಳಿದರು ॥೩॥

ಆ ಕುಮಾರಂ ತನ್ನ ಸೇವೆಯದು ತಪ್ಪಿತೆಂ–।
ದೇಕ–ಮನದಿಂ ಕರ್ತೃವಾದ ಗುರುಸಿದ್ಧನನ–।
ಲೌಕಿಕಂ ಕಳವಳಿಸಿ, ತಿಳುಹಲ್ಕೆ ನೆನೆಯುತಿರೆ; ಬಂದನಲ್ಲಿಗೆ ಗುರುವರಂ; ॥
ಶ್ರೀಕರಂಗವನೆರಗಲೆಲ್ಲರುಂ ನಮಿಸುತಿರೆ, ।
ಬಾ "ಕುಮಾರನೆ"ಯೆಂದು ತಲೆಯ ಮೇಲಿಡೆ, ಕರವ; ।
ಲೋಕ-ವಿನುತಂಗೆ ಸರ್ವಮನೊರೆಯೆ ಬಾಲಕಂ; ಗಣವರ್ಯರಿಂತೊರೆದರು :- ॥೪॥

"ಭೋ ಜಗದ್ಗುರುವೆ, ಸಾಮಾನ್ಯನಿವನಿಲ್ಲವೈ; ।
ಮೋಜಿನಿಂದೀತನೊರ್ವನೆ ಯೆಮ್ಮ ಸೇವೆಯಂ ।
ಸೋಜಿಗಮೆನಲ್ ಮಾಡಿ; ಮುಗಿಸುತ್ತಲಿರ್ದಪಂ; ತಿಳಿದೆವೀತನ ಚರಿತಮಂ; ॥
ರಾಜ-ಗುರುವರನೆ, ಯೀತನೆ "ಕುಮಾರಸ್ವಾಮಿ"; ।
ಪೂಜಿತನೆ, ತಮ್ಮ ಶುಶ್ರೂಷೆಗಿವನುಚಿತನಹ–।
ನೀ ಜಗಮನುದ್ಧರಿಸಲೈದಿದವನೆಂದಿವನನರಿದಿರ್ಪೆವೈ, ಗುರುವರ; ॥೫॥

ಮೂರು ಸಾವಿರದಪ್ಪನೆರಗಿ ಕೈ ಮುಗಿಯುತ್ತೆ, |
ಸಾರತತ್ತ್ವವಿದಂಗೆ ಕೇಳ್ದನೆಂತೆನೆ "ಗುರುವೆ, |
ವೀರವೈರಾಗ್ಯ-ನಿಧಿಯಲ್ಲಮಪ್ರಭು-ವಚನಕಾ ಗುಹೇಶ್ವರ-ನಾಮಮೆ ||
ಸಾರಿಹುದದೇಕೆ ಮುದ್ರಿಕೆಯಾಗಿ ಪೇಳ್ವು" ದೆನೆ- |
ಧೀರ ಕರ್ತಂ ಲತಾ-ಮಂಟಪದೆ ಕುಳ್ಳಿರುತೆ, |
ಸಾರಿಪ ಗಣಾಳಿಯುಂ ಕುಳ್ಳಿರಿಸಿಕೊಳ್ಳುತ್ತೆ, ಪೇಳಲನುವಾದನಿಂತು :- ||೬||

"ಕೇಳು ನೀಂ ಮೂರುಸಾವಿರದಾಖ್ಯ ದೇಶಿಕನೆ, |
ಭಾಳಲೋಚನ-ಕೃಪೆಯೊಳೀ ರಹಸ್ಯಂ ಪೇಳ್ವೆ-|
ನಾಳವಾಗಿಹ ತತ್ತ್ವದಿಂ ಸಹಿತಮಾದುದಿದು; ತದ್ ಗುಹೇಶ್ವರ-ನಾಮಕೆ, ||
ಮೇಳಿಪರ್ಥಂಗಳಿವೆಯೆರಡು : ಮೊದಲನೆಯದುಂ |
ಮೇಳಯಿಸುವುದು, ಷಣ್ಮುಖಸ್ವಾಮಿ-ನಾಮದೊಳ್; |
ಪೇಳಲೆರಡನೆಯರ್ಥಮಾತ್ಮನಿಹ ತಾಣಮದು, ಹೃದ್-ಗುಹಾಽಽಕಾರಮೆಯ್ಯ ||೭||

ಆರು ಪ್ರಣವಂಗಳಾ ಷಣ್ಮುಖಂಗಳ್, ಗುಹಂ-|
ಗೀರಿತಂ ಶಾಸ್ತ್ರಂಗಳೊಳ್; ಷಡಕ್ಷರ ಮನುವು |
ವೀರಶೈವರ ಮಂತ್ರಮೀತನಿದರಾ ಪ್ರಚಾರಕ್ಕವ ತರಿಸಿ ಬಂದಿಹಂ; ||
ಮಾರಮಂ ಕುತ್ಸಿತನನಾಗಿ ತಿಳಿದುದರಿಂ ಕು-
ಮಾರನೆಯೆಂಬುವ ಪೆಸರ್ ರೂಢಮಾಗಿಹುದಿಲ್ಲಿ; |
ಸಾರ ಸುಜ್ಞರಿ, ವಿರಕ್ತ-ಮಠಂಗಳೀ ಕುಮಾರಸ್ವಾಮಿ-ನಾಮದಿಂದೆ ||೮||

ಕೀರ್ತಿವೆತ್ತಿರ್ದಪಾ ಜನಮೀಗ ನಶಿಸುತಿದೆ; |
ಸ್ಫೂರ್ತಿಯೊಳದಂ ಕಾಯಲೈದಿರ್ಪನೀ ಬಾಲ-|
ನಾರ್ತರಂ ರಕ್ಷಿಪ ಕುಮಾರ-ದೇವನೆ ಯಿವಂ; ನೀವಿದಂ ತಿಳಿದಿರ್ಪಿರಿ; ||
ಪೂರ್ತಿಯಾಗಿಯೆ ನಂಬಿರಿದಕೆ ಸಂಶಯಮಿಲ್ಲ; |
ಕರ್ತನಹ ಪ್ರಭುವರನ ಸ್ಮರಿಸಿ ಪೇಳುವೆನಿನ್ನು, |
ಕೂರ್ತು ಕೇಳಿರಿ; ಯೆರಡನೆಯ ಫಲಿತಾರ್ಥಮಂ, ತದ್-ಗುಹೇಶ್ವರನೆಂದೊಡೆ ||೯||

"ನಿಹಿತೋಽಸ್ಯ ಜಂತೋರಿಹಾಽಽತ್ಮಾ ಗುಹಾಯಾಂ" ಸು-|
ವಿಹಿತಮಾದೀ ಕಠಶ್ರುತಿಯಂತೆ ತಿಳಿಯಿರೈ; |
ರಹಿತ-ತ್ರಿಮಲನಾತ್ಮನೀ ಜೀವ-ಹೃದಯ-ಗುಹೆಯೊಳಿಪಂ; ಗುಹೇಶನವನೆ ||
ಸಹಜ ಪಶ್ಚಿಮ-ಶಿಖಾ-ಚಕ್ರಮೀತನ ಮುಖಂ; |
ಮಹಿತಸಿವನುರು ನಿರಂಜನ-ಗಣೇಶ್ವರನಾಗಿ, |
ಮಹಿಯನುದ್ಧರಿಸಿದಂ; ಸು-ವಿರಕ್ತ-ಗುರುವಿವಂ; ಮೂಲವಹ ಪ್ರಣವ-ರೂಪಂ;

ಅಂದಿನಿಂ ಶ್ರೀಮನ್ನಿರಂಜನ ಪ್ರಣವರೆಂ- |
ಬಂದವಹ ನಾಮಮೀ ವೀರಶೈವ ವಿರಕ್ತ |
ಸುಂದರ ಚರವರರ್ಗೆ ಸಲ್ಲಿಹುದು; ತಿಳಿಯಿರೈ, ಪ್ರಭುವೀತನವತಾರಿಯುಂ;||
ಸಂದಿದೋಂಕಾರವಾ ಗುಹನ ಮುಖ್ಯಂ ಮುಖಂ; |
ಪೊಂದಿದ ನಿರಂಜನ-ಕಲಾತ್ಮಕಂ ಷಣ್ಮುಖಂ; |
ಬಂದು ಭೂಮಿಗೆ, ವೀರಶೈವ-ಮತದುದ್ಧೃತಿಯನಾಗಾಗ ಗೈದಿಹನವಂ; ||೧೧||

ಅದರ ಕುರುಹಾಗಿಯೆ ಕುಮಾರದೇವನ ಪ್ರತಿಮೆ- |
ಯೊದವಿದಾ ಭಕ್ತ-ಭಕ್ತಿ-ವಿಶೇಷದಿಂ; ವಿಧಿಯ |
ವಿದರಿಂದಲಲ್ಲಲ್ಲಿ ಸ್ಥಾಪಿತಮದಾಗಿಹುದು; ಶೋಭಿಸಿತು ತಿಳಿಯಲಹುದು; ||
ಸದಮಲಂ ಶ್ರೀಜಗದ್ಗುರುವಿಂತವರ್ಗೊರೆದು, |
ವಿದಿತನಾಗಳ್ ಮೌನಿಯಾಗುತಿರೆ, ಸಂತಸದೆ |
ಪದಪಿಂದೆ, ಮೂರುಸಾವಿರದಪ್ಪನೇಳುತ್ತೆ, ನಮಿಸುತ್ತೆ ಕೈ ಮುಗಿಯುತ್ತೆ, ||೧೨||

ಮಾತನಾಡಿದನೆಂತೆನಲ್ "ಜಗದ್ಗುರುವರನೆ, |
ಖ್ಯಾತರಾದೀ ಮೂರುಸಾವಿರ ಗಣೇಶ್ವರರ |
ಪ್ರೀತಿಮತಮಿಂತಿಹುದು: ತಾವಿರುವ ತಾಣಕ್ಕೆ ಮೂರುಸಾವಿರ ಮಠಾಖ್ಯೆ ||
ಪ್ರೀತರೆ, ದೊರೆಯವೇಳ್ಕುಮವರಿಹ ಮಠಂಗಳ್ಗೆ |
ಪೂತ ಗುರುಸಿದ್ಧೇಶ ನಾಮಮಿರವೇಳ್ಕೆಂದು |
ಈತಿಯಿಂದೆನಗೆ ತಿಳಿಸಿರ್ಪರೈ; ತಮಗೆ ವಿಜ್ಞಾಪನೆಯ ಗೈಯಲೆಂದು; ||೧೩||

ಅದನಾಲಿಸುತೆ, ಕರ್ತನಿಂತೆಂದ"ನೊಪ್ಪಿರ್ಪೆ- |
ನದರಲ್ಲಿಯಿನಿತು ತಿರ್ದಿಸುವದೇನೆನಲೆಮ್ಮ |
ವಿದಿತನಾಮಂ ಬೇಡಮಾ ಕುಮಾರಸ್ವಾಮಿಯಾಖ್ಯೆ ಯಿರಲೆಲ್ಲ ಮಠಕೆ; ||
ಸದಮಲರೆ, ಯಿನ್ನಿದೇ ಶ್ರಾವಣಕನುಷ್ಠಿತಿಯ |
ಪೊದಳ್ದು ಕೈಕೊಳ್ಳುವೆವು ಪೊರಗೆ ಬರದಂತಿಲ್ಲಿ, |
ಮುದದೆ ಗವಿಯೀ ಬಾಗಿಲವ ಮುಚ್ಚಿ ಬಿಡುವೇಳ್ಕೆ"ನುತ್ತಿರಲ್ ಕೇಳುತ್ತಲೆ ||೧೪||

ಮೂರುಸಾವಿರದಪ್ಪನೊಡಲೆಲ್ಲರುಂ ಪದಮ- |
ನೋರೆಯಾಗದೆ ಕಂಡು, ಕಣ್ಣೀರಸುದುರಿಸುತೆ, |
ಭೂರಿ-ದುಃಖದಿ ನಿಂತು, ಪ್ರಶ್ನಿಸಿದ"ರೈ ದೇವ,ಯೆಮ್ಮ ಗತಿಯೇಂ? ಸದ್ಗುರೊ" ||
ಧೀರ ಗುರುಸಿದ್ಧನದಕೊರೆದನೆಂತೆನಲಯ್ಯ |
ವೀರ ಗಣವರರೆ, ನೀವ್ ಚಿಂತಿಸುವುದೇತಕ್ಕೆ?
ನಾರಿ ದರ್ಶನಮನೀವೇಂ; ನಿಮಗೆ ನೆನೆದಾಗ ಬೇಡಿದುದನೀಯುತಿಹೆನಾಂ; ||೧೫||

ಕೇಳು ನೀಂ ದೇಶಿಕನೆ, ಮೂರುಸಾವಿರದಯ್ಯ, |
ತಾಳಿನೀನೀ ಮಠದ ಸ್ವಾಮಿತ್ವಮಂ ಸು-ಭ- |
ಕ್ತಾಳಿ-ಪಾಲಕನಾಗಿ, ಪತ್ತು ಬರಿಸಂಬರಂ ಲೀಲೆಗಳ ನಡೆಯಿಸಿ ಸದಾ ||
ಮೇಳಯಿಸುತೀ ತಾಣದಧಿಕಾರಮಂ ಮತ್ತೆ |
ಭಾಳಲೋಚನ-ಸಮನೆನಿಪ್ಪೀ ಕುಮಾರಂಗೆ, |
ಪಾಳು ಮಾತಲ್ಲಮಿದು; ನಿಮ್ಮ ಕರ್ತವ್ಯಕ್ಕೆ ಬೆಂಬಲಿಗನಾಗಿರ್ಪೆ ನಾಂ; ||೧೬||

ಮರುಸಾವಿರ ಮಠಾಹ್ವಯಮೀ ಸ್ಥಲಕ್ಕೆ; ಸಲೆ |
ಭೂರಿ ಸಾರ್ಥಕಮಹುದು; ನಿನ್ನಿಂದಲಿನ್ನು ಮೀ- |
ಸಾರಿಹ ಪರಂಪರೆಯ ಸ್ವಾಮಿಗಳಿಗೆಲ್ಲರ್ಗುವಾನಿರ್ಪೆನ್ನೈ ರಕ್ಷಕಂ; ||
ಸಾರವಿದನಿಂತೊರೆದದೃಶ್ಯತೆಯನಾಂತವಂ; |
ಸಾರುತಂ ಸರ್ವ-ಭಕ್ತರ ಸ್ವಪ್ನದೋಳ್ ಗುರುವು |
ಮೀರಿದ ಮಠಾಧಿಕಾರದ ವ್ಯವಸ್ಥೆಯನರುಪ್ಪಿ ನಿಶ್ಚಿಂತನಾಗಿರ್ದನು; ||೧೭||

* *

ಸಿದ್ಧರಹ ತ್ರಿಸಹಸ್ರ-ಗಣವರ್ಯರಾಗ ಗುರು- |
ಸಿದ್ಧ-ಸಂಕಲ್ಪದಿಂ ಸುವ್ಯವಸ್ಥಿತಮಾದ |
ಶುದ್ಧ-ಲಿಂಗಾರ್ಚನೆಯೊಳಾಸಕ್ತರಾಗಿರಲ್; ಬರಲಾಗಿಪರ್ ಭಕ್ತರು; ||
ಶ್ರದ್ಧೆಯಿಂ ಬಂದಾ ಜನರ್ಗೆ ಸ್ವ-ಗುರು ಸಮಾಧಿ- |
ಸಿದ್ಧ-ವಾರ್ತೆಯ ಪೇಳ್ದು, ಮೂರುಸಾವಿರದಪ್ಪ-|
ನುದ್ಧರಣ-ಮಾರ್ಗಮಂ ತಿಳಿದುಕೊಳ್ಳಲ್ಕನರ್ಗೆ, ಸೂಚಿಸಿದನೆಲ್ಲರ್ಗಮಂ; ||೧೮||

ಶೋಕದಿಂ ಸದ್ಭಕ್ತ-ತಿಂತಿಣಿಯು ನುತಿಸುತ್ತೆ; |
ಶ್ರೀಕರನ ದರ್ಶನಕ್ಕಾಗಿ ಪಂಬಲಿಸುತಿರೆ; |
ಲೋಕನಾಯಕನಾದ ಗುರುಸಿದ್ಧಯತಿವರಂ ಬಂದು, ದರ್ಶನಮನಿತ್ತು; ||
ನಾಕವಂದಿತನಾ ಜನರ್ಕಳಂ ಕಾಣುತ್ತೆ, |
ಸ್ವೀಕರಿಸುತವರ ವಂದನೆಗಳಂ; ಗುರುವರ್ಯ-|
ನೀ ಕರುಣಿ,ತಲ್ಲತಾ-ಮಂಟಪದೆ ಕುಳ್ಳಿರುತೆ ಕುಳ್ಳಿರಿಸುತಿಂತು ಪೇಳ್ದಂ ||೧೯||

ಮಾನನೀಯರೆ, ಯೆಮ್ಮ ಚಿಂತೆಯೇಕೈ, ನಿಮಗೆ? |
ಮಾಸ-ತಿಥಿಗಳೆ, ನೀವೆ ನಂಬಿ ಕರೆದೊಡೆ ದಿಟಂ |
ಸ್ವಾನುರಾಗದೆ ದರ್ಶನಮನೀವೆವೈಸದಾ ನಿಮ್ಮ ಭಕ್ತಿಯ ಕೊಳ್ವೆವು; ||
ಮಾನಿತರೆ, ನಿಮ್ಮ ಕಾಮಿತವ ಗೌಪ್ಯದೊಳಿರ್ದು, |
ಮೌನದಿಂ ಸಲಿಸುವೆವು, ಶ್ರಾವಣಾಂತಿಮ ಶಶಿಯ- |
ನೂನವಾರದೆ ನಿರ್ವಿಕಲ್ಪಕ-ಸಮಾಧಿಯಂ ಪೊಂದುವೆವಿದೇ ಗವಿಯೊಳ್; ||೨೦||

ಬಾಗಿಲವ ತೆರೆಯಲಾಗದ ತೆರದೆ ಮುಚ್ಚಿಸಿರಿ; |
ರಾಗಿಗಳೆ ಯೆಮಗಿಂತು ಶಿವನಾಜ್ಞೆಯಾಗಿಹುದು; |
ಭೋಗಿಸಲೆ ಬೇಕದಂ; ಮೀರಲಾರಿಗೆ ಸಾಧ್ಯಮೀ ದುಃಖಮಂ ತ್ಯಜಿಸಿರಿ; ||
ಈ ಗವಿಯು ಮೂರುಸಾವಿರ-ಮಠಾಹ್ವಯದಿಂದ -|
ಲೀಗಳಿಂ ಕರೆಯಿರೈ; ಮೂರು ಸಾವಿರದಪ್ಪ-|
ನಾಗಮಜ್ಞಂ; ಕೇಳಿರೀ ಮಠದ ಸ್ವಾಮಿಯಿವನಂ ತಿಳಿಯಿರೆಮ್ಮಂತೆಯೆ; ||೨೧||

ಚರಪಟ್ಟದಧಿಕಾರಮಂ ವಿಜೃಂಭಣೆಯಿಂದೆ |
ಚರಿಸವೇಳ್ಕಿದು ತಿಳಿಯಿರೆಮ್ಮ ಪೇಕ್ಷೆಯು; ನೀವೆ;|
ನೆರೆ ಯೋಚಿಸಿರಿ; ನಿಮ್ಮನದಕಾಗಿ ಸರ್ವರಂ ಕರೆದೆವು, ಶಿವೇಚ್ಛೆಯಂತೆ; ||
ಪರ-ಸಮಾನನ ಕಾಂಕ್ಷೆಯಂ ತಿಳಿದು, ಸದ್ಭಕ್ತ-|
ರೊರೆದರೆಂತೆನೆ "ದೇವ, ತಾವನುಜ್ಞೆಯನಿತ್ತೊ-|
ಡುರು ಮಠಮನೆರಡೆ ತಿಂಗಳೊಳೆ ಬೆಳೆಸುತ್ತಲಾ, ಕಾರ್ಯವಾರಂಭಿಸುವವು;||೨೨||

ಆದಕೊಪ್ಪಿ, ತಾಣಮಂ ತೋರ್ದನಲ್ಲಿಯೆ ಗುರುವು; |
ಸದಮಲರ್ ಭಕ್ತರಾರಂಭಿಸುತೆ ಪೇಳಿದಾ |
ಪೊದಳ್ದು ಸಮಯಕ್ಕೆ ಮಠಮಂ ಭವ್ಯಮೆನೆ ಕಟ್ಟಿ ಮುಗಿಸಿ, ತತ್ ಕೃಪೆಯ ಪಡೆದು,
ವೊದಲು ಕರ್ತನ ಲಿಂಗಪೂಜೆಯ ನಿಮಿರ್ಚಿಸುತೆ, |
ಪಡೆದು ತ್ರಿಸಹಸ್ರ-ಜಂಗಮ-ತೃಪ್ತಿಯಂ ನೆಗಳ್ಚಿ, |
ಪದಪಿಂ ಮಠಾಧಿಕಾರಕೆ ತೊಡಂಗಿದರವರ್, ಗುರುಸಿದ್ಧನಾಜ್ಞೆಯಂತೆ; ||೨೩||

ಕೂಡಿಸಿದರುರು ಧನಮನಖಿಲ ಸಾಮಗ್ರಿಯಂ; |
ಮಾಡಿಸಿದರಾ ಜಗದ್ಗುರು-ಯೋಗ್ಯ ಪೀಠಮಂ; |
ಜೋಡಿಸಿದರುರೆ ರಾಜ-ವಿಭವೋಪಕರಣಮಂ ಭಕ್ತರೀ ಗುರು-ಕರುಣೆಯೋಳ್; ||
ನಾಡೆ ಕರೆಯಿಸಿದರ್ ಗುರೂತ್ತಮರ, ಚರವರರ; |
ನೋಡಿ, ಕೀರ್ತನಕಾರರಂ ಬರಿಸಿದರ್; ಮತ್ತೆ |
ನಾಡಿನ ಶಿವಾನುಭವಿಗಳ, ವಾದ್ಯಪಟುಗಳಂ, ತಳುವದಾಮಂತ್ರಿಸಿದರು; ||೨೪||

ಆಗ ಸದ್ಭಕ್ತರೆಲ್ಲರ್ ಸುವ್ಯವಸ್ಥೆಯಂ |
ರಾಗದಿಂ ಮಾಡುತಿರೆ, ಕೀರ್ತನಂಗಳ್ ನಿತ್ಯ-|
ಮಾಗಮಾತೀತ-ಸನ್ನಿಧಿಯಲ್ಲಿ ಜರುಗಿರಲ್, ಪ್ರವಚನಂಗಳ್ ನಡೆದಿರೆ, ||
ಲೋಗರೆಲ್ಲರ್ ಭವ್ಯಮೆನಿಪ ಮಂಟಪದಲ್ಲಿ |
ಸಾಗಿ ಬಂದೈದೆ, ಕುಳ್ಳಿರುತೆ, ಸಭೆಗತ್ಯಂತ-|
ಮಾಗಿ ಶೋಭೆಯ ನೆಗಳ್ದಿರಲ್ಕೆಂಟು ದಿನಗಳಿಂ ಗಣತೃಪ್ತಿಯೆಸೆದಿರಲ್ಕೆ ||೨೫||

ಪರತರ ಶಿವಾನುಭವಮದು ಸುಪ್ರಭಾತದೊಳ್ |
ಜರಗುತಿರೆ, ತ್ರಿಸಹಸ್ರ ಗಣ-ವೃಂದದಾನಂದ |
ಪರಿವರ್ಧಿಸುತ್ತಿರಲ್, ವೈಶಾಖ ಶುಕ್ಲದ ತೃತೀಯೆಯೊಳ್ ರೋಹಿಣಿಯಿರೆ, ||
ಗುರುಸಿದ್ಧ-ವರ-ಜಗದ್ಗುರುವೀ ಮುಹೂರ್ತದೊಳ್ |
ನೆರೆಯೆಸೆಗಿ ಸರ್ವ ಸಂಸ್ಕಾರಂಗಳಂ ಬಿಡದೆ; |
ಚರರುಘೇ ಯೆನೆ, ನಿರಂಜನ ಪಟ್ಟಮಂ ಕೊಟ್ಟು, ಮೂರುಸಾವಿರದಪ್ಪಗಂ ||೩೬||

"ಜಯ, ನಮಃ ಪಾರ್ವತೀಪತೆ"ಯೆಂದು ಸರ್ವರಿಂ |
ಜಯ ಘೋಷಮುಣ್ಮುತಿರೆ, ಮಸ್ತಕದೆ ಹಸ್ತಮಂ |
ದಯೆಯೊಳಿಡುತಂ, ಮಹಾಸಿಂಹಾಸನದೆ ಕುಳ್ಳಿರಿಸಿದಂ ಮಹಾಂತ-ಗುರುವು; ||
ನಯದೆ ಕರತಾಡನಂಗೈಯ್ಯುತುತ್ಸಾಹದಿಂ |
ಭಯ-ಭಕ್ತಿಯಿಂದೆ, ಕಾಣಿಕೆಯ ಸಲ್ಲಿಸುತಿರಲ-|
ಭಯದ ಗುರುಸಿದ್ಧನಾ ತಾಣಕ್ಕೆ "ಮೂರುಸಾವಿರಮಠಾ"ಖ್ಯೆಯನಿಟ್ಟನು; ||೩೭||

ಮೂರುಸಾವಿರದಯ್ಯ ಶ್ರೀ ಜಗದ್ಗುರುವೆಂದು |
ಮೀರಿ ಜಯಘೋಷವೆಸಗುತ್ತಲಾಂದೋಲಿಕೆಯೊ-||
ಳೂರಿನಧಿಕಾರಿಗಳ್ ಭಕ್ತ-ಗುರು-ಚರರೊಪ್ಪಲಾರೋಹಣಂ ಗೈಸುತೆ ||
ಸಾರಸದ್-ವಾದ್ಯ-ವೈಭವದಿಂದಲುತ್ಸವವ |
ಮೀರಿದುತ್ಸಾಹದಿಂ ನೆಗಳ್ದರೈದೆಯರೆಲ್ಲ-|
ರಾರತಿಯನೆತ್ತಿ, ಕಂಗೊಳಿಸುತ್ತೆ ನಡೆದಿರಲ್; ದೇವ-ದುಂದುಭಿ ಮೊಳಗಲು, ||೩೮||

ಬಳಿಕಂ ಗಣಾರಾಧನೆಯ ಭಕ್ತರೆಸಗುತ್ತೆ, |
ಮಿಳಿತ ಮಾಹೇಶರ್ಗೆ ದಕ್ಷಿಣೆಯನೀಯುತ್ತೆ, |
ತಳೆದು ಭಕ್ತಿಯ; ಸಲಿಸುತಂ ಕಾಣಿಕೆಯ, ಸಲೆ ಗುರು-ಜಂಗಮರ್ಗೆ ನಮಿಸಿ; ||
ಕಳೆವೆತ್ತ ವಾದ್ಯ-ಪಟುಗಳ್ಗೆ ಕೀರ್ತನಕಾರ- |
ವಳಯಕ್ಕೆ ಸಂಭಾವನೆಯ ಹೇರಳಮಾಗಿ |
ತಳುವದೀಯುತ್ತೆ, ಗೌರವಿಸುತ್ತೆ, ಕಳುಪಿದರ್ ಗುರುಸಿದ್ಧ-ಗುರುವು ನಲಿಯೆ; ||೩೯||

ತ್ರಿಸಹಸ್ರ ಚರವರರ್ ಗುರುವರ್ಯನಾಶಿಷವ |
ಸಸಿನದಿಂ ಪಡೆಯುತ್ತೆ, ಮೂರು ಸಾವಿರ ಮಠದ |
ಜಸವ ಪೆರ್ಚಿಸುವ ಸಂಕಲ್ಪಮಂ ಗೈಯುತ್ತೆ, ತೆರಳಿದರ್, ಸ್ವ-ಸ್ವ-ಮಠಕೆ; ||
ಎಸೆದಿಹಂ ಮೂರು-ಸಾವಿರದಯ್ಯ ಸ್ವಾಮಿಯುಂ; |
ವಸುಧೆಯೊಳ್ ಪ್ರತಿ ಜಗದ್ಗುರುವು ತಾನಾದಡುಂ, |
ಪ್ರಸಿತ ಮನದೆ ಕುಮಾರ-ಧೀಶಿಕನ ಸಂಗಡಂ ಗುರುಸೇವೆಯಲ್ಲಿರ್ದನು; ||೩೦||

ವೀರೇಶ-ಪುಣ್ಯಾಶ್ರಮಂ ಗದುಗಿನೊಳ್ ಮೆರೆವು-|
ದೋರಂತೆ ಶೋಭಿಸುವುದಲ್ಲಿ ಪಂಚಾಕ್ಷರನು-|
ದಾರ ಸ್ವ ಗುರುವರನ ಯೋಗದ ಸಮಾಧಿಯಿದೆ; ಕುಳಿತಿಲ್ಲಿ ಗುರು-ಕರುಣೆಯೊಳ್||
ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ |
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ |
ವೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣ ಸಂಧಿಯು ನವದಶಂ ||೩೧||

ಅಂತು ಸಂಧಿ ೧೯ಕ್ಕಂ, ಪದಂಗಳು ಮೂವತ್ತೊಂದಕ್ಕಂ;
ಇಂತು, ಒಟ್ಟು ಪದಂಗಳು ೧೦೧೪ ಕ್ಕಂ.

—ಮಂಗಲಂ—

18)

॥ ಶ್ರೀ ಗುರು ಬಸವಲಿಂಗಾಯ ನಮಃ ॥

# ಇಪ್ಪತ್ತನೆಯ ಸಂಧಿ





॥ ಸೂಚನೆ ॥

ಕರ್ತೃ ಗುರುಸಿದ್ಧಂ ಜಗದ್ಗುರುವು ತ್ರೈಲೋಕ್ಯ-।
ಭರ್ತೃವೆನಿಪಂ; ನಿರ್ವಿಕಲ್ಪಕ-ಸಮಾಧಿಯಂ ।
ಧರ್ತೃವೆನಿಪಂ; ಹೊಂದಿ, ಮೂರು ಸಾವಿರ ಮಠದ ಗವಿಯೊಳ್ ಚಿರಂ
ನಾಸಿಪಂ; ॥

*  *

[ಸಂಧಿ ಪ್ರಾರ್ಥನಾ-ಪದ್ಯ]

ದೇಹಮಿದು ಪಂಚಭೌತಿಕಮೆನಿಸಿ, ಪಂಚತ್ವ-।
ಕೂಹಿಸಲ್, ಪಕ್ಕಾಗಿ ಬೆರೆವುದಾ ತೆರದೊಳಾಂ ।
ನೇಹದಿಂ ಪೇಳಭವ, ನಿನ್ನೊಳೀತಕೆ ಬೆರೆಯೆನಾವ ತಪ್ಪಂ ಗೈದಿಹೇಂ? ॥
ಮೋಹಮಂ ವಿಷಯದೊಳ್ ನೀನೆನಗೆ ಪುಟ್ಟಿಸಿಹೆ; ।
ಐಹಿಕಾವ್ಯಾಶಾಂಗನೆಗೆ ಯೆನ್ನ ನೀಂ ಮಾರುತ್ತೆ, ।
ಸಾಹಸದೆ ಭವ-ಸಮುದ್ರದೆ ಚಲ್ಲಿಕೊಟ್ಟೆ; ಯಿನ್ನಾವಾಗಳುದ್ಧರಿಸುವೆ? ॥೧॥

*  *

ಕರ್ತನಹ ಗುರುಸಿದ್ಧವರ ಜಗದ್ಗುರುವೊರ್ವ, ।
ಸ್ಫೂರ್ತಿಯುರು ಭಕ್ತಿಯಂ ತನ್ನನುರೆ ಸೇವಿಸುವ, ।
ಕೀರ್ತಿತನ ಮೂರುಸಾವಿರದಯ್ಯನಿಚ್ಛೆಯಿಂ ಕರೆದು, ಕೇಳಿದನಂತೆನೆ :-।
"ಮೂರ್ತಿವರ್ಯನೆ, ನೀಂ ಜಗದ್ಗುರುವೆಯಾಗಿರ್ಪೆ; ।
ಪೂರ್ತಿಯಾಗಿಯೆ ಪೇಳ್ವುದೆಮ್ಮನೇತಕ್ಕಿನಿತು ।
ಕೂರ್ತು, ಸೇವಿಸುವೆ?"ಯೆನೆ ಶಿಷ್ಯನಾಗಿಂತೊರೆದನೆರಗಿ ಕೈಮುಗಿದು, ನಿಂದು, ॥೩॥

"ಏನಿದೈ, ಸದ್ಗುರುವೆ ಯಾಂ ಜಗದ್ಗುರುವೆಂತು? ।
ಮಾನಿತನೆ, ನಿನ್ನಾಳಿನಾಳಪ್ಪ ಯೋಗ್ಯತೆಯು ।
ಜ್ಞಾನಿ-ವರ್ಯನೆ, ಯೆನ್ಗಿಲ್ಲಮದರಿಚ್ಛೆಯಿಂ, ಸೇವಿಸಿಹೆ; ಯದನೆ ನೀಡೈ; ॥
ನೀನೆ ಯೆನ್ನೀ ಕಣ್ಗೆ ಮರೆಯಾದ ಮೇಲೆನಗೆ ।
ದೀನ-ಕಲ್ಪದ್ರುಮನೆ, ಸೇವೆಯಿದು ದೊರೆಯುವುದೆ? ।
ಜ್ಞಾನ-ಕೇಂದ್ರನೆ, ಭವಚ್ಛುಶ್ರೂಷೆಯಂ ಮಾಳ್ಪ ಬಯಕೆಯೊದಗಿಹುದೆ ಸುಕೃತಂ;॥

ಆಕಳದ ಕೆಳಗೆ ಕುಳ್ಳಿರ್ದವಂಗಮೃತವದು; ।
ಸ್ವೀಕರಿಸುವಂ ಶಂಕರತೆಯ, ಗುರು-ಕಿಂಕರಂ; ।
"ಕೈ ಕೆಸರದಾಗಿ, ಬಾಯ್ ಮೊಸರ ಕಾಣುವ"ದೆಂಬ ನಾಡುಲಿಯು ಸಟೆಯಪ್ಪುದೈ; ॥
ಶ್ರೀಕರನೆ, ನೀಂ ನಿರ್ವಿಕಲ್ಪಕ-ಸಮಾಧಿಯಂ ।
ಸ್ವೀಕರಿಸುತಿರಲೆನಗೆ ಪದ-ಸೇವೆ ದೊರೆಯುವುದೆ? ।
ಭೋ ಕರ್ಪದಿಯೆ, ಪಾಳು ದೇಗುಲದ ಘಂಟೆಯಂತೆನ್ನ ಬಾಳಪ್ಪುದಲ್ತೆ !?!" ॥೪॥

ಇದನಾಲಿಸುತ್ತೆ, ಗುರುಸಿದ್ಧ ಗುರುವರನಿಂತು ।
ಪೊದಳ್ದೊರೆದ "ನೇನಿದೈ, ಮೂರು ಸಾವಿರದಯ್ಯ, ।
ಸದಮಲ ಸಮಾಜ-ಸೇವೆಯ ನೀಂ ನೆಗಳ್ದಿರುವೆ; ನಿನ್ನ ಸೇವೆಯೆ ಘನಮದು; ॥
ಪದಪಿಂ ವಿಚಾರಿಸೈ; ಧರ್ಮ ಸೇವೆಯು ಮಿಗಿಲೊ? ।
ಪದೆದೋರ್ವ ವ್ಯಕ್ತಿ-ಸೇವೆಯು ಮಿಗಿಲೋ ಯೆಂಬುದಂ?।
ಸದಯ ನೀಂ ಮಠ-ಸೇವೆಯಂ ಮಾಡಿದವನೆಂದೆ ಯೀ ಜಗದ್ಗುರು ಪದವಿಯು ॥೫॥

ನಿನಗೆ ದೊರೆದಿಹುದಯ್ಯ; ವ್ಯಕ್ತಿಯಾದೆನ್ನ ನೀಂ ।
ಘನವಾಗಿ, ಸೇವಿಸಿರ್ದೊಡುಮೋರ್ವ ಸ್ವಾಮಿಯೆಂ-।
ದೆನಿಸುತ್ತಲಿರ್ದೆ; ನೀನದರಿಂದೆ ನಿನ್ನಾತ್ಮದುನ್ನತಿಯು ಘಟಿಸುತಿತ್ತು; ॥
ಬಿನದದಿಂ ಮಠ-ಸೇವೆಯಂ ನೆಗಳ್ದುದಕ್ಕಾಗಿ ।
ಘನತೆಯೊಳು ಗೌರವಂ ದೊರೆದುದೆಲ್ಲರ್ಗೆತಿಳಿ ।
ಮನನೀಯ ಪೂಜ್ಯನಾಗಿಹೆ; ಯಿದನೆ ಮುಂದುವರಿಸುತ್ತೆ ನೀಂ ಮುಕ್ತನಾಗೈ; ॥

ನಿನ್ನ ಬೆಂಬಲವಾಗಿ, ನಾನಿರ್ಪೆ; ಪೇಳ್ವುದೇಂ? ।
ಸನ್ನುತನೆ, ನಡೆದಲ್ಲಿ ನಡೆದಪೇಂ; ನುಡಿದುದನೆ ।
ಚನ್ನಮೆನೆ ನುಡಿದಪೇಂ, ಪಿಡಿದುದನೆ ಪಿಡಿದಪೇಂ; ಮಾಳ್ಪುದನೆ ಮಾಳ್ಪೆ ಸರಿಯೈ; ॥
ನನ್ನಿಯಿಂ ಕೊಟ್ಟದನೆ ಕೊಟ್ಟಪೇಂ; ಕೊಂಡುದನೆ।
ಮನ್ನಿಸುತೆ ಕೊಂಡಪೇಂ; ತಿಳಿದುದನೆ ತಿಳಿದಪೇಂ; ।
ಸನ್ನುತನೆ ನೋಡಿದುದನಾಂ ನೋಡಿದಪೆನಯ್ಯ; ಕೇಳ್ದುದನೆ ಕೇಳ್ದಪೆನರಿ; ॥೭॥

ನಿನಗುಮೆನಗುಂ ಭೇದಮಿಲ್ಲವೈ; ನಿತ್ಯದೊಳ್; ।
ವಿನುತ ಶಿವಧರ್ಮ-ಪ್ರಚಾರಮಂ ಗೈಯ್ಯುವುದೆ ।
ಯನಘ, ಮುಖ್ಯಂ ಕಾರ್ಯಮಾಗಿರಲಿ; ವಿದ್ಯಾ-ಪ್ರಚಾರಂ ಸದಾ ನಡೆಯಲಿ; ॥
ಘನತೆಯಿಂದನ್ನ-ವಸತಿಯನಿತ್ತು ಬಡವರ್ಗೆ, ।
ಘನ ಶರಣ-ಸಾಹಿತ್ಯ ಸತ್ ಪ್ರಸಾರವ ವಹಿಸಿ, ।
ವಿನುತ ಲಿಂಗಾರ್ಚನೆಯ ವೈಭವದೆ ನೀಂ ಬಾಳ್ವುದಿದುವೆ ಮಠ-ಕೃತಿಯಾಗಲಿ; ॥

ಕೇಳಿದೇ ಶ್ರಾವಣಾಂತಿಮ ಸೋಮವಾಸರಮೆ ।
ಮೇಳಯಿಪ ನಿರ್ವಿಕಲ್ಪಕ-ಸಮಾಧಿಯ ದಿನಂ; । "
ಭಾಳ-ಲೋಚನ-ರೂಪನೀ ನುಡಿಯನಾಲಿಸುತ್ತೆ ಶೋಕದೆ ಕುಮಾರ-ದೇವಂ ।'
ಬೀಳುತವನಡಿಯಲ್ಲಿ ಕಣ್ಣೀರಿನಿಂ ತೊಳೆಯೆ, ।
ತಾಳುತೆ ಮುಗುಳ್ನಗೆಯ, ನುಡಿದನೆಂತೆನೆ"ಮಗನೆ, ।
ತಾಳು, ನೀನುರು ಸಮಾಧಾನಮಂ; ರೋದಿಪುದು ಜ್ಞಾನಿ-ಕರ್ತವ್ಯಮಲ್ಲಂ; ॥೯॥

ಪ್ರಮಥರೈದಿದ ಕಾರ್ಯಕಾಂ ಬಂದೆಸೀ ಧರಗೆ; ।
ಸಮತೆಯಿಂದೆನ್ನ ಕಾರ್ಯಕ್ಕೆ ನೀನ್ನೈದಿರ್ಪೆ; ।
ವಿಮಲರಾವೆಲ್ಲರೆಮ್ಮೆಮ್ಮ ಕಾರ್ಯವ ತೀರ್ಚಿಕೊಂಡೈದುವುದೆ ಪದ್ಧತಿ; ॥
ಭ್ರಮೆಯೇತಕಿದರಲ್ಲಿ? ಮೂರುಸಾವಿರದಪ್ಪ-।
ನಮಿತ ಸೇವೆಯು ಮುಗಿಯೆ, ನೀನದೇ ಸತ್‌ಕ್ರಿಯೆಯು, ।
ರಮಿಪುದೈ; ಮುಗಿಸುತ್ತೆ,ಶಿವಲಿಂಗದೋಳ್ ಬೆರೆದು, ನಡಿಸವೇಳ್ಕಿದನೆ ನಿರುತಂ;॥"

ಎಂದೊರೆಯುತಂ ಸಮಾಧಾನ ಪಡಿಸುತ್ತೆ, ಗುರು- ।
ವಂದದಿಂ ಲಿಂಗಾರ್ಚೆಯೋಳ್ ಮಗ್ನನಾಗಿರಲ್, ।
ಹೊಂದುತಿರೆ ಶ್ರಾವಣಂ, ವಾರ್ತೆಯಿದು ತಿಳಿಯುತಿರೆ, ಜನತೆ ತದ್ದರ್ಶನಕ್ಕೆ ॥
ಬಂದು ಬಂದಲ್ಲಿ ಕೂಡುತಿರಲ್ಕೆ, ಮಾಹೇಶ- ।
ವೃಂದದಾರಾಧನೆಯು ಜರಗುತಿರೆ, ಕೊನೆಯದಾ- ।
ದಿಂದುವಾಸರವೈದುತಿರೆ, ಗುರುಸಿದ್ಧ-ಚರವರ-ಜಗದ್ಗುರುವೈದುತೆ, ॥೧೧॥

ಸರ್ವರೆರಗುತಿರಲ್ಕೆ, ಸುಮಲತಾ-ಮಂಟಪದೆ ।
ಶರ್ವ-ಸಮನಾಗ ಕುಳ್ಳಿರ್ದು, ಭಕ್ತರ ನೋಡಿ, ।
ಗರ್ವ-ರಹಿತಂ ನುಡಿದನೆಂತನೆ"ಲ್ಕೇಳಿರೈಯಾವಿನ್ನು ಗೋಚರಿಸೆವು;" ॥
ಸರ್ವಜನರೀ ನುಡಿಯ ಕೇಳಿ ಘನ-ಘೋರ ಮಾ- ।
ಗುರ್ವರೆಯು ಬಿರಿವಂತೆ, ರೋದಿಸಲೊಡರ್ಚಿದರ್;
ನಿರ್ವಹಿಸಲುರು ಶಾಂತಿಯಿಂ, ಲೋಕ ಗುರುವಿಂತು ಮತ್ತುಸುರಿದಂ
ಕರುಣೆಯೋಳ್; ॥೧೨॥

ಏಸಿದೈಯಾವೆಸಿತು ದಿವಸಂಗಳನಕಮೀ ।
ಸ್ಥಾನದಲ್ಲಿರ್ದೊಡುಂ ನಿಮಗೆ ಬೇಸರವಿಲ್ಲ;! ।
ಮಾಸಿತರೆ, ಯಿಲ್ಲಿಯಬರಂ ನಿಮ್ಮಪೇಕ್ಷೆಯಂ ನಡೆಸಿಹೆವಿದೀಗ ಶಿವನ- ।
ಮಾನನೀಯಾ"ಜ್ಞೆಯಂತೈದೆ, ನಡೆಯಲ್‌ವೇಳ್ಕ- ।
ಧೀನವೀ ಜಗವುವಂಗಖಿಲರ್ಗೆ ವಿದಿತವಿದೆ; ।
ಸ್ವಾನುರಾಗದೊಳೊಪ್ಪಿದೊಡೆ,ನಿಮಗೆ ಹಿತಮಹುದು; ನಿಮ್ಮನಗಲುವ ಕಾಂಕ್ಷೆಯು॥

ಎಮಗುಮಿಲ್ಲೈ; ನಿಮ್ಮ ಭಕ್ತಿಯಂ ಕೈಕೊಳುತೆ ।
ಸಮತೆಯಿಂ ನಿರ್ವಿಕಲ್ಪ-ಸಮಾಧಿಯೊಳಿಂದೆ ।
ಭ್ರಮೆಯಿಲ್ಲದಲೆ, ಜಪಾನುಷ್ಠಿತಿಯನೀ ಗವಿಯೊಳೆಸಗುತ್ತಲಿಹೆವು, ಸತತಂ; ॥
ನಿಮಗೆ ಹಿತಮಿದರಿಂದಲಹುದು; ನೀವಾದಡುಂ ।
ಸುಮಹಾತ್ಮನಾಗಿರ್ಪ ಮೂರು ಸಾವಿರ-ಗುರುವ- ।
ನಮಿತನನುಮೆಮ್ಮಂತೆ ತಿಳಿದು, ನಿಷ್ಠೆಯನಿಟ್ಟು, ನಡೆದೊಡಪ್ಪುದು ಶಾಂತಿಯು; ॥

ನಿಮ್ಮ ಯೀ ಭಕ್ತಿಗಾಗಿಯೆ ನೋತು, ಕೈಲಾಸ- ।
ಮುಮ್ಮದದೆ ಪೊಂದದಲೆ, ಸತತಮುಳಿವೆವು ದಿಟಂ; ।
ಹಮ್ಮಳಿದು ನಿಷ್ಠೆಯಿಂ ಪೂಜಾದಿಕವ ಸಮರ್ಪಿಸಲಿಚ್ಛಿತಮನೀವೆವು; ॥
ಕಮ್ಮಲರ್ ಭ್ರಮರಮಂ ಸೆಳೆವಂತೆ ಶತ್ ಪ್ರೇಮ- ।
ಮೆಮ್ಮ ಮನಮಂ ಸೆಳೆಯುವುದು; ಪೇಳ್ವುದೇಂ? ನೀವ- ।
ದಮ್ಮರೆದೊಡಾವ್ ಮರೆಯುವೆವೆ?! ಮೂರು ಸಾವಿರದ ತಂದೆ ಯೆಚ್ಚರಿಪನರಿದು;॥

ಮೂರು ಸಾವಿರದಪ್ಪಗುರುವು ಸಾಮಾನ್ಯನೇಂ ? ।
ಮೂರುಸಾವ್‌ಯಿರದವಂ; ಮೊದಲನೆಯ ಸಾವಹಂ-।
ಕಾರವದುಮೆರಡನೆಯ ಸಾವು : ಮಮತೆಯು; ಗುರುವಿನಾ ಮರೆವು, ಮೂರನೆಯ ಸಾವ್; ॥
ಮೂರುಸಾವಿರದ ಸ್ಥಿತಿಗೈದುವಾಶೆಯು ಜನಿಪು-।
ದಾರಯಲ್ಕತಿ ಸುಕೃತಮಿರವೇಳ್ಕು ನೀವೆ ಸಲೆ ।
ಭೂರಿ ಭಾಗ್ಯಾಪ್ತರೈ;ಯಿವನ ಸೇವಿಸಿ ಮಹಾಭಾಗ್ಯಮಂ ಕಾಯ್ದುಕೊಳಿರಿ; ॥೧೬॥

ಮರವೆಯ ನಿವಾರಣೆಗೆ ಧರ್ಮಮುರು ಸಾಧನಂ; ।
ಸರಸಮೆನಲಪ್ಪುದದು ದ್ವಿವಿಧಮಾಗಿಯೆ; ತಿಳಿಯ- ।
ಲುರು ಧರ್ಮದಾಚರಣೆಯೊಳ್ ನಿಷ್ಠೆ ಬೆಳೆದಂತೆ, ವಿವಿಧತೆಯ ಜ್ಞಾನಮುರ್ಕುಂ; ॥
ಮೆರೆವುದದು ಸಾಮಾನ್ಯ, ಸುವಿಶೇಷಮೆಂಬುವೀ ।
ಯೆರಡು ನಾಮಂಗಳಿಂದೆರಡು ರೂಪವ ತಳೆದು, ।
ಪರಿವ ಸಾಮಾನ್ಯಮದು ನೀತಿಯೆನಿಪ್ಪುದು; ವಿಶೇಷಂ ಮತಾಚಾರ-ನಿಕರಂ;॥೧೭॥

ಸ್ರೀತಿಯುದೆ ಸದ್ಗುಣಂ; ಮುಖ್ಯಮಿದು ಜೀವನಕೆ; ।
ಖ್ಯಾತಮಾಗಿದೆ ಜ್ಞಾನ-ಸಾಧನಕೆ; ಸ್ವ-ಪರಮತ ।
ಸಾತಿಶಯದಾಚರಣೆಯಲ್ಲರದನಾಚರಿಸಿ, ಪಡೆಯುವೇಳ್ಕು ಜ್ಞಾನವ; ॥
ಓತು ಸುಜ್ಞಾನದಿಂ ಮುಕ್ತಿಯುಪ್ಪುದು ದಿಟಂ; ।
ಪ್ರೀತ ಜೀವನ್ಮುಕ್ತಗಾಪಕ್ರಿಯೆಗಳುಮಿಲ್ಲ- ।
ಮೀ ತೆರದ ನುಡಿ ಸರಿಯೆ? ಲಿಂಗವಂತರ್ಗಿಲ್ಲ; ಲಿಂಗಮಿರವೇಳ್ಕು ಸತತಂ; ॥೧೮॥

ಲಿಂಗಮೆಂದೊಡೆ ಮಹಾಜ್ಞಾನಮಾ ಬ್ರಹ್ಮಮುಂ; ।
ಲಿಂಗಮೆಂದೊಡೆಯಾತ್ಮಮಾತ್ಮಮೆಂದೊಡೆ ಚಿತ್ತು;
ಲಿಂಗಮದೆ ಗುರುಯೋಗ-ಶಕ್ತಿಯಿಂದಿಷ್ಟ ಲಿಂಗಮದಾಗಿ, ಬೆಳಗುತ್ತಿದೆ; ॥
ಲಿಂಗನಾಮಮಿದಕ್ಕೆ ಸಫಲಮಾಗಿದೆಯಿದಂ ।
ಲಿಂಗವಂತರ್ ಧರಿಸಲೇವೇಳ್ಕು ಕಂಠದೋಳ್; ।
ಲಿಂಗಮಿರದಿರೆ, "ಲಿಂಗವಂತ"ನೆಂಬಭಿಧಾನಮೆಂದಿಗುಂ ಸಲದರಿಯಿರೈ; ॥೧೯॥

ಇಷ್ಟಲಿಂಗವೆ ಪರಬ್ರಹ್ಮಮೆಂದರಿಯುತ್ತ, ।
ಇಷ್ಟಲಿಂಗಮನಗಲದಂತೆ, ನೀವ್ ಧರಿಸುತಿರೆ- ।
ಲಿಷ್ಟವಹ ಶಾಂತಿಯುಂ ದೊರೆಯುವುದು; ಭಕ್ತಿಯಿಂ ಪೂಜಿಸಲ್ ಸಿದ್ಧಿಯಖಿಲಂ; ॥
ಶಿಷ್ಟರೊಪ್ಪುವ ತೆರದೆ ಭಸ್ಮಮುಂ ಧರಿಸಿರೈ; ।
ಸ್ಪಷ್ಟಮೆನೆ ಕೊರಳಲ್ಲಿ ರುದ್ರಾಕ್ಷಮಿರುತಿರಲ್ ।
ಕಷ್ಟ-ಕಾರ್ಪಣ್ಯಂಗಳರಿಯೆ ತೊಲಗುತ್ತಿರ್ಪವಿವೆ ಲಿಂಗಿ-ಧರ್ಮ-ಚಿಹ್ನಂ; ॥೨೦॥

ಇದು ಧರ್ಮಮಿದರೀ ಪ್ರಚಾರಕ್ಕಾಗಿ ಮಠಂಗ-।
ಳುದಯಮಾಗಿವೆ; ತಿಳಿಯಿರೀ ಮೂರುಸಾಪಿರ ಮ-।
ಠದೊಳಾದಡುಂ ನಿತ್ಯ ಧರ್ಮಪ್ರಚಾರಕಾರ್ಯಂ ನಡೆಯಲೇ ವೇಳ್ಕಿದು; ।
ಇದಕಾಗಿ ನೀವೆಲ್ಲರುಂ ಯತ್ನಿಸಲ್ ವೇಳ್ಕು; ।
ಸದಮಲರೆ, ನಿಮಗೆ ಸನ್ಮಂಗಲಂ ಸಿದ್ಧಿಸಲಿ; ।
ಪೊದಳ್ದನುಷ್ಠಾನಕ್ಕೆ, ತೆರಳ್ವೆವಾಪೀಗಪಿಯ ಬಾಗಿಲಂ ಭದ್ರಮಿರಲಿ; ॥೨೧॥

ಎಂದೊರೆದದೃಶ್ಯನಾದಂ; ಜನರ್ ನೋಡುತಿರ-।
ಲಂದವಹ ಗವಿಯ ಬಾಗಿಲಮಾಗ ಮುಚ್ಚಿಹುದು; ।
ಕುಂದದಲೆ ಜನರೊಳೋರ್ವಂ ತಾನಿನ್ನೊರ್ಮೆ ದರ್ಶನವ ಕೊಳ್ವೆನೆನುತೆ, ॥
ಕಂದದಲೆ ಗವಿಯ ಸನಿಹಕ್ಕವಂ ಪೋಗುತಿರೆ, ।
ಕಂದಿದವವನ ಕಂಗಳಾಗಳ್ ತಿರುಂಗುತಂ ।
ಬಂದನಯ್ಯೋ !! ಕಣ್ಗಳಿಂಗಿದವೆನುತ್ತಲತಿ ದುಃಖಿಸುತ್ತಿರಲ್, ಜನತೆಯು ॥೨೨॥

ಮರುಗುತ್ತೆ, ಪ್ರಾರ್ಥಿಸಲವಂಗೆ ಸೂಚಿಸುತಿರಲ್, ।
ನೆರೆ ಬಕ್ತಿಯಿಂದಾ ನರನು ಕಾಣಿಕೆಯ ಸಲೆ ।
ಗುರುವಾದ ಮೂರುಸಾವಿರದಪ್ಪ-ಸ್ವಾಮಿಗೀಯುತೆ ಪ್ರಾರ್ಥಿಸುತೆರಗಲು, ॥
ನೆರೆ ಶೋಭಿಸಿದವಾಗಳವನ ಕಣ್ಗಳ್, ಮೊದಲ ।
ತೆರನಾಗಿ; ವಿಸ್ಮಯಿಸಿತಖಿಲ ಜನತೆಯು ತಿಳಿದು; ।
"ಚರವರನೆ, ಪರತರನೆ, ಶ್ರೀ ಜಗದ್ಗುರುವರನೆ, ಜಯ"ಯೆಂದು ನುತಿಸುತಿರಲು,॥

ಮೂರು ಸಾವಿರದಯ್ಯ ಶ್ರೀ ಜಗದ್ಗುರು-ವರಂ ।
ಧೀರನಾಗಿಂತು ಜನತೆಯ ನೋಡಿ ಪೇಳಿದಂ ।
"ವೀರಭಕ್ತರೆ, ಯೆನ್ನ ಗುರುವು 'ಗುರುಸಿದ್ಧೇಶ'ನಿಲ್ಲಿ ನೆಲಸಿಹನೆನ್ನಲು, ॥
ಸಾರಿದೀ ಸಲ್ಲೀಲೆ ಸಾಕ್ಷಿಯಾಗಿಹುದಿದಕೆ ।
ಸಾರ ಸಂಪದವಿಹುದು; ನಿಮಗೇನು ಕೊರತೆಯಿ-।
ಲ್ಲೋರೆಯಾಗದಲೀಗ ಗದ್ದುಗೆಯ ಕಟ್ಟಿಸಲ್, ಪೂಜೆ ನಡೆಯುವುದವಿರತಂ;॥೨೪॥

ನಿಮಗೊಳಿತ್ತಾಗುವುದೆನಲ್ಕೆ ಭಾಕ್ತಿಕರೊಪ್ಪಿ, ।
ಕ್ರಮ ತಪ್ಪದಂತೆ,; ತದ್ ಗಹ್ವರದ ಮೇಲೆ ಗುರು-।
ವಮಿತ ಹರ್ಷದೊಳೊಪ್ಪೆ ಗದ್ದುಗೆಯ ನಿರ್ಮಿಸುತೆ, ಪೂಜೆಗನುಕೂಲಿಸಿದರು; ॥
ಸಮತೆಯಿಂ ಶ್ರೀ ಗಣಾರಾಧನೆಯನೆಸಗಿದರ್; ।
ಸುಮನದಾ ಕರ್ತೃವಿನ ಪ್ರೇರಣೆಯ ಬಲದಿಂದೆ ।
ವಿಮಲ ಭಕ್ತರ್ ಮಠವ ನಿರ್ಮಿಸಿದರತ್ಯಲ್ಪ ದಿನದೆ, ಕಂಗೊಳಿಸುವಂತೆ; ॥೨೫॥

ಜಯ, ನಿರ್ವಿಕಲ್ಪಕ-ಸಮಾಧಿಸ್ಥ–ಸದ್ಗುರುವೆ, |
ಜಯ; ಶರಣ–ಹೃದ್.ಗುಹಾ ಸಂದೀಪ್ತ–ಚಿದ್ಗುರುವೆ, |
ಜಯ ಜಯ; ತ್ರಿಸಹಸ್ರ–ಸನ್ಮಠಾಧ್ಯಕ್ಷ, ವಿಭುರಕ್ಷಕ, ಮಹಾಂತ–ಗುರುವೆ ||
ಜಯ; ವಂದಿತ–ಶುಭಪ್ರದಾನ-ಕಲ್ಪದ್ರುಮವೆ, |
ಜಯ; ಭಜಕ–ಭಕ್ತ–ಭಕ್ತಿಪ್ರಥಿಕ, ಸತ್ ಪ್ರಭವೆ, |
ಜಯ ಮಂಗಲಂ; ಜಯ ವಿಜಯ; ಮಂಗಲ; ಕರ್ತೃ ಗುರುಸಿದ್ಧ-ವಿಶ್ವಗುರುವೆ;

ವೀರೇಶ–ಪುಣ್ಯಾಶ್ರಮಂ ಗದುಗಿನೊಳ್ ಮೆರೆವು- |
ದೋರಂತೆ ಶೋಭಿಸುವುದಲ್ಲಿ ಪಂಚಾಕ್ಷರನು-|
ದಾರ ಸ್ವ ಗುರುವರನ ಯೋಗದ ಸಮಾಧಿಯಿದೆ; ಕುಳಿತಿಲ್ಲಿ ಗುರು-ಕರುಣೆಯೊಳ್
ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ |
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ |
ಮೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣ ಸಂಧಿಯು ವಿಂಶತಿ ||೨೭||

ಅಂತು ಸಂಧಿ ೨೦ಕ್ಕಂ, ಪದಂಗಳು ಇಪ್ಪತ್ತೇಳಕ್ಕಂ;
ಇಂತು, ಒಟ್ಟು ಪದಂಗಳು ೧೦೪೧ಕ್ಕಂ;
—ಮಂಗಲಂ—

॥ ಶ್ರೀ ಗುರುಬಸವಲಿಂಗಾಯ ನಮಃ ॥

❀❀

# ಇಪ್ಪತ್ತೊಂದನೆಯ ಸಂಧಿ





॥ ಸೂಚನೆ ॥

ವರ ಕರ್ತೃ ಗುರುಸಿದ್ಧ ಶಿವಯೋಗಿ-ಗುಹೆಯು ಮೇ. |
ಉರೆ ಯೆಸೆವ ಗದ್ದುಗೆಯು ಮಹಿಮೆಯನೆ ತೋರುತಿಹ |
ಪರತರ ಜಗದ್ಗುರು ಪರಂಪರೆಯ ನಾಮಮಂ ಪ್ರಥಿತ ಕಾರ್ಯಮನೊರೆವನು॥

*         *

[ಸಂಧಿ ಪ್ರಾರ್ಥನಾ-ಪದ್ಯ]

ಜೇನು ತನ್ನಯ ಮಧುವ ಶೋಧಿಸುತೆ, ಕರ್ಬಿನೋಳ್ ।
ಪಾನಕತಿ ರುಚಿಯೆನಿಪುದಿಡಲದುವೆ ಮತ್ತಾವ |
ಸ್ಥಾನದೊಳಗಿಟ್ಟಡುಂ; ತದ್‌ರುಚಿಯು ಬರಲಾರದದರಂತೆ, ಮಮಚಿತ್ತವ; ॥
ಜ್ಞಾನಿ-ವಂದಿತ-ಶಿವನೆ, ನಿನ್ನ ಪಾದಮನುಳಿದು |
ದೀನ-ಕಲ್ಪದ್ರುಮನೆ, ಮತ್ತಮೆಲ್ಲಿಯುಮಿರಿಸೆ, ।
ಸ್ವಾನುಭಾವದ ಸುಖಂ ದೊರಿಯದೆಂದೆಂದಿಗುಂ; ಕೊಡೆನೆಗಾ ಮತಿಯ ಹರನೆ; ॥೧॥

*         *

ಮೂರ್ರ್ಸ್ಸಾವಿರದಪ್ಪ ಸ್ವಾಮಿಯಾ ಬಿಲ್ವೀವನ ।
ಸಾರಮಠದೊಳಗಿರ್ದು ತನ್ನನಾಗಳ್ ಜಗದು- ।
ದಾರ ಗುರುವೆಂದರಿಯದಲೆ, ತನ್ನನಾಗಳುಂ ಮಠ-ಬೃತ್ಯನೆಂದು ತಿಳಿದು; ॥
ವೀರನದರಭ್ಯುದಯಕಾಗಿ ಯತ್ನಿಸುತಿಹನ- ।
ಪಾರ ಮಹಿಮನ ನಿರ್ವಿಕಲ್ಪಕ-ಸಮಾಧಿಯಂ ।
ಭೂರಿ ಮೋದದೆ ವಂದಿಸುತೆ ತ್ರಿಕಾಲದೆ ಲಿಂಗಪೂಜೆಯಂ ಮಾಡುತಿರ್ದಂ; ॥೨॥

ವರ ಕರ್ತೃ ಗುರುಸಿದ್ಧಯತಿ ಜಗದ್ಗುರುವಿನಾ !
ಪರಮ ಶಿವಯೋಗದಾ ಗವಿಯ ವೇದಿಕೆಯ ಪರ- ।
ತರ ಪೂಜೆಯಂ ಶಿವಕುಮಾರ-ದೇಶಿಕನೊಲಿದು, ಪೂಜಿಸುತ್ತಿರ್ದನನಿಶಂ; ॥
ಬರುಬರುತಾ ಗುರು-ಸಮಾಧಿ-ಕೀರ್ತಿಯು ಬೆಳೆದು, ।
ವರವ ಪಡೆಯುವ ಜನಂ ಪೆರ್ಚಿಹುದು; ಪೇಳ್ವುದೇ- ।
ನುರು ಲೀಲೆಗಳ್ ಜರುಗಲಾಗಿಹವು, ಮೊದಲಗಿಮ್ಮಡಿಯಾಗಿ ತತ್ ಸ್ಥಾನದೆ; ॥೩॥

ಗರ್ದುಗೆಯ ಕಂಡೊಡನೆ ಜನಕೆ ಮಂಗಲಮುಪ್ಪು- ।
ದಿರ್ದ ಕಷ್ಟಂಗಳಾಗಲೆ ತೊಲಂಗುತ್ತಿಹವು; ।
ಪೊರ್ದಿದ ದರಿದ್ರತೆಯು ನಿಲ್ಲದೋಡುತ್ತಿಹುದು, ಪಾಪಿಗಳ ಪಾಪಕ್ಷಯಂ; ॥
ತಿರ್ದದಾಗುತ್ತಿಹುದು; ತದ್ ಬಿಲ್ವ-ವನದೆ ಗುರು- ।
ವಿರ್ದ ತೆರನಹುದು ನೋಳ್ಪರ ಮನಕೆ ತತ್ಕ್ಷಣಕೆ; ।
ಕರ್ದಮದ ತೆರನಾದ ಸಂಸೃತಿಯ ವಾಸನೆಯು ಕಳೆಗುಂದುವದು ಜನತೆಯೊಳ್; ॥

ಶಿವಯೋಗ-ಸತ್-ಸಮಾಧಿಯ ಮಹಿಮೆಯಿಂ ನಿತ್ಯ- ।
ಮವನಿಯೊಳ್ ಮೂರುಸಾವಿರದಪ್ಪನಾ ಜಸಂ ।
ತವೆ ಬೆಳಗುತ್ತಿರ್ದತ್ತು; ಗ್ರಾಮನಗರಗಳಲ್ಲಿ ಮೆರವಣಿಗೆ ಭವ್ಯಮಾಗಿ॥
ನವಮೆನಲ್ ಜರುಗತಿರ್ದತ್ತಿದೀ ಸಮಯದೊಳ್; ।
ಸವಿ ನೆನಹಿಗಾಗಿಯಲ್ಲಲ್ಲಿ ತನ್ನಾವ ದಿಂ ।
ಶಿವ-ಧರ್ಮಸುಪ್ರಚಾರದ ಕೇಂದ್ರಗಳೊ ಎನೆ ಮಠಂಗಳುರೆ ಸಿದ್ಧಮಹವು; ॥೫॥

ಇದಕೊಂದು ದೃಷ್ಟಾಂತಮಂ ಪೇಳ್ವೆನಾವುದೆನೆ:—
ವಿದಿತಮಾದೊಂದು ಗ್ರಾಮಮಂ 'ಕಲ್ಯಾಣನಹಳ್ಳಿ'; |
ಪದುಳ್ದಿಹುಹು ಶಿವಮೊಗ್ಗೆಯುರು ಸೀಮೆಯೊಳಗಲ್ಲಿ ಮೂರುಸಾವಿರ ಮಠಮಿದೆ; ||
ಸದಯನಾ ಗ್ರಾಮಣಿಯು ಗುರುಸಿದ್ಧನಾಮಕಂ; |
ಮುದದೆ ತನ್ಮಠ-ಸುವ್ಯವಸ್ಥೆ ಪೂರ್ವಜರಿಂದೆ |
ಪದೆದು ನಡೆದಿಹುದಿಲ್ಲಿ ಶ್ರಾವಣಾಂತಿಮ ಸೋಮವಾರದ ಗಣಾರಾಧನೆ ||೬||

ಇಂದಿನ ಬರಂ ನಡೆದು ಬಂದಿಹುದು; ತಪ್ಪಿಪೊಡೆ, |
ಪೊಂದುವುದು ಮನೆತನಕೆ ಕೇಡೆಂದು ಗೌಡನೋಳ್; |
ಪಿಂದಲೀ ಪೌರಾಣಮಂ ಬರೆವ ಕಾಲಕ್ಕೆ ಪೇಳ್ದನೆನಗೀ; ವಿಷಯವ; ||
ಸಂದ ದಾವಣಗೇರಿಯಿಂದೊರ್ಪ ಪಾಕಮಂ |
ಸಂದಿದ ಗಣಾರಾಧನೆಗೆ ಸಿದ್ಧಪಡಿಸಿ ಕೊಂ- |
ಡಂದದಿಂದಾಪ್ತರೊಡನೈದುತಿರೆ ಗೌಡಂಗೆ ಪಾವಡ್ಡಮಾಗಿ ತಡೆಯೆ, .. ||೭||

ಗುರುಸಿದ್ಧ-ಗೌಡನಾಗಳೆ ಬೆದರ್ದು, ಕೈಮುಗಿದು, |
ನೆರೆಭಕ್ತಿಯಿಂ ಬೇಡಿಕೊಂಡನೆಂತೆನೆ ದೇವ; |
ಗುರುವೆ, ತವ ಮಠದಲ್ಲಿ ಪಾಕಮಂ ಗೈಸುತಿಹೆನೆನ್ನ ತಪ್ಪಂ ಕ್ಷಮಿಸೆ"ನೆ ||
ಭರದೆ ಸರ್ಪಮದೃಶ್ಯಮಾದುದಾ ಕ್ಷಣದಲ್ಲಿ; |
ತೆರಳ್ದು ಪದ್ಧತಿಯಂತೆ, ಗೈಯ್ಯಿಸುತಡಿಗೆಯನಾಗ- |
ಳುರು ಗಣಾರಾಧನೆಯನೆಸಗಿದೀ ಲೀಲೆಯಂ ಕೇಳ್ದು ಬರೆದಿರ್ಪೆಸಿಲ್ಲಿ; ||೮||

ಇಂತನೇಕ ಗ್ರಾಮ-ನಗರಂಗಳೋಳ್ ಮೆರೆಯೆ, |
ಶಾಂತವಹ ಮೂರುಸಾವಿರಮಠದ ಸದ್ಯಶಂ |
ಸಂತರಾನಂದಿಸೆ, ಕುಮಾರ-ಗುರುವಿಗೆ ಪಟ್ಟಮಂ ಕಟ್ಟೆ ಶಿವನ ಬೆರೆದಂ; ||
ಶಾಂತಿಯಿಂದಾ ಕುಮಾರೇಶ್ವರ-ಜಗದ್ಗುರುವು |
ಸಂತತಂ ಲೀಲೆಗಳ ತೋರಿ ಭಕ್ತಿಯ ಬೆಳೆಸಿ, |
ಕಾಂತ ಕೀರ್ತಿಗೆ ಮೆಚ್ಚಿ, ಚರವರರನೇಕರೀತನ ಶಿಷ್ಯರಾಗಿರ್ಪರು; ||೯||

ಈ ಕುಮಾರ ಜಗದ್ಗುರೂತಮಂಗಲ್ಲಲ್ಲಿ ।
ಸಾಕು-ಸಾಕೆನುವನಿತು ಚರವರೇಣ್ಯರ್ ಶಿಷ್ಯ- ।
ರಾ ಕುಮಾರ; ಸಮಗೆ ಸಿದ್ಧರಾಗಿಹರಾಗ, ತಮ್ಮಯ ಮಠಂಗಳ್ಗೆ ತಾವ್- ॥
ಶ್ರೀಕುಮಾರ-ಸ್ವಾಮಿಯಭಿಧಾನವಿಟ್ಟವರ್; ।
ಲೋಕನತರಾದರೆನೆ ಮೂರು ಸಾವಿರ ಮಠದ ।
ಶ್ರೀಕರನ ಕರ್ತೃ ಗುರುಸಿದ್ಧೇಶನುರು ಯೌಗಿಕ-ಸಮಾಧಿ-ಮಹಿಮೆಯೆನಿತೊ? ॥

ಗುರುಸಿದ್ಧಯತಿಗಳೆಂಬುವರ್ ಮಹಾಮಹಿಮರೀ ।
ಪರಿಣತ ಜಗದ್ಗುರುಗಳಾಗುತೆ ಕುಮಾರರಿಂ ।
ಪರಮ ಪಟ್ಟವ ಪಡೆದು, ಕರ್ತೃ ಗುರುಸಿದ್ಧರಿವರೆಂಬಂತೆ ಶೋಭಿಸಿಹರು; ॥
ಪರತರರನಂತರಂ ಪಂಚಮದ ಪಟ್ಟಮಂ ।
ನೆರೆ ಪಡೆದು, ಮೂರುಸಾವಿರದಪ್ಪ-ನಾಮ,ಯತಿ- ।
ವರನೀ ಜಗದ್ಗುರು ಮಹಾಸ್ವಾಮಿಯೆನಿಸುತ್ತೆ ಮೆರೆಯಿಸಿದನೀ ಮಠಮನೆ ॥೧೧॥

ಚನ್ನಬಸವನೆ ಯಿಲ್ಲಿಗವತರಸಿ ಬಂದನೆಂ- ।
ಬುನ್ನತ ಯಶವ ಪಡೆದು, ಲೋಕಗುರು-ಪಟ್ಟಮಂ ।
ಚನ್ನಬಸವಸ್ವಾಮಿಯೈದುತ್ತೆ, ಮೂರುಸಾವಿರ ಮಠದ ಸತ್ ಕೀರ್ತಿಯಂ ॥
ಚೆನ್ನಮೆನೆ ಬೆಳೆಸಿದಂ; ಹರಿಹರಪುರಾದಿಗಳೊ-
ಳುನ್ನಮಿತ ತನ್ನಾಮದಿಂ ಮಠವ ನಿರ್ಮಿಸುತೆ, ॥
ನನ್ನಿಯಿಂ ಧರ್ಮಸಾಹಿತ್ಯ-ಪ್ರಚಾರಮಂ ಮಾಡಿ ಲಿಂಗದೆ ಬೆರೆದನು; ॥೧೨॥

ಹುಚೇಂದ್ರನೆಂಬ ಪೆಸರಂ ಪಡೆದು, ಕರ್ತೃ ವಾ ।
ಸಚ್ಚಿನ್ಮುದಾತ್ಮಕಂ ಗುರುಸಿದ್ಧನೈದುತ್ತೆ, ।
ಮೆಚ್ಚುತ್ತಲೀ ಜಗದ್ಗುರು-ಪಟ್ಟಮಂ ಪಡೆದು, ಲೀಲೆಯಂ ಗೈದನೊ ಯೆನೆ ॥
ನೆಚ್ಚಿರ್ಪ ಭಕ್ತರಂ ಪೊರೆದು, ಶಿವನೋಳ್ ಬೆರೆಯೆ, ।
ಮುಚ್ಚಿರ್ಪ ಜನತೆಯಜ್ಞಾನಮಂ ಕಳೆಯಲ್ಕೆ, ।
ನೆಚ್ಚುತ್ತಲೆಂಟನೆಯ ಪಟ್ಟಮಂ ಪಡೆದನೆನೆ, ಚನ್ನಬಸವಾಖ್ಯನೆಸೆದಂ; ॥೧೩॥

ಮತ್ತೆ ಗುರುಸಿದ್ಧನೆಂಬುವ ಪೆಸರೊಳಾ ಶಿವಂ |
ಪತ್ತಿದಂ, ಮೂರುಸಾವಿರ,ಮಠದ ಪೀಠಮುಂ;
ವಿತ್ತದಿಂ ವಿದ್ಯೆಯ್ಯೆ ಸಿರಿಯ ಬೆಳೆಯಿಸುತೊಲಿದು ಗುರುಸಿದ್ಧಯಶಿಯು ಮೆರೆದಂ;
ಪತ್ತನೆಯ ಪಟ್ಟಕ್ಕೆ ಚನ್ನಬಸವಾಖ್ಯಗುರು-
ವೆತ್ತರಿಸಿದಂ ಬಂದು, ಶ್ರೀಮಠ-ಯಶಶ್ರೀಯ; |
ಮತ್ತೆ ಸುಬ್ಬಳ್ಳಿಯಾ ಬ್ರೂಲತಾ-ಪುರಮೆಂಬ ಪೆಸರನ್ನೈದಿತ್ತಾಗಳೆ; ||೧೪||

ಹುಚ್ಚೀಂದ್ರ-ಶಿವಯೋಗಿ ಸಿಂಹಾಸನಮನೇರಿ, |
ಪೆಚ್ಚಿರ್ದ ದುರಿತವ ನಿವಾರಿಸಿದನಾ ಜನರ್ |
ಸಚ್ಚಿನ್ಮುದಾತ್ಮಕನ ನಂಬಿ, ಸುಕೃತಿಗಳಾದರೀಗ ಕನ್ನಡದ ನಾಡೊಳ್; ||
ಹುಚ್ಚಿದ್ದು ಮಾರನುಪಟಳಕೆ ಸಿಲ್ಕಿದ ಜನರ |
ಹುಚ್ಚಾಟಮಂ ಕಳೆಯಲೋಸುಗಂ ಬಂದನೆನ- |
ಲಚ್ಚೊತ್ತಿದಂತೆ ಸತ್ ಸಂಸ್ಕೃತಿಯನಿತ್ತಂ, ಕುಮಾರಂ ಸುಪೀಠವೇರಿ; ||೧೫||

ಮೂರುಸಾವಿರಮಠದ ಪೀಠದೊಳ್ ಮೆರೆದಿಹಂ; |
ಧೀರ ಗುರುಸಿದ್ಧಾಖ್ಯೆಯಂ ಪಡೆದು, ಶಂಕರಂ; |
ವೀರಶೈವರ ಮಹಾಸಾಹಿತ್ಯಮಂ ಮತ್ತಮುದ್ಧರಿಸುತಂ ಶಾಂತಿಯಿಂ ||
ಮೂರುಸಾವಿರದ ಶ್ರೀಗುರುಪಾದ ಶಿವಯೋಗಿ- |
ಯೇರಿ ಪೀಠವ, ಷಟ್ ಸ್ಥಲೋಚ್ಚ-ತತ್ತ್ವವ ಜಗದೆ |
ಸಾರಿದಂ, ಸತ್‌ಪ್ರಚಾರಕರ ನೇಮಿಸಿ, ಜಗದ್ಗುರುವು ಜಂಗಮ-ಕುಲಮಣಿ; ||೧೬||

ದಾಸೋಹಮುರು ಭಾವದಿಂದನ್ನ-ದಾನಮುಂ |
ನೈಸರ್ಗಿಕಮೆನಲ್ ಮಾಳ್ಪ ಪದ್ಧತಿಯನುರೆ |
ಲೇಸಾಗಿ ಕಲಿಸಲ್ಕೆ, ಗುರುಸಿದ್ಧನಾಮದಿಂ ಶಿವನೇರಿದಂ, ಪೀಠವ; ||
ದಾಸೋಹಮೆಂಬ ಪೆಸರಿಟ್ಟದೇ ಕಾರ್ಯಮಂ |
ಲೇಸಿಂದೆ ಮಾಡುತಿರ್ದಂ, ಸಿದ್ಧರಾಮನೆಂ- |
ಬಾ ಸದ್ಗುರುವು; ಪರಮ ಸಿಂಹಾಸನಮನೇರಿ, ಶ್ರೀಮಠದೆ ಸ್ಥಿರಗೊಳಿಸಿದಂ ||೧೭||

ಪದಿನೇಳನೆಯ ಪಟ್ಟಪಂ ಮತ್ತೆ ಷಣ್ಮುಖಂ ।
ಸದಮಳಿನ ಸಿಂಹಾಸನವ ಸಾರ್ದನೆಂಬಂತೆ ।
ಪದವಿಂದಲಾ ಕುಮಾರಸ್ವಾಮಿಯೆಸೆದಿಹಂ ವಿದ್ಯಾರ್ಥಿ-ಕುಲ-ಬಂಧುವು; ॥
ಪದುಳ್ದು ಪ್ರಭುದೇವನೆಂಬುವ ಸ್ವಾಮಿಯೈದುತ್ತೆ ।
ಪಡೆದಲ್ಲಮ ಪ್ರಭುವಿನಂತೆ, ತೋರಿದನಾಗ; ।
ಪುದಿದ ವಿಭವದ ಶೂನ್ಯ ಸಿಂಹಾಸನಮನೇರಿ, ಶೋಭಿಸಿದನಾ ಸ್ಥಾನದೆ; ॥೧೮॥

ಚನ್ನಬಸವಂ ತಾನೆ ಮತ್ತೊಂರ್ಮೆಯವತರಿಸಿ; ।
ಸನ್ನಿಯಿಂ ಬಂದು, ಪೀಠಮನೇರ್ದನೆಂಬಂತೆ; ।
ಚನ್ನಬಸವಸ್ವಾಮಿಯೆಲ್ಲರ್ಗೆ ಪ್ರಿಯನಾಗಿ, ಶರ್ವ-ಧರ್ಮವ ಬೆಳೆಸಿದಂ; ॥
ಚನ್ನಮೆನಲಿಪ್ಪತ್ತನೆಯ ಪಟ್ಟಕೈದಿದಂ ।
ಚಿನ್ನದಂತಪ್ಪ ಬಾಳಂ ಕಲಿಸಲೋಸುಗಂ ।
ಸನ್ನಿಹಿತನಾಗುತೆ ಪ್ರಭುಸ್ವಾಮಿನಾಮದಿಂ, ಶ್ರೀ ಜಗದ್ಗುರು-ಪೀಠಕೆ, ॥೧೯॥

ಶ್ರೀ ಜಗದ್ಗುರು ಕುಮಾರ ಪ್ರಭುಸ್ವಾಮಿಯುರೆ ।
ಸೋಜಿಗಮೆನಲ್ ಶೂನ್ಯ-ಪೀಠಮನಲಂಕರಿಸಿ, ।
ತ್ರೈಜಗದ್-ವಂದಿತಂ ತಾನಾದನೆಂದೊಡೀ ಕರ್ತೃವಿನ ಲೀಲೆ ಯೆನಿತೊ; ॥
ರಾಜರಲ್ಲಿರುವಧರ್ಮವ ಕಳೆದು, ಲೀಲೆಯಿಂ ।
ಪೂಜೆಗೊಳುತಂ, ಮೂರುಸಾವಿರ-ಮಠಂಗಳಿಂ ।
ನೈಜವಹ ಮೂರುಸಾವಿರರದಪ್ಪನೆಂಬ ಗುರುವಿಂಗೆ ಪಟ್ಟವಕಟ್ಟಿದಂ; ॥೨೦॥

ಹಾರಿಸಿದ ನೀ ಜಗದ್ಗುರು ಷಟ್‌ಸ್ಥಲಧ್ವಜಮ-
ನೇರಿಸಿದನಖಿಲ-ಹೃದಯಾಕಾರದೊಳಗದನ- ।
ಪಾರ-ಮಹಿಮೆಯ ತೋರಿ, ಶಿವಲಿಂಗ-ಗುರುವರಂಗೀಯುತೀ ಚರಪೀಠವ; ॥
ಸಾರ ಲಿಂಗದೆ ಬೆರೆದನೀ ಜಗದ್ಗುರುವರಂ ।
ತೋರಿದ ಮಹಾ ಪಥಮನುಜ್ವಲಿಸಿ ಸರ್ವರು- ।
ದ್ಧಾರಕನನರಿದು ರೇವಣಸಿದ್ಧ-ಗುರುವಿಗೀ ವಿರತ-ಗುರುಪೀಠವಿತ್ತಂ; ॥೨೧॥

ಬಂದನಿಪ್ಪತ್ತೈದನೆಯ ಪಟ್ಟಮಂ ಪಡೆಯ-
ಲಂದದಿಂ ಸಿದ್ಧಲಿಂಗ ಸ್ವಾಮಿಯೆಂಬ ಗುರು- |
ವಂದು ರಾರಾಜಿಸಿದನುರು ಸಿದ್ಧಮಾಗೆಸೆವ ಲಿಂಗದಂತೀ ಪೀಠದೊಳ್ ||
ಅಂದದಿಂ ತ್ರೈಕಾಲ ಲಿಂಗಾರ್ಚನೆಯನಸಗಿ; |
ಕುಂದದಲೆ ಲಿಂಗದೊಳ್ ಬೆರೆದನಾ ಶಿವಲಿಂಗ; |
ಸುಂದರಾಖ್ಯಂಗೆ ಪಟ್ಟವ ಕಟ್ಟಿ, ಬಳಿಕವಂ ಬಿತ್ತರಿಸಿದಂ. ತತ್ತ್ವವ; ||೨೨||

ಶಿವಲಿಂಗ–ಸ್ವಾಮಿಯುರು ಶಿಷ್ಯನಾಗುತಲೆಸೆದ– |
ನವಗುಣ–ತ್ಯಾಗಿ ಗುರುಸಿದ್ಧ ಶಿವಯೋಗೀಶ- |
ನವಿಕಾರಿ ಯೀ ಮೂರುಸಾವಿರ–ಮಠಾಧೀಶರುರು ಯಶವ ಪಡೆದು ನಲಿದಂ ||
ಅವತಾರಿಯೆನಿಸಿ, ಗಂಗಾಧರನೆ ಬಂದನೆಂ– |
ದವಿರತಂ ಜನರರಿವ ತೆರದೆ, ಬಾಳಿರ್ದನಾ |
ಶಿವಯೋಗಿ ಗಂಗಾಧರಂ; ಜಗದ್ಗುರು-ಪೀಠವಮಂ ಪಡೆದು ಜಗವ ಪೊರೆದಂ ||೨೩||

ಇವನ ನಂತರಮೀ ಮಠದ ಜಸವಮಂ ಬೆಳಿಸಿ, |
ಸುವಿನಯದ ಛಾತ್ರರ್ಗೆ ಸಂಸ್ಕೃತ-ಸುಸಾಹಿತ್ಯ |
ನವ ಶಿಕ್ಷಣದ ಶಾಲೆಯಂ ಸ್ಥಾಪಿಸಿದನೀ ಚನ್ನಬಸವಾಖ್ಯ-ಗುರುವು;||
ಕವಿಗಳ್ಗೆ, ಗಮಕಿ-ಗಾಯಕ-ವಾದಕರ್ಗಮಲ |
ತವೆ ಚಿತ್ರ ಶಿಲ್ಪಾದಿ–ಸತ್ಕಲಾವಂತರ್ಗೆ |
ವಿವಿಧ ರೀತಿಯೊಳಿವಂ ಪ್ರೋತ್ಸಾಹನಮನೀಯುತಿರ್ದಂ ಸದಾಗುರುವರಂ; ||೨೪||

ತೀವಿ ಮೂವತ್ತನೆಯ ಪಟ್ಟಮಂ ಪಡೆಯುತಂ |
ಭಾವುಕ ಮಠಂಗಳೊಳ್ ಸಂಸ್ಕೃತಾಧ್ಯಯನಮಂ |
ಭೂವಿನುತ ಮಾಹೇಶ್ವರರ್ಗೆ ಗೈಯಿಸಿದವನೆ ಗುರುಸಿದ್ಧಶಿವಯೋಗಿಯು ||
ಸ್ಥಾವರಾಽಸ್ತಿಯ ಬೆಳೆಯಸುತೆ ಭ್ರೂಲತಾ–ಪುರದೊ- |
ಳೋವಿ ನಿಸ್ಪೃಹತೆಯಿಂ ಶಿವಯೋಗ ಬಲದಿಂದೆ |
ಸ್ವಾವಲಂಬಿಯು ಜಗದ್ಗುರುವು ಗಂಗಾಧರಂ ಪೀಠದೊಳ್ ಕಂಗೊಳಿಸಿದಂ ||೨೫||

ಶ್ರೀಕುಮಾರ-ಪ್ರಭುವು ಮೂರುಸಾವಿರಮಠದ- |
ನೇಕ ಭಕ್ತರ ಕಾಂಕ್ಷೆಯಂತೆ, ಪೀಠಮನೇರಿ, |
ಶೋಕಮಂ ಕಳೆದಿಹಂ, ಲೀಲಾ-ವಿಭವದಿಂದಲಲ್ಲಮ-ಗುಹಾವತಾರಿ; ||
ಈ ಕರುಣೆಯುರು ಶಿಷ್ಯನಾಗಿ, ಸಿಂಹಾಸನಕೆ |
ಲೋಕದಾಶಯದಂತೆ ಚನ್ನಬಸವಾಽಽಹ್ವಯಂ |
ಶ್ರೀಕರ-ಜಗದ್ಗುರುವು ತಾನೆನಿಸಿ ಸರ್ವರಿಷ್ಟಾರ್ಥಮಂ ಸಲಿಸುತಿರ್ದಂ; ||೨೬||

ಸನ್ನುತ ಬಸವ-ಕುಮಾರಾಖ್ಯನಾ ವಿಷ್ಟರದೆ |
ಸೂನ್ನತ ವಿಭವದಿಂದೆ ಮಂಡಿಸುತೆ ನಂದೀಶ; |
ಚಿನ್ನಿಧಿಯ ಷಣ್ಮುಖನ ತೇಜಸ್ವಿಯೆಂದೆನಿಸಿ ಮತ್ತೊಂದು ಮಠವ ರಚಿಸಿ, ||
ಸನ್ನಿಧಿಯ ವೈಭವವ ಮೆರೆಸುತಿರ್ದಂ ಹಿತದೆ; |
ಸನ್ನಿಹಿತಗೋರ್ವಂ ಪ್ರಭುಸ್ವಾಮಿಯೆಂಬುವಂ |
ಮನ್ನಣೆಯ ಶಿಷ್ಯನಾಗುತೆ ಜಗದ್ಗುರುವೆನಿಸಿ, ಲಿಂಗ-ತತ್ತ್ವವ ಬೆಳೆಸಿದಂ; ||೨೭||

ಲಿಂಗ-ಭಸ್ಮಂಗಳಂ ರಚಿಸ ವಿಧಿಯಂ ಮಠಮ- |
ಠಂಗಳೊಳ್ ಭಕ್ತರಂ ನೆರೆಯಿಸುತೆ ಶಿಕ್ಷಣವ |
ಕಂಗೊಳಿಸುವಂತೆ ಕೊಡಿಸುವ ಸುವ್ಯವಸ್ಥೆಯಂ ಗುರುಸಿದ್ಧ-ರಾಜಗುರುವು ||
ಸಿಂಗರದ ಸಿಂಹಾಸನಮನೇರಿ ಗೈಸಿದಂ |
ತುಂಗ ಗಂಗಾಧರಾಽಽಹ್ವಯನಿವನ ಕರ-ಕಮಲ- |
ಜಂ ಗುರು-ವರೇಣ್ಯನೆನಿಸುತ್ತೆ, ಸ್ತ್ರೀ-ಪುರುಷರ್ಗೆ ನೀತಿ-ವಿಭವಮನಿತ್ತನು ||೨೮||

ಹುಚ್ಚೀಂದ್ರಯತಿಯ ಮೂವತ್ತೆಂಟನೆಯ ಗುರುವು |
ಸಚ್ಚಿನ್ಮುದಾತ್ಮಕಂ ಮೂರುಸಾವಿರ ಮಠದ |
ಸಚ್ಚಾರು ಶೂನ್ಯ-ಸಿಂಹಾಸನಮನಾರೋಹಿಸುತ್ತೆ ವೇದಾಗಮಗಳೊಳ್ ||
ಮುಚ್ಚಿರ್ದ ತತ್ತ್ವಂಗಳಂ ಕನ್ನಡಕ್ಕಿವಂ |
ಮೆಚ್ಚಿರ್ಪ ಬುಧರಿಂದಲನುವಾದಮಂ ಗೈಸಿ, |
ನಿಚ್ಚಂ ಪ್ರಚಾರ ಗೊಳಿಸುತೆ, ಟೊಪ್ಪಿಗೆಯ ಸಿದ್ಧಲಿಂಗಗಿತ್ತಂ ಪಟ್ಟವ; ||೨೯||

ಇವನೀ ಜಗದ್ಗುರುವರೇಣ್ಯನಂತೆಯೆ ವಚನ ।
ಸುವಿಮಳಿನ-ಸಾಹಿತ್ಯಮಂ ಸವೇದಾಗಮಾ-।
ರ್ಥವಿದಂ ಪ್ರಚಾರಗೊಳಿಸಿದನಾಗ ಗಂಗಾಧರಾಖ್ಯಂ-ಜಗದ್ಗುರು - ವರಂ; ॥
ಭವ-ಹರಂ 'ಧಾರವಾಡದ ಸಿದ್ಧಲಿಂಗೇಶ' -।
ನವಿರತಂ ಮಾಹೇಶ್ವರರ್ಗೆ ತತ್ತ್ವಾಽಽಚರಣ ।
ಸುವಿಧಿಯಂ ಬೋಧಿಸುತೆ, ಮನೆ-ಮನೆಗೆ ಕಳುಹಿಸುತೆ, ತಿಳಿಪಿದಂ, ಸ್ವಾಽಽಚಾರವ;॥

ಈ ಜಗದ್ಗುರುವರನ ಶಿಷ್ಯನಾಗಿಯೆ ಪೀಠ-।
ಕೋಜಮಂ ಕಲ್ಪಿಸಿದನಾ ಕರ್ತೃವಿವನೆಂಬ ।
ನೈಜವಹ ಕೀರ್ತಿಯಂ ಪಡೆದನೀ ಗುರುಸಿದ್ಧಯತಿವರಂ, ಸರ್ವವಿಧದಿಂ; ॥
ರಾಜರಿಂ ಬಿರುದಾವಳಿಯ ಪಡೆದು, ಶ್ರೀಮಠದ ।
ತೇಜಮಂ ಬೆಳೆಸಿದಂ, ಚನ್ನಬಸವಾಽಽಹ್ವಯಂ; ।
ಮೋಜಿನಿಂದಲ್ಲಲ್ಲಿ ಮೆರೆಯುತ್ತೆ, ಬಾಲ-ಶಿಕ್ಷಣಕೆ ಪ್ರೋತ್ಸಾಹಿಸಿದನು; ॥೩೧॥

ಲೌಕಿಕ-ವ್ಯವಹಾರ-ಭಾಷಣವ ಕೇಳದಲೆ, ।
ಲೋಕಕತೀತ ಸದನಾಹತಾಽಭಿಧ-ನಾದ-।
ಕೇಕ-ಚಿತ್ತವ ಕೊಟ್ಟನುಷ್ಠಾನದೋಳ್ ಬೆರೆದು, ಕಿವುಡನೆಂಬುಪನಾಮದಿಂ ॥
ಲೋಕದೋಳ್ ಮೆರೆದ ಗುರುಸಿದ್ಧೇಶನೆಲ್ಲರ್ಗೆ ।
ಲೋಕ-ಗುರುವೆನಿಸುತ್ತೆ, ಲಿಂಗ-ಪೂಜೆಯ ಕಲಿಸಿ-।
ದಾ ಕಪರ್ದಿ-ಸ್ವರೂಪಂ ಮೂರುಸಾವಿರ ಮಠಕ್ಕೆ ವೈಭವವಿತ್ತಿಹಂ; ॥೩೨॥

ನಲವತ್ತು ನಾಲ್ಕನೆಯ ಚರ-ಪಟ್ಟಮಂ ಪಡೆದು, ।
ನಲವಿಂ ಮಹಾಜಗದ್ಗುರುವೆನಿಸಿ ಮೆರೆದಿಹಂ, ।
ಫಲ-ಪದಾತೀತ ಗಂಗಾಧರ-ಸ್ವಾಮಿಯವಿನೀತ-ದಂಡನ-ನಿಯಮಿಯುಂ; ॥
ಸಲಿಸುತಂ ಸ್ತ್ರೀ-ಶಿಕ್ಷಣ-ಪ್ರಗತಿಗರ್ಥಮಂ; ।
ಬಲಿಸುತಂ ಸ್ತ್ರೀ-ಕುಲದೆ ಸುಜ್ಞಾನ-ಸಿದ್ಧಿಯಂ; ।
ಕಲಿಸುತಂ, ಸದ್ಧರ್ಮದಾಚರಣೆಯಂ; ಮೆರೆದನಾ ಸಿದ್ಧಲಿಂಗ ಗುರುವು; ॥೩೩॥

ಮೂರು ಸಾವಿರ ಮಠದ ಶ್ರೀಮನ್ನಿರಂಜನೋ-|
ದಾರ ಶೂನ್ಯ-ಸುಪೀಠಕೇರಿದಂ, ಶ್ರೀಗುರು-ಘ-|
ಕೀರ-ಗುರುವರಸಿವನ ಲೀಲೆಯಿಂ ಭಾವೈಕ್ಯಮೊದಗಿಹುದು, ಸರ್ವ ಜನರೋಳ್; ||
ಸಾರಿದಂ, ಶಿವಲಿಂಗ-ಸದ್ಗುರುವು ತನ್ನಿರಾ-|
ಭಾರಿ-ಗುರು-ಸಿಂಹಾಸನಕ್ಕೆ; ಸತ್ಯಾದಿ-ನುತ |
ಸಾರ ಸುಗುಣಂಗಳಂ ಜನತೆಯೋಳ್ ಬೆಳೆಯಿಸುತೆ ದೈವ-ವಿಭವವನುಳಿಸಿದಂ; ||೩೪

ಕ್ರಿಸ್ತದ ಸಹಸ್ರದೊಂಬೈನೂರರೆರಡನೆಯ |
ವಾಸ್ತವ ಶಕಾಬ್ದದೊಳ್ ಭ್ರೂಲತಾ-ಪುರದ ದೇ -|
ವ-ಸ್ತುತದ ಮೂರು ಸಾವಿರಮಠದ ಚರಪೀಠಕೀಡಿತಂ, ಗಂಗಾಧರಂ; ||
ಪ್ರಸ್ತುತ ಜಗದ್ಗುರುಗಳಂ ಪ್ರಭಾವದೆ ಮೀರು-|
ತಾऽऽಸ್ತಿಯಂ ಬೆಳೆಯಯಿಸುತೆ ಸರ್ವರಿಂ ನುತನಾಗಿ, |
ವಾಸ್ತವಿಕ ಶಿವ-ಸಮಾಜಾऽऽಪ್ತನಹ ಹಾನಗಲ್ ಗುರುಕುಮಾರ ಸ್ವಾಮಿಯಂ ||

ಕರೆಯಿಸುತೆ, ಹಾವೇರಿ ಶಿವಬಸವಯತಿವರನ, |
ಗುರುಸಿದ್ಧ-ಗಣವರಂಗಧಿಕಾರಮಂ ಕೊಟ್ಟ-|
ನುರು ಭಕ್ತ-ಮಾಹೇಶರೊಪ್ಪುತಿರೆ ಸಿಂಹಾಸನಮನೇರಿ ಕಂಗೊಳಿಸಿರೆ, ||
ಸಿರಸಂಗಿ ಲಿಂಗರಾಜಾದ್ಯರ್ ಸಮಾಜದುರು-|
ತರ ಸೇವೆಗಾಶಿಷವ ಪಡೆದು, ತೊಡಗಿದರಾಗ |
ಗುರುನಾಮದಿಂ ಮಹಾವಾಣಿಜ್ಯ-ವಿದ್ಯಾಲಯಂ ಸ್ಥಾಪಿತಂ, ಮಹಿಮನಿಂ; ||೩೬||

ಭ್ರೂಲತಾ-ಪುರಮಾಗಳೀ ಜಗದ್ಗುರುವರ್ಯ-|
ಲೀಲೆಯಿಂ ವಿದ್ಯೆಯಾಗರಮೆನಿಸಿ, ಮೆರೆದಿಹುದು; |
ಕಾಲದೋಳ್ ಧನ-ಸಹಾಯವ ಪಡೆಯುತಿಲ್ಲಿ ವಿದ್ಯಾ-ಸಂಸ್ಥೆಗಳ್ ನೆಲಿಸಲು ||
ಮೇಲೆನಿಸುತೆಸೆದಿರುವವಲ್ಲಲ್ಲಿ ಸಂಸ್ಥೆಗಳ್; |
ಪಾಲಕನ ಗುರುಸಿದ್ಧರಾಜ ನೌದಾರ್ಯದಿಂ |
ಮೇಲಿನಿಪ ಶಿವಯೋಗ ಮಂದಿರಕ್ಕೀತನರ್ಥ್ಯಕ್ಷನಾಗಿರ್ದನೊಲಿದು; ||೩೭||

ಶಿವರಾತ್ರಿಯುಂರು ಪುಣ್ಯ-ಕಾಲದಲ್ಲೀ ಗುರುವು |
ಶಿವನಲ್ಲಿ ಬೆರದಿಹಂ; ತನ್ನ ಮೆಚ್ಚಿನ ಮಹಾ |
ಶಿವಯೋಗಿಯಂ ಸ್ವೀಯ ಮಠಕೆ ನೇಮಿಸಿ ಸಮಾಜಂನೆನೆದು ದುಃಖಿಸುತಿರೆ, ||
ಶಿವಸಮನೆ ಯಿವನೆಂಬ ತೆರದೆ ಸಿಂಹಾಸನವ ||
ನವ ಜಗದ್ಗುರುವೆಸಿಸಿ, ಗಂಗಾಧರಾಖ್ಯೆಯಿಂ |
ತವೆ ಸಮಾಜೋದ್ಧಾರ-ಕಾರ್ಯದೋಳ್ ತೊಡಗಿರ್ಪನಾರೋಹಿಸುತ್ತಲೀತಂ; ||

ಇವನವತರಣದೂರುಃ ಸಸಿವಾಳಮೆಂದಿರ್ಪು-|
ದಿವನ ಜನ್ಮಾಸ್ಪದರ್ ಚನ್ನಮ್ಮ-ಮರುಳಾರ್ಯ-|
ರಿವನುದಯ-ವರವಿತ್ತವರ್ ಹಾನಗಲ್ ಸ್ವಾಮಿಗಳ್; ಕರ್ತೃವಿದಕೆ-ಮೂಲಂ; ||
ಇವನ ಮೊದಲಾಖ್ಯೆಯು "ಮಹಾಂತ ದೇವಂ" ತಿಳಿಯ-|
ಲಿವನ ಕಣ್ಕಳೆದು ಕಣ್ ಕೊಟ್ಟ ಸ್ವಾಮಿಯ ಕಾಂಕ್ಷೆ-|
ಯಿವನಂ ಸ್ವ-ಸನ್ನಿಧಿಗೆ ಬರಿಸಿತಾಗ; ಕುಮಾರ ವೇದಿಕೆಯ ಮಹಿಮೆಯೆನಿತೊ; ||

ಇಲಕಲ್ಲ-ಚಿತ್ತರಗಿ-ಸಿಂಹಾಸನವನೇರ್ದು, |
ಸಲುವ 'ವಿಜಯ ಮಹಾಂತ' ಗುರುವಿನನ್ವಯವೆಮ್ಮ |
ಮಿಲಿತ ಗಂಗಾಧರ ಶ್ರೀ ಜಗದ್ಗುರು ವಂಶಮಾದಡುಂ ಗುರುಸಿದ್ಧನ ||
ಸಲೆ ಕರ್ತೃತಾ-ಶಕ್ತಿಯೆಳೆದು ಕೊಂಡಿಹುದಿವನ |
ಸಲುಹಿ "ಶಿವಯೋಗ-ಮಂದಿರ"ದೆ, ಕಾಶೀ-ವಿಶ್ವ-|
ಕಲಿತ-ವಿದ್ಯಾಲಯುದ ಸಾಹಿತ್ಯ ವೇದಾಂತದಾಚಾರ್ಯ ಬಿರುದನಿತ್ತು ||೪೦||

ಮಹಿತ ಪೀಠಾರೋಹದ ದಿನಮಾವುದೆನಲ್ಕೆಃ-|
ವಿಹಿತ ಕ್ರಿಸ್ತ-ಶಕೆ ಹತ್ತೊಂಭತ್ತು ನೂರರಿಂ |
ಸಹಿತಮೈವತ್ತೆಂಟು ಬರಿಸಮೈದನೆಯತಿಂಗಳುಯೊಂದನೆಯ ದಿನಾಂಕಂ; ||
ಮಹದಾಗಮನದಿಂದೆ ಮಠ-ಸುಧಾರಣಮಹುದು; |
ಸಹಜಮಾಗಿಯನೇಕ ವಿದ್ಯಾಲಯಂಗಳೀ |
ಮಹಿಮನಿಂ ಸ್ಥಾಪಿಸಲ್ ಪಟ್ಟಿಹವು; ಹುಬ್ಬಳ್ಳಿ ಪ್ರಗತಿ-ಪಥವಂ ಪಡೆದುದು;||೪೧||

ಮೆರೆವ ಹುಬ್ಬಳ್ಳಿಯೊಳ್ ಮಾಸ-ಪತ್ರಿಕೆಯನುಂ |
ನೆರೆ 'ಪರಂಜ್ಯೋತಿ'ಯೆಂಬಾಖ್ಯೆಯಿಂ ಸ್ಥಾಪಿಸುತ-|
ಲುರು ಧರ್ಮ-ಸುಪ್ರಚಾರವ ಗೈಯುತಿರ್ದಪಂ, ಶ್ರೀ ಗುರುವು ಗಂಗಾಧರಂ; ||
ಪುರ "ದಿಲ್ಲಿ"ಯೊಳ್ ವಿಶ್ವಶಾಂತಿ ಸಮ್ಮೇಲನದೆ |
ಸರಸದಿಂ ಗೈದ ಭಾಷಣಕಾ ಧುರೀಣರುರೆ |
ಕರವೊಲಿಯುತೆ ಜಪಾನ ಪರಿಷತ್ತಿಗಾಽಽಮಂತ್ರಿಸಿದರಾ ಜನರ್ ಮಹಿಮನಂ;

ವೀರಶೈವ-ಧುರೀಣರೆಲ್ಲರುರೆ ಮೆಚ್ಚುತಿರೆ, |
ದೂರದ ಜಪಾನಕ್ಕೆ ವೋಣ್ ಬೆಲ್ಜಿಯಮ್‌ಗೆ ತಾಂ |
ಗೌರವದೆ ಪೋಗುತ್ತೆ, "ಕ್ಯೂಟೋ" "ಲುವೆನ್"ದಲ್ಲಿ ವಿಶ್ವಶಾಂತಿಯ ಸಭೆಯೊಳ್||
ಸಾರ ಶಿವ ಶರಣ-ತತ್ತ್ವವ ಬೆರಸಿ ಗುರುವರನ- |
ಪಾರ ಗಾಂಭೀರ್ಯದಿಂ ಗೈದ ಭಾಷಣಮಖಿಲ |
ಸೂರಿಗಳ ಮನಮನಾಕರ್ಷಿಸಿತು; ವೀರಶೈವಂ ಜಗನ್ಮಾನ್ಯಮಾಯ್ತು; ||೪೩||

ಪರಿಷತ್ತಿನೊಳಗೀ ಜಗದ್ಗುರು ಸೂಚಿಸಿದ |
ನೆರೆ ಸಲಹೆಗಳ್ ಸದಸ್ಯರಿಗೆ ಮೆಚ್ಚುಗೆಯಾಗು-|
ತರಿಯೆ ಗೌರವವ ಸಲ್ಲಿಸಿದವೀತಂಗೆ ದೊರೆದುದು, ಸದಸ್ಯತ್ವಮೆ; ||
ಗುರುವರಂ ತದ್ದೇಶ-ಗಣ್ಯಸ್ಥಲಂಗಳಂ |
ನಿರುಕಿಸುತೆ, ಸತ್ಕಾರಮಂ ಪಡೆದು, ಹಾನಗಲ್ |
ಗುರುಕುಮಾರನ ಯಶೋ-ದುಂದುಭಿಯ ಮೊಳಗಿಸುತೆ ಬಂದನೆಮ್ಮಯ ನಾಡಿಗೆ; ||

ಕನ್ನಡದ ಜನದ ಕಣ್ಮಣಿಯಾಗಿ, ಸರ್ವರಿಂ |
ಚನ್ನಮೆನಲಲ್ಲಲ್ಲಿ ಸತ್-ಕೃತಂ ತಾನಾಗು-|
ತುನ್ನತಂ ನೆಲಸಿದಂ, ಮೂರು ಸಾವಿರ ಮಠದೆ, ಬಾಡದ ಸುಪುಷ್ಪದಂತೆ; ||
ಪನ್ನೆರಡು ಬರಿಸಮಾಗುತಿರೆ ಪಟ್ಟಮನೈದಿ, |
ಸನ್ನುತನ ಕಾರ್ಯ-ಸಂಸ್ಮರಣದುತ್ಸವವ ನೆರೆ, |
ಮನ್ನಣೆಯ ಭಕ್ತರೆಲ್ಲರ್ ಸಮಾಲೋಚಿಸುತೆ, ನೆರವೇರಿಸಿದರಳ್ತಿಯೊಳ್; ||೪೫||

ಆಗ "ಚಿತ್ ಪ್ರಭೆ"ಯೆಂಬ ಸ್ಮಾರಕ-ಗ್ರಂಥಮಂ |
ರಾಗದಿಂ ಪ್ರಕಟಿಸಿದರದು ಕಂಗೊಳಿಸುತಿಹುದು; |
ಯೋಗಿವರನೀ ಯುತ್ಸವಕ್ಕೆ ಕಾಶೀ ಪ್ರಮುಖ-ನಗರಂಗಳಿಂದೆ ಬುಧರು ||
ಆಗಮಿಸಿ, ನೆರೆದಿರ್ದರದನೇನು ಬಣ್ಣಿಪುದು !?!
ಶ್ರೀಗುರೂತ್ತಮ ಕರ್ತೃ ಗುರುಸಿದ್ಧ-ಲೀಲೆಯೆಂ |
ದೀಗಳಾಂ ಭಾವಿಸುವೆನ್ನೈವತ್ತನೇ ಪಟ್ಟಕವನೆ, ಬಂದಿದೆಹನೆನ್ನುತೆ; ||೪೬

ತಮಿಳನಾಡಲ್ಲಿ ಧರ್ಮ-ಪ್ರಚಾರಮನೊರ್ವೆ |
ಸಮತೆಯಿಂ ಕೈಕೊಂಡು ಚರಿಸುತಲ್ಲಲ್ಲಿ ಗುರು- |
ವಮಿತ ಮುದದಿಂ ಸರ್ವ-ಧರ್ಮಮಂ ಭೋಧಿಸುತೆ; ನಿಖಿಲಧರ್ಮೀಯರಿಂದೆ ||
ವಿಮಲನುರು ಸತ್ಕಾರಮಂ ಪಡೆಯುತೈದಿದಂ; |
ಕ್ರಮದೆ "ಸೇಲಂ" "ಭವಾನೀ" ಸ್ಥಲಂಗಳೊಳಿವಂ; |
ಪ್ರಮುದ-ಸುಸ್ವಾಗತವ ಪಡದನೇಕ ಜನಗಳ ಲಿಂಗಧಾರಣ ಗೈಸಿದಂ; || ||೪೭||

ಮೂರು ಸಾವಿರ ಮಠದ ಶಾಖಾ-ಮಠಮನೊಲಿದು, |
ನೂರು ಸಾಸಿರ ಬೆಲೆಯ ತಾಣಮಂ ನೀಡಿದನ- |
ನಾರೆನಲ್ ದಾಸಿಯಿದಕವನ ಪೆಸರಂ ಪೇಳ್ವೆನಾಲಿಪುದು ತನ್ನಾಮನ; ||
ಸಾರ ರೇಷ್ಮೆಯ ವಸ್ತ್ರ-ವಣಿಜನುರು ಭಕ್ತ ಪಂ- |
ಡಾರ ಕಂದಸ್ವಾಮಿಯಿವನ ಸುಕೃತದ ಮಠಮ- |
ಪಾರ ಧರ್ಮ-ಪ್ರಚಾರದ ಕೇಂದ್ರಮಾಗಿರ್ಪುದೀ ಲೀಲೆ ಸಾಮಾನ್ಯಮೇ? ||೪೮||

ಪೂಜನೀಯ ಮಹಾತ್ಮ ಹಾನಗಲ್ ಶಿವಯೋಗಿ |
ನೈಜ ಶಿವಯೋಗ-ಸುಸಮಾಧಿಯಂ ಪಡೆಯುತ್ತೆ, |
ತ್ರೈಜಗನ್ನುತ ಮಹಾ ಸುಕ್ಷೇತ್ರಮಾಗಿಹುದು; ಶಿವಯೋಗಮಂದಿರಮದು ||
ಈ ಜಗದ್ಗುರುವರಂ ಪಾದಯಾತ್ರೆಯನೊರ್ವೆ |
ಯೋಜದಿಂ ನೂರೊಂದು ಗುರು-ವಿರಕ್ತರ್ಕಳೊಡ- |
ನೋಜೆದಿಂ ಕೈಕೊಂಡು ಬಂದನಿಲ್ಲಿಗೆ ನಲಿದು ಹುಬ್ಬಳ್ಳಿಯಿಂದನುಪಮಂ ||೪೯||

ಯತಿಯು ಗಂಗಾಧರಾಖ್ಯಂ ರಾಜಯೋಗೀಂದ್ರ- |
ನತಿ ಮುದದೆ ಬರ್ಪಾಗ ಪಳ್ಳಿಗರ್ ಪಟ್ಟಣಿಗ- |
ರತಿಶಯ ಸುಭಕ್ತಿಯಿಂ ತಮ್ಮ ತಮ್ಮೂರ್ಗಳೊಳ್ ಸತ್ಕರಿಸುತೀ ಮಹಿಮನಂ ||
ಪತಿತ-ಪಾವನನಿಂದೆ ಸದ್ಧರ್ಮ-ಬೋಧೆಯಂ |
ಕೃತಕೃತ್ಯರಾಗಿಹರ್, ಪಡೆದಿವನ ಸನ್ನಿಧಿಯೊ- |
ಳತಿ ಶಯಿತ ಲಿಂಗಮಂ "ಕೆಳದೀ-ಶಿವಾಚಾರ್ಯ"ರಿಂದೆ ತ್ರಿಸಹಸ್ರ ಜನರು, ||೫೦||

ಪಡೆಯುತ್ತೆ, ಧನ್ಯರಾದರ್; ಧನದ ಕಾಣಿಕೆಯ |
ಕೊಡುತಿರ್ದರಲ್ಲಲ್ಲಿ; ನಮಿಸಿ ಪಾದಾರ್ಚನೆಯ |
ಕಡು ಪರಿಸದಿಂ ಮಾಡಿ, ಗುರು-ವಿರಕ್ತರ ನೋಡಿ, ಯಡಿಯೂರ ಸಿದ್ಧೇಶನ ||
ಮೃಡ-ಪಾದಯಾತ್ರೆಯಿದು ಕೇಳಿರ್ದವಾವೀಗ |
ನಡಗರದೆ ಕಂಡೆವೆಂದುಲಿಯುತ್ತಿರ್ದರ್; ನಲಿಯು- |
ತಡಿಗಡಿಗೆ ಜನ್ಮ-ಸಾರ್ಥ್ಯಕ್ಯಮಂ ನೆನೆಯುತಾರಾಧನೆಯ ಗೈಯುತಿಹರು; ||೫೧||

ಬಂದ ಕಾಣಿಕೆಯ ಶ್ರೀ ಶಿವಯೋಗ ಮಂದಿರಕ- |
ಮಂದದಿಂ ಕೊಡುತಲತಿಥಿ-ಗೃಹಮಂ ಪದಯಾತ್ರೆ- |
ಯಂದದೀ ಸವಿ ನೆನಹಿಗಾಗಿ ತಿರ್ಮಾನಿಸಿದುದಲ್ಲಿ ಕೂಡಿದ ಜನತೆಯು; ||
ಅಂದ ಮನೆ ಕುಸುಬಗಲ್, ಹೆಬಸೂರ್, ಕಿರೇಸೂರ, |
ಸಂದ ಮಲ್ಲಾಪುರಂ, ಕೌಜಗೀರಿ, ಹಿರಿಯಾಳು, |
ಪೊಂದಿದೂರ್ಗಳ ಜನರ್ ಕಲ್ಯಾಣ-ಸು-ಶಿವಾನುಭವ-ಮಂಟಪಂಗಳನುರೆ ||೫೨||

ನಿರ್ಮಿಸುವ ಸಂಘಮಂ ಸ್ಥಾಪಿಸಿದರಿವನಡಿಯ |
ನೆರ್ಮಿ ಸನ್ನಿಧಿಯಲ್ಲಿ ಶ್ರೀಪಾದಯಾತ್ರೆಯುರೆ |
ಕೂರ್ಮೆಯಾ ಕುರುಹಾಯಿತೀ ಲೀಲೆ ಮನೆಮನೆಗೆ ಪತ್ರಿಕೆಗಳಿಂ ತಿಳಿದುದು ||
ಪೆರ್ಮೆಯಿಂ ದುರ್ಭಿಕ್ಷ ಮೊದಗಿದಾಗಲ್ಲಲ್ಲಿ |
ಕರ್ಮಹರನನ್ನ-ಸತ್ರಂಗಳಂ ನಡೆಸಿದಂ |
ಶರ್ಮಕರನುತ್ಸವ-ಪ್ರಿಯನಲ್ಲನಾಥಬಾಂಧವನಿವಂ, ಶ್ರೀಗುರುವರಂ; ||೫೩||

ಹಾನಗಲ್ ಶ್ರೀ ಕುಮಾರಸ್ವಾಮಿಗಳ ಮೇಲೆ |
ಮಾನಿತಂಗುರೆ ಪ್ರೇಮಮಿದಕೆ ಪಾದಸುಯಾತ್ರೆ- |
ಜ್ಞಾನಸಾಕ್ಷಿಯುಮದಲ್ಲಲ್ಲಿ ಸ್ಥಾಪಿಸಿದ ಸಂಘಂಗಳ್ಗೆ ತನ್ನಾಮವ ||
ಮಾನ-ನಿಧಿಯಿಟ್ಟಹಂ ಶ್ರೀಗುರುವಿನೀ ಕಥೆಯ |
ಮಾನಿಯು ಸುವರ್ಣಾಕ್ಷರಂಗಳಿಂ ಬರೆದಿಡಲಿ- |
ದೇನು ಪೇಳಲಿ ಕ್ರಿಸ್ತದಿಪ್ಪತ್ತನೆಯಸು ಶತಮಾನ-ಸೌಭಾಗ್ಯಮನಿದಂ ! ||೫೪||

ಶ್ರೀ ಜಗದ್ಗುರು ಕರ್ತೃ ಗುರುಸಿದ್ಧ ಪೌರಾಣ-|
ಮೀ ಜಗದ್ಗುರು ರಾಜಗಂಗಾಧರ ಶ್ರೀಗ- |
ಳೋಜದಿಂ ಪಾರಬ್ಧಮಾಗಿ, ಮುಗಿದಿಪುದರಿಯಲಿವನ ಕೃಪೆ ವರ್ಧಿಸುತಿರೆ; ||
ತೇಜವಹ ಶಾಲಿವಾಹನ ಶಕೆಯು ಸಂಘಟಿಸೆ, |
ಮೋಜಿನಿಂ ಪದಿನೆಂಟುನೂರರಾ ನವ-ನವತಿ, |
ಭಾಜಿಸಿದ ಪಿಂಗಲದ ವೈಶಾಖಶುಕ್ಲದ ತೃತೀಯೆಯೊಳ್ ಗುರುವಾರದೆ ||೫೫||

ಕವಿರತ್ನನಾದೀ ಜಗದ್ಗುರುವರನ-ಕೃಪೆಯೊ- |
ಳವ-ತಾರಿ ಕರ್ತೃ ಗುರುಸಿದ್ಧೇಶ-ಪೌರಾಣ- |
ಮವನಿ-ಜನಮೊಪ್ಪಿತಿರಲಾರಂಭಿಸುತ್ತಲಾಂ ಗುರು-ಲಿಂಗ-ಚರರೊಲಿಯಲು ||
ಸುವಿನಯದೆ ಮುಗಿಸಿದೇಂ; ಶಕೆ ನವದಶ ಶತಂ, |
ತವಿಸಿರಲ್ ಕಾಳಯುಕ್ತಿಯ ಮಾರ್ಗಶಿರ ಶುಕ್ಲ- |
ದವಗತ ದ್ವಾದಶಿಯ ಸೋಮವಾಸರದಲ್ಲಿ ಎಡೆಯೂರ ಸುಕ್ಷೇತ್ರದೆ; ||೫೬||

ಶಿವಯೋಗಿ-ಸಂಘ-ಸಂಸ್ಥಾಪನೆಯ ಪ್ರೇರಕನ, |
ಶಿವ-ಗುಣವಿಧಾಯಕನ, ಭೂರ್ಲತಾ-ಪುರದೊಡೆಯ-|
ನವಿರಳ ಪರಂಜ್ಯೋತಿ ನಿರ್ವಿಕಲ್ಪ ಸಮಾಧಿ-ಸಂಸ್ಥಿತನ ಕರ್ತೃ-ವರನ ||
ಶಿವಸಮನ ಗುರುಸಿದ್ಧ ಚರ-ಜಗದ್ಗುರು-ದೇವ- |
ನವಗತ ಪುರಾಣಮಂ ಭಕ್ತಿಯಿಂದೋದಿ, ಕೇ- |
ಳ್ದವರೆಲ್ಲರಿಷ್ಟ-ಸಿದ್ಧಿಯ ಪಡೆವರನುದಿನಂ; ಸಟೆಯಲ್ಲ ಪರಿಕಿಪುದಿದಂ ||೫೭||

ಜಯ. ಜಗದ್ಗುರು-ದೇವ, ಜಯ, ಜಗನ್ಮಯ ಭಾವ, ।
ಜಯ, ಜಗತ್ ಪರದೈವ, ಜಯ, ಜಗತ್ತನು-ಜೀವ, ।
ಜಯ, ಜಗತ್ ಕೃತ-ಸೇವ, ಜಯ, ಜಗದ್-ವರಶೈವ, ತೇಜಸ್ಕ, ಮಂಗಲಮಯ
ಜಯ, ಜಗಜ್ಜ್ಞಾನ-ವಿಭವ, ಜಯ-ಜಗತ್-ಸತ್-ಪ್ರಭವ, ।
ಜಯ, ಜಗಜ್ಜಾಲಧವ, ಜಯ, ಜಗದ್ಭರಣ; ಶಿವ; ।
ಜಯ, ಜಗತ್ ಚಿರಮಭವ, ಜಯ, ಜಗತ್ ಸುಪ್ರಣವ, ಕೊಡು ಮಂಗಲ-
ಮನಾವಗಂ ॥೫೮॥

ನಿರ್ವಿಕಲ್ಪಕ-ಸಮಾಧಿಸ್ಥ-ಗುರುಸಿದ್ಧ ಭೋ, ।
ಸರ್ವ-ಹೃದಯಸ್ಥಿತ-ತಮಸ್ಸೂರ್ಯ-ಸತ್ ಪ್ರಭೋ, ।
ನಿರ್ವಿಕಾರೋತ್ತಮ-ಜಗದ್ಗುರು-ಮಹಾವಿಭೋ, ತ್ರಾಹಿ ವಿಶ್ವಂ, ತ್ವಂ ಸದಾ ॥
ಶರ್ವ-ರೂಪನೆ, ನಿನ್ನ ಪಾದ-ಕೃಪೆಯುಂ ಬನ್ನ- ।
ಮುರ್ವರೆಯೊಳೆನಿತುವಿಲ್ಲದಲೆ, ಬರೆದಿತ್ತೆನ್ನ- ।
ಖರ್ವ-ಸಂಪದವ ವರ್ಧಿಸುತಿರುವ "ವಿರತಿ-ಕಾಂಡಂ" ಮುಗಿದುದಾದ್ಯರೊಲಿಯೆ

---

ವೀರೇಶ-ಪುಣ್ಯಾಶ್ರಮಂ ಗದುಗಿನೊಳ್ ಮೆರೆವು-।
ದೋರಂತೆ ಶೋಭಿಸುವುದಲ್ಲಿ ಪಂಚಾಕ್ಷರನು-।
ದಾರ ಸ್ವ ಗುರುವರನ ಯೋಗದ ಸಮಾಧಿಯಿದೆ;ಕುಳಿತಿಲ್ಲಿ ಗುರು-ಕರುಣೆಯೊಳ್॥
ಸಾರಜ್ಞ ಗುರು-ಲಿಂಗ-ಚರ-ಭಕ್ತ-ಕಿಂಕರಂ ।
ಧೀರಾತ್ಮ ಪುಟ್ಟರಾಜಾಖ್ಯ ನಾಂ ಸಲೆ ಬರೆದ ।
ವೀರಿರ್ಪ ಹುಬ್ಬಳ್ಳಿ ಕರ್ತೃ ಗುರುಸಿದ್ಧ-ಪೌರಾಣ ಸಂಧ್ಯೇಕ-ವಿಂಶಂ ॥೬೦॥

ಅಂತು ಸಂಧಿ ೨೧ಕ್ಕಂ, ಪದಂಗಳು ಅರವತ್ತಕ್ಕಂ;
ಇಂತು, ಒಟ್ಟು ಪದಂಗಳು ೧೧೦೧ ಕ್ಕಂ.
—ಮಹಾ ಮಂಗಲಂ—

" ಸರ್ವೇ ಜನಾಃ ಸುಖಿನೋ ಭವಂತು "

॥ ಶ್ರೀ ಗುರುಬಸವಲಿಂಗಾಯನಮಃ ॥

# ಕಠಿಣ ಶಬ್ದಗಳ ಅರ್ಥ

| ಶಬ್ದ | ಅರ್ಥ | ಪುಟ | ಪದ್ಯ |
| --- | --- | --- | --- |
| ಸುಪ್ರಮ | ಉತ್ತಮ ಪ್ರಮಾಣ, ಜನ್ಯ ಜ್ಞಾನ | ೧ | ೧ |
| ಅಚ್ಛಕಳೆಯು | ನಿರ್ಮಲವಾದ ಕಲೆಯು | ೧೩ | ೨೪ |
| ವಿಭವ | ಸಂಪತ್ತು | ೧೪ | ೨೬ |
| ಮಹದ್ಗರಿಮ | ಅತ್ಯಧಿಕ | ೧೫ | ೧ |
| ಕಲಧೌತಮಣಿ | ಬಂಗಾರ ರತ್ನ | ೯ | ೬ |
| ಗೋಪುರೀಷ | ಗೊ-ಮಯ | ೨೨ | ೨೦ |
| ಪ್ರಸ್ಥಾನ | ಪ್ರಯಾಣ | ೨೬ | ೩೦ |
| ಭರ್ತೃ | ಒಡೆಯ | ೨೬ | ಸೂ.ಪ. |
| ಅಭಿಧಾನ | ಹೆಸರು | ೩೩ | ೨೪ |
| ಸುಧಾಕರ | ಚಂದ್ರ | ೩೪ | ಸೂ.ಪ. |
| ಹಮ್ಮಿಣಿಗೆ | ದುಡ್ಡು ಹಾಕುವ ಚೀಲ | ೩೬ | ೬ |
| ವೃಕವೆ | ತೋಳವೆ | ೯೮ | ೧೫ |
| ಸುದತಿ | ಉತ್ತಮ ದಂತವುಳ್ಳವಳು | ೪೧ | ೨೮ |
| ಅಘ | ಪಾಪ | ೪೨ | ೩೨ |
| ವರಾಂಚಿತನೆ | ವರವನ್ನು ಹೊಂದಿದವನೆ | ೪೮ | ಸೂ.ಪ. |
| ಖಗ | ಪಕ್ಷಿ | ೪೯ | ೩ |
| ಲಲನೆ | ಸುಂದರಿ | ೫೬ | ೩೨ |
| ಪುಂಜ | ನಿಧಿ | ೫೬ | ೩೩ |
| ಭೋ ಸದಯ | ಎಲೈ ದಯಾಸಹಿತನೆ | ೫೮ | ೪೦ |
| ಜಟಿಲ | ಕಠಿಣ | ೬೪ | ೧೦ |

| ಶಬ್ದ | ಅರ್ಥ | ಪುಟ | ಪದ್ಯ |
|---|---|---|---|
| ಯಾದವನ | ಕೃಷ್ಣನ | ೭೩ | ೧ |
| ಕೂಪ | ಬಾವಿ | ೭೪ | ೪ |
| ರಸನೆ | ನಾಲಿಗೆ | ೭೮ | ೨೦ |
| ಉದ್ಧೃತಿಯು | ಉದ್ಧಾರ | ೮೪ | ೪೦ |
| ಕೃಚ್ಛ್ರ | ಪ್ರಾಯಶ್ಚಿತ್ತ | ೮೮ | ೬೦ |
| ಅಳ್ತಿಯೊಳ್ | ಪ್ರೇಮದಿಂದ | ೮೯ | ೬೫ |
| ಶ್ರೀಶಾದ್ಯರ್ಕ್ರು | ವಿಷ್ಣು ಮೊದಲಾದವರು | ೯೮ | ೧೦ |
| ಕ್ಷಿತಿಯಲ್ಲಿ | ಭೂಮಿಯಲ್ಲಿ | ೧೦೦ | ೨೧ |
| ಶೀರ್ಷ | ತಲೆ | ೧೦೧ | ೨೨ |
| ಸುಕುಟೀರ | ಉತ್ತಮ ಗುಡಿಸಲು | ೧೦೫ | ೩೪ |
| ಆಂದೋಲಿಕೆ | ಪಲ್ಲಕ್ಕಿ | ೧೦೭ | ೪ |
| ವಾಂಛಿತ | ಇಚ್ಛೆ | ೧೧೪ | ೪ |
| ಭ್ರೂಮಧ್ಯ | ಹುಬ್ಬಿನ ಮಧ್ಯಸ್ಥಾನ | ೧೧೮ | ೨೦ |
| ನವಕವ | ಒಂಭತ್ತು | ೧೨೧ | ೩೦ |
| ಉರ್ಧ್ವ | ಮೇಲಿನ | ೧೨೨ | ೩೬ |
| ಅನಿಶಂ | ಯಾವಾಗಲೂ | ೧೨೩ | ೩೯ |
| ಸಕೀಲ | ರಹಸ್ಯ | ೧೨೪ | ೪೫ |
| ನಲವಾಂತ | ಆನಂದವನ್ನು ಹೊಂದಿದ | ೧೩೦ | ೨ |
| ಉಟಜ | ಗುಡಿಸಲು | ೧೩೪ | ೨೧ |
| ಅಗಿವಂದದೆ | ಹೆದರುವಹಾಗೆ | ೧೩೫ | ೨೩ |
| ದಂದುಗ | ಕಷ್ಟ | ೧೩೫ | ೫೨ |
| ಖರ್ಪರ | ಮಾಂತ್ರಿಕನ ಹೆಸರು | ೧೫೮ | ೫೦ |
| ವಾರಿಪಂ | ಬಿಡಿಸುವನು | ೧೬೨ | ೨ |
| ವೃಶ್ಚಿಕ | ಚೇಳು | ೧೭೧ | ೪೧ |
| ಸ್ರಜ | ಮಾಲೆ | ೧೭೪ | ೫೩ |
| ಭೃತ್ಯ | ಸೇವಕ | ೧೭೮ | ೫ |
| ವೃಷ್ಟಿ | ಮಳೆ | ೧೮೧ | ೧೬ |

| ಶಬ್ದ | ಅರ್ಥ | ಪುಟ | ಪದ್ಯ |
|---|---|---|---|
| ಸಟೆ | ಹುಸಿ | ೧೮೫ | ೩೧ |
| ಗಾವಿಲ | ಅಜ್ಞಾನಿ | ೧೮೭ | ೩೯ |
| ಅಜ | ಆಡು | ೧೯೩ | ೧ |
| ದ್ವಿಪ | ಆನೆ | ೧೯೩ | ೧ |
| ಧಾವತಿ | ಆಯಾಸ | ೧೯೫ | ೯ |
| ತೂಷ್ಣಿ | ಮೌನ | ೨೦೪ | ೪೨ |
| ಮ್ಲೆಂಚ್ಛ | ಮುಸ್ಲಿಂ | ೨೧೪ | ೧೮ |
| ದುರ್ಧ್ವಾಂತ | ನಿಬಿಡವಾದ ಕತ್ತಲೆ | ೨೧೮ | ೩೫ |
| ಛೈತ್ರ | ನಿವಾರಕ | ೨೨೪ | ೩ |
| ಸಂಸೃತಿ | ಸಂಸಾರ | ೨೨೭ | ೧೬ |
| ಮೂರ್ಧ | ತಲೆ | ೨೩೨ | ೩೪ |
| ವತ್ಸ | ಮಗ | ೨೫೩ | ೧೩ |
| ಶುಶ್ರೂಷೆ | ಸೇವೆ | ೨೬೬ | ೫ |
| ಆಳಿ | ಸಮುದಾಯ | ೨೬೯ | ೧೬ |
| ಉಣ್ಮುತಿರೆ | ಹುಟ್ಟುತಿರೆ | ೨೭೨ | ೨೭ |
| ಕಮ್ಮಲರ್ | ಸುಗಂಧ ಪುಷ್ಪ | ೨೭೮ | ೧೫ |
| ಶರ್ವ | ಶಿವ | ೨೮೭ | ೧೯ |
| ಸಂಸ್ಥಿತ | ಹೊಂದಿದ | ೨೯೬ | ೭೫ |